ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೬೭

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಭಾಗ—೧೦

ಉತ್ತರಪರ್ವ—೧ ರಿಂದ ೫೦ ಅಧ್ಯಾಯ




ಅನುವಾದಕ

ಪಂಡಿತ ಬಿ. ಚನ್ನಕೇಶವಯ್ಯ

ಆಸ್ಥಾನ ವಿದ್ವಾನ್.



೧೯೬೯

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್,

ಮೈಸೂರು.

|| ಶ್ರೀ ||

ಗಣೇಶ ಶಾರದಾ ಗುರುಭ್ಯೋ ನಮಃ.

# ಮುನ್ನುಡಿ

ವೇದ ವೇದಾಂತ ಪುರಾಣಾದಿಗಳಲ್ಲೆಲ್ಲಾ ಮುಕ್ತಿಸಾಧನವಾಗಿ ಕರ್ಮ ಅಥವಾ ಜ್ಞಾನ ಇವೆರಡನ್ನೇ ನಮ್ಮ ಆರ್ಯಮಹರ್ಷಿಗಳು ನಾನಾರೀತಿಯಲ್ಲಿ ಪ್ರತಿಪಾದಿಸಿರುವರು. ಮೊದಲನೆಯದಾದ ಕರ್ಮಮಾರ್ಗವು ಜನಸಾಮಾನ್ಯಕ್ಕೂ ಅರ್ಥವಾಗುವ ವಿಷಯ. ದೊಡ್ಡವರು ಮೊದಲು ತಾವು ಕರ್ಮವನ್ನು ಆಚರಿಸಿ ಕರ್ಮದ ಸ್ವರೂಪವನ್ನು ಇತರರಿಗೆ ಬೋಧಿಸುವರು. ಜ್ಞಾನಿಗಳು ಹಾಗೆ ಅಷ್ಟು ಸುಲಭವಾಗಿ ಜ್ಞಾನವನ್ನು ಜನತೆಗೆ ಉಪದೇಶಿಸಲಾರರು. ಕರ್ಮಾಚರಣೆಯ ಮೂಲಕ ಜ್ಞಾನಾರ್ಜನೆ ಮಾಡುವುದು ಒಂದು ರಾಜಮಾರ್ಗ. ಕರ್ಮವು ಶ್ರೌತ, ಸ್ಮಾರ್ತ, ಎಂದು ಸ್ಥೂಲವಾಗಿ ಎರಡು ವಿಧವಾಗಿ ಬೇರ್ಪಟ್ಟಿವೆ. ಶ್ರುತ್ಯುಕ್ತವಾದ ಕರ್ಮವನ್ನು ಶ್ರೌತವೆಂದೂ, ಸ್ಮೃತ್ಯುಕ್ತವಾದುವುಗಳನ್ನು ಸ್ಮಾರ್ತವೆಂದೂ ಹೇಳುತ್ತಾರೆ. ಶ್ರುತ್ಯನುಸಾರವಾಗಿಯೇ ಇರುವ ಸ್ಮೃತಿಯು, ವೇದಾಧಾರದಿಂದ ನಾನಾರೀತಿಯ ಕರ್ಮಗಳನ್ನು ವಿವರವಾಗಿ ಬೋಧಿಸಿ, ಕರ್ಮಕ್ಕೆ ಸರಿಯಾದ ಅಧಿಕಾರಿಗಳು ಯಾರು, ಅನಧಿಕಾರಿಗಳು ಯಾರು, ಎಂಬುದನ್ನು ವ್ಯವಸ್ಥೆಗೊಳಿಸುವುದು.

ಈಗ ಜನಸಾಮಾನ್ಯದಲ್ಲಿ ಆಚರಣೆಗೆ ಬಂದಿರುವ ವ್ರತಗಳೆಲ್ಲಾ ಸ್ಮಾರ್ತ ಕರ್ಮಗಳೇ. ಈ ವ್ರತಾದಿಗಳನ್ನು ಕಾಮ್ಯಕರ್ಮಗಳೆನ್ನಬಹುದು, " ಪ್ರಯೋಜನಮನುದ್ದಿಶ್ಯ ನ ಮಂದೋಪಿ ಪ್ರವರ್ತತೆ '' ಎಂಬ ಉಕ್ತಿಯಂತೆ ಸಾಮಾನ್ಯರಿಗೆ ಒಂದು ಕಾರ್ಯದಲ್ಲಿ ಪ್ರವೃತ್ತಿಯುಂಟಾಗಬೇಕಾದರೆ ಫಲಾಪೇಕ್ಷೆಯಿರಬೇಕು. ಆಮುಷ್ಮಿಕಫಲವು ಅನಂತವಾಗಿದ್ದರೂ ಮಂದಪ್ರಜ್ಞರಿಗೆ ಅದರಲ್ಲಿ ಮೊದಲು ವಿಶ್ವಾಸಮೂಡುವುದಿಲ್ಲ. ಇಹಲೋಕದ ಫಲದಲ್ಲಿ ಅವರಿಗೆ ನಂಬಿಕೆ ಇರುವಂತೆ ಪರಲೋಕದ ಫಲದಲ್ಲಿ ನಂಬಿಕೆ ಸಾಲದು. ಅಂತಹ ಪ್ರಜಾಕೋಟಿಯನ್ನು ಕರ್ಮಮಾರ್ಗಕ್ಕೆ ಸೆಳೆಯಲು ನಮ್ಮ ಪ್ರಾಚೀನರು ನಾನಾ ಹೆಸರಿನ ವ್ರತಗಳನ್ನು ನಿರೂಪಿಸಿರುವರು. ಅನಂತನಾಮಗಳಿಂದ ಪ್ರಸಿದ್ಧನಾಗಿರುವ ಪರಮಾತ್ಮನನ್ನು ಬೇರೆ ಬೇರೆ ಹೆಸರಿನಿಂದ ಒಂದೊಂದು ವ್ರತಕ್ಕೆ ಅಭಿಮಾನ ದೇವತೆಯನ್ನಾಗಿ ಕಲ್ಪಿಸಿರುವರು. " ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ '' ಎಂಬ ಲೋಕೋಕ್ತಿಯಂತೆ ಯಾವ ವ್ರತವನ್ನಾಚರಿಸಿದರೂ ಅದು

ಭಗವತ್ಸೇವೆ ಎಂಬ ಭಾವನೆಬರಲಿ ಎಂಬುದೇ ವ್ರತಕಾರರ ಮುಖ್ಯಧ್ಯೇಯ. ವ್ರತಸಮುದಾಯದಲ್ಲಿ ಯಾವುದಕ್ಕೂ ನೈಚ್ಯವನ್ನು ಆರೋಪಿಸುವಂತಿಲ್ಲ. ಯಾವ ದಿನ, ಯಾವ ಗಳಿಗೆಯಲ್ಲಿ ಬೇಕಾದರೂ ವ್ರತವನ್ನು ನಡೆಯಿಸಲು ಅವಕಾಶವಿದೆ. ನಿತ್ಯವ್ರತವಿದೆ. ಅಂತು ಎಲ್ಲವೂ ದೇವತಾಪ್ರೀತ್ಯರ್ಥವಾದುವುಗಳೇ. ಅಸ್ಥಿರವಾದ ಮಾನವ ಜೀವನದಲ್ಲಿ ಬಹು ಕಾಲವನ್ನು ದೇವತಾಧ್ಯಾನ, ಪೂಜೆ, ಸತ್ಕಥಾ ಶ್ರವಣಾದಿಗಳಿಂದ ಕಳೆಯಲೆಂಬುದು ಅವರ ಹೆಗ್ಗುರಿ. ಐಹಿಕ ಸುಖಗಳನ್ನು ಪಡೆಯುವಾಗಲೂ ದೇವರ ಹೆಸರಿನಿಂದ ಮುಂದುವರಿಯಲಿ ಎಂಬ ತತ್ತ್ವವು ಈ ವ್ರತಾಚರಣೆಯ ಫಲನಿರೂಪಣೆಯನ್ನು ಕೇಳುವುದರಿಂದ ತಿಳಿದುಬರುವುದು.

ಈ ಸಂಪುಟದಿಂದ ಭವಿಷ್ಯ ಮಹಾಪುರಾಣದ ಉತ್ತರಪರ್ವವು ಆರಂಭ ವಾಗುವುದು. ಈ ಪರ್ವವನ್ನೇ ಭವಿಷ್ಯೋತ್ತರಪುರಾಣ ಎಂಬ ಹೆಸರಿನಿಂದ ಸಾಮಾನ್ಯರು ವ್ಯವಹರಿಸುವರೆಂದು ಕಾಣಬರುವುದು. ಈ ಭಾಗದಲ್ಲಿ ಅನೇಕ ವ್ರತವಿಧಾನಗಳು, ಅವುಗಳಿಗೆ ತಕ್ಕ ಅಧಿಕಾರಿಗಳು, ಅದರಿಂದ ದೊರಕುವ ಸತ್ಫಲ ಗಳು, ಇವುಗಳ ವಿಷಯವು ವಿಸ್ತಾರವಾಗಿ ವರ್ಣಿತವಾಗಿದೆ. ಆದರೆ ಕೆಲವು ವ್ರತಗಳು ಈಗ ರೂಢಿಯಲ್ಲಿರುವ ಕ್ರಮಕ್ಕೆ ಸ್ವಲ್ಪ ವ್ಯತ್ಯಾಸವಾಗಿವೆ. ಅಲ್ಲದೆ ನಾವು ಈವರೆಗೂ ಈ ಪ್ರಾಂತದಲ್ಲಿ ಕೇಳಿಲ್ಲದಂತಹ ಹೆಸರಿನ ಕೋಕಿಲಾವ್ರತ, ಗೋಷ್ಪದವ್ರತ, ಕುಕ್ಕುಟೀ ಮರ್ಕಟೀವ್ರತ, ರಸಕಲ್ಯಾಣೀವ್ರತ, ಆರ್ದ್ರಾನಂದ ಕರೀವ್ರತ, ಸಾರಸ್ವತವ್ರತ ಮುಂತಾದ ವ್ರತಗಳನ್ನೂ ಅವುಗಳ ಅಪೂರ್ವ ವಿಧಾನ ಗಳನ್ನೂ ಇಲ್ಲಿ ನೋಡಬಹುದಾಗಿದೆ.

ಆಸ್ತಿಕರಿಗೆ ಅಮೂಲ್ಯ ರತ್ನಪ್ರಾಯಗಳಾದ ಇಂತಹ ಪ್ರಾಚೀನ ಗ್ರಂಥ ಗಳನ್ನು ಕನ್ನಡಿಗರ ಹಸ್ತಗತವಾಗುವಂತೆ ಮಾಡಿ ಅವರನ್ನು ಉದ್ಧರಿಸುವ ಕಾರ್ಯ ದಲ್ಲಿ ನಿರತರಾಗಿ, ತಾವೂ ಪ್ರಾಚೀನ ಸಂಪ್ರದಾಯವನ್ನು ಬಿಡದೆ ಆಧುನಿಕ ಮಾರ್ಗದಲ್ಲಿ ಸತ್ಯಧ್ವಜರೂಪರಾಗಿ ವಿರಾಜಿಸುತ್ತಾ, ನಮ್ಮನ್ನಾಳುವ ಮಹಾ ಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೂ ಅವರ ಕುಟುಂಬ ವರ್ಗಕ್ಕೂ ಸರ್ವೇಶ್ವರನೂ, ಶ್ರೀ ಚಾಮುಂಡೇಶ್ವರಿಯೂ ಸರ್ವದಾ ಸಕಲ ಸನ್ಮಂಗಳಗಳನ್ನೂ ಕರುಣಿಸಿ ಚಿರಕಾಲ ಸಲಹುತ್ತಿರಲೆಂದು ಪ್ರಾರ್ಥಿಸುತ್ತೇನೆ.

ವಿರೋಧಿ ಸಂವತ್ಸರದ
ಶ್ರಾವಣ ಬ॥ ದಶಮಿ ಶುಕ್ರವಾರ,
೧೯—೮—೧೯೪೯.

ಸಜ್ಜನ ವಿಧೇಯ,
**ಪಂಡಿತ ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್.



## ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದ
## ೧ ರಿಂದ ೫೦ ಅಧ್ಯಾಯಗಳ
# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

**ಹದಿಮೂರನೆಯ ಅಧ್ಯಾಯ—**

**ಭದ್ರೋಪವಾಸ ವ್ರತಮಾಹಾತ್ಮ್ಯ**



**ಹದಿನಾಲ್ಕನೆಯ ಅಧ್ಯಾಯ—**

**ಯಮದ್ವಿತೀಯಾ ವ್ರತಮಾಹಾತ್ಮ್ಯ**

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ





॥ ಶ್ರೀಃ ॥

---

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

ಓಂ ನಮೋ ಭಗವತೇ ವಾಸುದೇವಾಯ

# ಉತ್ತರಪರ್ವ ಪ್ರಾರಂಭ್ಯತೇ

## ಅಥ ಶ್ರೀ ಭವಿಷ್ಯೇ ಮಹಾಪುರಾಣೇ

### ಉತ್ತರಪರ್ವಣಿ

## ಪ್ರಥಮೋಽಧ್ಯಾಯಃ

---

**ಕಲ್ಯಾಣಾನಿ ದದಾತು ವೋ ಗಣಪತಿರ್ಯಸ್ಮಿನ್ನತುಷ್ಟೇ ಸತಿ ।**
**ಕ್ಷೋದೀಯಸ್ಯಪಿ ಕರ್ಮಣಿ ಪ್ರಭವಿತುಂ ಬ್ರಹ್ಮಾಪಿ ಜಿಹ್ಮಾಯತೇ ।**
**ಭೇಜೇ ಯಚ್ಚರಣಾರವಿಂದಮಸಕೃತ್ಸೌಭಾಗ್ಯಭಾಗ್ಯೋದಯೈಃ ।**
**ತೇನೈಷಾ ಜಗತಿ ಪ್ರಸಿದ್ಧಿಮಗಮದ್ದೇವೇಂದ್ರಲಕ್ಷ್ಮೀರಪಿ ॥ ೧ ॥**

---

ಶ್ರೀ ಗಣೇಶಾಯನಮಃ ಶ್ರೀ ಚಾಮುಂಡಾಂಬಾಯೈನಮಃ

### ಒಂದನೆಯ ಅಧ್ಯಾಯ

೧. ಯಾವ ಶ್ರೀ ಗಣೇಶನ ಪ್ರಸಾದವಿಲ್ಲದೆ ಇದ್ದರೆ ಬ್ರಹ್ಮನು ಅತ್ಯಲ್ಪ ಕಾರ್ಯಮಾಡುವುದಕ್ಕೂ ಅಸಮರ್ಥನಾಗುವನೋ ಅಂಥ ಗಣೇಶನು ನಿಮಗೆ ಮಂಗಳವನ್ನುಂಟುಮಾಡಲಿ. ಅಲ್ಲದೆ ಇಂದ್ರನು ತನ್ನ ಸಂಪತ್ತುಗಳಿಂದ ಶ್ರೀ ಗಣೇಶನಪಾದಾರವಿಂದ ಸೇವೆಯನ್ನು ಮಾಡಿರುವುದರಿಂದಲೇ ಜಗತ್ಪ್ರಸಿದ್ಧಿ ಹೊಂದಿ ಸಂಪತ್ಸಮೃದ್ಧನಾಗಿರುವನು.

ಶಶ್ವತ್ಪುಣ್ಯ ಹಿರಣ್ಯಗರ್ಭರಸನಾಸಿಂಹಾಸನಾಧ್ಯಾಸಿನೀ ।
ಸೇಯಂ ವಾಗಧಿದೇವತಾ ವಿತರತು ಶ್ರೇಯಾಂಸಿ ಭೂಯಾಂಸಿ ವಃ ॥
ಯತ್ಪಾದಾಮಲಕೋಮಲಾಂಗುಲಿನಖಜ್ಯೋತ್ಸ್ನಾಭಿರುದ್ವೇಲ್ಲಿತಃ ।
ಶಬ್ದಬ್ರಹ್ಮ ಸುಧಾಂಬುಧಿರ್ಬುಧಮನಸ್ಯಚ್ಛೃಂಖಲಂ ಖೇಲತಿ ॥ ೨ ॥

ನಮಸ್ತಸ್ಮೈ ವಿಶ್ವೋದಯವಿಲಯ ರಕ್ಷಾಪ್ರಕೃತಯೇ ।
ಶಿವಾಯ ಕ್ಲೇಶೌಘಚ್ಛಿದುರಪದಪದ್ಮಪ್ರಣತಯೇ ।
ಅಮಂದ ಸ್ವಚ್ಛಂದ ಪ್ರಥಿತ ಪೃಥುಲೀಲಾತನುಭೃತೇ ।
ತ್ರಿವೇದೀವಾಚಾಮಪ್ಯಪಥನಿಜತತ್ವಸ್ಥಿತಿಕೃತೇ ॥ ೩ ॥

ಯಸ್ಯ ಗಂಡತಲೇ ಭಾತಿ ವಿಮಲಾ ಷಟ್ಪದಾವಲೀ ।
ಅಕ್ಷಮಾಲೇವ ವಿಮಲಾ ಸ ನಃ ಪಾಯಾದ್ಗಣಾಧಿಪಃ ॥ ೪ ॥

ಓಂ ನಮೋ ವಾಸುದೇವಾಯ ಸಶಾರ್ಙಾಯ ಸಕೇತವೇ ।
ಸ ಗದಾಯ ಸಚಕ್ರಾಯ ಸಶಂಖಾಯ ನಮೋ ನಮಃ ॥ ೫ ॥

---

೨. ಯಾವಳ ಕೋಮಲ ಪಾದಾಂಗುಲಿಯ ನಖಚಂದ್ರಕಿರಣಗಳಿಂದ ಉಕ್ಕಿದ ಶಬ್ದಬ್ರಹ್ಮಸುಧಾ ಸಮುದ್ರವು ವಿದ್ವಾಂಸರ ಮನಸ್ಸಿನಲ್ಲಿ ಅಪ್ರತಿಹತವಾಗಿ ತೇಲಾಡುವುದೋ ಅಂತಹ ಹಿರಣ್ಯಗರ್ಭನ ಜಿಹ್ವೆ ಎಂಬ ಆಸನದಲ್ಲಿ ಅಧಿಷ್ಠಿತಳಾದ ಶ್ರೀ ಶಾರದೆಯು ನಿಮಗೆ ಅಪರಿಮಿತವಾದ ಶ್ರೇಯಸ್ಸನ್ನು ಕೊಡಲಿ.

೩. ಪ್ರಪಂಚದ ಸೃಷ್ಟಿಸ್ಥಿತಿ ಲಯಗಳಿಗೆ ಕಾರಣನಾಗಿಯೂ ನಮಸ್ಕಾರಮಾತ್ರದಿಂದ ಕ್ಲೇಶಸಮೂಹಗಳನ್ನು ದೂರಮಾಡುವವನಾಗಿಯೂ, ಸ್ವೇಚ್ಛಾನುಸಾರವಾಗಿ ಅನೇಕ ಲೀಲಾರೂಪಗಳನ್ನು ಧರಿಸಿದವನಾಗಿಯೂ, ವೇದವಾಕ್ಕುಗಳಿಗೆ ಅಗೋಚರನಾಗಿಯೂ ಇರುವ ಶ್ರೀ ಪರಮೇಶ್ವರನಿಗೆ ನಮಸ್ಕಾರಗಳು.

೪. ಯಾವನ ಕಪೋಲದಲ್ಲಿ ಶುದ್ಧವಾದ ಭ್ರಮರಪಂಕ್ತಿಯು ನಿರ್ಮಲವಾದ ಅಕ್ಷಮಾಲಿಕೆಯಂತೆ ಶೋಭಿಸುವುದೋ, ಅಂತಹ ಗಣೇಶನು ನಮ್ಮನ್ನು ರಕ್ಷಿಸಲಿ.

೫. ಶಾರ್ಙವೆಂಬ ಧನುಸ್ಸು ಧ್ವಜ, ಶಂಖ, ಚಕ್ರ, ಗದೆ ಇವುಗಳಿಂದ ಶೋಭಿತನಾದ ಶ್ರೀ ಮಹಾವಿಷ್ಣುವಿಗೆ ಅನೇಕ ನಮಸ್ಕಾರಗಳು ;

**ನಮಃ ಶಿವಾಯ ಸೋಮಾಯ ಸಗಣಾಯ ಸಸೂನವೇ ।**
**ಸವೃಷಾಯ ಸಶೂಲಾಯ ಸಕಪಾಲಾಯ ಸೇಂದವೇ ॥ ೬ ॥**

**ಶಿವಂ ಧ್ಯಾತ್ವಾ ಹರಿಂ ಸ್ತುತ್ವಾ ಪ್ರಣಮ್ಯ ಪರಮೇಷ್ಠಿನಂ ।**
**ಚಿತ್ರಭಾನುಂ ಚ ಭಾನುಂ ಚ ನತ್ವಾ ಗ್ರಂಥಮುದೀರಯೇತ್ ॥ ೭ ॥**

**ಛತ್ರಾಭಿಷಿಕ್ತಂ ಧರ್ಮಜ್ಞಂ ಧರ್ಮಪುತ್ರಂ ಯುಧಿಷ್ಠಿರಂ ।**
**ದ್ರಷ್ಟುಮಭ್ಯಾಗತಾ ಹೃಷ್ಟಾ ವ್ಯಾಸಾದ್ಯಾಃ ಪರಮರ್ಷಯಃ ॥ ೮ ॥**

**ಮಾರ್ಕಂಡೇಯಃ ಸಮಾಂಡವ್ಯಃ ಶಾಂಡಿಲ್ಯಃ ಶಾಕಟಾಯನಃ ।**
**ಗೌತಮೋ ಗಾಲವೋ ಗಾರ್ಗ್ಯಃ ಶಾತಾತಪಪರಾಶರೌ ॥ ೯ ॥**

**ಜಾಮದಗ್ನ್ಯೋ ಭರದ್ವಾಜೋ ಭೃಗುರ್ಭಾಗುರಿರೇವ ಚ ।**
**ಉತ್ತಂಕಃ ಶಂಖಲಿಖಿತೌ ಶೌನಕಃ ಶಾಕಟಾಯನಿಃ ॥ ೧೦ ॥**

**ಪುಲಸ್ತ್ಯಃ ಪುಲಹೋ ದಾಲ್ಭ್ಯೋ ಬೃಹದಶ್ವಃ ಸಲೋಮಶಃ ।**
**ನಾರದಃ ಪರ್ವತೋ ಜಹ್ನುರಪಾವಸುಪರಾವಸೂ ॥ ೧೧ ॥**

---

೬. ಗಿರಿಜೆ, ಪ್ರಮಥಗಣ, ಕುಮಾರ, ವೃಷಭ, ತ್ರಿಶೂಲ, ಕಪಾಲ, ಮತ್ತು ಚಂದ್ರ ಇವುಗಳಿಂದಕೂಡಿದ ಮಹಾಶಿವನಿಗೆ ನಮಸ್ಕಾರವು.

೭. ಶಿವನನ್ನು ಧ್ಯಾನಿಸಿ ಹರಿಯನ್ನು ಸ್ತೋತ್ರಮಾಡಿ, ಬ್ರಹ್ಮನನ್ನು ನಮಸ್ಕರಿಸಿ, ಅಗ್ನಿ ಮತ್ತು ಸೂರ್ಯ ಇವರಿಗೂ ವಂದಿಸಿ ಗ್ರಂಥವನ್ನು ಪ್ರಾರಂಭಿಸಬೇಕು.

೮. ಶ್ವೇತಛತ್ರ ಸಮೇತವಾದ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನಾದವನೂ, ಧರ್ಮವನ್ನರಿತವನೂ, ಧರ್ಮಪುತ್ರನೂ ಆದ ಯುಧಿಷ್ಠಿರನನ್ನು ನೋಡಲು ವ್ಯಾಸರೇ ಮೊದಲಾದ ಮಹರ್ಷಿಗಳು ಸಂತೋಷದಿಂದ ದಯಮಾಡಿಸಿದರು.

೯–೧೧. ಮಾರ್ಕಂಡೇಯ, ಮಾಂಡವ್ಯ, ಶಾಂಡಿಲ್ಯ, ಶಾಕಟಾಯನ ಗೌತಮ, ಗಾಲವ, ಗಾರ್ಗ್ಯ, ಶಾತಾತಪ, ಪರಾಶರ, ಜಾಮದಗ್ನ್ಯ, ಭಾರದ್ವಾಜ, ಭೃಗು, ಭಾಗುರಿ, ಉತ್ತಂಕ, ಶಂಖಲಿಖಿತ, ಶೌನಕ, ಶಾಕಟಾಯನಿ, ಪುಲಸ್ತ್ಯ ಪುಲಹ, ದಾಲ್ಭ್ಯ, ಬೃಹದಶ್ವ, ಲೋಮಶ, ನಾರದ, ಪರ್ವತ, ಜಹ್ನು, ಅಪಾವಸು ಮತ್ತು ಪರಾವಸು ಎಂಬ ಮಹರ್ಷಿಗಳೂ ಅವರೊಡನೆ ಬಂದರು.

ತಾನೃಷೀನಾಗತಾನ್ ದೃಷ್ಟ್ವಾ ವೇದವೇದಾಂಗಪಾರಗಾನ್ ।
ಭಕ್ತಿಮಾನ್ ಭ್ರಾತೃಭಿಃ ಸಾರ್ಧಂ ಕೃಷ್ಣಧೌಮ್ಯಪುರಃಸರಃ ॥ ೧೨ ॥

ಯುಧಿಷ್ಠಿರಃ ಸಂಪ್ರಹೃಷ್ಟಃ ಸಮುತ್ಥಾಯಾಭಿವಾದ್ಯ ಚ ।
ಅರ್ಘ್ಯಮಾಚಮನಂ ಪಾದ್ಯಮಾಸನಾನಿ ಸ್ವಯಂ ದದೌ ॥ ೧೩ ॥

ಉಪವಿಷ್ಟೇಷು ತೇಷ್ವೇವ ತಪಸ್ವಿಷು ಯುಧಿಷ್ಠಿರಃ ।
ವಿನಯಾವನತೋ ಭೂತ್ವಾ ವ್ಯಾಸಂ ವಚನಮಬ್ರವೀತ್ ॥ ೧೪ ॥

ಭಗವಂಸ್ತ್ವತ್ಪ್ರಸಾದೇನ ಪ್ರಾಪ್ತಂ ರಾಜ್ಯಂ ಮಹನ್ಮಯಾ ।
ವಿಕ್ರಮ್ಯ ನಿಹತಃ ಸಂಖ್ಯೇ ಸಾನುಬಂಧಃ ಸುಯೋಧನಃ ॥ ೧೫ ॥

ಸರೋಗಸ್ಯ ಯಥಾ ಭೋಗಃ ಪ್ರಾಪ್ತೋಽಪಿ ನ ಸುಖಾವಹಃ ।
ಹತ್ವಾ ಜ್ಞಾತೀಂಸ್ತಥಾ ರಾಜ್ಯಂ ನ ಸುಖಂ ಪ್ರತಿಭಾತಿ ಮೇ ॥ ೧೬ ॥

---

೧೨-೧೩. ವೇದವೇದಾಂಗಪಾರಾಂಗತರಾದ ಈ ಮಹರ್ಷಿಗಳನ್ನು ನೋಡಿ ಆ ಯುಧಿಷ್ಠಿರನು ಸ್ವಯಂ ಭಕ್ತಿಶ್ರದ್ಧೆಯಿಂದಕೂಡಿ, ಸಂತೋಷಚಿತ್ತನಾಗಿ ಸಹೋದರರಿಂದಲೂ ಮತ್ತು ಕೃಷ್ಣ ಧೌಮ್ಯ ಇವರಿಂದಲೂ ಸಮೇತನಾಗಿ ಅಭ್ಯುತ್ಥಾನ ಮತ್ತು ಅಭಿವಾದನೆಯನ್ನುಮಾಡಿ, ಅರ್ಘ್ಯಪಾದ್ಯಾಚಮನಗಳನ್ನಿತ್ತು ಆಸನಗಳನ್ನು ಕೊಟ್ಟನು.

೧೪. ಆ ತಪಸ್ವಿಗಳು ಆಸನಗಳನ್ನಲಂಕರಿಸಿದಮೇಲೆ ಯುಧಿಷ್ಠಿರನು ನಮ್ರನಾಗಿ ವಿನಯದಿಂದ ವೇದವ್ಯಾಸರೊಡನೆ ಹೀಗೆಂದನು.

೧೫. ಪೂಜ್ಯನೇ ! ನಿನ್ನ ಅನುಗ್ರಹದಿಂದ ನನಗೆ ದೊಡ್ಡರಾಜ್ಯವೂ, ಸಕಲ ಸಂಪತ್ತುಗಳೂ ದೊರೆತುವು. ಅಲ್ಲದೆ ಅನುಬಂಧಿಗಳಿಂದ ಕೂಡಿದ ಧುರ್ಯೋಧನನನ್ನು ಯುದ್ಧದಲ್ಲಿ ಶಕ್ತಿಬಲದಿಂದ ಸಂಹರಿಸಿವೆ.

೧೬. ರೋಗಿಗೆ ವಿಷಯಸುಖ ಲಾಭವಾದರೂ ಹೇಗೆ ಅದರಿಂದ ಸುಖವಿಲ್ಲವೋ ಹಾಗೆಯೇ ಜ್ಞಾತಿಗಳನ್ನು ಕೊಂದು ಪಡೆದ ಈ ರಾಜ್ಯದಿಂದ ನನಗೆ ಸುಖವಿಲ್ಲ.

ಯತ್ಸುಖಂ ಪಾವನಂ ಪ್ರೀತಿರ್ವನಮೂಲಫಲಾಶಿನಾಂ ।
ಪ್ರಾಪ್ಯ ಗಾಂ ಚ ಹತಾರಾತಿಂ ನ ತದಸ್ತಿ ಪಿತಾಮಹ ॥ ೧೭ ॥

ಯೋ ನೋ ಬಂಧುರ್ಗುರುರ್ಗೋಪ್ತಾ ಸದಾ ಶರ್ಮ ಚ ವರ್ಮ ಚ ।
ಸ ಮಯಾ ರಾಜ್ಯಲೋಭೇನ ಭೀಷ್ಮಃ ಪಾಪೇನ ಘಾತಿತಃ ॥ ೧೮ ॥

ಅವಿವೇಕಮಹಂ ಧಾಸ್ಯೇ ಮನೋ ಮೇ ಪಾಪಪಂಕಿಲಂ ।
ಕ್ಷಾಲಯಿತ್ವಾ ತವ ಗಿರಾ ಬಹುದರ್ಶಿತವಾರಿಣಾ ॥ ೧೯ ॥

ಸಂಶ್ರುತಾನಿ ಪುರಾಣಾನಿ ವೇದಾಸ್ಸಾಂಗಾ ಮಯಾ ವಿ ಭೋ ।
ಮಮಾದ್ಯ ಧರ್ಮಸರ್ವಸ್ವಂ ಪ್ರಜ್ಞಾದೀಪೇನ ದರ್ಶಯ ॥ ೨೦ ॥

ಏತೇ ಸಧರ್ಮಗೋಪ್ತಾರೋ ಮುನಯಃ ಸಮುಪಾಗತಾಃ ।
ಪಿಬಂತೋ ನೇತ್ರಭೃಮರೈರ್ಭಗವತೋ ಮುಖಪಂಕಜಂ ॥ ೨೧ ॥

---

೧೭. ಕಾಡಿನಲ್ಲಿ ಕಂದಮೂಲಾದಿ ಫಲಗಳನ್ನು ತಿಂದು ವಾಸಿಸುವಾಗ ಯಾವ ಸುಖವಿದ್ದಿತೋ ಅಂಥ ಸುಖವು ನಿಷ್ಕಂಟಕವಾದ ಈ ರಾಜ್ಯವನ್ನು ಪಡೆದ ಮೇಲೆ ನನಗೆ ಇಲ್ಲವಲ್ಲ.

೧೮. ಯಾವನು ನನಗೆ ಬಂಧುವಾಗಿಯೂ ಗುರುವಾಗಿಯೂ ಯಾವಾಗಲೂ ಕವಚದಂತೆ ರಕ್ಷಕನಾಗಿಯೂ ಇದ್ದು ಸುಖವನ್ನುಂಟುಮಾಡುತ್ತಿದ್ದನೋ ಅಂತಹ ಭೀಷ್ಮನನ್ನು ರಾಜ್ಯದಾಶೆಯಿಂದ ಪಾಪಿಯಾದ ನಾನು ಕೊಲ್ಲಿಸಿದೆ ;

೧೯. ನನ್ನ ಮನಸ್ಸು ಅವಿವೇಕಿಯಾಗಿದೆ. ಪಾಪಪಂಕದಿಂದ ಕೂಡಿದ ಈ ಮನಸ್ಸನ್ನು ಬಹುಶ್ರುತನಾದ ನಿನ್ನ ಮಾತೆಂಬ ನೀರಿನಿಂದ ನನ್ನ ಈ ಅವಿವೇಕ ಪಂಕವನ್ನು ತೊಳೆದು ಬಿಡಬೇಕೆಂದಿರುವೆನು.

೨೦. ಪ್ರಭುವೇ ! ನಾನು ಅನೇಕ ಪುರಾಣಗ್ರಂಥ, ವೇದ, ವೇದಾಂಗಗಳನ್ನು ಶ್ರವಣಮಾಡಿರುತ್ತೇನೆ. ಅಂತಹ ನನಗೆ ಈಗ ಜ್ಞಾನವೆಂಬ ದೀಪದಿಂದ ಧರ್ಮತತ್ವವನ್ನು ತೋರಿಸು.

೨೧. ನಯನಗಳೆಂಬ ಭ್ರಮರಗಳಿಂದ ನಿನ್ನ ಮುಖಪಂಕಜದ ಮಕರಂದವನ್ನು ಪಾನಮಾಡುವುದಕ್ಕಾಗಿ ಅನೇಕ ಧರ್ಮರಕ್ಷಕರಾದ ಮಹರ್ಷಿಗಳು ದಯಮಾಡಿಸಿದ್ದಾರೆ.

ಅರ್ಥಶಾಸ್ತ್ರಾಣಿ ಯಾವಂತಿ ಧರ್ಮಶಾಸ್ತ್ರಾಣಿ ಯಾನಿ ವೈ ।
ಶ್ರುತಾನಿ ಸರ್ವಶಾಸ್ತ್ರಾಣಿ ಭೀಷ್ಮಾದ್ಭಾಗೀರಥೀಸುತಾತ್ ॥ ೨೨ ॥

ಸ್ವರ್ಗಂ ಗತೇ ಶಾಂತನವೇ ಭವಾನ್ ಕೃಷ್ಣೋಽಥ ಯಾದವಃ ।
ಸುಹೃತ್ವಾದ್ಬಂಧುಭಾವಾಚ್ಚ ನಾನ್ಯಃ ಶಿಕ್ಷಯಿತಾ ಮಮ ॥ ೨೩ ॥

ಸತ್ಯಂ ಸತ್ಯವತೀಸೂನುರ್ಧರ್ಮರಾಜಾಯ ವಕ್ಷ್ಯತಿ ।
ವಿಶೇಷಧರ್ಮಾನಖಿಲಾನ್ ಮುನೀನಾಮವಿಶೇಷತಃ ॥ ೨೪ ॥

॥ ವ್ಯಾಸ ಉವಾಚ ॥

ಯದಾಖ್ಯೇಯಂ ತದಾಖ್ಯಾತಂ ಮಯಾ ಭೀಷ್ಮೇಣ ತೇಽನಘ ।
ಮಾರ್ಕಂಡೇಯೇನ ಧೌಮ್ಯೇನ ಲೋಮಶೇನ ಮಹರ್ಷಿಣಾ ॥ ೨೫ ॥

---

೨೨. ಅರ್ಥಶಾಸ್ತ್ರಗಳನ್ನೂ ಸಮಸ್ತ ಧರ್ಮಶಾಸ್ತ್ರಗಳನ್ನೂ ಇತರ ಸಕಲ ಶಾಸ್ತ್ರಗಳನ್ನೂ ಗಂಗಾಪುತ್ರನಾದ ಭೀಷ್ಮನಿಂದ ಕೇಳಿ ಅರಿತವನಾಗಿದ್ದೇನೆ.

೨೩. ಆ ಭೀಷ್ಮನು ಸ್ವರ್ಗಸ್ಥನಾದ ಮೇಲೆ ನೀನೂ ಮತ್ತು ಯದುಕುಲೋತ್ಪನ್ನನಾದ ಶ್ರೀ ಕೃಷ್ಣನೂ ಮೈತ್ರಿಯಿಂದಲೂ, ಭಾಂಧವ್ಯದಿಂದಲೂ, ಉಪದೇಶಕರಾಗಿರುವಿರಿ ಅಷ್ಟೇಹೊರತು ನನಗೆ ಮತ್ತಾರೂ ಇಲ್ಲ.

೨೪. ಆದುದರಿಂದ ಸತ್ಯವತೀಪುತ್ರನಾದ ನೀನು ಋಷಿಗಳಿಗೆ ನಿರ್ವಿಶೇಷವಾಗಿ ಧರ್ಮೋಪದೇಶಮಾಡಿದಂತೆಯೇ ಧರ್ಮಪುತ್ರನಾದ ನನಗೂ ಸತ್ಯವಾಗಿಯೂ ಅಖಿಲವಿಶೇಷ ಧರ್ಮಗಳನ್ನೂ ಉಪದೇಶಮಾಡುವೆಯೆಂದು ನಂಬಿದ್ದೇನೆ ಎಂದನು.

೨೫. ವ್ಯಾಸಮುನಿವರ್ಯರು ಹೇಳುತ್ತಾರೆ—ಅಯ್ಯಾ ನಿಷ್ಕಲ್ಮಷನಾದ ಯುಧಿಷ್ಠಿರನೇ ! ನಾನು ನಿನಗೆ ಯಾವ ಧರ್ಮೋಪದೇಶ ಮಾಡಬೇಕಾಗಿರುವುದೋ ಅಂತಹ ಧರ್ಮವನ್ನು ಭೀಷ್ಮನೂ, ಮಾರ್ಕಂಡೇಯನೂ. ಧೌಮ್ಯನೂ, ಮಹರ್ಷಿ ಲೋಮಶನೂ ನಿನಗೆ ಉಪದೇಶಮಾಡಿಯೇ ಇರುತ್ತಾರೆ.

**ಧರ್ಮಜ್ಞೋಽಸ್ಯಸಿ ಮೇಧಾವೀ ಗುಣವಾನ್ ಪ್ರಾಜ್ಞಸತ್ತಮಃ ।**
**ನ ತೇಽಸ್ತ್ಯವಿದಿತಂ ಕಿಂಚಿದ್ಧರ್ಮಾಧರ್ಮವಿನಿಶ್ಚಯೇ ॥ ೨೬ ॥**

**ಪಾರ್ಶ್ವಸ್ಥಿತೇ ಹೃಷೀಕೇಶೇ ಕೇಶವೇ ಕೇಶಿಸೂದನೇ ।**
**ಕಸ್ಯ ಚಿತ್ಕಥನೇ ಜಿಹ್ವಾ ತತ್ರ ಸಂಪರಿವರ್ತತೇ ॥ ೨೭ ॥**

**ಕರ್ತಾ ಪಾಲಯಿತಾ ಹರ್ತಾ ಜಗತಾಂ ಯೋ ಜಗನ್ಮಯಃ ।**
**ಪ್ರತ್ಯಕ್ಷದರ್ಶೀ ಸರ್ವಸ್ಯ ಧರ್ಮಾನ್ವಕ್ಷ್ಯತ್ಯಸೌ ತವ ॥ ೨೮ ॥**

**ಸಮಾದಿಶ್ಯೇತಿಕರ್ತವ್ಯಂ ಭಗವಾನ್ ಬಾದರಾಯಣಃ ।**
**ಪೂಜಿತಃ ಪಾಂಡುತನಯೈರ್ಜಗಾಮ ಸ್ವತಪೋವನಂ ॥ ೨೯ ॥**

**ಸ್ವಾಭಾಷ್ಯ ಭಾರತವಿಧಾತರಿ ಸಂಪ್ರಯಾತೇ ।**
**ತೇ ಕೌತುಕಾಕುಲಧಿಯೋ ಮುನಯಃ ಪ್ರಶಾಂತಾಃ ।**

---

೨೬. ಆದುದರಿಂದ ನೀನು ಧರ್ಮಜ್ಞನೂ, ಮೇಧಾವಿಯೂ, ಗುಣಶಾಲಿಯೂ, ಪ್ರಾಜ್ಞನೂ ಆಗಿರುವೆ. ನಿನಗೆ ತಿಳಿಯದ ಧರ್ಮ ಮತ್ತು ಅಧರ್ಮ ಇವು ಯಾವುದೂ ಇರುವುದಿಲ್ಲ.

೨೭. ಕೇಶಿಯೆಂಬ ಅಸುರಘಾತಿಯಾದ ಶ್ರೀ ಕೃಷ್ಣನು ನಿನ್ನ ಪಾರ್ಶ್ವದಲ್ಲಿರುವಾಗ ನಿನಗೆ ಧರ್ಮಪ್ರವಚನಮಾಡುವುದಕ್ಕೆ ಯಾವನ ನಾಲಗೆಯು ಪ್ರವೃತ್ತವಾದೀತು.

೨೮. ಪ್ರಪಂಚದ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನೂ ಸರ್ವವ್ಯಾಪಿಯೂ ಆದ ಈ ಪರಮಾತ್ಮನೇ ನಿನಗೆ ಎಲ್ಲಾ ಧರ್ಮವನ್ನೂ ಉಪದೇಶ ಮಾಡುವನು.

೨೯. ಪೂಜ್ಯನಾದ ವ್ಯಾಸನು ಈರೀತಿ ಪಾಂಡವರಿಗೆ ಅವರ ಕರ್ತವ್ಯೋಪದೇಶವನ್ನು ಮಾಡಿ ಪಾಂಡುಪುತ್ರರಿಂದ ಸತ್ಕಾರಹೊಂದಿ ತನ್ನ ತಪೋವನಕ್ಕೆ ತೆರಳಿದನು.

೩೦. ಭಾರತವೆಂಬ ಗ್ರಂಥನಿರ್ಮಾತೃವಾದ ವ್ಯಾಸನು ಹೀಗೆ ಹೇಳಿಹೋದ ಮೇಲೆ, ಶಾಂತರಾದಾ ಋಷಿಗಳು, ಲೋಕಶೋಕವನ್ನು ಹೋಗಲಾಡಿಸಿದ ಧರ್ಮ

ಕಿಂ ಪೃಚ್ಛತಿ ಕ್ಷಪಿತಭಾರತಲೋಕಶೋಕಃ ।
ಕಿಂ ವಕ್ಷ್ಯತೀಹ ಭಗವಾನ್ಯದುವಂಶವೀರಃ ॥ ೩೦ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ವ್ಯಾಸಾಗಮನ ವರ್ಣನಂ ನಾಮ ಪ್ರಥಮೋಽಧ್ಯಾಯಃ.**



---

ರಾಜನು ಏನೆಂದು ಪ್ರಶ್ನೆ ಮಾಡುವನು ? ಯದುವಂಶವೀರನಾದ ಶ್ರೀ ಕೃಷ್ಣನು ಏನು ಉತ್ತರ ಹೇಳುವನು? ಎಂದಬುದನ್ನು ಕೇಳಲು ಕೌತುಕಾವಿಷ್ಟರಾದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರ ಪರ್ವದಲ್ಲಿ ವ್ಯಾಸರ ಆಗಮನ ವರ್ಣನೆಯೆಂಬ ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಿತೀಯೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಕಸ್ಯ ಪ್ರತಿಷ್ಠಾ ನಿರ್ದಿಷ್ಟಾ ಕೋ ಹೇತುಃ ಕಿಂ ಪರಾಯಣಂ ।
ಕಸ್ಮಿನ್ನೇತಲ್ಲಯಂ ಯಾತಿ ಕಸ್ಮಾದುತ್ಪದ್ಯತೇ ಜಗತ್ ॥ ೧ ॥

ಕತಿ ದ್ವೀಪಾಃ ಸಮುದ್ರಾಶ್ಚ ಕಿಯಂತೋ ಹಿ ಕುಲಾಚಲಾಃ ।
ಕಿಯತ್ಪ್ರಮಾಣಮವನೇರ್ಭುವನಾನಿ ಕಿಯಂತಿ ಚ ॥ ೨ ॥

॥ ಶ್ರೀ ಕೃಷ್ಣ ಉವಾಚ ॥

ಪೌರಾಣಶ್ಚೈವ ವಿಷಯೋ ಯತ್ಪೃಷ್ಟೋಽಹಂ ತ್ವಯಾನಘ ।
ಶ್ರುತೋಽನುಭೂತಶ್ಚ ಮಯಾ ಸಂಸಾರೇ ಸರತಾ ಚಿರಂ ॥ ೩ ॥

---

### ಎರಡನೆಯ ಅಧ್ಯಾಯ

೧. ಯುಧಿಷ್ಠಿರನು ಶ್ರೀ ಕೃಷ್ಣನನ್ನು ಪ್ರಶ್ನೆಮಾಡುತ್ತಾನೆ—ಜಗತ್ಪ್ರತಿಷ್ಠೆಯು ಯಾವನಿಂದಾಗುವುದು ? ಯಾವನು ಪ್ರಪಂಚಕ್ಕೆ ಕಾರಣನು ? ಜಗತ್ತಿಗೆ ಯಾವುದು ಆಶ್ರಯವು ? ಜಗತ್ತಿನ ಲಯಕ್ಕೆ ಆಧಾರಯಾವುದು ? ಜಗದುತ್ಪತ್ತಿ ಯಾವನಿಂದ ?

೨. ದ್ವೀಪಗಳೆಷ್ಟು ? ಸಮುದ್ರಗಳೆಷ್ಟು ? ಕುಲಪರ್ವತಗಳೆಷ್ಟು ? ಭುವನ ಪ್ರಮಾಣವೆಷ್ಟು ? ಭುವನಗಳು ಎಷ್ಟು ಎಂಬುದನ್ನು ತಿಳಿಸು ಎಂದನು.

೩. ಶ್ರೀ ಕೃಷ್ಣನು ಉತ್ತರ ಹೇಳುತ್ತಾನೆ—ಓ ಧರ್ಮರಾಜನೇ ! ನೀನು ಪೌರಾಣಿಕ ವಿಷಯವನ್ನು ಕೇಳಿರುವೆ. ನಾನು ಬಹುಕಾಲ ಸಂಸಾರದಲ್ಲಿರುವಾಗ ಈ ವಿಷಯವನ್ನು ಕೇಳಿಯೂ ಅನುಭವಿಸಿಯೂ ಇದ್ದೇನೆ.

ಅಜಾಯ ವಿಶ್ವರೂಪಾಯ ನಿರ್ಗುಣಾಯ ಗುಣಾತ್ಮನೇ ।
ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ ॥ ೪ ॥

ಅತ್ರ ತೇ ವರ್ಣಯಿಷ್ಯಾಮಿ ಶೃಣು ಪಾರ್ಥ ಪುರಾತನಂ ।
ಯಾಜ್ಞವಲ್ಕ್ಯೇನ ಮುನಿನಾ ಭವಿಷ್ಯಂ ಭಾಸ್ವತಾಂಪತಿಃ ।
ಪೃಷ್ಟೋ ಯದುತ್ತರಂ ಪ್ರಾದಾದೃಷಿಭ್ಯಸ್ತನ್ಮಯಾ ಶ್ರುತಂ ॥ ೫ ॥

ಧನ್ಯಂ ಯಶಸ್ಯಮಾಯುಷ್ಯಂ ಸರ್ವಾಶುಭವಿನಾಶನಂ ।
ಭವಿಷ್ಯೋತ್ತರಮೇತತ್ತೇ ಕಥಯಾಮಿ ಯುಧಿಷ್ಠಿರ ॥ ೬ ॥

ಏಕಾತ್ಮಕಂ ತ್ರಿದೈವತ್ಯಂ ಚತುಃಪಂಚಸುಲಕ್ಷಣಂ ।
ಗುಣಕಾಲಾದಿಭೇದೇನ ಸದಸತ್ಸಂಪ್ರದರ್ಶಿತಂ ॥ ೭ ॥

---

೪. ಉತ್ಪತ್ತಿರಹಿತನಾಗಿಯೂ, ಪ್ರಪಂಚಸ್ವರೂಪನಾಗಿಯೂ, ನಿರ್ಗುಣನಾಗಿಯೂ, ಗುಣಾತ್ಮಕನಾಗಿಯೂ, ವಿಧಾತೃವಾಗಿಯೂ ಇರುವ ಪರಮಾತ್ಮನಿಗೆ ನಮಸ್ಕಾರ.

೫. ಎಲೈ ಯುಧಿಷ್ಠಿರನೇ ! ಯಾಜ್ಞವಲ್ಕ್ಯ ಮಹರ್ಷಿಯು ಸೂರ್ಯದೇವನನ್ನು ಭವಿಷ್ಯದ ವಿಷಯವಾಗಿ ಪ್ರಶ್ನೆಮಾಡಿದಾಗ ಸೂರ್ಯನು ಯಾವ ಪ್ರಕಾರವಾಗಿ ಉತ್ತರ ಹೇಳಿದನೋ ಅದನ್ನು ನಾನು ಕೇಳಿರುವೆನು. ಆ ಪುರಾತನ ವಿಷಯವನ್ನು ನಿನಗೆ ನಾನು ಹೇಳುತ್ತೇನೆ ಕೇಳು.

೬. ಎಲೈ ಯುಧಿಷ್ಠಿರನೇ ! ಈ ಭವಿಷ್ಯೋತ್ತರಶ್ರವಣವು ಕೃತಕೃತ್ಯತೆಯನ್ನೂ, ಯಶಸ್ಸನ್ನೂ ಆಯುಸ್ಸನ್ನೂ ಮತ್ತು ಸರ್ವಾಶುಭನಿವಾರಣೆಯನ್ನೂ ಉಂಟುಮಾಡುವುದು. ಅದನ್ನೇ ನಿನಗೆ ಹೇಳುತ್ತೇನೆ.

೭. ಪರಮಾರ್ಥತಃ ತತ್ವವು ಒಂದೇ. ಅದು ಮೂರು ದೇವತೆಯಾಯಿತು. ಪ್ರಕ್ರಿಯಾದಿ ನಾಲ್ಕು ಪಾದಗಳು, ಸರ್ಗಾದಿ ಪಂಚ ಲಕ್ಷಣಗಳು, ಸತ್ವಾದಿ ಗುಣ ಭೇದ, ಕಾಲಭೇದ, ಇವುಗಳಿಂದ ಸದಸದಾತ್ಮಕ ಪ್ರಪಂಚವೆಂದು ತೋರಿಸಲ್ಪಟ್ಟಿದೆ.

ಏಕ ಏವ ಜಗದ್ಯೋನಿಃ ಪ್ರತಿಯೋನಿಷು ಸಂಸ್ಥಿತಃ ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥ ೮ ॥

ಬ್ರಹ್ಮಾ ವಿಷ್ಣುರ್ವೃಷಾಂಕಶ್ಚ ತ್ರಯೋ ದೇವಾಃ ಸತಾಂ ಮತಾಃ ।
ನಾಮಭೇದೈಃ ಕ್ರಿಯಾಭೇದೈರ್ಭಿದ್ಯಂತೇ ನಾತ್ಮನಾ ಸ್ವಯಂ ॥ ೯ ॥

ಪ್ರಕ್ರಿಯಾ ಚಾನುಷಂಗಶ್ಚ ಉಪೋದ್ಘಾತಸ್ತಥೈವ ಚ ।
ಉಪಸಂಹಾರ ಇತ್ಯೇತಚ್ಚತುಷ್ಪಾದಂ ಪ್ರಕೀರ್ತಿತಂ ॥ ೧೦ ॥

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥ ೧೧ ॥

ಏಷ ವಕ್ತವ್ಯವಿಷಯಃ ಸುಮಹಾನ್ ಪ್ರತಿಭಾತಿ ಮೇ ।
ತಥಾಪ್ಯುದ್ದೇಶತೋ ವಚ್ಮಿ ಸರ್ಗಂ ಪ್ರತಿ ತವಾನಘ ॥ ೧೨ ॥

---

೮. ಜಗತ್ಕಾರಣನಾದ ಪರಮಾತ್ಮನು ಒಬ್ಬನೇ. ಚಂದ್ರನು ಅನೇಕ ಜಲಪಾತ್ರಗಳಲ್ಲಿ ಪ್ರತಿಫಲಿಸಿ ಅನೇಕವಾಗಿ ಕಾಣುವಂತೆ ಆ ಪರಮಾತ್ಮನು ಅನೇಕ ಭೂತಗಳಲ್ಲಿ ಆವಿರ್ಭವಿಸಿ ಅನೇಕವಾಗಿ ಕಾಣಿಸುವನು.

೯. ಬ್ರಹ್ಮ, ವಿಷ್ಣು, ರುದ್ರರೆಂಬ ಮೂವರೂ ಆ ತತ್ವದಿಂದ ಆದ ಮೂರು ದೇವತೆಗಳೆಂದು ವಿದ್ವಾಂಸರು ಒಪ್ಪಿರುತ್ತಾರೆ. ಅವರಿಗೆ ನಾಮ ಮತ್ತು ಕ್ರಿಯಾ ಮಾತ್ರದಿಂದ ಭೇದವೇ ವಿನಾ ಪರಮಾರ್ಥತಃ ಭೇದವಿಲ್ಲ.

೧೦. ಈ ವಿಚಾರಕ್ಕೆ ಪ್ರಕ್ರಿಯಾ, ಅನುಷಂಗ, ಉಪೋದ್ಘಾತ, ಉಪ ಸಂಹಾರವೆಂದು ನಾಲ್ಕು ಪಾದಗಳು ಹೇಳಲ್ಪಟ್ಟಿವೆ.

೧೧. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಾನುಚರಿತೆ ಗಳೆಂಬ ಐದು ಲಕ್ಷಣಗಳುಳ್ಳದ್ದು ಪುರಾಣವೆನ್ನಿಸಿಕೊಳ್ಳುವುದು.

೧೨. ಎಲೈ ಯುಧಿಷ್ಠಿರನೇ ! ಅವುಗಳಲ್ಲಿ ಸರ್ಗವಿಷಯವಲ್ಲಿ ಹೇಳ ಬೇಕಾದುದು ಬಹಳವಾಗಿದೆ. ಆದರೂ ಸಂಕ್ಷೇಪವಾಗಿ ನಿನಗೆ ಹೇಳುವೆನು.

ಮಹದಾದಿವಿಶೇಷಾಂತಂ ಸವೈರೂಪ್ಯಂ ಸಲಕ್ಷಣಂ ।
ಪಂಚಪ್ರಮಾಣಂ ಷಟ್‌ತಕ್ಷಂ ಪುರುಷಾಧಿಷ್ಠಿತಂ ಜಗತ್ ॥ ೧೩ ॥

ಅವ್ಯಕ್ತಾಜ್ಜಾಯತೇ ಬುದ್ಧಿರ್ಮಹಾನಿತಿ ಚ ಸಾ ಸ್ಮೃತಾ ।
ಅಹಂಕಾರಸ್ತು ಮಹತಸ್ತ್ರಿಗುಣಃ ಸ ಚ ಪಠ್ಯತೇ ॥ ೧೪ ॥

ತನ್ಮಾತ್ರಾಣಿ ಚ ಪಂಚಾಹುರಹಂಕಾರಾಚ್ಚ ಸಾತ್ವಿಕಾತ್ ।
ಜಾತಾನಿ ತೇಭ್ಯೋ ಭೂತಾನಿ ಭೂತೇಭ್ಯಃ ಸಚರಾಚರಂ ॥ ೧೫ ॥

ಜಲಮೂರ್ತಿಮಯೇ ವಿಷ್ಣೌ ನಷ್ಟೇ ಸ್ಥಾವರಜಂಗಮೇ ।
ಭೂತಾತ್ಮಕಮಭೂದಂಡಂ ಮಹತ್ತದುದಕೇಶಯಂ ॥ ೧೬ ॥

ಸೃಷ್ಟ್ಯಾ ಶಕ್ತ್ಯಾ ಚ ನಿರ್ಭಿನ್ನಂ ತದಂಡಮಭವದ್ವಿಧಾ ।
ಭೂಕಪಾಲಮಥೈಕಂ ತದ್ದ್ವಿತೀಯಮಭವನ್ನಭಃ ॥ ೧೭ ॥

---

೧೩. ಮಹತ್ತತ್ವ ಮೊದಲ್ಗೊಂಡು ವಿಶೇಷಾಂತವೂ ಕಾರ್ಯಸಹಿತವೂ ಪರಮಾತ್ಮನಿಂದ ಅಧಿಷ್ಠಿತವೂ ಆದ ಈ ಜಗತ್ತು ಐದು ಪ್ರಮಾಣವುಳ್ಳದ್ದು, ಮತ್ತು ಆರು ತರಗತಿಯುಳ್ಳದ್ದು,

೧೪. ಮಹತ್ತತ್ವವೆಂದು ಕರೆಯಲ್ಪಡುವ ಬುದ್ಧಿಯು ಅವ್ಯಕ್ತದಿಂದ ಹುಟ್ಟಿದುದು. ಸತ್ವಾದಿ ಗುಣತ್ರಯಾತ್ಮಕವಾದ ಅಹಂಕಾರವು, ಆ ಮಹತ್ತತ್ವದಿಂದ ಜನಿಸಿತು. ಎಂದರೆ ಅವ್ಯಕ್ತದಿಂದ ಮಹತ್ತತ್ವ, ಮಹತ್ತತ್ವದಿಂದ ಅಹಂಕಾರ ಈರೀತಿ ಆಯಿತು.

೧೫. ಸಾತ್ವಿಕಾಹಂಕಾರದಿಂದ ಶಬ್ದಾದಿ ಪಂಚತನ್ಮಾತ್ರೆಗಳು ಹುಟ್ಟಿದುವು. ಆ ತನ್ಮಾತ್ರಗಳಿಂದ ಸ್ಥೂಲ ಪಂಚಭೂತಗಳೂ, ಆ ಪಂಚಭೂತಗಳಿಂದ ಸ್ಥಾವರ ಜಂಗಮಾತ್ಮಕವಾದ ಜಗತ್ತೂ ಉದ್ಭವಿಸಿದುವು.

೧೬. ಸ್ಥಾವರಜಂಗಮಾತ್ಮಕ ಜಗತ್ತು ನಷ್ಟವಾದ ಮೇಲೆ ಪರಮಾತ್ಮನು ಕೇವಲ ಜಲಮೂರ್ತಿಮಯನಾಗಿರುವಾಗ ಭೂತಾತ್ಮಕವಾದ ಒಂದು ಅಂಡವು ನೀರಿನಲ್ಲಿ ತೇಲಾಡುತ್ತಿತ್ತು.

೧೭. ಅದು ಸೃಷ್ಟಿಶಕ್ತಿಯಿಂದ ಒಡೆದು ಎರಡು ಪಾಲಾಯಿತು. ಅದರಲ್ಲಿ ಮೊದಲನೆಯದು ಭೂಕಪಾಲವೂ, ಎರಡನೆಯದು ನಭೋಕಪಾಲವೂ ಆಯಿತು.

**ಉಲ್ಬಂ ತಸ್ಯಾಭವನ್ಮೇರುರ್ಜರಾಯುಃ ಪರ್ವತಾಃ ಸ್ಮೃತಾಃ ।**
**ನದ್ಯೋ ಧಮನ್ಯಃ ಸಂಜಾತಾಃ ಕ್ಲೇದಃ ಸರ್ವತ್ರಗಂ ಪಯಃ ॥ ೧೮ ॥**

**ಯೋಜನಾನಾಂ ಸಹಸ್ರಾಣಿ ಷೋಡಶಾಧಃ ಪ್ರತಿಷ್ಠಿತಃ ।**
**ಉತ್ಸೇಧೇ ಚತುರಾಶೀತಿರ್ದ್ವಾತ್ರಿಂಶದೂರ್ಧ್ವ ವಿಸ್ತೃತಃ ।**
**ಭೂಮಿಪಂಕಜವಿಸ್ತೀರ್ಣಾ ಕರ್ಣಿಕಾ ಮೇರುರುಚ್ಯತೇ ॥ ೧೯ ॥**

**ಆದಿತ್ಯಶ್ಚಾದಿದೇವತ್ವಾತ್ತತ್ರಾಭೂತ್ತ್ರಿಗುಣಾತ್ಮಕಃ ।**
**ಪ್ರಾತಃ ಪ್ರಜಾಪತಿರಸೌ ಮಧ್ಯಾಹ್ನೇ ವಿಷ್ಣುರುಚ್ಯತೇ ।**
**ರುದ್ರೋಽಪರಾಹ್ಣಸಮಯೇ ಸ ಏವೈಕಸ್ತ್ರಿಧಾಮತಃ ॥ ೨೦ ॥**

**ಪ್ರಾತಃ ಪ್ರಜಾಪತೇರ್ಜಾತಾ ಮುನಯೋ ನವ ಮಾನವಾಃ ।**
**ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।**
**ಭೃಗುರ್ವಸಿಷ್ಠ ಇತ್ಯಷ್ಟೌ ನಾರದೋ ನವಮಃ ಸ್ಮೃತಃ ॥ ೨೧ ॥**

೧೮. ಆ ಅಂಡದ ಉಲ್ಬವು ಮೇರುವಾಗಿಯೂ, ಗರ್ಭಾಶಯವಾದ ಜರಾಯುವು ಇತರ ಪರ್ವತಗಳಾಗಿಯೂ, ನದಿಗಳು ನಾಡಿಗಳಾಗಿಯೂ, ವ್ಯಾಪ್ತವಾದ ಜಲಭಾಗವು ಬೆವರಿನ ನೀರಾಗಿಯೂ ಪರಿಣಮಿಸಿದುವು.

೧೯. ಆ ಮೇರುವು ಭೂಕಮಲದ ಮಧ್ಯದಲ್ಲಿ ಕರ್ಣಿಕಾಕಾರವಾಗಿರುತ್ತಾ ಕೆಗಡೆಗೆ ಹದಿನಾರು ಸಹಸ್ರಯೋಜನ ಉದ್ದವುಳ್ಳದ್ದೂ ಎತ್ತರವಲ್ಲಿ ಎಂಭತ್ತು ನಾಲ್ಕು ಸಹಸ್ರಯೋಜನವುಳ್ಳದ್ದೂ. ಮತ್ತು ಮೇಲ್ಭಾಗದಲ್ಲಿ ಮೂವತ್ತೆರಡು ಸಹಸ್ರಯೋಜನ ವಿಸ್ತೀರ್ಣವುಳ್ಳದ್ದೂ ಆಗಿ ಇದೆ.

೨೦. ತ್ರಿಗುಣಾತ್ಮಕನೂ, ಆದಿದೇವನೂ ಆದ ಸೂರ್ಯನು ಆ ಮೇರುವಿನಲ್ಲಿದ್ದನು. ಪ್ರಾತಃಕಾಲದಲ್ಲಿ ಬ್ರಹ್ಮರೂಪನೆಂದೂ ಮಧ್ಯಾಹ್ನಕಾಲದಲ್ಲಿ ವಿಷ್ಣುರೂಪನೆಂದೂ ಸಾಯಂಕಾಲದಲ್ಲಿ ರುದ್ರರೂಪನೆಂದೂ ಈರೀತಿ ಆ ಒಬ್ಬನೇ ಮೂರು ಬಗೆಯಿಂದ ಪ್ರಸಿದ್ಧನಾಗಿರುವನು.

೨೧. ಪ್ರಾತಃಕಾಲಿಕನಾದ ಪ್ರಜಾಪತಿಯಿಂದ ಮರೀಚಿ, ಅತ್ರಿ, ಅಂಗೀರಸ್ಸು, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ, ನಾರದರೆಂಬ ಒಂಬತ್ತು ಜನ ಮುನಿವರ್ಯರು ಮನಸ್ಸಂಜಾತರಾದರು.

ನವಬ್ರಹ್ಮಾಣ ಇತ್ಯೇಷ ಪುರಾಣೇ ನಿಶ್ಚಯಃ ಸ್ಮೃತಃ ।
ಅಂಗುಷ್ಠಾದ್ದಕ್ಷಿಣಾದ್ದಕ್ಷಃ ಸಂಜಜ್ಞೇ ಕಮಲೋದ್ಭವಾತ್ ॥ ೨೨ ॥

ವಾಮಾ ಪ್ರಸೂತಿರುದಗಾದಂಗುಷ್ಠಾತ್ತೌ ಚ ದಂಪತೀ ।
ತಾಭ್ಯಾಂ ಜಾತಾಸ್ತು ತನಯಾ ಹರ್ಯಶ್ವಾಸ್ತೇ ವಿನಾಶಿತಾಃ ।
ಸೃಷ್ಟಿಂ ಪ್ರತಿ ಸಮುದ್ಯುಕ್ತಾ ನಾರದೇನ ಮಹಾತ್ಮನಾ ॥ ೨೩ ॥

ದಕ್ಷಃ ಕ್ಷೀಣಾನ್ಸುತಾನ್ವೀಕ್ಷ್ಯ ಜನಯಾಮಾಸ ಕನ್ಯಕಾಃ ।
ಪಂಚಾಶದ್ದಶ ವಿಖ್ಯಾತಾಃ ಸತ್ಯಾದ್ಯಾ ನಾಮಭಿಃ ಸ್ಮೃತಾಃ ॥ ೨೪ ॥

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಕಾಲಸ್ಯ ನಯನೇ ಯುಕ್ತಾಃ ಸಪ್ತವಿಂಶತಿಮಿಂದವೇ ॥ ೨೫ ॥

ದ್ವೇ ಪ್ರಾದಾದ್ಬಾಹುಪುತ್ರಾಯ ದ್ವೇ ಕೃಶಾಶ್ವಾಯ ಚೈವ ಹಿ ।
ರೂಪಯೌವನಶಾಲಿನ್ಯಶ್ಚತಸ್ರೋಽರಿಷ್ಟನೇಮಿನೇ ॥ ೨೬ ॥

---

೨೨. ಇವರು ಪುರಾಣಗಳಲ್ಲಿ ನವಬ್ರಹ್ಮರೆಂದು ಉಕ್ತರಾಗಿದ್ದಾರೆ. ಬ್ರಹ್ಮನ ಬಲಗಾಲಿನ ಅಂಗುಷ್ಟದಿಂದ ದಕ್ಷಪ್ರಜಾಪತಿಯುದ್ಭವಿಸಿದನು.

೨೩. ಎಡಗಾಲಿನ ಅಂಗುಷ್ಠದಿಂದ ಒಂದು ಸ್ತ್ರೀವ್ಯಕ್ತಿಯು ಉದ್ಭವಿಸಿ ಆತನ ಪತ್ನಿಯಾದಳು. ಆ ದಂಪತಿಗಳಿಂದ ಜನ್ಮತಾಳಿ ಸೃಷ್ಟಿಕಾರ್ಯಸಮುದ್ಯುಕ್ತರಾದ ಹರ್ಯಶ್ವರೆಂಬ ಪುತ್ರರನ್ನು ನಾರದಮಹರ್ಷಿಯು ನಾಶಮಾಡಿದನು.

೨೪. ದಕ್ಷಪ್ರಜಾಪತಿಯು ತನ್ನ ಪುತ್ರರ ಮರಣವಿಚಾರವನ್ನು ತಿಳಿದ ಮೇಲೆ ಸತ್ಯಾದಿನಾಮಗಳಿಂದ ಪ್ರಸಿದ್ಧರಾದ ಅರವತ್ತುಜನ ಕನ್ನಿಕೆಯರನ್ನು ಹುಟ್ಟಿಸಿದನು.

೨೫. ದಕ್ಷನು ಆ ತನ್ನ ಕನ್ನಿಕೆಯರಲ್ಲಿ ಹತ್ತುಮಂದಿಯನ್ನು ಧರ್ಮನಿಗೂ, ಹದಿಮೂರುಮಂದಿಯನ್ನು ಕಶ್ಯಪನಿಗೂ ಕಾಲಚಕ್ರಗತಿಗೆ ಕಾರಣರಾದ ಇಪ್ಪತ್ತೇಳುಮಂದಿಯನ್ನು ಚಂದ್ರನಿಗೂ ಕೊಟ್ಟನು.

೨೬. ಅಲ್ಲದೆ ಇಬ್ಬರನ್ನು ಬಾಹುಪುತ್ರನಿಗೂ, ಇಬ್ಬರನ್ನು ಕೃಶಾಶ್ವನಿಗೂ ಮತ್ತು ರೂಪವತಿಯರಾದ ನಾಲ್ವರು ಕನ್ನಿಕೆಯರನ್ನು ಅರಿಷ್ಟನೇಮಿ ಎಂಬುವನಿಗೂ ಕೊಟ್ಟನು.

ಏಕಾಂ ಭೃಗೋರ್ಭವಾಯೈಕಾಂ ಪ್ರಾದಾತ್ತೇಭ್ಯಶ್ಚರಾಚರಃ ।
ಅಭವತ್ಪುರುಷವ್ಯಾಘ್ರ ಭೂತಗ್ರಾಮಶ್ಚತುರ್ವಿಧಃ ॥ ೨೭ ॥

ವೈರಾಜಮಥ ವೈಕುಂಠಂ ಕೈಲಾಸಮಿತಿ ನಾಮತಃ ।
ಮೇರೋಃ ಶೃಂಗತ್ರಯಂ ಮೂರ್ಧ್ನಿ ಬ್ರಹ್ಮವಿಷ್ಣುಶಿವಾಲಯಂ ॥ ೨೮ ॥

ಪ್ರಾಚೀದಿಕ್ಕ್ರಮಯೋಗೇನ ತೇಷಾಂ ಪಾರ್ಶ್ವೇ ಪುರಃ ಸ್ಮೃತಾಃ ।
ಇಂದ್ರಾದಿಲೋಕಪಾಲಾನಾಂ ದಿವ್ಯೈಃ ಸ್ವರ್ಲಕ್ಷಣೈರ್ಯುತಾಃ ॥ ೨೯ ॥

ಹಿಮವಾನ್ ಹೇಮಕೂಟಶ್ಚ ನಿಷಧೋ ಮೇರುರೇವ ಚ ।
ನೀಲಃ ಶ್ವೇತಸ್ತಥಾ ಶೃಂಗೀ ಜಂಬೂದ್ವೀಪೇ ಕುಲಾಚಲಾಃ ।
ಜಂಬೂದ್ವೀಪ ಪ್ರಮಾಣೇನ ಸಹಸ್ರಗುಣಿತಂ ಶತಂ ॥ ೩೦ ॥

---

೨೭. ಒಬ್ಬಳನ್ನು ಭೃಗುವಿಗೂ, ಮತ್ತೊಬ್ಬಳನ್ನು ಈಶ್ವರನಿಗೂ ಮದುವೆ ಮಾಡಿಕೊಟ್ಟನು. ಅವರಿಂದ ಅಂಡಜಾದಿ ನಾಲ್ಕುತರಹೆಯ ಸ್ಥಾವರಜಂಗಮ ಪ್ರಾಣಿಗಳೂ ಹುಟ್ಟಿದುವು.

೨೮. ಮೇರುವಿನ ಮೂರುಶಿಖರಗಳ ಮೇಲೆ ವೈರಾಜ, ವೈಕುಂಠ ಮತ್ತು ಕೈಲಾಸ ಎಂಬ ಹೆಸರುಳ್ಳದ್ದಾಗಿ ಬ್ರಹ್ಮ, ವಿಷ್ಣು, ಮಹೇಶ್ವರ ಇವರ ಆವಾಸ ಸ್ಥಾನಗಳಿವೆ.

೨೯. ಆ ಆಲಯಗಳ ಪಾರ್ಶ್ವಗಳಲ್ಲಿ ಪೂರ್ವ ಆಗ್ನೇಯ ಮೊದಲಾದ ದಿಕ್ಕುಗಳಲ್ಲಿ ಕ್ರಮದಿಂದ ಇಂದ್ರಾದಿ ಲೋಕಪಾಲಕರ ಕೂಡಿದ ಅಮರವತೀ ಮೊದಲಾದ ಪಟ್ಟಣಗಳು ದಿವ್ಯವಾದ ಸ್ವರ್ಗಲಕ್ಷಣಗಳಿಂದ ಒಪ್ಪುತ್ತಿವೆ.

೩೦. ಜಂಬೂದ್ವೀಪದಲ್ಲಿ ಇದರ ಪ್ರಮಾಣದ ಒಂದುಸಾವಿರದನೂರರಷ್ಟು ದೊಡ್ಡ ಪ್ರಮಾಣವುಳ್ಳ ಹಿಮವಾನ್, ಹೇಮಕೂಟ, ನಿಷಧ, ಮೇರು, ನೀಲ, ಶ್ವೇತ, ಶೃಂಗೀ ಎಂಬ ಕುಲಪರ್ವತಗಳಿವೆ.

ಭಿದ್ಯತೇ ನವಧಾ ಸೋऽಪಿ ವರ್ಷಭೇದೇನ ಭಾರತ ।
ಜಂಬೂಶಾಕಕುಶಕ್ರೌಂಚಶಾಲ್ಮಗೋಮೇದ ಪುಷ್ಕರಾಃ ।
ದ್ವೀಪಾಃ ಸಪ್ತ ಸಮಾಖ್ಯಾತಾಃ ಸಮುದ್ರೈಃ ಸಪ್ತಭಿರ್ವೃತಾಃ ॥ ೩೧ ॥

ಕ್ಷಾರಕ್ಷೀರೇಕ್ಷು ಸುರಯಾ ದಧ್ನಾ ಚೈವ ಘೃತೇನ ಚ ।
ಸ್ವಾದೂದಕೇನ ಚ ಭೃತೈರ್ದ್ವಿಗುಣೈರ್ದ್ವಿಗುಣೈಸ್ತಥಾ ॥ ೩೨ ॥

ಭೂರ್ಲೋಕೋऽಥ ಭುವರ್ಲೋಕಃ ಸ್ವರ್ಮಹರ್ಜನ ಇತ್ಯಪಿ ।
ತಪಃ ಸತ್ಯಶ್ಚ ಕಥಿತಾಃ ಪಾರ್ಥ ಸಪ್ತ ಸುರಾಲಯಾಃ ॥ ೩೩ ॥

ಮಹಾತಲೋಥ ಪಾತಾಲಃ ಸುತಲೋ ವಿತಲಾತಲಃ ।
ರಸಾತಲಶ್ಚ ವಿಜ್ಞೇಯಃ ಸಪ್ತಮಶ್ಚ ತಲಾತಲಃ ॥ ೩೪ ॥

ಹಿರಣ್ಯಾಕ್ಷ ಪ್ರಭೃತಯೋ ದಾನವೇಂದ್ರಾ ಮಹೋರಗಾಃ ।
ವಸಂತ್ಯೇತೇಷು ಕೌಂತೇಯ ಸಿದ್ಧಾಶ್ಚ ಋಷಯಶ್ಚ ಯೇ ॥ ೩೫ ॥

---

೩೧. ಓ ಯುಧಿಷ್ಠಿರನೇ ! ಕೇಳು. ಆ ಜಂಬೂದ್ವೀಪವು ವರ್ಷಭೇದದಿಂದ ಒಂಬತ್ತುಖಂಡಗಳಾಗಿ ವಿಭಾಗಿಸಲ್ಪಟ್ಟಿದೆ. ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಜಂಬೂ, ಶಾಕ, ಕುಶ, ಕ್ರೌಂಚ, ಶಾಲ್ಮ, ಗೋಮೇಧ, ಪುಷ್ಕರಗಳೆಂಬ ಏಳುದ್ವೀಪಗಳು ಪ್ರಸಿದ್ಧವಾಗಿವೆ.

೩೨. ಪೂರ್ವ ಪೂರ್ವಪ್ರಮಾಣಗಳಿಗಿಂತ ಎರಡರಷ್ಟು ಹೆಚ್ಚಾದ ಪ್ರಮಾಣವುಳ್ಳ ಕ್ಷಾರ, ಕ್ಷೀರ, ಇಕ್ಷು, ಸುರಾ, ದಧಿ, ಘೃತ, ಸ್ವಾದೂದಕ ಇವುಗಳಿಂದ ತುಂಬಿದ ಏಳು ಸಮುದ್ರಗಳಿವೆ.

೩೩. ಅಯ್ಯಾ ಯುಧಿಷ್ಠಿರನೇ ! ಭೂಃ, ಭುವಃ, ಸುವಃ, ಮಹಃ, ಜನಃ ತಪಃ, ಸತ್ಯಂ ಎಂಬ ಏಳು ಸುರಾಲಯಗಳೂ ಊರ್ಧ್ವಲೋಕಗಳೆನಿಸಿವೆ.

೩೪. ಮಹಾತಲ, ಪಾತಾಲ, ಸುತಲ, ವಿತಲ, ಅತಲ, ರಸಾತಲ, ತಲಾತಲಗಳೆಂಬ ಏಳೂ ಅಧೋಲೋಕಗಳೆಂದು ತಿಳಿಯತಕ್ಕದ್ದು.

೩೫. ಎಲೈ ಕುಂತೀಪುತ್ರನೇ ! ಈ ಅಧೋಲೋಕಗಳಲ್ಲಿ ಹಿರಣ್ಯಾಕ್ಷನೇ ಮೊದಲಾದ ದಾನವೇಂದ್ರರೂ, ಮಹಾಸರ್ಪಗಳೂ, ಸಿದ್ಧರೂ, ಋಷಿಗಳೂ ವಾಸವಾಗಿದ್ದಾರೆ.

ಸ್ವಾಯಂಭುವೋ ಮನುಃ ಪೂರ್ವಂ ತತಃ ಸ್ವಾರೋಚಿಷೋಽಭವತ್ ।
ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷೇತಿ ಷಟ್ ॥ ೩೬ ॥

ವೈವಸ್ವತೋಽಯಮಧುನಾ ವರ್ತತೇ ಮನುರುತ್ತಮಃ ।
ಯಸ್ಯಪುತ್ರೈಃ ಪ್ರಪೌತ್ರೈಶ್ಚ ವಿಭಕ್ತೇಯಂ ವಸುಂಧರಾ ॥ ೩೭ ॥

ಆದಿತ್ಯಾ ವಸವೋ ರುದ್ರಾ ಏಕಾದಶ ತಥಾಶ್ವಿನೌ ।
ಉಷಸ್ತ್ರಯಃ ಸಮಾಖ್ಯಾತಾ ದೇವ ವೈವಸ್ವತೇಽಂತರೇ ॥ ೩೮ ॥

ವಿಪ್ರಚಿತ್ತಿಹಿರಣ್ಯಾಖ್ಯೌ ದೈತ್ಯದಾನವಸತ್ತಮೌ ।
ತಯೋರ್ವಂಶೇ ತು ಬಹವೋ ದೈತ್ಯದಾನವಸತ್ತಮಾಃ ॥ ೩೯ ॥

ಪಂಚಾಶದ್ಗುಣಿತಕೋಟಿಯೋಜನಾನಾಂ ಮಹತ್ತಯಾ ।
ಸಪ್ತದ್ವೀಪಸಮುದ್ರಾಯಾಃ ಪ್ರಮಾಣಮವನೇಃ ಸ್ಮೃತಂ ॥ ೪೦ ॥

---

೩೬. ಆದಿಯಲ್ಲಿ ಸ್ವಾಯಂಭುವ ಮನು ಆಮೇಲೆ ಸ್ವಾರೋಚಿಷ ಇದೇ ಕ್ರಮದಲ್ಲಿ ಉತ್ತಮ, ತಾಮಸ, ರೈವತ, ಚಾಕ್ಷುಷರೆಂಬ ಆರುಜನ ಮನುಗಳು ಆದರು.

೩೭. ಅಲ್ಲಿ ಉತ್ತಮನಾದ ವೈವಸ್ವತಮನುವು ಈಗ ಇದ್ದಾನೆ. ಆ ವೈವಸ್ವತಮನುವಿನ ಮಕ್ಕಳು ಮೊಮ್ಮಕ್ಕಳುಗಳಿಂದ ಈ ಭೂಮಿಯು ವಿಭಕ್ತವಾಗಿ ಭೋಗಿಸಲ್ಪಡುತ್ತಿದೆ.

೩೮. ಈ ವೈವಸ್ವತ ಮನ್ವಂತರದಲ್ಲಿ ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶ ರುದ್ರರೂ, ಇಬ್ಬರು ಅಶ್ವಿನೀ ದೇವತೆಗಳೂ, ಮೂರು ಉಷೋದೇವತೆಗಳೂ ಪ್ರಸಿದ್ಧರಾಗಿದ್ದಾರೆ.

೩೯. ವಿಪ್ರಚಿತ್ತಿ, ಹಿರಣ್ಯಾಕ್ಷರೆಂಬ ದೈತ್ಯರಿಂದ ಅನೇಕ ದೈತ್ಯದಾನವರು ಜನಿಸಿರುವರು.

೪೦. ಏಳು ಸಮುದ್ರಗಳಿಂದಲೂ, ಏಳು ದ್ವೀಪಗಳಿಂದಲೂ ಕೂಡಿದ ಪೃಥಿವಿಯು ಐವತ್ತರಿಂದ ಗುಣಿತವಾದ ಕೋಟಿಯೋಜನಗಳಷ್ಟು ಮಹತ್ತಾಗಿದೆ.

ಪಿಂಡೇನ ಚ ಸಹಸ್ರಾಣಿ ಸಪ್ತತಿರ್ಜಲಮಧ್ಯತಃ ।
ಗೌರಿವೈಷಾ ಸುಮಹತೀ ಭ್ರಾಜತೇ ನ ಚ ಲೀಯತೇ ॥ ೪೧ ॥

ಲೋಕಾಲೋಕಃ ಪರತರಃ ಪರ್ವತೋಗ್ರಮಹೋಚ್ಛ್ರಯಃ ।
ದ್ವೈತಮರ್ಥಂ ಸ ನಿಯತೋ ಯೋಽಸೌ ರವಿರುಚಾಮಪಿ ॥ ೪೨ ॥

ನೈಮಿತ್ತಿಕಃ ಪ್ರಕೃತಿಕಸ್ತಥೈವಾತ್ಯಂತಿಕೋ ಲಯಃ ।
ನಿತ್ಯಶ್ಚತುರ್ಥೋ ವಿಜ್ಞೇಯಃ ಕಾಲೋ ನಿತ್ಯಾಪಹಾರಕಃ ॥ ೪೩ ॥

ಉತ್ಪದ್ಯತೇ ಸ್ವಯಂ ಯಸ್ಮಾತ್ತತ್ತಸ್ಮಿನ್ನೇವ ಲೀಯತೇ ।
ರಕ್ಷತಿ ಚ ಪರೇ ಪುಂಸಿ ಭೂತಾನಾಮೇಷ ನಿಶ್ಚಯಃ ॥ ೪೪ ॥

ಯಥರ್ತಾವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ।
ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥ ೪೫ ॥

---

೪೧. ಗೋಪಿಂಡಾಕಾರವುಳ್ಳ ಈ ಭೂಮಿಯು ಜಲಮಧ್ಯದಲ್ಲಿ ಎಪ್ಪತ್ತು ಸಹಸ್ರಯೋಜನದಷ್ಟು ಒಳಗಿದ್ದುಕೊಂಡು ಮುಳುಗದೆ ಪ್ರಕಾಶಿಸುತ್ತದೆ.

೪೨. ಸುತ್ತಲೂ ಸೂರ್ಯರಶ್ಮಿ ಬೀಳಲು ಅವಕಾಶಕೊಡದೆ ದ್ವೈತಾರ್ಥವನ್ನು ಪ್ರತ್ಯಕ್ಷಪಡಿಸುತ್ತಾ ಬಹಳ ಎತ್ತರವಾದ ಲೋಕಾಲೋಕವೆಂಬ ಪರ್ವತವಿದೆ.

೪೩. ಪ್ರಳಯಗಳಲ್ಲಿ ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ ದೈನಂದಿನಗಳೆಂಬ ನಾಲ್ಕು ಭೇದಗಳಿವೆ.

೪೪. ಭೂತಗಳ ಉತ್ಪತ್ತಿ, ಸ್ಥಿತಿ, ಲಯ ಇವುಗಳು ಪರಮಪುರುಷನಿಂದಲೇ ಎಂಬುದು ನಿಶ್ಚಿತವಾದ ವಿಷಯವಾಗಿದೆ.

೪೫. ವಸಂತಾದಿ ಋತುಗಳಲ್ಲಿ ಋತುಚಿಹ್ನಗಳಾದ ನವಪಲ್ಲವಾದಿಗಳು ಅನೇಕರೂಪವಾಗಿ ಮೊದಲಿನಂತೆ ಉದ್ಭವಿಸುವ ಹಾಗೆಯೇ ಘಟೀ ಯಂತ್ರದಂತೆ ಕಾಲಪರಿವರ್ತನೆಯಾಗುವಾಗ ಯುಗಾದಿಗಳಲ್ಲಿ ಆ ಮಾಯಾ ಪದಾರ್ಥಗಳು ಮೊದಲಿನಂತೆಯೇ ಕಾಣಿಸಿಕೊಳ್ಳಲುಪಕ್ರಮಿಸುವವು.

ಪ್ರತಿಲೀನೇಷು ಭೂತೇಷು ವಿಬುದ್ಧಃ ಸಕಲಂ ಜಗತ್ ।
ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥ ೪೬ ॥

ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾವೃತಾನೃತೇ ।
ತೇ ತಂ ವಿನಾ ಪ್ರಪದ್ಯಂತೇ ಪುನಸ್ತೇಷ್ವೇವ ಕರ್ಮಸು ॥ ೪೭ ॥

ಭೂರ್ದಶಗುಣೇನ ಪಯಸಾ ಸಂವೃತಾ ತಚ್ಚ ತೇಜಸಾ ।
ತೇಜೋಽನಿಲೇನ ನಭಸಾ ತದ್ಗುಣೇನಾನಿಲೋ ವೃತಃ ॥ ೪೮ ॥

ಭೂತಾದಿನಾ ತಥಾಕಾಶಂ ಭೂತಾದಿರ್ಮಹತಾ ವೃತಃ ।
ಮಹಾನ್ಪರಿವೃತಸ್ತೇನ ಪುರುಷೇಣಾವಿನಾಶಿನಾ ॥ ೪೯ ॥

ಏವಂ ವಿಧಾನಾಮಂಡಾನಾಂ ಸಹಸ್ರಾಣಿ ಶತಾನಿ ಚ ।
ಉತ್ಪನ್ನಾನಿ ವಿನಷ್ಟಾನಿ ಭಾವಿತಾನಿ ಮಹಾತ್ಮನಾ ॥ ೫೦ ॥

---

೪೬. ಸಮಸ್ತ ಭೂತಗಳೂ ಪ್ರಳಯಕಾಲದಲ್ಲಿ ಲಯವಾದಮೇಲೆ ಸೃಷ್ಟ್ಯಾದಿಯಲ್ಲಿ ಪ್ರಬುದ್ಧನಾದಾ ಪರಮೇಶ್ವರನು ವೇದಶಬ್ದಾನು ಸಂಧಾನ ಪೂರ್ವಕವಾಗಿ ಜಗತ್ತನ್ನು ಸೃಷ್ಟಿಮಾಡಿದನು.

೪೭. ಪ್ರಾಕ್ತನ ಕರ್ಮಾನುರೋಧದಿಂದ ಹಿಂಸ್ರಾ, ಹಿಂಸ್ರ, ಮೃದು, ಕ್ರೂರ, ಧರ್ಮ, ಅಧರ್ಮ, ಋತ, ಅನೃತ ಈ ಸ್ವಭಾವಗಳನ್ನುಳ್ಳವಾಗಿಯೂ ಸೃಷ್ಟಿಯಾದ ಪ್ರಾಣಿಗಳು ಪುನಃ ಹಿಂದಿನಂತೆಯೇ ಹಿಂಸ್ರಾದಿ ಕರ್ಮಗಳಲ್ಲಿ ಪ್ರವೃತ್ತವಾಗುವುವು.

೪೮. ಪೃಥಿವಿಯು ತನ್ನ ಹತ್ತರಷ್ಟು ವಿಸ್ತಾರದ ಜಲದಿಂದಕೂಡಿದೆ. ಜಲವು ತೇಜಸ್ಸಿನಿಂದ ಸಂವೃತವಾಗಿದೆ, ತೇಜಸ್ಸು ವಾಯುವಿನಿಂದ ಕೂಡಿದೆ, ವಾಯುವು ಆಕಾಶದಿಂದ ಸಂವೃತವಾಗಿದೆ.

೪೯. ಆಕಾಶವು ಭೂತಾದಿಯಾದ ಅಹಂಕಾರದಿಂದಲೂ, ಅಹಂಕಾರವು ಮಹತ್ತತ್ವದಿಂದಲೂ ಆವೃತವಾಗಿದೆ. ಅಂಥ ಮಹತ್ತತ್ವವು ಅವಿನಾಶಿಯಾದಾ ಪರಮಾತ್ಮನಿಂದ ಆವರಿಸಲ್ಪಟ್ಟಿದೆ.

೫೦. ಈ ತರಹೆಯಾದ ಸಾವಿರಾರು ಅಂಡಗಳು ಪರಮಾತ್ಮನಿಂದ ಉದ್ಭವಿಸಿ ನಾಶವಾಗಿವೆ.

ವೈಕುಂಠಕೋಷ್ಟಗತಮೇತದಶೇಷತಾಯಾಂ ।
ಖ್ಯಾತಂ ಜಗತ್ಸುರನರೋರಗಸಿದ್ಧನದ್ಧಂ ।
ಪಶ್ಯಂತಿ ಶುದ್ಧಮುನಯೋ ಬಹಿರಂತರೇ ಚ ।
ಮಾಯಾಚರಾಚರಗುರೋರಪರ್ಯೈವ ಕಾಚಿತ್ ॥ ೫೧ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರ ಪರ್ವಣಿ ಬ್ರಹ್ಮಾಂಡೋತ್ಪತ್ತಿ ವರ್ಣನಂ ನಾಮ ದ್ವಿತೀಯೋಧ್ಯಾಯಃ**



---

೫೧. ಚರಾಚರ ಗುರುವಾದ ಭಗವಂತನ ಮಾಯೆಯಿಂದ ಕಾಲವೆಂಬ ವೈಕುಂಠ ಕೋಷ್ಟಕದಲ್ಲಿ ಸುರ, ನರ, ಉರಗ, ಸಿದ್ಧ ಮೊದಲಾದ ಪ್ರಾಣಿಗಳಿಂದ ಕೂಡಿದ ಈ ಜಗತ್ತನ್ನು ಶುದ್ಧಾತ್ಮರಾದ ಋಷಿಗಳು ಬಾಹ್ಯಾಭ್ಯಂತರಗಳಲ್ಲಿ ಕಾಣುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರ ಪರ್ವದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ತೃತೀಯೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಕೀದೃಶೀ ಕೃಷ್ಣ ಸಾ ಮಾಯಾ ವಿಷ್ಣೋರಮಿತತೇಜಸಃ ।
ಯಯಾ ವ್ಯಾಮೋಹಿತಂ ಯಚ್ಚ ಜಗದೇತಚ್ಚರಾಚರಂ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಯೇನ ದ್ವೀಪೇ ಪುರಾ ವಿಷ್ಣುರಾಸ್ತೇ ಚಕ್ರಗದಾಧರಃ ।
ವಾಸುದೇವಃ ಸಗರುಡಃ ಸ ಚಕ್ರಶ್ಚ ಶ್ರಿಯಾ ಸಹ ॥ ೨ ॥

ನೀಲೋತ್ಪಲದಲಶ್ಯಾಮಃ ಕುಂಡಲಾಭ್ಯಾಂ ವಿಭೂಷಿತಃ ।
ಭ್ರಾಜತೇ ಮುಕುಟೋದ್ಯೋತಕೇಯೂರ ವನಮಾಲಯಾ ॥ ೩ ॥

---

## ಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಓ ಕೃಷ್ಣ ! ಯಾವ ವಿಷ್ಣುವಿನ ಮಾಯೆಯಿಂದ ಈ ಚರಚರಾತ್ಮಕವಾದ ಜಗತ್ತು ಮೋಹಿತವಾಗಿದೆಯೋ, ಆ ಮಾಯೆಯು ಎಂತಹುದು ? ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಪೂರ್ವದಲ್ಲಿ ಗರುಡ ಲಕ್ಷ್ಮಿ ಇವರಿಂದಕೂಡಿ ಶಂಖ, ಚಕ್ರ ಮತ್ತು ಗದೆಯನ್ನು ಧರಿಸಿದ ಶ್ರೀ ಮಹಾವಿಷ್ಣುವು ಯಾವ ದ್ವೀಪದಲ್ಲಿದ್ದನೋ ?

೩. ನೀಲ ಕನ್ನೈದಿಲೆಯಂತೆ ಕಪ್ಪಾಗಿಯೂ, ಕುಂಡಲಗಳಿಂದ ಅಲಂಕೃತನಾಗಿಯೂ, ಕಿರೀಟದಿಂದ ಶೋಭಿಸುವವನಾಗಿಯೂ, ಕೇಯೂರ, ವನಮಾಲಾ ಸಹಿತನೂ ಆಗಿ ಯಾವರೀತಿ ಪ್ರಕಾಶಿಸುತ್ತಿದ್ದನೋ ?

ತಸ್ಯ ದೃಷ್ಟ್ವಾಮಥಾಭ್ಯಾಗಾನ್ನಾರದೋ ಮುನಿಸತ್ತಮಃ ।
ಪ್ರಣಮ್ಯ ಸ್ತುತಿಭಿರ್ದೇವಂ ಪ್ರಾಹೇದಂ ವಿಸ್ಮಯಾನ್ವಿತಃ ॥ ೪ ॥

ಸಂಶಯಂ ಪರಿಪೃಚ್ಛಾಮಿ ಭಗವನ್ವಕ್ತುಮರ್ಹಸಿ ।
ಕಾ ಮಾಯಾ ಕೀದೃಶೀ ಮಾಯಾ ಕಿಂ ರೂಪಾ ಚ ಕುತಸ್ತಥಾ ॥ ೫ ॥

ತಸ್ಯಾ ದರ್ಶಯ ಮೇ ರೂಪಂ ಮಾಯಾಯಾಃ ಪುರುಷೋತ್ತಮ ।
ಯಾ ಚ ಮೋಹಯತೇ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೬ ॥

ಆಬ್ರಹ್ಮಸ್ತಂಬಪರ್ಯಂತಂ ಸದೇವಾಸುರಮಾನುಷಂ ।
ವೈಕುಂಠಂ ವಾಸುದೇವಂ ಚ ಪ್ರಸಾದಂ ಕರ್ತುಮರ್ಹಸಿ ॥ ೭ ॥

ಏವಮುಕ್ತಸ್ತು ಮುನಿನಾ ದೇವದೇವೋ ಜನಾರ್ದನಃ ।
ಪ್ರಹಸ್ಯೋವಾಚ ದೇವರ್ಷೇ ನ ಕಾರ್ಯಂ ಮಾಯಯಾ ತ್ವಯಾ ॥ ೮ ॥

---

೪. ಆ ದ್ವೀಪಕ್ಕೆ ಅಂತಹ ವಿಷ್ಣುವಿನ ಸಂದರ್ಶನಕ್ಕಾಗಿ ಋಷಿವರ್ಯನಾದ ನಾರದನು ಬಂದು, ವಿಷ್ಣುವನ್ನು ನಮಸ್ಕರಿಸಿ ಸ್ತೋತ್ರಮಾಡಿ ಆಶ್ಚರ್ಯದಿಂದ ಹೀಗೆ ಹೇಳಿದನು.

೫–೬. "ಪೂಜ್ಯನೇ ! ಒಂದು ಸಂದೇಹವನ್ನು ಕೇಳುತ್ತೇನೆ. ಅದಕ್ಕೆ ಉತ್ತರವನ್ನು ಹೇಳಬೇಕು. ಮಾಯೆಯೆಂದರೆ ಯಾವುದು ? ಮಾಯೆ ಎಂತಹುದು. ಅದು ಏಕೆ ಹಾಗಾಯಿತು ? ಪುರುಷೋತ್ತಮನೇ ! ಆ ಮಾಯಾ ಸ್ವರೂಪವನ್ನು ನನಗೆ ತೋರಿಸು. ಯಾವ ಮಾಯೆಯು ಸ್ಥಿರ ಚರಾತ್ಮಕವಾದ ತ್ರಿಲೋಕವನ್ನು ಮೋಹಗೊಳಿಸುವುದೋ ?

೭. ಅಲ್ಲದೆ ಆದಿ ಬ್ರಹ್ಮ ಮೊದಲ್ಗೊಂಡು ಸ್ತಂಭಪರ್ಯಂತವಾದ ದೇವಾಸುರ ಮನುಷ್ಯರಿಂದ ಕೂಡಿದ ಲೋಕವನ್ನೂ ವೈಕುಂಠವನ್ನು ಮತ್ತು ಶ್ರೀಮನ್ಮಹಾವಿಷ್ಣುವನ್ನೂ ಕೂಡ ಯಾವ ಮಾಯೆಯು ಮೋಹಿಸುವುದೋ ಅಂಥಾ ಮಾಯೆಯ ಸ್ವರೂಪವನ್ನು ದಯವಿಟ್ಟು ಹೇಳು" ಎಂದನು.

೮. ಈ ರೀತಿ ಮಹರ್ಷಿ ನಾರದನಿಂದ ಪ್ರಶ್ನಿಸಲ್ಪಟ್ಟ ದೇವದೇವನಾದ ಜನಾರ್ದನನು ನಕ್ಕು "ಎಲೈ ದೇವರ್ಷಿಯೇ ! ಮಾಯೆಯ ಸ್ವರೂಪವನ್ನು ತಿಳಿದುಕೊಂಡು ನಿನಗೆ ಯಾವ ಪ್ರಯೋಜನವೂ ಇಲ್ಲ" ಎಂದನು.

ಭೂಯೋऽಪಿ ಮೋಹಯಾಮಾಸ ಸೋಮುಗ್ಧ್ರಾಹೇಣ ನಾರದಂ ।
ನಾರದೋಽಪಿ ಮಹಾರಾಜ ಪ್ರೋವಾಚೇದಂ ಪುನಃ ಪುನಃ ॥ ೯ ॥

ಮಾಯಾಂ ದರ್ಶಯ ಮೇ ದೇವ ನಾನ್ಯದಸ್ತಿ ಪ್ರಯೋಜನಂ ।
ಅಥಾಸೌ ವಿಷ್ಣುರುತ್ಥಾಯ ಶ್ವೇತದ್ವೀಪಂ ಪುನರ್ಯಯೌ ॥ ೧೦ ॥

ಅಂಗುಲ್ಯಗ್ರೇಣ ಸಂಗೃಹ್ಯ ನಾರದಂ ಮುನಿಪುಂಗವಂ ।
ತತೋ ಮಾರ್ಗಗತಶ್ಚಕ್ರೇ ಆತ್ಮಾನಂ ದ್ವಿಜರೂಪಿಣಂ ॥ ೧೧ ॥

ಋಗ್ವೇದಸದೃಶಃ ಸಾಕ್ಷಾದ್ವಿಷ್ಣುರ್ಬ್ರಹ್ಮವದಾಸ್ಥಿತಃ ।
ವೃದ್ಧದ್ವಿಜೋತ್ತಮವಪುಃ ಸಂಶಯೋ ನಾಲ್ಪಕೋಽಭವತ್ ॥ ೧೨ ॥

ಶಿಖೀ ಕಮಂಡಲುಧೃತೋ ಮೃಗಚರ್ಮೋಪವೀತಕಃ ।
ಯಜ್ಞಶರ್ಮೇತಿ ಸಂಜ್ಞಾಂ ಚ ಚಕ್ರೇऽಸಾವಾತ್ಮನಃ ಪ್ರಭುಃ ॥ ೧೩ ॥

---

೯. ಮತ್ತು ಮಾಯೆಯಿಂದ ನಾರದನನ್ನು ಮುಗ್ಧನನ್ನಾಗಿ ಮಾಡಿದನು. ಮಹಾರಾಜ! ನಾರದನು ಕೂಡ ಮತ್ತೆ ಮತ್ತೆ ಇದನ್ನೇ ಕೇಳಿದನು.

೧೦. "ದೇವಾ! ನನಗೆ ಇನ್ನಾವ ಪ್ರಯೋಜನವೂ ಬೇಕಾಗಿಲ್ಲ. ಆದುದರಿಂದ ಮಾಯೆಯನ್ನು ತಿಳಿಯಪಡಿಸು'' ಎಂದನು. ಆಮೇಲೆ ವಿಷ್ಣುವು ಎದ್ದು ಶ್ವೇತ ದ್ವೀಪಕ್ಕೆ ತೆರಳಿದನು.

೧೧. ದಾರಿಯಲ್ಲಿ ತನ್ನ ಅಂಗುಳ್ಯಗ್ರದಿಂದ ನಾರದನನ್ನು ಹಿಡಿದು ಕೊಂಡು ಹೋಗುವಾಗ ತಾನು ಒಬ್ಬ ಬ್ರಾಹ್ಮಣ ಸ್ವರೂಪವನ್ನು ಧರಿಸಿದನು.

೧೨. ವಿಷ್ಣುವು ಸಾಕ್ಷಾತ್ ಋಗ್ವೇದ ಸ್ವರೂಪಿಯಂತಿದ್ದು ಬ್ರಹ್ಮನಂತೆ ಕಾಣಿಸಿಕೊಳ್ಳುತ್ತಾ ವೃದ್ಧ ಬ್ರಾಹ್ಮಣನ ವೇಷವನ್ನು ಧರಿಸಿದ್ದುದರಿಂದ ಯಾರಿಗೂ ಆತನೇ ವಿಷ್ಣು ಎಂಬ ಸಂಶಯಕ್ಕೆ ಆಸ್ಪದವಾಗಲಿಲ್ಲ.

೧೩. ಅಲ್ಲದೆ ಆಗ ಪ್ರಭುವು ಶಿಖಾಧಾರಿಯಾಗಿ ಕಮಂಡಲುವನ್ನು ಧರಿಸಿ, ಕೃಷ್ಣಮೃಗಚರ್ಮವನ್ನು ಉಪವೀತವನ್ನಾಗಿ ಮಾಡಿಕೊಂಡು ತನಗೆ ಯಜ್ಞಶರ್ಮ ಎಂಬ ನಾಮಧೇಯವನ್ನಿಟ್ಟುಕೊಂಡನು.

ಕೃತ್ವಾಪಿ ಕುಶತಂತ್ವಗ್ರಪವಿತ್ರಕೃತಲಕ್ಷಣಂ ।
ಆಯಯೌ ಸ ಮಹೀಪೃಷ್ಠಂ ಜಂಬೂದ್ವೀಪಂ ಚಚಾರ ಹ ॥ ೧೪ ॥

ವೈದಿಶಂ ನಾಮ ನಗರಂ ವೇತ್ರವತ್ಯಾಸ್ತಟೇ ಶುಭಂ ।
ತಸ್ಮಿನ್ಸದೋದ್ಯಮಪರೋ ಧನಧಾನ್ಯಸಮೃದ್ಧಿಮಾನ್ ॥ ೧೫ ॥

ಗೋಮಹಿಷ್ಯಜಸಂಪೂರ್ಣಂ ಪಶುಪಾಲ್ಯೇನ ಸಂಸ್ಥಿತಃ ।
ಹಲಕರ್ಮಣ್ಯಪಾಸಕ್ತೋ ವೈಶ್ಯಜಾತಿರನಿಂದಿತಃ ॥ ೧೬ ॥

ಗೃಹಕರ್ಮಣಿ ತನ್ನಿಷ್ಠಃ ಸೀರಭದ್ರ ಇತಿ ಸ್ಮೃತಃ ।
ತಸ್ಯಾಂತಿಕೇ ಹರಿಃ ಸಾಕ್ಷಾನ್ನಾರದೇನ ಸಹಾಗತಃ ॥ ೧೭ ॥

ತೇನಾಪ್ಯಾಸನಸನ್ಮಾನ್ಯೈಃ ಸಮರ್ಘೇಣ ಕೃತಾದರೌ ।
ಪ್ರೋಕ್ತಂ ಕೇನಾಥ ಕಿಂ ತುಭ್ಯಂ ಸಾಧ್ಯಮನ್ನಂ ನ ಸಾಧ್ಯತೇ ॥ ೧೮ ॥

---

೧೪. ದರ್ಭಾಗ್ರಗಳಿಂದ ಮಾಡಿದ ಪವಿತ್ರವನ್ನು, ಧರಿಸಿ, ಪೃಥಿವಿಗೆ ಬಂದು ಜಂಬೂದ್ವೀಪದಲ್ಲಿ ಸಂಚರಿಸುತ್ತಿದ್ದನು.

೧೫. ವೇತ್ರಾವತೀ ಎಂಬ ನದೀತೀರದಲ್ಲಿ ಪವಿತ್ರವಾದ ವೈದಿಶ ಎಂಬ ನಗರವಿದ್ದಿತು. ಅಲ್ಲಿ ಯಾವಾಗಲೂ, ಉದ್ಯೋಗಪರನಾಗಿಯೂ, ಧನಧಾನ್ಯ ಸಂಪತ್ತುಗಳಿಂದ ಕೂಡಿದವನಾಗಿಯೂ,

೧೬–೧೭. ಗೋ ಮಹಿಷಿ, ಅಜ ಇವುಗಳಿಂದ ಸಂಪೂರ್ಣವಾದ ಪಶು ಪಾಲನ ವೃತ್ತಿಯಿಂದ ಕೂಡಿದವನಾಗಿಯೂ, ಕೃಷಿ, ಕೈಗಾರಿಕೆ ಈ ಕೆಲಸಗಳಲ್ಲಿ ಆಸಕ್ತನಾಗಿಯೂ ಪವಿತ್ರವೈಶ್ಯಕುಲೋತ್ಪನ್ನನೂ ಗೃಹಸ್ಥನೂ ಆದ ಸೀರಭದ್ರ ನೆಂಬವನಿದ್ದನು. ಬ್ರಾಹ್ಮಣವೇಷಧಾರಿಯಾದ ಶ್ರೀ ಹರಿಯು ನಾರದಸಹಿತನಾಗಿ ಅವನಲ್ಲಿಗೆ ಬಂದನು.

೧೮–೧೯. ಆ ಸೀರಭದ್ರನು ಅವರನ್ನು ಆಸನಾದಿ ಸನ್ಮಾನಗಳಿಂದ ಗೌರ ವಿಸಿ " ನಿಮಗೆ ಬೇಕಾದ ಅಡಿಗೆಯನ್ನು ನೀವೇ ತಯಾರಿಸಿ ಕೊಳ್ಳುವಿರೋ ? ಅಥವಾ ನಾವುಮಾಡಿದ ಅನ್ನವು ನಿಮಗೆ ರುಚಿಸುವುದೋ ? " ಎಂದು ಪ್ರಶ್ನಿ ಸಿದನು.

**ನ ವಾಸ್ಮದೀಯಂ ಯುಷ್ಮಾಕಂ ರೋಚತೇನ್ನಂ ತತೋ ಹರಿಃ ।**
**ಪ್ರಹಸ್ಯ ಪ್ರದದೌ ತಸ್ಮೈ ವರಂ ದ್ವಿಜವರೋ ಮಹತ್ ॥ ೧೯ ॥**

**ಉನ್ನಮ್ಯ ವಕ್ತ್ರಂ ಪ್ರೋವಾಚ ದೇವಸಂಸ್ತುತಯಾ ಗಿರಾ ।**
**ಸಂತು ತೇ ಬಹವಃ ಪುತ್ರಾಃ ಕ್ಷೇತ್ರವ್ಯಾಪಾರ ಬುದ್ಧಯಃ ॥ ೨೦ ॥**

**ಪಶುಪಾಶಗೃಹಾಸಕ್ತಾಃ ಶತಾರ್ಧಬಲವಾಹನಾಃ ।**
**ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಕೃಷಿವೃದ್ಧಿಪ್ರವರ್ಧಕಾಃ ॥ ೨೧ ॥**

**ತ್ವಂ ಚ ವೃತ್ತಿಶತೈರ್ನಿತ್ಯಂ ವರ್ಧಸ್ವ ಸ್ವಜನಾವೃತಃ ।**
**ಇತ್ಯುಕ್ತ್ವಾ ಸ ಜಗನ್ನಾಥೋ ವಾಸುದೇವಃ ಸನಾರದಃ ॥ ೨೨ ॥**

**ಕ್ಷೇತ್ರೇ ಗೋಸ್ವಾಮಿನಾಮಾನಂ ದ್ವಿಜಂ ದದೃಶತುಶ್ಚ ತೌ ।**
**ದರಿದ್ರಂ ಹಲಕರ್ಮಾರ್ತಂ ಮೇಢ್ಯಾದ್ಯೋಪಸ್ಕರಾರ್ದಿತಂ ॥ ೨೩ ॥**

**ಭಾಗೀರಥ್ಯಾಸ್ತಟೇ ರಮ್ಯೇ ವೇಣಿಕಾಗ್ರಾಮಸನ್ನಿಧೌ ।**
**ತೃಣಗುಲ್ಮಲತಾಚ್ಛನ್ನಕ್ಷೇತ್ರೇ ಚಿಂತಾಕುಲೋ ಹಿ ಸಃ ॥ ೨೪ ॥**

.......... .. ...

ಆಗ ದ್ವಿಜವೇಷಧಾರಿಯಾದ ಹರಿಯು ನಕ್ಕು, ಅವನಿಗೆ ದೊಡ್ಡವರವನ್ನು ಸಂಭಾವನೆ ಮಾಡಿದನು.

೨೦–೨೪. ಅವನ ಮುಖವನ್ನು ಎತ್ತಿ ದೇವಸ್ತುತ್ಯವಾದ ಮಾತಿನಿಂದ "ವ್ಯವಸಾಯಾಸಕ್ತರಾಗಿರುತ್ತಾ ಪಶುಪಾಲನ ಗೃಹಕೃತ್ಯಗಳಲ್ಲಿ ನಿರತರೂ, ಅಶ್ವಾರೋಹಿಗಳಿಗೆ ಆದ ಅನೇಕ ಪುತ್ರರು ನಿನಗೆ ಜನಿಸಲಿ. ಅಲ್ಲದೆ ಅವರ ಪುತ್ರ ಪೌತ್ರರೂ ಕೃಷಿ ಕರ್ಮವನ್ನು ಇತೋಽಪ್ಯತಿಶಯವಾಗಿ ವೃದ್ಧಿಮಾಡಲಿ. ನೀನೂ ಕೂಡ ಅನೇಕ ಜೀವನೋಪಾಯಗಳಿಂದ ಬಂಧುಸಮೇತನಾಗಿ ವೃದ್ಧಿಹೊಂದು" ಎಂದು ಹೇಳಿ ಶ್ರೀ ಮಹಾವಿಷ್ಣುವು ನಾರದಸಮೇತನಾಗಿ ಅಲ್ಲಿಂದ ಹೊರಟನು. ಮುಂದೆ ಹೊಲದಲ್ಲಿ ವೃಷಭಾದಿಗಳನ್ನು ಕಟ್ಟಲು ನೆಟ್ಟಿದ್ದ ಗೂಟವೇ ಮೊದಲಾದ ಕೃಷಿ ಸಂಭಾರಗಳಿಂದ ಪೀಡಿಸಲ್ಪಡುತ್ತಾ, ಸುಂದರವಾದ ಭಾಗೀರಥಿಯದಡದಲ್ಲಿರುವ ವೇಣಿಕಾ ಎಂಬ ಗ್ರಾಮದ ಹತ್ತಿರ-ತೃಣ ಗುಲ್ಮ ಲತಾದಿಗಳಿಂದ ಆಚ್ಛಾದಿತವಾದ ಕ್ಷೇತ್ರದಲ್ಲಿ ಕೃಷಿಕರ್ಮದಿಂದ ಬಳಲಿ, ದರಿದ್ರನಾಗಿ ಚಿಂತಾಕುಲನಾದ ಗೋಸ್ವಾಮಿ ಎಂಬ ಬ್ರಾಹ್ಮಣನನ್ನು ನೋಡಿದನು.

ತಾಭ್ಯಾಂ ಸಂಪ್ರಾರ್ಥಿತೋ ವಿಪ್ರೋ ಭೋಜ್ಯಂ ಪ್ರಾದಾಚ್ಚ ಕಿಂಚನ ।
ಸಕಾಶಂ ತವ ಸಂಪ್ರಾಪ್ತೌ ದೂರಾದತಿಥಿಧರ್ಮಿಣೌ ॥ ೨೫ ॥

ಇತ್ಯುಕ್ತೋಽಸೌ ದ್ವಿಜಶ್ರೇಷ್ಠೋ ಹಲಕರ್ಮಂ ವಿಧಾಯ ತತ್ ।
ಆಜಗಾಮ ಗೃಹಂ ತೂರ್ಣಂ ತಾಭ್ಯಾಂ ಸಹ ಸಸಂಭ್ರಮಂ ॥ ೨೬ ॥

ಚಕ್ರೇ ಚೈವಾದರಂ ಭಕ್ತ್ಯಾ ಸ್ವಯಮಾಸನ ಸತ್ಕ್ರಿಯಾಂ ।
ಪಾದಶೌಚಂ ತಥಾಭ್ಯಂಗಂ ಕೃತ್ವಾನ್ನಂ ಚ ಸುಸಂಸ್ಕೃತಂ ॥ ೨೭ ॥

ಸಹ ಪತ್ನ್ಯಾ ಸತನಯೋ ಭೋಜ್ಯಂ ಭುಕ್ತಿಂ ಚಕಾರ ಸಃ ।
ಭುಕ್ತಭೋಜ್ಯೌ ಚ ಶರ್ವರ್ಯಾಂ ಸುಖಂ ಸುಪ್ತೌ ನಿಶಾತ್ಯಯೇ ॥ ೨೮ ॥

ಪ್ರಯಾತೌ ವದತುಃ ಶ್ರೇಷ್ಠಂ ವರಂ ತಸ್ಮೈ ದ್ವಿಜಾತಯೇ ।
ಮಾ ತೇ ಭವತು ಗೋಸ್ವಾಮಿನ್ಕದಾಚಿದಪಿ ಕರ್ಷಣಂ ॥ ೨೯ ॥

---

೨೫–೨೬. ಆಗ ಇವರಿಂದ ಪ್ರಾರ್ಥಿತನಾದ ಆ ಬ್ರಾಹ್ಮಣನು ಅವರಿಗೆ ಸ್ವಲ್ಪ ಭೋಜ್ಯವನ್ನು ಕೊಟ್ಟನು. ಅದನ್ನು ಸ್ವೀಕರಿಸಿ ಅವರು " ನಾವು ಅತಿಥಿಗಳಾಗಿ ದೂರದೇಶದಿಂದ ನಿನ್ನ ಹತ್ತಿರಕ್ಕೆ ಬಂದಿರುತ್ತೇವೆ " ಎಂದು ಹೇಳಲಾಗಿ ಆದ್ವಿಜೋತ್ತಮನು ಆದಿನದ ಕೃಷಿಕರ್ಮವನ್ನು ಪೂರೈಸಿ ಶೀಘ್ರವಾಗಿ ಅವರೊಡನೆ ಸಂಭ್ರಮದೊಡನೆ ತನ್ನ ಮನೆಗೆ ಬಂದನು.

೨೭–೩೧. ಆಮೇಲೆ ಸ್ವಯಂ ಭಕ್ತಿ ಸಮೇತನಾಗಿ ಅವರಿಗೆ ಪಾದ್ಯ, ಆಸನ ಅಭ್ಯಂಗನಾದ್ಯುಪಚಾರವನ್ನು ಮಾಡಿ ಆದರದಿಂದ ರುಚಿಕರವಾದ ಭೋಜನವನ್ನು ಮಾಡಿಸಿ ತಾನೂ ಸಹ ಪತ್ನೀಪುತ್ರ ಸಮೇತನಾಗಿ ಭುಂಜಿಸಿದನು. ಮಹಾವಿಷ್ಣುವೂ ನಾರದನೂ ಭೋಜನಾನಂತರ ಆ ರಾತ್ರಿ ಅಲ್ಲಿಯೇ ಇದ್ದು ಸುಖವಾಗಿ ನಿದ್ರಿಸಿ ಪ್ರಾತಃಕಾಲ ಅಲ್ಲಿಂದ ಮುಂದೆ ಹೊರಟರು. ಆಗ ಮಹಾವಿಷ್ಣುವು " ಎಲೈ ಗೋಸ್ವಾಮಿಯೇ ! ಇತಃಪರ ನಿನಗೆ ವ್ಯವಸಾಯವು ಫಲಿಸದೇ ಹೋಗಲಿ ; ಓ ಬ್ರಾಹ್ಮಣನೇ ! ನಿನಗೆ ಇನ್ನು ಮೇಲೆ ಧಾನ್ಯವೂ ಇಂಥ ಮಕ್ಕಳೂ ನನ್ನ ಅನುಗ್ರಹದಿಂದಾಗದಿರಲಿ " ಎಂದು ಹೇಳಿ ನಾರದನಿಂದೊಡಗೂಡಿ ಶೀಘ್ರವಾಗಿ

ಮಾ ಧಾನ್ಯಂ ಮುಖಸಂತಾನಂ ಮತ್ಪ್ರಸಾದಾದ್ದ್ವಿಜೋತ್ತಮ ।
ಇತ್ಯುಕ್ತ್ವಾ ಜಗ್ಮತುಸ್ತೂರ್ಣಂ ಪುನಃ ಪಪ್ರಚ್ಛ ನಾರದಃ　　॥ ೩೦ ॥

ಕಿಮಿದಂ ವದ ದೇವೇಶ ಶಾಪರೂಪೋ ವರಸ್ತ್ವಯಾ ।
ಭದ್ರ ಗೋಸ್ವಾಮಿನೇ ದತ್ತಃ ಕಿಂ ಚ ವೈಶ್ಯೇ ತಥಾವಿಧಃ　　॥ ೩೧ ॥

ಇತ್ಯುಕ್ತಃ ಪ್ರಾಹ ದೇವೇಶಃ ಶೃಣು ನಾರದಮದ್ವಚಃ ।
ಪರಮಾರ್ಥಂ ಪ್ರವಕ್ಷ್ಯೇಽಹಂ ತವ ಸಂಶಯಕರ್ತನಂ　　॥ ೩೨ ॥

ಸಂವತ್ಸರೇಣ ಯತ್ಪಾಪಂ ಮತ್ಸ್ಯಘಾತೀ ಸಮಾಚರೇತ್ ।
ತದಹ್ನೈಕೇನ ಕುರುತೇ ಲಾಂಗಲೀ ನಾತ್ರ ಸಂಶಯಃ　　॥ ೩೩ ॥

ಅತೋಽರ್ಥಂ ಕೃಷಿಪಾಲ್ಯೇನ ನರಕಂ ಯಾತಿ ಲಾಂಗಲೀ ।
ತದಭಾವಾನ್ನ ಕಲ್ಪಃ ಸ್ಯಾತ್ತೇನ ಮೋಕ್ಷೋ ಮಯಿ ಧ್ರುವಂ　　॥ ೩೪ ॥

---

ಹೊರಟು ಹೋದನು. ಆಗ ನಾರದನು ಮಹಾವಿಷ್ಣುವನ್ನು ಕುರಿತು “ ದೇವೇಶ ! ಗೋಸ್ವಾಮಿಗೆ ಇಂತಹ ಶಾಪರೂಪವಾದ ವರವನ್ನು ಕೊಟ್ಟಿರುವೆ. ಸೀರಭದ್ರ ನೆಂಬ ವೈಶ್ಯನಿಗೆ ಒಳ್ಳೆಯ ವರವನ್ನು ಕೊಟ್ಟಿದ್ದೀಯೆ ಇದು ಹೇಗೆ ಸಮಂಜಸ ವಾದೀತು ? ” ಎಂದು ಪ್ರಶ್ನೆ ಮಾಡಿದನು.

೩೨. ಅದಕ್ಕೆ ಮಹಾವಿಷ್ಣುವು “ ಎಲೈ ನಾರದನೇ ! ನಿನ್ನ ಸಂಶಯ ನಿವಾರಣೆಗಾಗಿ ನನ್ನ ಮಾತನ್ನು ಕೇಳು. ನಿನಗೆ ಇವರ ಪರಮಾರ್ಥವನ್ನು ಹೇಳುತ್ತೇನೆ.

೩೩. ಮತ್ಸ್ಯಘಾತಿಯು ಒಂದು ಸಂವತ್ಸರದಲ್ಲಿ ಎಷ್ಟು ಪಾಪವನ್ನು ಗಳಿಸುವನೋ ಅಷ್ಟನ್ನೇ ಕೃಷಿಕನು ಒಂದುದಿನದಲ್ಲಿ ಸಂಪಾದಿಸುತ್ತಾನೆ.

೩೪. ಆದುದರಿಂದ ವ್ಯವಸಾಯಗಾರನು ಕೃಷಿಯಿಂದ ಪಾಪಗಳಿಸಿ ನರಕ ಭಾಗಿಯಾಗುವನು. ಆ ಕೃಷ್ಯಭಾವದಿಂದ ಪಾಪಿಯಾಗದೇ ಇರತಕ್ಕವನು ನಿಶ್ಚಯ ವಾಗಿಯೂ ನನಲ್ಲಿ ಸೇರಿ ಮೋಕ್ಷಹೊಂದುವನು.

ಮಯಿ ಭುಕ್ತೇ ಪ್ರಸನ್ನೇ ವಾ ಕೋ ವಿಶೇಷೋಽಸ್ಯ ನಾರದ ।
ಯದಿ ಸ್ವರ್ಗೋಽಥವಾ ಮೋಕ್ಷೋ ನ ಸಂಪದ್ಯೇತ ತದ್ವೃಥಾ ॥ ೩೫ ॥

ಇದಾನೀಂ ಹಲಕಾಲುಷ್ಯೈಃ ಸೀರಭದ್ರೋ ವಿಚೇಷ್ಟಿತೈಃ ।
ಬಹುಪಾಪಪ್ರಸಂಗೇನ ಘೋರಂ ನರಕಮೇಷ್ಯತಿ ॥ ೩೬ ॥

ಸಪುತ್ರಪೌತ್ರಸಂತಾನೋ ಹೃತೋಽರ್ಥಸ್ತದ್ಗೃಹೇ ಮಯಾ ।
ನ ಭುಕ್ತಂ ನ ಚ ವಿಶ್ರಾಂತಂ ವಿಶ್ರಾಂತಂ ದ್ವಿಜವೇಶ್ಮನಿ ॥ ೩೭ ॥

ಸೋಽಪಿ ದ್ವಿಜೋ ಮುನಿಶ್ರೇಷ್ಠ ಸಂಸಾರಾದುತ್ತರಿಷ್ಯತಿ ।
ಇತ್ಯೇವಂ ಸಂವದಂತೌ ಚ ಜಗ್ಮತುರ್ಮಾರ್ಗಮುತ್ತಮಂ ॥ ೩೮ ॥

ಕಾನ್ಯಕುಬ್ಜಸ್ಯ ಸಾಮೀಪ್ಯೇ ಸರಃ ಶ್ರೇಷ್ಠಮುಪಶ್ಯತಾಂ ।
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ॥ ೩೯ ॥

---

೩೫. ಸ್ವರ್ಗವಾಗಲಿ ಮೋಕ್ಷವಾಗಲಿ ಲಭಿಸದಿದ್ದ ಮೇಲೆ ನಾನು ಭುಂಜಿಸಿದ್ದರಿಂದ ಅಥವಾ ಪ್ರಸನ್ನನಾದುದರಿಂದ ಆ ಮನುಷ್ಯನಿಗೆ ಏನು ಪ್ರಯೋಜನ.

೩೬–೩೮. ಈಗ ಸೀರಭದ್ರನು ಕೃಷಿ ಕರ್ಮದಿಂದ ಪಾಪವನ್ನುಗಳಿಸಿ ಕೊನೆಗೆ ಘೋರನರಕದಲ್ಲಿ ಬಿದ್ದು ಪುತ್ರಪೌತ್ರ ಸಮೇತನಾಗಿ ದುಃಖವನ್ನನುಭವಿಸುವನು. ಅವನ ಗೃಹಸಂಪತ್ತನ್ನೆಲ್ಲಾ ನಾನು ಹರಣಮಾಡಿರುವೆನು. ಅವನ ಮನೆಯಲ್ಲಿ ನಾನು ಭೋಜನ ಮತ್ತು ವಿಶ್ರಾಂತಿಯನ್ನನುಭವಿಸಿಲ್ಲ. ಗೋಸ್ವಾಮಿ ಎಂಬ ಬ್ರಾಹ್ಮಣನಲ್ಲಿ ಭುಂಜಿಸಿದೆನು. ಮತ್ತು ವಿಶ್ರಾಂತಿಯನ್ನನುಭವಿಸಿದೆನು. ಆದುದರಿಂದ ಓ ಮಹರ್ಷಿ ನಾರದನೇ ! ಆ ಬ್ರಾಹ್ಮಣನು ಸಂಸಾರದಿಂದ ಮುಕ್ತನಾಗುವನು '' ಎಂದು ಹೇಳಿ ನಾರದನೊಡಗೂಡಿ ಉತ್ತಮವಾದ ಮಾರ್ಗವನ್ನು ಹಿಡಿದು ಹೊರಟನು.

೩೯. ಅವರು ಕ್ರಮೇಣ ಹೋಗುತ್ತಿದ್ದಾಗ ಕನ್ಯಾಕುಬ್ಜ ದೇಶದ ಸಮೀಪದಲ್ಲಿ ಹಂಸಕಾರಂಡವ ಪಕ್ಷಿಗಳಿಂದ ಕಿಕ್ಕಿರಿದುದಾಗಿಯೂ ಚಕ್ರವಾಕ ಪಕ್ಷಿಗಳಿಂದ ಶೋಭಿತವಾಗಿಯೂ ಪದ್ಮಿನಿ, ಕಲ್ಹಾರ, ರಕ್ತೋತ್ಪಲ, ಶುಕ್ಲೋತ್ಪಲ ಮತ್ತು ಪದ್ಮಪತ್ರ ಇವುಗಳಿಂದ ಆಚ್ಛಾದಿತವಾಗಿಯೂ ಮತ್ಸ್ಯಕೂರ್ಮಾದಿ ಜಲಜಂತುಗಳಿಂದ ಕೂಡಿದ್ದಾಗಿ ಇದ್ದುದು.

ಪದ್ಮಿನೀಜಲಕಲ್ಹಾರ ರಕ್ತೋತ್ಪಲಸಿತೋತ್ಪಲೈಃ ।
ಛಾದಿತಂ ಪದ್ಮಿನೀಪತ್ರೈರ್ಮತ್ಸ್ಯೈಃ ಕೂರ್ಮೈರ್ಜಲೋದ್ಭವೈಃ ॥ ೪೦ ।

ತಟೈ ರಮ್ಯೈರ್ಘನೈರ್ವೃಕ್ಷೈಃ ಕೇತಕೀಖಂಡಮಂಡಿತಂ ।
ಕೇತಕೀ ಕುಸುಮಾಮೋದೈರ್ಲಕುಚೈಸ್ತಟಮಂಡಿತೈಃ ॥ ೪೧ ॥

ದಾತ್ಯೂಹಶಿಖಿಭಾರುಂಡಚಕೋರಾದ್ಯೈಶ್ಚ ಸಂಕುಲಂ ।
ಕುರರೈಶ್ಚಾತಕೈ ರಮ್ಯಂ ಕೇಕಾಕುಲನಿನಾದಿತಂ ॥ ೪೨ ॥

ಜಲಕುಕ್ಕುಟಸಂಗೀತಂ ಹಂಸಸಾರಸಶೋಭಿತಂ ।
ಜೀವಂಜೀವಕಹಾರೀತಚಕೋರೈರುಪಶೋಭಿತಂ ॥ ೪೩ ॥

ವಶಿಷ್ಠಸ್ಯ ಮುನೇರ್ನಾಮ್ನಾ ವಿಖ್ಯಾತಂ ಶ್ರೀಮಹೋದಯಂ ।
ಅಸ್ಮಿನ್ನದ್ಯ ಪ್ರವೇಷ್ಟವ್ಯಂ ಮಹಾಜನವಿವೇಕಿನಾಂ ॥ ೪೪ ॥

ಸ್ನಾತವ್ಯಂ ಪುರತಸ್ತೇಷಾಂ ತಸ್ಮಾತ್ ಸ್ನಾನಂ ಸಮಾಚರೇತ್ ।
ಇತ್ಯುಕ್ತ್ವಾ ಕೇಶವಃ ಪಾಪಂ ಸಸ್ನೌ ಪ್ರಾಗೇವ ತಜ್ಜಲೈಃ ॥ ೪೫ ॥

---

೪೦–೪೨. ಮತ್ತು ಕೇತಕ್ಯಾದಿ ಪುಷ್ಪಗಳ ಸುಗಂಧದಿಂದ ಕೂಡಿದುದಾಗಿಯೂ, ನಿಬಿಡವಾದ ವೃಕ್ಷಗಳಿಂದ ರಮ್ಯವಾದ ದಡವುಳ್ಳದ್ದಾಗಿಯೂ ಭೆರತಿ, ನವಿಲು, ಚಕೋರ, ಚಾತಕವೇ ಮೊದಲಾದ ಪಕ್ಷಿ ಸಮೂಹಗಳಿಂದ ಕೂಡಿದ್ದಾಗಿಯೂ, ನವಿಲಿನ ಕೂಗಿನಿಂದ ಮನೋಹರವಾಗಿಯೂ, ನೀರುಕೋಳಿಯ ಕೂಗಿನಿಂದ ಸಮೇತವಾಗಿಯೂ ಹಂಸ ಸಾರಸ ಚಕೋರ ಪಕ್ಷಿಗಳಿಂದ ರಮ್ಯವಾಗಿಯೂ ಇರುವ ಸರೋವರವನ್ನು ಕಂಡರು.

೪೩–೪೫. ಆ ವನದಲ್ಲಿ ವಸಿಷ್ಠಋಷಿಯ ಹೆಸರಿನಿಂದ ಪ್ರಸಿದ್ಧವಾದ ಆ ಸರೋವರವನ್ನು ನೋಡಿ ಮಹಾವಿಷ್ಣುವು “ ಎಲೈ ನಾರದನೇ ! ನಾವು ಋಷಿಸಂದರ್ಶನ ಮಾಡಬೇಕಾಗಿರುವುದರಿಂದ ಮೊದಲು ಈ ಸರೋವರದಲ್ಲಿ ಸ್ನಾನಮಾಡಬೇಕು. ” ಎಂದು ಹೇಳಿ ಮೊದಲು ತಾನು ಅಲ್ಲಿಳಿದು ಸರೋವರದಲ್ಲಿ ಸ್ನಾನಮಾಡಿದನು.

ಯತ್ತೀರ್ಥಲೋಕಂ ವಿಖ್ಯಾತಂ ಸ್ನಾತ್ವಾ ತೀರಂ ಸಮಾಶ್ರಿತಃ ।
ಪ್ರಹರೇ ವಾಸುದೇವಸ್ಯ ನಾರದೋಽಪಿ ಮುದಾ ಯುತಃ ॥ ೪೬ ॥

ಆಚಮ್ಯ ಸಸ್ನೌ ತೀರ್ಥೇನ ಕ್ಷಣಾತ್ತೀರ್ಥಮವಾಪ್ಯ ಚ ।
ಯಾವದುತ್ತಿಷ್ಠತೇ ತೋಯಾತ್ ಸ್ನಾತ್ವಾ ಮುಷ್ಟಿರುದಾರಧೀಃ ॥ ೪೭ ॥

ತಾವತ್ ಸ್ತ್ರೀತ್ವಂ ಸಮಾಪನ್ನೋ ನಾರದಃ ಕೇನ ವರ್ಣ್ಯತೇ ।
ಯಸ್ಯಾಸ್ತು ವಿಸ್ತೃತೇ ನೇತ್ರೇ ವಕ್ತ್ರಂ ಚಂದ್ರೋಪಮಂ ಶುಭಂ ॥ ೪೮ ॥

ಸ್ಮರಪಾಶೋಪಮೌ ಕರ್ಣೌ ಕಪೋಲೌ ಕನಕೋಜ್ವಲೌ ।
ನಾಸಿಕಾ ತಿಲಸೂನೇನ ಕಾಮಚಾಪೋಪಮೇ ಭ್ರುವೌ ॥ ೪೯ ॥

ದಶನಾ ಹೀರಕೈಸ್ತುಲ್ಯಾ ವಿದ್ರುಮಾಭಃ ಶುಭಾಧರಃ ।
ಮಯೂರಸ್ಯ ಕಲಾಪೇನ ತುಲ್ಯಂ ಕಚನಿಬಂಧನಂ ॥ ೫೦ ॥

---

೪೬–೪೭. ಲೋಕದಲ್ಲಿ ಪ್ರಖ್ಯಾತವಾದ ಆ ತೀರ್ಥದಲ್ಲಿ ಮಹಾವಿಷ್ಣುವು ಸ್ನಾನಮಾಡಿ ತೀರಕ್ಕೆ ಬಂದಮೇಲೆ ನಾರದನೂ ಸಂತೋಷದಿಂದ ಆ ತೀರ್ಥಕ್ಕೆ ಹೋಗಿ ಆಚಮನಮಾಡಿ ತೀರ್ಥಜಲದಲ್ಲಿಳಿದು ಸ್ನಾನಮಾಡಿ ಎದ್ದು ಮೇಲಕ್ಕೆ ಬಂದನು.

೪೮. ಆ ಕೂಡಲೆ ಆ ನಾರದನು ಸ್ತ್ರೀರೂಪವನ್ನು ಹೊಂದಿದನು. ಆ ಸ್ತ್ರೀ ಸ್ವರೂಪವನ್ನು ಯಾರಿಂದ ತಾನೆ ವರ್ಣಿಸಲು ಸಾಧ್ಯ. ಆ ಸ್ತ್ರೀಯ ನೇತ್ರಗಳು ಅತಿ ವಿಶಾಲಗಳಾಗಿದ್ದುವು. ಮುಖವು ಚಂದ್ರ ಸಮವಾಗಿದ್ದಿತು.

೪೯. ಮತ್ತು ಆ ಸ್ತ್ರೀರೂಪದ ಕರ್ಣಗಳು ಸ್ಮರಪಾಶಸಮಗಳಾಗಿಯೂ ಮತ್ತು ಕಪೋಲಗಳು ಸುವರ್ಣದಂತೆ ಥಳಥಳಿಸುತ್ತಲೂ ಇದ್ದುವು.

೫೦. ನಾಸಿಕವು ತಿಲಪುಷ್ಪಕಾರವಾಗಿಯೂ, ಹುಬ್ಬುಗಳು ಕಾಮಚಾಪದಂತೆಯೂ, ಹಲ್ಲುಗಳು ಹೀರಕಸಮನಾಗಿಯೂ, ಅಧರವು ಹವಳದಂತೆಯೂ, ಕೇಶಪಾಶವು ನವಿಲಿನ ಗರಿಯಂತೆಯೂ ಇದ್ದುವು.

ಶಂಖರೇಖಾತ್ರಯೇಣೈವ ಕಂಠದೇಶೋ ವಿರಾಜತೇ ।
ಮಾಧವೀಲತಯಾ ತುಲ್ಯೌ ಮಂಜೂ ತಸ್ಯಾ ಭುಜೌ ಶುಭೌ ॥ ೫೧ ॥

ಯುತೌ ರಕ್ತೋತ್ಪಲಾಭಾಸೌ ಪಾಣೀ ರಕ್ತನಖಾಂಗುಲೀ ।
ಪೀನಾವತುಂಗತನುಧ್ಬೃತ್ಕಠಿನೌ ಕಲಶೋಪಮೌ ॥ ೫೨ ॥

ಸ್ತನಾವವಿರಲೌ ಸ್ನಿಗ್ಧೌ ಚಕ್ರವಾಕಯುಗೋಪಮೌ ।
ಸ್ವಲ್ಪಕಂ ಮಧ್ಯದೇಶಂ ತು ಮುಷ್ಟಿಗ್ರಾಹ್ಯಮ ಸಂಶಯಂ ॥ ೫೩ ॥

ನಾಭಿಮಂಡಲಗಾಂಭೀರ್ಯಂ ಲಾವಣ್ಯಂ ಕೇನ ವರ್ಣ್ಯತೇ ।
ವಲಿತ್ರಯೇಣ ವಿಕೃತಾ ರೋಮರಾಜಿರ್ವಿರಾಜಿತಾ ॥ ೫೪ ॥

ನಯನೇ ಚ ಪುನಸ್ತಸ್ಯಾ ಮೃಗ್ಯಾ ಇವ ಸುಶೋಭನೇ ।
ನಿತಂಬೋ ಬಿಂಬಫಲಕೋ ಮನ್ಮಥಾಯತನಂ ಶುಭಂ ॥ ೫೫ ॥

---

೫೧–೫೨. ರೇಖಾತ್ರಯದಿಂದ ಕೂಡಿದ ಕಂಠದೇಶವು ಶಂಖದಂತೆಯೂ, ಮನೋಹರವಾದ ಎರಡು ತೋಳುಗಳು ಮಲ್ಲಿಗೆಯ ಲತೆಯಂತೆಯೂ, ರಕ್ತನಖ ಮತ್ತು ಅಂಗುಳಿಗಳಿಂದ ಕೂಡಿದ ಹಸ್ತಗಳು ಕೆಂಪು ನೈದಿಲೆಗಳಂತೆಯೂ, ದಪ್ಪವಾಗಿಯೂ, ಎತ್ತರವಾಗಿಯೂ, ಕಠಿನವಾಗಿಯೂ, ನಿಬಿಡವಾಗಿಯೂ, ಸ್ನಿಗ್ಧವಾಗಿಯೂ ಕಲಶೋಪಮವೂ ಆದ ಎರಡು ಸ್ತನಗಳೂ ಚಕ್ರವಾಕಗಳಂತೆಯೂ ಇದ್ದುವು.

೫೩–೫೪. ಆಕೆಯ ನಡುವು ಅತಿಸೂಕ್ಷ್ಮವೂ ಕೇವಲ ಮುಷ್ಟಿಗ್ರಾಹ್ಯವೂ ಆಗಿದ್ದಿತು. ಅತಿಲಾವಣ್ಯದಿಂದ ಕೂಡಿದ ಗಂಭೀರವಾದ ನಾಭಿಮಂಡಲದಿಂದ ಸಹಿತಳಾಗಿಯೂ, ತ್ರಿವಳಿಯುಳ್ಳವಳಾಗಿಯೂ, ಸುಂದರವಾದ ರೋಮರಾಜಿಯುತಳಾಗಿಯೂ, ಇದ್ದಳು.

೫೫–೫೬. ಮತ್ತು ಆಕೆಯು ಜಿಂಕೆಯಂತೆ ಸುಂದರವಾದ ನಯನಸಮೇತಳಾಗಿಯೂ, ಬಿಂಬಫಲದಂತೆ ಸುಂದರವಾಗಿರುವ ಮತ್ತು ನಿತಂಬಸಮೇತಳಾಗಿಯೂ, ಶುಭವಾದ ಮನ್ಮಥಾಯತನದಿಂದ ಕೂಡಿದವಳಾಗಿಯೂ, ಬಾಳೆಯ

ರಂಭಾಯುಗ್ಮೋಪಮಾ ವೂರೂ ಸ್ಮರಬಾಣನಿಬಂಧನೌ ।
ವಿಪರೀತರತಾಯಾಸಖೇದಭಾರ ಸಹೌದೃಢೌ ॥ ೫೬ ॥

ನವಕುಂದಲತಾಸಾರಸರಲಂ ಸನಿಬಂಧನಂ ।
ಜಂಘಾಯುಗಂ ಮಹಾರಾಜ ಗೂಢಗುಲ್ಫಯುಗಂ ತಥಾ ॥ ೫೭ ॥

ರಕ್ತಾಂಗುಲೀಲತಾತಲ್ಪನಖಚಂದ್ರಕಯಾಚಿತಂ ।
ಚರಣಾರವಿಂದಯುಗಲಂ ಸರಕ್ತಂ ಸುಪ್ರತಿಷ್ಠಿತಂ ॥ ೫೮ ॥

ಸೈವಂವಿಧಾ ತದಾ ನಾರೀ ಸರ್ವಲಕ್ಷಣ ಪೂಜಿತಾ ।
ಬಭೂವ ಕ್ಷಣಮಾತ್ರೇಣ ಜಗದ್ವ್ಯಾಮೋಹಕಾರಿಣೀ ॥ ೫೯ ॥

ಕ್ಷೀರೋದಮಥನೋತ್ತೀರ್ಣಾಂ ಲಕ್ಷ್ಮೀಮನ್ಯಾಮಿವೋಚ್ಛ್ರಿತಾಂ ।
ದೃಷ್ಟ್ವಾ ವ್ಯದರ್ಶನಂ ಪ್ರಾಪ್ತೋ ಮಾಯಯಾ ಮಧುಸೂದನಃ ॥ ೬೦ ॥

---

ಕಂಬದಿಂತಿರುವುವೂ ಸ್ಮರಬಾಣ ಸದೃಶವೂ ವಿಪರೀತ ರತಾಯಾಸದುಃಖಸಹನ ಶಕ್ತಿಯುಳ್ಳವೂ ದೃಢವೂ ಆದ ಎರಡು ಊರುಗಳನ್ನು ಉಳ್ಳವಳಾಗಿಯೂ ಇದ್ದಳು.

೫೭. ಎಲೈ ಮಹಾರಾಜನೇ ! ಮತ್ತು ಆ ಸ್ತ್ರೀಯು ನವಕುಂದಲತೆಯಂತೆ ರಸವತ್ತಾದ ಜಂಘಾಯುಗ್ಮಗಳಿಂದ ಕೂಡಿದವಳಾಗಿಯೂ, ತುಂಬಿದ ಗುಲ್ಫವುಳ್ಳವಳಾಗಿಯೂ ರಕ್ತವಾದ ಅಂಗುಲಿ ನಖಚಂದ್ರಿಕೆಗಳಿಂದ ಕೂಡಿದವಳಾಗಿಯೂ, ಸಂಪೂರ್ಣವಾಗಿ ಭೂಸ್ಪರ್ಶವಾಗುವ ರಕ್ತವಾದ ಚರಣಾರವಿಂದಗಳನ್ನು ಹೊಂದಿದವಳಾಗಿಯೂ ಇದ್ದಳು.

೫೯–೬೦. ಹೀಗೆ ಸರ್ವಲಕ್ಷಣಭರಿತೆಯಾದಾ ಸ್ತ್ರೀಯು ಕ್ಷಣಮಾತ್ರದಲ್ಲಿ ಲೋಕವ್ಯಾಮೋಹಕಳಾದಳು. ಕ್ಷೀರಸಮುದ್ರಮಥನಕಾಲದಲ್ಲುದ್ಭವಿಸಿದ ಅಪರ ಲಕ್ಷ್ಮಿಯಂತಿರುವ ಆ ಸುಂದರಿಯನ್ನು ನೋಡಿದಮಾತ್ರದಿಂದ ಮಹಾವಿಷ್ಣುವು ಮಾಯೆಯಿಂದ ಅಂತರ್ಹಿತನಾದನು.

ಸಂಪ್ರಾಪ್ಯತೇ ಚ ಸಾ ಕಾಲಸಂಗರಾಹಾರಿಣೀ ಯಥಾ ।
ಆಸ್ತೆ ಏಕಾಕಿನೀ ಮುಗ್ಧಾ ಕುರ್ಯಾದ್ದಿಗವಲೋಕನಂ ॥ ೬೧ ॥

ಅಥಾಜಗಾಮ ತಂ ದೇಶಂ ನಾಮ್ನಾ ತಾಲಧ್ವಜೋ ನೃಪಃ ।
ಸಹ ಸೈನ್ಯೈಃ ಪರಿವೃತಃ ಪುರಂದರ ಇವಾಮರೈಃ ॥ ೬೨ ॥

ಗಜಾರೂಢೈರ್ಹಯಾರೂಢೈ ರಥಾರೂಢೈರ್ನರೋತ್ತಮೈಃ ।
ವಿಮಾನಯಾನಯುಗ್ಮಸ್ಥೈ ಸ್ತಥಾಂತಃಪುರಿಕಾಜನೈಃ ॥ ೬೩ ॥

ಧ್ವಜಾತಪತ್ರಕಲಿಲೈರನೀಕೈಃ ಪರಿವಾರಿತಃ ।
ತೇನ ಸಾ ಸಹಸಾ ದೃಷ್ಟಾ ನಾರೀ ಕಮಲಲೋಚನಾ ॥ ೬೪ ॥

ಬಭೂವ ಕ್ಷಣಮಾತ್ರೇಣ ಕಂದರ್ಪಶರಪೀಡಿತಃ ।
ಕೇಯಂ ಕಸ್ಯ ಕುತಃ ಪ್ರಾಪ್ತಾ ಕಿಂ ದೇವೀ ವಾಥಮಾನುಷೀ ॥ ೬೫ ॥

ಅದೃಷ್ಟರೂಪಾಪ್ಸರಸಾ ಕಾಚಿದ್ದೇವೀ ಸಮಾಗತಾ ।
ಅಹೋರೂಪಂ ಸುರೂಪಾಯಾ ಗೋಚರೇ ಪರಿತಃ ಪುಮಾನ್ ॥ ೬೬ ॥

---

೬೧. ಆ ಸಮಯದಲ್ಲಿ ಅವಳು ಏಕಾಕಿನಿಯೂ ಮುಗ್ಧೆಯೂ ಆಗಿ ದಿಕ್ಕುಗೆಟ್ಟು ನೋಡುತ್ತಿದ್ದಳು.

೬೨–೬೩. ಆಮೇಲೆ ದೇವಸೈನ್ಯದಿಂದ ಕೂಡಿದ ಇಂದ್ರನಂತೆ ತನ್ನ ಸೈನ್ಯದ ಗಜಾರೂಢರಿಂದಲೂ, ಹಯಾರೂಢರಿಂದಲೂ, ರಥಾರೂಢರಿಂದಲೂ, ಕೂಡಿದವನಾಗಿ ವಿಮಾನಸ್ಥರಾದ ಅಂತಃಪುರ ಸ್ತ್ರೀಯರಿಂದಲೂ ಧ್ವಜ ಮತ್ತು ಛತ್ರಧಾರಿಗಳಿಂದಲೂ ಪರಿವೃತನಾದ ತಾಲಧ್ವಜನೆಂಬ ರಾಜನು ಆ ಪ್ರದೇಶಕ್ಕೆ ಬಿಜಯಮಾಡಿದನು.

೬೪. ಅವನು ಆ ಜಲಜಾಕ್ಷಿಯನ್ನು ಸಹಸಾ ನೋಡಿ ಕ್ಷಣಮಾತ್ರದಲ್ಲಿ ಕಾಮಶರಪೀಡಿತನಾದನು.

೬೫–೬೬. ಅಲ್ಲದೆ ಇವಳಾರು? ಯಾರಮಗಳು? ಎಲ್ಲಿಂದ ಬಂದಳು? ಇವಳು ದೇವತೆಯೋ ಅಥವಾ ಮಾನವಿಯೋ? ಅಪೂರ್ವಳಾದ ಅಪ್ಸರಸ್ತ್ರೀಯೋ ಇಲ್ಲಿಗೆ ಬಂದಿರಬೇಕು.

ಮುಮೂರ್ಷುರ್ಜಾರಯತೇ ಮೋಹಾದನುದಿಗ್ಧಹತೋ ಯಥಾ ।
ಇತಿ ಸಂಚಿಂತ್ಯ ಹೃದಯೇ ರಾಜಾ ತಾಲಧ್ವಜೋಽಂತಿಕೇ ॥ ೬೭ ॥

ಉವಾಚ ನಾರೀಂ ಮುಗ್ಧಾಂ ತಾಂ ಶೃಣು ಮದ್ವಚನಂ ಶುಭೇ ।
ಕಾ ತ್ವಂ ಕಸ್ಯ ಕುತಃ ಪ್ರಾಪ್ತಾ ದೇಶಮೇತಂ ಶುಚಿಸ್ಮಿತೇ ॥ ೬೮ ॥

ಇತ್ಯುಕ್ತೇ ಸಾಶ್ರು ಚಾರ್ವಂಗೀ ಪ್ರಾಹ ಮಾಂ ವಿದ್ಧ್ಯಯೋನಿಜಾಂ ।
ಪಿತ್ರಾ ಮಾತ್ರಾ ವಿಹೀನಾಂ ಚ ತಥಾದ್ಯಾಪಿ ಕುಮಾರಿಕಾಂ ॥ ೬೯ ॥

ನಿರಾಶ್ರಯಾಂ ವಿದಿತ್ವೈನಾಂ ತತೋ ಜಾತಃ ಸ್ಮರಾರ್ದಿತಃ ।
ಆರೋಪ್ಯ ಹಯಪೃಷ್ಠೇ ತಾಂ ತತೋ ರಾಜಾ ಗತೋ ಗೃಹಂ ॥ ೭೦ ॥

ನೀತ್ವಾ ವಿವಾಹಯಾಮಾಸ ಶಾಸ್ತ್ರೋಕ್ತವಿಧಿನಾ ತತಃ ।
ರೇಮೇ ಪ್ರಾಸಾದಶೃಂಗಾಗ್ರೇ ಪರ್ಯಂಕೇ ಸಿತಯಾ ತಯಾ ॥ ೭೧ ॥

---

೬೭. ಎಂದು ಆ ತಾಲಧ್ವಜನು ಮನಸ್ಸಿನಲ್ಲಿಯೇ ಯೋಚಿಸಿ ತನ್ನ ಸಮೀಪದಲ್ಲಿರುವ ಆ ಮುಗ್ಧಳಾದ ನಾರಿಯನ್ನು ಕುರಿತು ಹೇಳಿದನು.

೬೮. "ಎಲೌ ಮಂಗಳಕರಳೇ ! ನೀನು ಯಾರು ? ಯಾರ ಮಗಳು ? ಎಲ್ಲಿಂದ ಬಂದಿರುವೆ ? '' ಎಂದು ಪ್ರಶ್ನೆ ಮಾಡಿದನು.

೬೯. ಈ ಮಾತನ್ನು ಕೇಳಿ ಆ ಸುಂದರಿಯು ಅಶ್ರುಭರಿತೆಯಾಗಿ " ನಾನು ಮಾತಾಪಿತೃವಿಹೀನಳಾದ ಆಯೋನಿಜೆ. ಅವಿವಾಹಿತೆಯಾದ ಕನ್ನಿಕೆ '' ಎಂದು ಉತ್ತರ ಹೇಳಿದಳು.

೭೦. ಆದದುರಿಂದ ರಾಜನು ಅವಳನ್ನು ಅನಾಥಳನ್ನಾಗಿ ತಿಳಿದು ಕಾಮ ಪೀಡಿತನಾಗಿ ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ತನ್ನ ಅರಮನೆಗೆ ಒಯ್ದನು.

೭೧–೭೪. ತರುವಾಯ ಅಲ್ಲಿ ಅವಳನ್ನು ವಿಧ್ಯುಕ್ತರೀತಿಯಲ್ಲಿ ವಿವಾಹ ಮಾಡಿಕೊಂಡು ಶುಭ್ರವರ್ಣಳಾದ ಅವಳೊಡಗೂಡಿ ಪ್ರಾಸಾದ ಶೃಂಗಾಗ್ರದಲ್ಲಿ ಪರ್ಯಂಕದಲ್ಲಿಯೂ ಸುಂದರವಾದ ಉದ್ಯಾನಗಳಲ್ಲೂ ನದಿಯ ಪುಳಿನಸ್ಥಳಗಳಲ್ಲೂ

**ಉದ್ಯಾನಭವ್ಯಭೂಮೀಷು [illegible] ಚ।**
**ಪರ್ವತಾನಾಂ ನಿತಂಬೇಷು ನಿರ್ಝರೇಷು ಗುಹಾಸು ಚ** ॥ ೭೨ ॥

**ಪದ್ಮಖಂಡೇಷು ಫುಲ್ಲೇಷು ಶೋಭಿತೇಷು ಸರಸ್ಸು ಚ ।**
**ಪ್ರಯಾಗಾದಿಷು ತೀರ್ಥೇಷು ನದೀನಾಮಾಶ್ರಮೇಷು ಚ** ॥ ೭೩ ॥

**ದಿವ್ಯಾವಸಥರಮ್ಯೇಷು ವೇಲಾಕೂಲೇಷು ಪಾರ್ಥಿವಃ ।**
**ಯಾವದ್ದ್ವಾದಶವರ್ಷಾಣಿ ವಿಕಾಹಮಪಿ ಭಾರತ** ॥ ೭೪ ॥

**ತತಸ್ತ್ರಯೋದಶೇ ವರ್ಷೇ ತಸ್ಯಾ ಗರ್ಭೋಽಭವನ್ಮಹಾನ್ ।**
**ಏತಸ್ಮಿನ್ಗರ್ಭಸಂಪೂರ್ಣೇ ಜಾತಂ ದೀರ್ಘಮಲಾಬುಕಂ** ॥ ೭೫ ॥

**ತದ್ಭೇದಾಹತಕುಂಭೇಷು ಬೀಜಪ್ರರೋಹಣಾನ್ನರಾಃ ।**
**ಬಭೂವುರ್ಧಾತುಶೂನ್ಯಾ ವೈ ದಿವ್ಯದೇಹಬಲೋತ್ಕಟಾ** ॥ ೭೬ ॥

**ಪಂಚಾಶತ್ಸಂಖ್ಯಯಾ ಜಾತಾ ಉಪಸರ್ಗಾದಿವರ್ಜಿತಾಃ ।**
**ಆರೂಢಯೌವನಾಃ ಸರ್ವೇ ಸುತಾಃ ಸಂಗ್ರಾಮಕೋವಿದಾಃ** ॥ ೭೭ ॥

---

ಪರ್ವತ ನಿತಂಬಗಳಲ್ಲೂ, ಗಿರಿನಿರ್ಜರಗಳಲ್ಲೂ, ಗುಹೆಗಳಲ್ಲೂ, ವಿಕಸಿತಕಮಲಗಳುಳ್ಳ ಮನೋಹರವಾದ ಸರೋವರಗಳಲ್ಲೂ, ಪ್ರಯಾಗಾದಿ ತೀರ್ಥಗಳಲ್ಲೂ, ನದೀಸಮೀಪಸ್ಥಿತ ಆಶ್ರಮಗಳಲ್ಲೂ, ದಿವ್ಯಭವನಗಳಲ್ಲೂ, ಸಮುದ್ರತೀರ, ನದೀಡದ ಮುಂತಾದ ಪ್ರದೇಶಗಳಲ್ಲಿಯೂ ನಿರಂತರವಾಗಿ ಹನ್ನೆರಡು ವರ್ಷಕಾಲ ರಮಿಸಿದನು.

೭೫. ಆ ಮೇಲೆ ಹದಿಮೂರನೇ ವರ್ಷದಲ್ಲಿ ಅವಳಿಗೆ ಮಹತ್ತಾದ ಗರ್ಭೋದಯವಾಯಿತು. ನವಮಾಸ ತುಂಬಿದ ಮೇಲೆ ಆ ಗರ್ಭದಿಂದ ದೀರ್ಘವಾದ ಸೋರೆಯ ಕಾಯಿಯಂತಿರುವ ಒಂದು ಅಂಡವು ಉದ್ಭವಿಸಿತು.

೭೬–೭೭. ಅದನ್ನು ಭೇದಿಸಲು ಒಳಗಿದ್ದ ಬೀಜಪ್ರರೋಹದಿಂದ ದಿವ್ಯಬಲದಿಂದ ಕೂಡಿದವರಾಗಿಯೂ ಇಂದ್ರಿಯ ಶೂನ್ಯರಾಗಿಯೂ ಇರುವ ಐವತ್ತು ಪುರುಷರು ಜನಿಸಿದರು. ಅವರೆಲ್ಲರೂ ಯುವಕರಾದ ಮೇಲೆ ಯುದ್ಧವಿಶಾರದರಾದರು.

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಬಭೂವುಃ ಸುರಸತ್ತಮಾಃ ।
ಯುಯುಧುಃ ಶರಸಂಘಾತೈಶ್ಚಕ್ರಶೂಲಾಸಿಪಟ್ಟಿಶೈಃ ॥ ೭೮ ॥

ಹಯೈರನ್ಯೈರ್ಗಜೈರನ್ಯೈಃ ಕ್ರೋಧಾಂಧಾಃ ಕೌರವಾ ಇವ ।
ಪಾಂಡವೈಃ ಸಹ ಸಂಗ್ರಾಮೇ ಯುಯುಧುಃ ಕ್ಷಯಮಂಜಸಾ ॥ ೭೯ ॥

ಸಪದಾತಿಗಜಾರೋಹಾಃ ಸಾಂತಃ ಪುರಯುಗೇಚ್ಛಯಾ ।
ವಿನೇಶುರಬ್ಧಿಮಾಸಾದ್ಯ ಸಿಂಧೂನಾಂ ಪ್ರವಹಾ ಇವ ॥ ೮೦ ॥

ಸಾಸಿಸಬಲವಿಸ್ತಾರಾಃ ಸದರ್ಪಾಃ ಸಮಹೇಚ್ಛಯಾ ।
ಇಂದ್ರಲೋಕೋಪಮಂ ಸರ್ವಂ ಕುಲಂ ನಷ್ಟಂ ಕ್ಷಣಂ ತದಾ ॥ ೮೧ ॥

ಸಂದೃಶ್ಯ ನಾರದೀಯೈಷಾ ವಿನಷ್ಟಂ ಸ್ವಕುಲಾರಣೇ ।
ರುರೋದ ಸ್ನೇಹಸಂಯುಕ್ತೈಃ ರಸೈಃ ಕಲುಷಯಾ ಗಿರಾ ॥ ೮೨ ॥

ಹಾ ದೈವ ಹಾ ವಿಧೇ ಪಾಪ ಹಾ ಕೃತಾಂತ ನಮಸ್ಕೃತ ।
ದರ್ಶಯಿತ್ವಾ ವಿಧಾನಂ ಮೇ ಪುನರ್ನೇತ್ರೇ ಹೃತೇ ತ್ವಯಾ ॥ ೮೩ ॥

---

೭೮–೮೧. ಅವರ ಪುತ್ರಪೌತ್ರರೂ ಸಹ ಶರಸಂಘಾತಗಳು ಮತ್ತು ಚಕ್ರ, ಶೂಲ, ಖಡ್ಗ ಪಟ್ಟಿಶಾದ್ಯಾಯುಧಗಳ ಸಮೇತ ಹಯ ಗಜಾಧ್ಯಾರೂಢರಾಗಿ ಕೌರವರು ಪಾಂಡವರೆಂಬಂತೆ ದೇವತೆಗಳೊಡನೆ ಯುದ್ಧಮಾಡತೊಡಗಿ ನದೀ ಪ್ರವಾಹವು ಸಮುದ್ರಪ್ರವೇಶಮಾಡಿ ಲಯಹೊಂದುವಂತೆ ಚತುರಂಗ ಬಲ ಸಮೇತರಾಗಿ ನಾಶವಾದರು. ಸ್ವರ್ಗೋಪಮವಾದ ಆ ಕುಲವು ಕ್ಷಣಮಾತ್ರದಲ್ಲೇ ನಾಶವಾಯಿತು.

೮೨ ೮೩. ಆ ನಾರದೀಯ ಸ್ತ್ರೀವ್ಯಕ್ತಿಯು ಯುದ್ಧದಲ್ಲಿ ತನ್ನ ವಂಶವು ನಿರ್ಮೂಲವಾದುದನ್ನು ಕಂಡು " ಹಾ ದೈವವೇ ! ಹಾ ವಿಧೀ ! ಹಾ ಕೃತಾಂತ ನಮಸ್ಕೃತ ! ನೀನು ನನಗೆ ಪ್ರಥಮತಃ ನಿಧಿಯನ್ನು ತೋರಿಸಿ ಆಮೇಲೆ ನೇತ್ರಗಳನ್ನು ಅಪಹರಿಸಿದೆಯಾ'' ಎಂದು ಪ್ರಲಾಪಿಸುತ್ತಾ ದುಃಖಿತಳಾಗಿ ಉರಸ್ತಾಡನ

ಇತ್ಯುಕ್ತ್ವಾ ಸ್ವಮುರೋ ಹಸ್ತೈರ್ಜಘಾನ ಭೃಶದುಃಖಿತಾ ।
ಭೂಮೌ ಮೂರ್ಛಾತುರಾ ಭೂತ್ವಾ ಪುನಃ ಪ್ರಾಪ್ತಾ ವಿಚೇತನಂ ॥ ೮೪ ॥

ಸೋಽಪಿ ರಾಜಾ ವಿಷಣ್ಣೋಽಸೌ ನಿರ್ವಿಣ್ಣಃ ಶೋಕಸಾಗರೇ ।
ಭೂಮೌ ನಿಪತಿತೋ ದುಃಖಾದ್ರುರೋದ ಭೃಶದುಃಖಿತಃ ॥ ೮೫ ॥

ವಿಷಣ್ಣೋ ಮಂತ್ರಿಭಿಃ ಸಾರ್ಧಂ ವೃದ್ಧಶೋಕೇನ ಸಂಯುತಃ ।
ಏತಸ್ಮಿನ್ನಂತರೇ ವಿಷ್ಣುರಾಜಗಾಮ ದ್ವಿಜೈಃ ಸಹ ॥ ೮೬ ॥

ದ್ವಿಜವೇಷಪರಿಚ್ಛನ್ನ ಉಪವಿಷ್ಟಃ ಸುಖಾಸನೇ ।
ತತಃ ಪುರಸ್ಸರೋ ಭೂತ್ವಾ ಚಕ್ರೇ ಧರ್ಮಾರ್ಥದರ್ಶನಂ ॥ ೮೭ ॥

ಕಿಂ ರೋದನೇನ ಬಹುನಾ ಯುವಯೋಃ ಕ್ಲೇಶಕಾರಿಣಾ ।
ಶ್ರೂಯತಾಂ ವಿಷ್ಣುಮಾಯೈಷಾ ಸ್ವಪ್ನದೃಷ್ಟಧನೋಪಮಾ ॥ ೮೮ ॥

---

ವನ್ನು ಮಾಡುತ್ತಾ ಭೂಮಿಯಲ್ಲಿ ಬಿದ್ದು ಮೂರ್ಛೆಹೊಂದಿ ಅಳುತ್ತಾ ಪುನಃ ಪ್ರಜ್ಞೆಯನ್ನು ಹೊಂದಿ ದುಃಖಿಸುತ್ತಿದ್ದಳು.

೮೫. ಮಂತ್ರಿಗಳಿಂದೊಡಗೂಡಿದ ಆ ತಾಲಧ್ವಜನೆಂಬ ರಾಜನೂ ದುಃಖಿತನಾಗಿ ಶೋಕಸಾಗರದಲ್ಲಿ ಮುಳುಗಿದವನಾಗಿ ಭೂಮಿಯಲ್ಲಿ ಬಿದ್ದು ರೋದನಮಾಡತೊಡಗಿದನು.

೮೬. ಇಷ್ಟರೊಳಗೆ ದ್ವಿಜವೇಷಧಾರಿಯಾದ ಶ್ರೀ ಮಹಾವಿಷ್ಣುವು ಬ್ರಾಹ್ಮಣ ಪರಿವೃತನಾಗಿ ಅಲ್ಲಿಗೆ ಬಂದನು.

೮೭–೮೮. ಅಲ್ಲಿದ್ದ ಆಸನವನ್ನಲಂಕರಿಸಿ ಓ ದಂಪತಿಗಳೇ ! ಕ್ಲೇಶಕಾರಿಯಾದ ಈ ರೋದನದಿಂದ ಏನು ಪ್ರಯೋಜನ? ಪುತ್ರಾದಿಗಳೆಂವರೆ ಸ್ವಪ್ನ ದೃಷ್ಟ ನಿಧಿ ಸಮಾನವಾನ ಪರಮಾತ್ಮನ ಮಾಯೆಯಲ್ಲವೇ !

ಶೋಭನೇ ಯಾದೃಶಃ ಶೋಕಃ ಕೃತಃ ಸಂಸಾರಸಾಗರೇ ।
ಸರ್ವೇಷಾಮೇವ ಭೂತಾನಾಂ ಪರಿಣಾಮೋಯಮೀದೃಶಃ ॥ ೮೯ ॥

ಪುರಂದರಸಹಸ್ರಾಣಿ ಚಕ್ರವರ್ತಿಶತಾನಿ ಚ ।
ನಿರ್ವಾಪಿತಾನಿ ಕಾಲೇನ ಪ್ರದೀಪ ಇವ ವಾಯುನಾ ॥ ೯೦ ॥

ಯೇಪಿ ಶೋಷಯಿತುಂ ಶಕ್ತಾಃ ಸಮುದ್ರಂ ಗ್ರಾಹಸಂಕುಲಂ ।
ಕುರ್ಯುಶ್ಚ ಕರಯುಗ್ಮೇನ ಚೂರ್ಣಂ ಮೇರುಂ ಮಹೀತಲೇ ॥ ೯೧ ॥

ಉದ್ಧರ್ತುಂ ಧರಣೀಸಂಜ್ಞಾಂ ಗ್ರಹೀತುಂ ಚಂದ್ರಭಾಸ್ಕರೌ ।
ಪ್ರವಿಷ್ಟಾಸ್ತೇ ತು ಕಾಲೇನ ಕೃತಾಂತವದನಂ ತದಾ ॥ ೯೨ ॥

ದುರ್ಗಸ್ತ್ರಿಕೂಟಃ ಪರಿಖಾಃ ಸಮುದ್ರಾಃ ।
ರಕ್ಷಾಂಸಿ ಯೋಧಾ ಧನದಾಚ್ಚ ವಿತ್ತಂ ॥
ಮಂತ್ರಶ್ಚ ಯಸ್ಯೌಶನಸಾ ಪ್ರಣೀತಃ ।
ಸ ರಾವಣೋ ದೈವವಶಾದ್ವಿಷಣ್ಣಃ ॥ ೯೩ ॥

---

೮೯. ಎಲೈ ಸುಮಂಗಲಿಯೇ ! ನೀನು ಸಂಸಾರಸಾಗರದಲ್ಲಿ ಮಗ್ನಳಾಗಿ ಎಂತಹ ದುಃಖವನ್ನು ಅನುಭವಿಸುವೆಯೋ ಈ ದುಃಖವು ಎಲ್ಲಾ ಪ್ರಾಣಿಗಳಿಗೂ ಸಮಾನವಾದ್ದು.

೯೦. ಗಾಳಿಯಿಂದ ದೀಪ ಆರುವಂತೆಯೇ ಸಾವಿರಾರು ಇಂದ್ರರೂ, ನೂರಾರು ಚಕ್ರವರ್ತಿಗಳೂ ಕಾಲದಿಂದ ನಾಶವಾಗಿದ್ದಾರೆ.

೯೧-೯೨. ಮಕರಾದಿ ಹಿಂಸ್ರ ಜಲಜಂತುಗಳಿಂದ ಕೂಡಿದ ಸಮುದ್ರವನ್ನು ಯಾರು ಶೋಷಣೆಮಾಡಲು ಶಕ್ತರೋ, ಯಾರು ಕರಯುಗ್ಮಗಳಿಂದಲೇ ಮೇರುವನ್ನು ಚೂರ್ಣಮಾಡಿ ಭೂಮಿಯಲ್ಲಿ ಎಸೆಯಲು ಸಮರ್ಥರೋ, ಭೂಮಿಯನ್ನು ಎತ್ತುವುದಕ್ಕೂ, ಚಂದ್ರಸೂರ್ಯರನ್ನು ಹಿಡಿದುಕೊಳ್ಳುವುದಕ್ಕೂ, ಯಾರು ಶಕ್ತರೋ ಅಂತಹವರೂ ಕಾಲವಶರಾಗಿರುವರು.

೯೩. ಯಾವನಿಗೆ ತ್ರಿಕೂಟಾಚಲವೇ ದುರ್ಗವೂ ಸಮುದ್ರಗಳೇ ಕಂದರಗಳೂ ರಾಕ್ಷಸರೇ ಭಟರೂ ಕುಬೇರನಿಧಿಯೇ ಧನವೂ, ಶುಕ್ರಾಚಾರ್ಯದಿಂದ ಮಂತ್ರೋಪದೇಶವೂ ಆಗಿತ್ತು, ಅಂತಹ ರಾವಣನೇ ವಿಧಿವಶನಾದನು.

ಸಂಗ್ರಾಮೇ ಗಜತುರಗಸಮಾಕುಲೇಽಪಿ ವಾದಾ ।
ದಗ್ನೌ ವಾ ಗತವಿವರೇ ಮಹೋದಧೌ ವಾ ॥
ಸರ್ವೈರ್ವಾ ಸಹ ವಸತಾಮುದೀರ್ಣಕೋಪೈ ।
ರ್ನಾಭಾವ್ಯೋ ಭವತಿ ಕದಾಚಿದೇವ ನಾಶಃ ॥ ೯೪ ॥

ಪಾತಾಲಮಾವಿಶತು ಯಾತು ಸುರೇಂದ್ರಲೋಕೇ ।
ಮಾರೋಹತು ಕ್ಷಿತಿಧರಾಧಿಪತಿಂ ಸುಮೇರುಂ ॥
ಮಂತ್ರೌಷಧಿಪ್ರಹರಣೈಶ್ಚ ಕರೋತು ರಕ್ಷಾಂ ।
ಯದ್ಭಾವಿ ತದ್ಭವತಿ ನಾಥ ವಿಭಾವಿತೋಽಸ್ಮಿ ॥ ೯೫ ॥

ರೋದಿತಿ ಕಶ್ಚಿದಥಾಶ್ರುಧೌತಾನನ ಗುರುತರ ಶೋಕವಿಹ್ವಲಃ ।
ಪ್ರವಿಕಟಚರಣವಾನಪಿ ನೃತ್ಯತಿ ಕಶ್ಚಿದ್ಧರ್ಮಾದಿವಿಗ್ರಹಃ ॥ ೯೬ ॥

---

೯೪. ಯುದ್ಧದಲ್ಲಿ ಗಜ ತುರಗಾವೃತನಾಗಿದ್ದರೂ, ವೀರವಾದಗ್ರಸ್ತನಾಗಿದ್ದರೂ, ಅಗ್ನಿಮಧ್ಯದಲ್ಲಿ ಬಿದ್ದಿದ್ದರೂ, ಮಹಾಸಮುದ್ರದಲ್ಲಿ ಮುಳುಗಿದ್ದರೂ, ಕೋಪಿಷ್ಠರಾದ ಅನೇಕರಿಂದ ಸುತ್ತುವರಿಯಲ್ಪಟ್ಟಿದ್ದರೂ, ಭಾವ್ಯವು ಎಂದಿಗೂ ಆಗದು.

೯೫. ಅಂತಹವನಿಗೂ ವಿನಾಶವು ಎಂದಾದರೂ ಸಂಭವವು. ಪಾತಾಲವನ್ನು ಪ್ರವೇಶಿಸಲಿ, ಸುರೇಂದ್ರಲೋಕಕ್ಕೆ ಹೋಗಲಿ. ಪರ್ವತಾಧಿಪತಿಯಾದ ಮೇರುವನ್ನಾರೋಹಣಮಾಡಲಿ, ಮಂತ್ರ, ಔಷಧಿ, ಆಯುಧ ಮೊದಲಾದ ರಕ್ಷಣೆಗಳಿಂದ ಕೂಡಿರಲಿ. ಅಂತಹವನಿಗೂ ಯಾವುದಾಗಬೇಕೆಂದು ಹಣೆಯಬರಹವಿದೆಯೋ ಅದು ಅವಶ್ಯವಾಗಿ ಆಗದೇ ಇರುವುದಿಲ್ಲ.

೯೬. ಇಂತಹ ಸಂದರ್ಭದಲ್ಲಿ ಒಬ್ಬನು ಅಶ್ರುಧಾರಾಸಹಿತನಾಗಿ ಶೋಕವಿಹ್ವಲನಾಗಿ ಅಳುವನು. ಮತ್ತೊಬ್ಬನು ಧರ್ಮಾದಿಶರಣನಾಗಿ ಎದೆಗೆಡದೆ ಕುಂಠಿತಚರಣನಾಗಿದ್ದರೂ ನರ್ತನಮಾಡುವನು.

ಗಾಯತಿ ಹೃದಯಹಾರಿ ಸುಖನಿರ್ಭರಮಾಯತ ವಿಸ್ತೃತಾsಧರೋsಧಿಕಂ
ಸಾರ ಏಷ ರಂಗೋದರಗತನಜಪಟಹಾಕಾಮ ಏವಾಯಂ ॥ ೯೭ ॥

ಇತ್ಯೇವಂ ಧರ್ಮಮುದ್ದಿಶ್ಯ ವಿಷ್ಣುಃ ಸಂಸಾರಚೇಷ್ಟಿತಂ ।
ತೂಷ್ಣೀಂ ಬಭೂವಾನುಪದಂ ತತಸ್ತೇ ದ್ವಿಜಪುಂಗವಾಃ ॥ ೯೮ ॥

ಉತ್ತಿಷ್ಠ ಸ್ನಾಹಿ ಪುತ್ರಾಣಾಂ ಪ್ರಕುರುಷ್ವೌರ್ಧ್ವದೇಹಿಕಂ ।
ಮಾ ಶೋಕಂ ವಿಷ್ಣುಮಾಯೈಷಾ ವಿಷ್ಣುನಾ ನಿರ್ಮಿತಾ ಸ್ವಯಂ ॥ ೯೯ ॥

ಇತ್ಯುಕ್ತಾ ಚಾರುಸರ್ವಾಂಗೀ ಸ ಬಭೂವಾಚಲಃ ಪುಮಾನ್ ।
ಸ ಏಷ ಸದೃಶಾಕಾರೋ ನಾರದಸ್ತತ್‌ಕ್ಷಣೋsಭವತ್ ॥ ೧೦೦ ॥

ಸೋsಪಿ ರಾಜಾ ದದರ್ಶಾಥ ತಂ ಸಮಂತ್ರಿಪುರೋಹಿತಃ ।
ಸಾಂತಃಪುರಮಿದಂ ಸರ್ವಮಿಂದ್ರಜಾಲೋಪಮಂ ಕ್ಷಣಾತ್ ॥ ೧೦೧ ॥

---

೯೭. ಮತ್ತೊಬ್ಬನು ಸುಖನಿರ್ಭರನಾಗಿ ಹೃದಯಂಗಮವಾಗಿ ಹಾಡುವನು. ಇದು ಹೃದಯರಂಗಗತನಾದ ಜೀವನಟನ ಕಾಮಪಟಹದ ಸಾರ;

೯೮–೯೯. ಎಂದು ಧರ್ಮವನ್ನುದ್ದೇಶಿಸಿ ಸಂಸಾರ ಸ್ವಭಾವವನ್ನು ಬೋಧಿಸಿ ಸುಮ್ಮನಾದನು. ಆಮೇಲೆ ಆ ಬ್ರಾಹ್ಮಣೋತ್ತಮರು "ಓ ನಾರೀಮಣಿಯೇ! ಏಳು; ಸ್ನಾನಮಾಡಿ ಪುತ್ರರಿಗೆ ಔರ್ಧ್ವದೇಹಿಕಕರ್ಮವನ್ನು ಮಾಡು. ಶೋಕವನ್ನು ತ್ಯಜಿಸು; ಇದು ವಿಷ್ಣುವಿನಿಂದ ನಿರ್ಮಿತವಾದ ಮಾಯೆಯು" ಎಂದುಪದೇಶಿಸಿದನು.

೧೦೦. ಇವನ್ನು ಕೇಳಿ ಸರ್ವಾಂಗಸುಂದರಳಾದಾ ಸ್ತ್ರೀಯು ತತ್‌ಕ್ಷಣದಲ್ಲಿ ಪೂರ್ವದಂತೆ ಪುರುಷಾಕಾರದ ನಾರದವ್ಯಕ್ತಿಯಾಗಿ ಪರಿಣಮಿಸಿತು.

೧೦೧–೧೦೩. ಆ ರಾಜನೂಕೂಡ ಮಂತ್ರಿ ಪುರೋಹಿತರಿಂದಲೂ ಅಂತಃಪುರ ಸ್ತ್ರೀಯರಿಂದಲೂ ಒಡಗೂಡಿ ಕ್ಷಣಮಾತ್ರದಲ್ಲೇ ಇಂದ್ರಜಾಲದಂತೆ ನಡೆದು ಹೋದ ಈ ಸಮಸ್ತಕಾರ್ಯವನ್ನೂ ಮತ್ತು ಜಟಾಭಾರದಿಂದ ಭಯಜನಕ

ನಾರದಂ ಮುನಿಶಾರ್ದೂಲಂ ಜಟಾಭಾರಭಯಾನಕಂ ।
ಗೌರವರ್ಣಂ ಜ್ವಲಂತಂ ಚ ಬ್ರಾಹ್ಮ್ಯಾ ಲಕ್ಷ್ಮ್ಯಾ ವಿರಾಜಿತಂ ॥ ೧೦೨ ॥

ಶಿಖಾ ಕಮಂಡಲುಧರಂ ವೀಣಾದಂಡಕರಂ ತಥಾ ।
ಬ್ರಹ್ಮಸೂತ್ರೇಣ ಶುಭ್ರೇಣ ಕೌಪೀನಾಚ್ಛಾದನೇನ ಚ ।
ಪಾದುಕಾಭ್ಯಾಂ ಸ್ಥಿತಂ ತೀರೇ ಸರಸೋ ಬ್ರಾಹ್ಮಣಾಸನೇ ॥ ೧೦೩ ॥

ಸಂಪ್ರಗೃಹ್ಯ ಕರಾಗ್ರೇಣ ಜಗಾಮಾದರ್ಶನಂ ಹರಿಃ ।
ಅಂಬರೇಣ ಸುರೈಃ ಸಾರ್ಧಂ ತಸ್ಮಾದ್ದೇಶಾದ್ಯುಧಿಷ್ಠಿರ ॥ ೧೦೪ ॥

ಶ್ವೇತದ್ವೀಪಮಥಾಸಾದ್ಯ ಪ್ರಾಹ ದೇವೋ ಮುನಿಂ ನೃಪ ।
ದೇವರ್ಷೇ ಯತ್ತ್ವಯಾ ಪೃಷ್ಟಂ ಪೂರ್ವಂ ಮಾಯಾಕಥಾಂ ಪ್ರತಿ॥೧೦೫॥

ಮಾಯಾ ಯಯೇದೃಶೀ ಮಾಯಾ ಯತ್ಸ್ವರೂಪಾ ಯದಾತ್ಮಿಕಾ ।
ಸಾ ತೇ ಮಾಯಾ ಮಯಾ ಬ್ರಹ್ಮನ್ವೈಷ್ಣವೀ ಸಂಪ್ರದರ್ಶಿತಾ ॥ ೧೦೬ ॥

---

ನಾಗಿಯೂ, ಶುಭ್ರವರ್ಣನಾಗಿಯೂ, ಬ್ರಹ್ಮವರ್ಚಸ್ಸಿನಿಂದ ಜ್ವಲಿಸುತ್ತಿರುವವನಾಗಿಯೂ, ಶಿಖಾ ಕಮಂಡುಲವೀಣಾಧಾರಿಯಾಗಿಯೂ, ಶುಭ್ರವಾದ ಉಪವೀತ ಕೌಪೀನಗಳನ್ನು ಧರಿಸಿದವನಾಗಿಯೂ, ಪಾದುಕಾಸಮೇತನಾಗಿಯೂ ತಟಾಕದ ತೀರದಲ್ಲಿ ನಿಂತಿದ್ದ ಮುನಿವರ್ಯನಾದ ನಾರದನನ್ನು ನೋಡಿದನು.

೧೦೪. ಎಲೈ ಯುಧಿಷ್ಠಿರನೇ! ಆಗ ಶ್ರೀ ಮಹಾವಿಷ್ಣುವು ನಾರದನ ಕೈಯನ್ನು ಹಿಡಿದುಕೊಂಡು ದೇವತೆಗಳ ಸಮೇತನಾಗಿ ಆಕಾಶಮಾರ್ಗದಲ್ಲಿ ಹೊರಟು ಅದೃಶ್ಯನಾದನು.

೧೦೫. ಆಮೇಲೆ ವಿಷ್ಣುವು ಶ್ವೇತದ್ವೀಪವನ್ನು "ಸೇರಿ ಎಲೈ ದೇವರ್ಷಿಯಾದ ನಾರದನೇ! ನೀನು ಮೊದಲು ಮಾಯೆಯೆಂದರೆ ಯಾವುದು? ಅದು ಎಂತಹುದು? ಅದರ ಸ್ವರೂಪವೇನು? ಎಂದು ಮಾಯಾವಿಷಯದಲ್ಲಿ ಪ್ರಶ್ನಿಸಿದ್ದೆಯಷ್ಟೆ.

೧೦೬-೧೦೭. ಆ ಮಾಯೆಯು ಪರಮಾತ್ಮನ ಸ್ವರೂಪವಾದುದು. ಮತ್ತು ಸಂಬಂಧಿಯಾದುದು. ಅದು ಇಂತಹುದು ಎಂದು ನಿನಗೆ ಈಗ ವಿಶದವಾಗಿ

ಏವಮುಕ್ತ್ವಾ ಮುನಿವರಂ ದೇವದೇವೋ ಜನಾರ್ದನಃ ।
ಬಭೂವಾಂತರ್ಹಿತಸ್ಸದ್ಯೋ ದೇವರ್ಷೇಸ್ತಸ್ಯ ಪಶ್ಯತಃ ॥ ೧೦೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀಕೃಷ್ಣ
ಯುಧಿಷ್ಠಿರ ಸಂವಾದೇ ಮಾಯಾದರ್ಶನಂ ನಾಮ
ತೃತೀಯೋಽಧ್ಯಾಯಃ



---

ತೋರಿಸಿದ್ದೇನೆ''ಎಂದು ಹೇಳಿ ಆ ನಾರದನು ನೋಡುತ್ತಿರುವಾಗಲೇ ದೇವದೇವನಾದ ಜನಾರ್ದನನು ಅಂತರ್ಧಾನಹೊಂದಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಉತ್ತರಪರ್ವದ ಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುರ್ಥೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ದೇವತ್ವಂ ಮಾನುಷತ್ವಂ ಚ ತಿರ್ಯಕ್ತ್ವಂ ಕೇನ ಕರ್ಮಣಾ ।
ಪ್ರಾಪ್ನೋತಿ ಪುರುಷಃ ಕೇನ ಗರ್ಭವಾಸಂ ಸುದಾರುಣಂ ॥ ೧ ॥

ಗರ್ಭಸ್ಥಶ್ಚ ಕಿಮಶ್ನಾತಿ ಕಥಮುತ್ಪದ್ಯತೇ ಪುನಃ ।
ದತ್ಪ್ರೋತ್ಥಾನಾದಿಕಾನ್ದೋಷಾನ್ಕಥಂ ತರತಿ ದುಸ್ತರಾನ್ ॥ ೨ ॥

ಬಾಲಭಾವೇ ಕಥಂ ಪುಷ್ಟಿಃ ಸ್ಯಾದ್ಯುವಾ ಕೇನ ಕರ್ಮಣಾ ।
ಕುಲೀನಃ ಕೇನ ಭವತಿ ಸುರೂಪಃ ಸುಧನಃ ಕಥಂ ॥ ೩ ॥

---

## ನಾಲ್ಕನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆ ಮಾಡುತ್ತಾನೆ—"ಎಲೈ ಕೃಷ್ಣನೇ ! ಪುರುಷನು ಯಾವ ಕರ್ಮದಿಂದ ದೇವತ್ವವನ್ನೂ, ಮನುಷ್ಯತ್ವವನ್ನೂ, ತಿರ್ಯಗ್ಭಾವವನ್ನೂ ಹೊಂದುವನು? ಯಾವ ಕರ್ಮದಿಂದ ದಾರುಣವಾದ ಗರ್ಭವಾಸ ದುಃಖವನ್ನು ಹೊಂದುವನು ?

೨. ಗರ್ಭದಲ್ಲಿರುವಾಗ ಅವನಿಗೆ ಆಹಾರವು ಯಾವುದು ? ಅವನು ಪುನಃ ಉತ್ಪತ್ತಿಯಾಗುವುದು ಹೇಗೆ ? ದುಸ್ತರವಾದ ದತ್ಪ್ರೋತ್ಥಾನಾದಿ ದೋಷಗಳಿಂದ ಹೇಗೆ ನಿರ್ಮುಕ್ತನಾಗುವನು ?

೩. ಬಾಲ್ಯದಲ್ಲಿ ಹೇಗೆ ಪೋಷಿತನಾಗುವನು ? ಯಾವ ಕರ್ಮದಿಂದ ಯುವಕನಾಗುವನು ? ಕುಲೀನನೂ ಸುರೂಪನೂ ಧನಿಕನೂ ಹೇಗೆ ಆಗುವನು ?

ಕಥಂ ದಾರಾನವಾಪ್ನೋತಿ ಗೃಹಂ ಸರ್ವಗುಣೈರ್ಯುತಂ ।
ಪಂಡಿತಃ ಪುತ್ರವಾಂಸ್ತ್ಯಾಗೀ ಸ್ಯಾದಾಮಯವಿವರ್ಜಿತಃ ॥ ೪ ॥

ಕಥಂ ಸುಖೇನ ಮ್ರಿಯತೇ ಕಥಂ ಭುಂಕ್ತೇ ಶುಭಾಶುಭಂ ।
ಸರ್ವಮೇವಾಮಲಮತೇ ಗಹನಂ ಪ್ರತಿಭಾತಿಮೇ ॥ ೫ ॥

॥ ಶ್ರೀಕೃಷ್ಣ ಉವಾಚ ॥

ಶುಭೈರ್ದೇವತ್ವಮಾಪ್ನೋತಿ ಮಿಶ್ರೈರ್ಮಾನುಷತಾಂ ವ್ರಜೇತ್ ।
ಅಶುಭೈಃ ಕರ್ಮಭಿರ್ಜಂತುಸ್ತಿರ್ಯಗ್ಯೋನಿಷು ಜಾಯತೇ ॥ ೬ ॥

ಪ್ರಮಾಣಂ ಶ್ರುತಿರೇವಾತ್ರ ಧರ್ಮಾಧರ್ಮವಿನಿಶ್ಚಯೇ ।
ಪಾಪಂ ಪಾಪೇನ ಭವತಿ ಪುಣ್ಯಂ ಪುಣ್ಯೇನ ಕರ್ಮಣಾ ॥ ೭ ॥

---

೪. ಪತ್ನೀಪ್ರಾಪ್ತಿಯ ಕ್ರಮ ಹೇಗೆ ? ಸರ್ವಗುಣಗಳಿಂದ ಶ್ರೇಷ್ಠವಾದ ಗೃಹಸ್ಥಾಶ್ರಮವನ್ನು ಹೇಗೆ ಹೊಂದುವನು? ಅವನು ಪಂಡಿತನೂ, ಪುತ್ರವಂತನೂ, ತ್ಯಾಗಶೀಲನೂ ನೀರೋಗಿಯೂ ಹೇಗೆ ಆಗುವನು ?

೫. ಯಾವ ಕರ್ಮದಿಂದ ಅನಾಯಾಸವಾದ ಮರಣವು ಪ್ರಾಪ್ತಿಯಾಗುವುದು? ಶುಭಾಶುಭಗಳನ್ನು ಹೇಗೆ ಅನುಭವಿಸುವುದು ? ಎಲೈ ಸರ್ವಜ್ಞನಾದ ಶ್ರೀಕೃಷ್ಣನೇ ! ಇವೆಲ್ಲವೂ ನನಗೆ ಗಹನವಾಗಿ ಕಾಣಿಸುವುದು '' ಎಂದನು.

೬. ಅವಕ್ಕೆ ಶ್ರೀ ಕೃಷ್ಣನು ಹೇಳುತ್ತಾನೆ—"ಎಲೈ ಯುಧಿಷ್ಠಿರನೇ ! ಪ್ರಾಣಿಯು ಶುಭಕರ್ಮದಿಂದ ದೇವತ್ವವನ್ನು ಹೊಂದುವುದು. ಸಮಪ್ರಧಾನಗಳಾದ ಶುಭಾಶುಭಗಳಿಂದ ಮನುಷ್ಯತ್ವವನ್ನು ಹೊಂದುವುದು. ಅಶುಭ ಕರ್ಮಗಳಿಂದ ತಿರ್ಯಗ್ಯೋನಿಯನ್ನು ಹೊಂದುವುದು.

೭. ಈ ಧರ್ಮಾಧರ್ಮ ನಿರ್ಣಯದಲ್ಲಿ ಶ್ರುತಿಯೇ ಪ್ರಾಧಾನ್ಯವು ಮತ್ತು ಪ್ರಮಾಣವು. ಪಾಪಕರ್ಮದಿಂದ ಪಾಪಜನ್ಮವೂ ಪುಣ್ಯಕರ್ಮದಿಂದ ಪುಣ್ಯಜನ್ಮವೂ ಲಭಿಸುವುದು.

**ಋತುಕಾಲೇ ತದಾ ಭುಕ್ತಂ ನಿರ್ದೋಷಂ ಯೇನ ಸಂಸ್ಥಿತಂ ।**
**ತದಾ ತದ್ವಾಯುನಾ ಸ್ಪೃಷ್ಟಂ ಸ್ತ್ರೀರಕ್ತೇನೈಕತಾಂ ವ್ರಜೇತ್ ॥ ೮ ॥**

**ವಿಸರ್ಗಕಾಲೇ ಶುಕ್ರಸ್ಯ ಜೀವಃ ಕರಣಸಂಯುತಃ ।**
**ಭೃತ್ಯಃ ಪ್ರವಿಶತೇ ಯೋನಿಂ ಕರ್ಮಭಿಃ ಸ್ವೈರ್ನಿಯೋಜಿತಃ ॥ ೯ ॥**

**ತಚ್ಛುಕ್ರರಕ್ತಮೇಕಸ್ಥಮೇಕಾಹಾತ್ಕಲಲಂ ಭವೇತ್ ।**
**ಪಂಚರಾತ್ರೇಣ ಕಲಲಂ ಬುದ್ಬುದಾಕಾರತಾಂ ವ್ರಜೇತ್ ॥ ೧೦ ॥**

**ಬುದ್ಬುದಂ ಸಪ್ತರಾತ್ರೇಣ ಮಾಂಸಪೇಶೀ ಭವೇತ್ತತಃ ।**
**ದ್ವಿಸಪ್ತಾಹಾದ್ಭವೇತ್ಪೇಶೀ ರಕ್ತಮಾಂಸೈರ್ದೃಢಾಂಚಿತಃ ॥ ೧೧ ॥**

**ಬೀಜಸ್ಯೇವಾಂಕುರಾಃ ಪೇಶ್ಯಾಃ ಪಂಚವಿಂಶತಿರಾತ್ರತಃ ।**
**ಭವಂತಿ ಮಾಸಮಾತ್ರೇಣ ಪಂಚಧಾ ಜಾಯತೇ ಪುನಃ ॥ ೧೨ ॥**

---

೮. ಭೋಜನಮಾಡಿದ ನಿರ್ದುಷ್ಟವಾದ ಅನ್ನವು ಶುಕ್ರವಾಗಿ ಪರಿಣಮಿಸಿದ್ದು ಋತುಕಾಲದಲ್ಲಿ ಸ್ತ್ರೀಯೋನಿಯಲ್ಲಿ ನಿಷಿಕ್ತವಾದಾಗ ಅಲ್ಲಿರುವ ವಾಯು ಸಂಬಂಧದಿಂದ ಸ್ತ್ರೀ ರಕ್ತದೊಡನೆ ಐಕ್ಯವನ್ನು ಹೊಂದುವುದು.

೯. ರೇತೋವಿಸರ್ಜನ ಕಾಲದಲ್ಲಿ ಈಶ್ವರ ನಿಯಮ್ಯವಾದ ಜೀವನು. ತನ್ನ ಕರ್ಮಾನುಸಾರವಾಗಿ ಇಂದ್ರಿಯ ಸಮೇತನಾಗಿ ರೇತಃಸಂಸರ್ಗಿಯಾಗಿದ್ದು ಯೋನಿಪ್ರವೇಶಮಾಡುವನು.

೧೦. ಆ ಶುಕ್ರ ಶೋಣಿತಗಳು ಮಿಶ್ರಿತಗಳಾಗಿ ಏಕತ್ರ ಇದ್ದು, ಒಂದು ದಿನದಲ್ಲಿ ಕಲಲವೆಂಬ ಗರ್ಭಪಿಂಡವಾಗುವುದು. ಐದು ರಾತ್ರಿಯಲ್ಲಿ ಆ ಕಲಲವು ಬುದ್ಬುದಾಕಾರವನ್ನು ಹೊಂದುವುದು.

೧೧. ಆ ಬುದ್ಬುದವು ಏಳು ರಾತ್ರಿಗಳೊಳಗೆ "ಪೇಶಿ" ಎಂಬ ಮಾಂಸದ ಮೊಟ್ಟೆಯಾಗುವುದು. ಹದಿನಾಲ್ಕು ರಾತ್ರಿಗಳಲ್ಲಿ ಆ ಪೇಶಿಯು ರಕ್ತಮಾಂಸಗಳಿಂದ ಘಟ್ಟಿಯಾಗುವುದು.

೧೨-೧೩. ಬೀಜವು ಅಂಕುರಿಸುವಂತೆ ಇಪ್ಪತ್ತೈದನೆಯ ರಾತ್ರಿಯಿಂದ ಒಂದು ತಿಂಗಳವರೆಗೆ ಆ ಪೇಶಿಯು ಅಂಕುರಾವಸ್ಥೆಗೆ ಬರುವುದು. ಅಲ್ಲಿಂದ

ಗ್ರೀವಾ ಶಿರಶ್ಚ ಸ್ಕಂಧಶ್ಚ ಪೃಷ್ಠವಂಶಸ್ತಥೋದರಂ ।
ಮಾಸದ್ವಯೇನ ಸರ್ವಾಣಿ ಕ್ರಮಶಃ ಸಂಭವಂತಿ ಚ ॥ ೧೩ ॥

ತ್ರಿಭಿರ್ಮಾಸೈಃ ಪ್ರಜಾಯಂತೇ ಸದ್ರವ್ಯಾಂಕುರ ಸಂಧಯಃ ।
ಮಾಸೈಶ್ಚತುರ್ಭಿರಂಗುಲ್ಯಃ ಪ್ರಜಾಯಂತೇ ಯಥಾಕ್ರಮಂ ॥ ೧೪ ॥

ಮುಖಂ ನಾಸಾ ಚ ಕರ್ಣೌ ಚ ಜಾಯಂತೇ ಪಂಚಮಾಸಕೈಃ ।
ದಂತಪಂಕ್ತಿಸ್ತಥಾ ಗುಹ್ಯಂ ಜಾಯಂತೇ ಚ ನಖಾಃ ಪುನಃ ॥ ೧೫ ॥

ಕರ್ಣೌ ಚ ರಂಧ್ರಸಹಿತೌ ಷಣ್ಮಾಸಾಭ್ಯಂತರೇಣ ತು ।
ಪಾಯುರ್ಮೇಢ್ರಮುಪಸ್ಥಶ್ಚ ನಾಭಿಶ್ಚಾಪ್ಯುಪಜಾಯತೇ ॥ ೧೬ ॥

ಸಂಧಯೋ ಯೇ ಚ ಗಾತ್ರೇಷು ಮಾಸೈರ್ಜಾಯಂತಿ ಸಪ್ತಭಿಃ ।
ಅಂಗಪ್ರತ್ಯಂಗಸಂಪೂರ್ಣಃ ಶಿರಃ ಕೇಶಸಮನ್ವಿತಃ ॥ ೧೭ ॥

---

ಎರಡು ತಿಂಗಳೊಳಗೆ ಕ್ರಮವಾಗಿ ಗ್ರೀವ, ಶಿರಸ್ಸು, ಸ್ಕಂಧ, ಪೃಷ್ಠವಂಶ ಉದರ ಇವು ಆವಿರ್ಭವಿಸುವುವು.

೧೪. ಮೂರು ತಿಂಗಳಿನೊಳಗೆ ಅಂಗಸಂಧಿಗಳು ಉದ್ಭವಿಸುವುವು. ನಾಲ್ಕು ತಿಂಗಳಿನಲ್ಲಿ ಕ್ರಮವಾಗಿ ಅಂಗುಲಿ (ಬೆರಳು) ಗಳು ಹುಟ್ಟುವುವು.

೧೫-೧೬. ಐದನೆಯ ತಿಂಗಳಲ್ಲಿ ಕ್ರಮವಾಗಿ ಮುಖ, ನಾಸಿಕ ಮತ್ತು ಕರ್ಣಗಳು ಏರ್ಪಡುವುವು. ಆರನೆಯ ತಿಂಗಳಿನೊಳಗೆ ಹಲ್ಲಿನ ಪನಡೂ ನಖ ಮತ್ತು ಕರ್ಣ ರಂಧ್ರಗಳೂ ಉಂಟಾಗುವುವು.

೧೭. ಏಳನೆಯ ತಿಂಗಳಿನಲ್ಲಿ ಅವಯುವಗಳ ಸಂಧಿ ಸ್ಥಾನಗಳೂ, ಪಾಯು, ಶಿಶ್ನ, ಉಪಸ್ಥ, ನಾಭಿ ಇವುಗಳೂ ಏರ್ಪಡುವುವು. ಶರೀರದ ಕೀಲು ಗಳೂ ಉದ್ಭವಿಸುವುವು.

ವಿಭಕ್ತಾವಯವಃ ಪುಷ್ಟಃ ಪುನರ್ಮಾಸಾಷ್ಟಕೇನ ಚ ।
ಪಂಚಾತ್ಮಕಸಮಾಯುಕ್ತಃ ಪರಿಪಕ್ವಃ ಸ ತಿಷ್ಠತಿ ॥ ೧೮ ॥

ಮಾತುರಾಹಾರವೀರ್ಯೇಣ ಷಡ್ವಿಧೇನ ಸ ತಿಷ್ಠತಿ ।
ರಸೇನ ಪ್ರತ್ಯಹಂ ಬಾಲೋ ವರ್ಧತೇ ಭರತರ್ಷಭ ॥ ೧೯ ॥

ತತ್ರೇಽಹಂ ಸಂಪ್ರವಕ್ಷ್ಯಾಮಿ ಯಥಾಶ್ರುತಮರಿಂದಮ ।
ನಾಭಿಸೂತ್ರನಿಬಂಧೇನ ವರ್ಧತೇ ಸ ದಿನೇ ದಿನೇ ॥ ೨೦ ॥

ತತಃ ಸ್ಮೃತಿಂ ಲಭೇಜ್ಜೀವಃ ಸಂಪೂರ್ಣೇಽಸ್ಮಿಂಚ್ಛರೀರಕೇ ।
ಸುಖಂ ದುಃಖಂ ವಿಜಾನಾತಿ ನಿದ್ರಾಸ್ವಪ್ನಂ ಪುರಾಕೃತಂ ॥ ೨೧ ॥

ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಪುನರ್ಮೃತಃ ।
ನಾನಾಯೋನಿಸಹಸ್ರಾಣಿ ಮಯಾ ದೃಷ್ಟಾನಿ ತಾನಿ ವೈ ॥ ೨೨ ॥

---

೧೮. ಎಂಟನೆಯ ತಿಂಗಳಲ್ಲಿ ಅಂಗ ಪ್ರತ್ಯಂಗ ಸಹಿತವಾಗಿಯೂ, ಶಿರಸ್ಸು ಮತ್ತು ಕೇಶಗಳಿಂದ ಸಮೇತವಾಗಿಯೂ, ವಿಶದವಾಗಿ ಕಾಣುವ ಅವಯವವುಳ್ಳದ್ದಾಗಿಯೂ ಗರ್ಭವು ಪುಷ್ಟವಾಗುವುದು. ಈ ರೀತಿಯಾಗಿ ಪಾಂಚಭೌತಿಕವಾದ ಗರ್ಭಶರೀರವು ಪರಿಪಕ್ವವಾಗುವುದು.

೧೯-೨೦. ಎಲೈ ಯುಧಿಷ್ಠಿರ ! ತಾಯಿಯು ಸೇವಿಸಿದ ಆಹಾರದ ಷಡ್ರಸಗಳು ಗರ್ಭಸ್ಥವಾದ ಶಿಶುವಿನ ನಾಭಿ ಸೂತ್ರದ ಮೂಲಕ ಸೇರಿ ಪ್ರತಿದಿನವೂ ವೃದ್ಧಿಹೊಂದುವುದು. ಎಲೈ ಶತ್ರುಸಂಹಾರಕನೇ ! ಈ ವಿಚಾರವಲ್ಲಿ ತಿಳಿದಿರುವುದನ್ನು ನಿನಗೆ ಯಥಾಶ್ರುತವಾಗಿ ಹೇಳಿರುತ್ತೇನೆ.

೨೧. ಈ ರೀತಿಯಾಗಿ ಶರೀರವು ಸಂಪೂರ್ಣವಾದ ಮೇಲೆ ಆ ವ್ಯಕ್ತಿಯು ಸ್ಮೃತಿಯನ್ನು ಹೊಂದುವುದು. ಮತ್ತು ಸುಖ, ದುಃಖ, ಸ್ವಪ್ನ ಇವುಗಳನ್ನೂ ಪೂರ್ವಕರ್ಮ ಮೊದಲಾದುವುಗಳ ಅರಿವನ್ನೂ ಹೊಂದುವುದು.

೨೨. ನಾನು ಮೊದಲು ಮೃತಿಹೊಂದಿ ಪುನಃ ಜನಿಸಿದ್ದೆನು. ಜನ್ಮವೆತ್ತಿ ಪುನಃ ಮರಣ ಹೊಂದಿದೆ. ಅನೇಕ ಸಹಸ್ರಯೋನಿಗಳನ್ನು ನಾನು ನೋಡಿದೆನು.

ಅಧುನಾ ಜಾತಮಾತ್ರೋsಹಂ ಪ್ರಾಪ್ತಸಂಸ್ಕಾರ ಏವ ಚ ।
ಏತಚ್ಛ್ರೇಯಃ ಕರಿಷ್ಯಾಮಿ ಯೇನ ಗರ್ಭೇ ನ ಸಂಶ್ರಯಃ ॥ ೨೩ ॥

ಗರ್ಭಸ್ಥಶ್ಚಿಂತಯೇ ದೇವಮಹಂ ಗರ್ಭಾದ್ವಿನಿಃಸೃತಃ ।
ಅಧ್ಯೇಷ್ಯೇ ಚತುರೋ ವೇದಾನ್ಸಂಸಾರವಿನಿವರ್ತಕಾನ್ ॥ ೨೪ ॥

ಏವಂ ಸ ಗರ್ಭದುಃಖೇನ ಮಹತಾ ಪರಿಪೀಡಿತಃ ।
ಜೀವಃ ಕರ್ಮವಶಾದಾಸ್ತೇ ಮೋಕ್ಷೋಪಾಯಂ ವಿಚಿಂತಯನ್ ॥ ೨೫ ॥

ಯಥಾ ಗಿರಿವರಾಕ್ರಾಂತಃ ಕಶ್ಚಿದ್ದುಃಖೇನ ತಿಷ್ಠತಿ ।
ತಥಾ ಜರಾಯುಣಾ ದೇಹೀ ದುಃಖೇ ತಿಷ್ಠತಿ ಚೇಷ್ಟಿತಃ ॥ ೨೬ ॥

ಪತಿತಃ ಸಾಗರೇ ಯದ್ವದ್ದುಃಖೈರಾಸ್ತೇ ಸಮಾಕುಲಃ ।
ಗರ್ಭೋದಕೇನ ಸಿಕ್ತಾಂಗಸ್ತಥಾಸ್ತೇ ವ್ಯಾಕುಲಃ ಪುಮಾನ್ ॥ ೨೭ ॥

---

೨೩. ಈ ವಾಸನೆಯಿಂದ ಸಂಸ್ಕಾರ ಹೊಂದಿದ ನಾನು ಈಸಲ ಜನಿಸಿದ ಕೂಡಲೆ ಗರ್ಭವಾಸ ದುಃಖ ಮೋಚಕವಾದ ಶ್ರೇಯಃ ಕರ್ಮಾನುಷ್ಠಾನದಲ್ಲಿ ನಿರತನಾಗುವೆನು.

೨೪. ಈ ಗರ್ಭಪತನವಾದ ಮೇಲೆ ನಾನು ಸಂಸಾರ ಮೋಕ್ಷಕ್ಕೆ ಸಾಧನ ವಾದ ನಾಲ್ಕು ವೇದಗಳನ್ನೂ ಅಧ್ಯಯನಮಾಡುವೆನು.

೨೫. ಈ ರೀತಿಯಾಗಿ ಗರ್ಭವಾಸ ದುಃಖದಿಂದ ಪೀಡಿತವಾದ ಆ ಜೀವವು ಗರ್ಭದಲ್ಲಿರುವಾಗಲೇ ಮೋಕ್ಷೋಪಾಯವನ್ನು ಚಿಂತಿಸುತ್ತಿರುವುದು.

೨೬. ತನ್ನ ಮೇಲೆ ಪರ್ವತವು ಬಿದ್ದಾಗ ಮಾನವನು ಹೇಗೆ ದುಃಖಾ ಕ್ರಾಂತನಾಗಿರುವನೋ ಹಾಗೆಯೇ ಗರ್ಭಾಶಯದಿಂದ ವೇಷ್ಟಿತವಾದ ಜೀವವೂ ಸಹ ದುಃಖಗ್ರಸ್ತವಾಗಿರುವುದು.

೨೭. ಸಾಗರದಲ್ಲಿ ಪತಿತನಾದವನು ದುಃಖಾಕುಲನಾಗುವಂತೆಯೇ ಗರ್ಭೋದಕದಿಂದ ಸಿಕ್ತಗಾತ್ರನಾದ ಜೀವನೂ ವ್ಯಾಕುಲನಾಗಿರುವನು.

**ಲೋಹಕುಂಭೇ ಯಥಾ ನ್ಯಸ್ತಃ ಪಚ್ಯತೇ ಕಶ್ಚಿದಗ್ನಿನಾ ।**
**ತಥಾ ಸ ಪಚ್ಯತೇ ಜಂತುರ್ಗರ್ಭಸ್ಥಃ ಪೀಡಿತೋದರಃ ॥ ೨೮ ॥**

**ಸೂಚೀಭಿರಗ್ನಿವರ್ಣಾಭಿರ್ವಿಭಿನ್ನಸ್ಯ ನಿರಂತರಂ ।**
**ಯದ್ದುಃಖಮುಪಜಾಯೇತ ತದ್ಗರ್ಭೇಽಷ್ಟಗುಣಂ ಭವೇತ್ ॥ ೨೯ ॥**

**ಗರ್ಭವಾಸಾತ್ಪರೋ ವಾಸಃ ಕಷ್ಟೋ ನೈವಾಸ್ತಿ ಕುತ್ರಚಿತ್ ।**
**ದೇಹಿನಾಂ ದುಃಖವದ್ರಾಜನ್ಸುಘೋರೋ ಹ್ಯತಿಸಂಕಟಃ ॥ ೩೦ ॥**

**ಇತ್ಯೇತದ್ಗರ್ಭದುಃಖಂ ಹಿ ಪ್ರಾಣಿನಾಂ ಪರಿಕೀರ್ತಿತಂ ।**
**ಚರಸ್ಥಿರಾಣಾಂ ಸರ್ವೇಷಾಮಾತ್ಮಗರ್ಭಾನುರೂಪತಃ ॥ ೩೧ ॥**

**ಗರ್ಭಾತ್ಕೋಟಿಗುಣಂ ದುಃಖಂ ಯೋನಿಯಂತ್ರಪ್ರಪೀಡನಾತ್ ।**
**ಸಂಮೂರ್ಚ್ಛಿತಸ್ಯ ಜಾಯೇತ ಜಾಯಮಾನಸ್ಯ ದೇಹಿನಃ ॥ ೩೨ ॥**

---

೨೮. ಲೋಹಮಯ ಕುಂಭದಲ್ಲಿಟ್ಟು ಅಗ್ನಿಯಿಂದ ಪಾಕಮಾಡಲ್ಪಡುವಂತೆ ಗರ್ಭಸ್ಥವಾದ ಜಂತುವು ತಾಯಿಯ ಉದರದಲ್ಲಿ ಪುಷ್ಟವಾಗುವುದು.

೨೯. ಅಗ್ನಿವರ್ಣವಾದ ಸೂಜಿಗಳಿಂದ ಸದಾ ಚುಚ್ಚಲ್ಪಟ್ಟವನಿಗಿರುವ ದುಃಖಗಳಿಗಿಂತ ಎಂಟರಷ್ಟು ಹೆಚ್ಚು ದುಃಖವು ಗರ್ಭಸ್ಥ ಜಂತುವಿಗೆ ಆಗುವುದು.

೩೦. ಓ ಮಹಾರಾಜ ! ಪ್ರಾಣಿಗಳಿಗೆ ಗರ್ಭವಾಸಕ್ಕಿಂತಲೂ ಕಷ್ಟತರವಾದ ವಾಸವೂ ಅತಿಸಂಕಟವೂ ಭಯವೂ ಬೇರೆ ಇಲ್ಲ.

೩೧. ಚರಾಚರ ಪ್ರಾಣಿಗಳಿಗೆ ಸ್ವಕರ್ಮಾನುಸಾರವಾಗಿ ಒದಗುವ ಗರ್ಭವಾಸದುಃಖವು ಈರೀತಿಯಾಗಿ ನಿರೂಪಿಸಲ್ಪಟ್ಟಿದೆ.

೩೨–೩೪. ಯೋನಿಯಂತ್ರದಿಂದ ಪೀಡಿತನಾಗಿಯೂ, ಪಾಪವೆಂಬ ಮುದ್ಗರದಿಂದ ತಲೆಯ ಮೇಲೆ ಹೊಡೆಯಲ್ಪಟ್ಟೂ, ಪ್ರಬಲವಾದ ಸೂತಿಮಾರುತನಿಂದ ಪ್ರೇರಿತನಾಗಿಯೂ, ಗರ್ಭದಿಂದ ಹೊರಕ್ಕೆ ತಳ್ಳಲ್ಪಟ್ಟು ರಕ್ಷಕರಿಲ್ಲದೆ ಅನಾಥ

ಶರವತ್ಪೀಡ್ಯಮಾನಸ್ಯ ಯಂತ್ರೇಣೈವ ಸಮಂತತಃ ।
ಶಿರಸಿ ತಾಡ್ಯಮಾನಸ್ಯ ಪಾಪಮುದ್ಗರಕೇಣ ಚ ॥ ೩೩ ॥

ಗರ್ಭಾನ್ನಿಷ್ಕ್ರಮ್ಯಮಾಣಸ್ಯ ಪ್ರಬಲೈಃ ಸೂತಿಮಾರುತೈಃ ।
ಜಾಯತೇ ಸುಮಹದ್ದುಃಖಂ ಪರಿತ್ರಾಣಮವಿಂದತಃ ॥ ೩೪ ॥

ಯಂತ್ರೇಣಾಪೀಡಿತಾ ಯದ್ವನ್ನಿಸ್ಸಾರಾಃ ಸ್ಯುಸ್ತಿಲೇಕ್ಷವಃ ।
ತಥಾ ಶರೀರಂ ನಿಸ್ಸಾರಂ ಯೋನಿಯಂತ್ರಪ್ರಪೀಡಿತಂ ॥ ೩೫ ॥

ಅಸ್ಥಿಮಜ್ಜಾತ್ವಚಾಮಾಂಸಸ್ನಾಯುಬಂಧೇನ ಯಂತ್ರಿತಂ ।
ರಕ್ತಮಾಂಸಮೃದಾ ಯುಕ್ತಂ ವಿಣ್ಮೂತ್ರದ್ರವಲೇಪನಂ ॥ ೩೬ ॥

ಕೇಶಲೋಮತೃಣಾಚ್ಛನ್ನಂ ರೋಗಾಯತನಮಾತುರಂ ।
ವದನೈಕಮಹದ್ದ್ವಾರಂ ದಂತೋಷ್ಠಕವಿಭೂಷಿತಂ ॥ ೩೭ ॥

---

ನಾಗಿಯೂ, ಯೋನಿಯಂತ್ರದಿಂದ ಮುಕ್ತನಾಗಿ ಶರದಿಂದ ಆಹತನಾದಂತೆ ವೇದನೆ ಹೊಂದಿ ಮೂರ್ಛಿತನಾಗಿ ಹೊರಕ್ಕೆ ಬರುವ ಪ್ರಾಣಿಗೆ ಗರ್ಭವಾಸದುಃಖಕ್ಕಿಂತಲೂ ಕೋಟಿಗುಣಿತವಾದ ದುಃಖವು ಉಂಟಾಗುವುದು.

೩೫. ಗಾಣದ ಯಂತ್ರಗಳಿಂದ ಹೊರಕ್ಕೆ ಬರುವ ಎಳ್ಳಿನಂತೆಯೂ, ಕಬ್ಬಿನ ತುಂಡಿನಂತೆಯೂ ಯೋನಿಯಂತ್ರಪೀಡಿತವಾಗಿ ಜನಿಸುವ ಶರೀರವು ನಿರ್ಬಲವಾಗಿರುವುದು.

೩೬. ನಿತ್ಯನಾಗಿಯೂ, ವಿಶುದ್ಧನಾಗಿಯೂ ಇರುವ ಆತ್ಮನಿಗೆ ಆಗ ಅಸ್ಥಿ, ಮಜ್ಜ, ಚರ್ಮ, ಮಾಂಸ, ಸ್ನಾಯು, ಈ ಬಂಧನಗಳಿಂದ ಯಂತ್ರಿತವಾಗಿಯೂ ರಕ್ತಮಾಂಸಗಳೆಂಬ ಮಣ್ಣಿನಿಂದ ಕೂಡಿದುದಾಗಿಯೂ, ವೀಣ್ಮೂತ್ರಗಳೆಂಬ ದ್ರವ ಪದಾರ್ಥಗಳಿಂದ ಲಿಪ್ತವಾಗಿಯೂ ಇರುವುದು.

೩೭. ಮತ್ತು ಕೇಶ, ರೋಮಗಳೆಂಬ ತೃಣಗಳಿಂದ ಆಚ್ಛಾದಿತವಾಗಿಯೂ ರೋಗಗಳಿಗೆ ನಿಲಯವಾಗಿಯೂ, ಇರುತ್ತಾ ವದನವೆಂಬ ಮಹಾದ್ವಾರದಿಂದಲೂ, ದಂತೋಷ್ಠಗಳಿಂದಲೂ ಅಲಂಕೃತವಾಗಿ ಇರುತ್ತದೆ.

ಓಷ್ಠದ್ವಯ ಕಪಾಟಂ ಚ ದಂತಜಿಹ್ವಾರ್ಗಲಾನ್ವಿತಂ ।
ನಾಡೀಸ್ವೇದಪ್ರವಾಹಂ ಚ ಕಫಪಿತ್ತಪರಿಪ್ಲುತಂ ॥ ೩೮ ॥

ಜರಾಶೋಕಸಮಾವಿಷ್ಟಂ ಕಾಲಚಕ್ರಾನಲೇ ಸ್ಥಿತಂ ।
ಕಾಮಕ್ರೋಧಸಮಾಕ್ರಾಂತಂ ವ್ಯಸನೈಶ್ಚೋಪಮರ್ದಿತಂ ॥ ೩೯ ॥

ಭೋಗತೃಷ್ಣಾತುರಂ ಮೂಢಂ ರಾಗದ್ವೇಷವಶಾನುಗಂ ।
ಸಂವರ್ತಿತಾಂಗಪ್ರತ್ಯಂಗಂ ಜರಾಯುಪರಿವೇಷ್ಟಿತಂ ॥ ೪೦ ॥

ಸಂಕಟೇನಾವಿವಿಕ್ತೇನ ಯೋನಿದ್ವಾರೇಣ ನಿರ್ಗತಂ ।
ವಿಣ್ಮೂತ್ರರಕ್ತಸಿಕ್ತಾಂಗಂ ಪಶ್ಚೇಶಾಚ್ಚ ಸಮುದ್ಭವಂ ॥ ೪೧ ॥

ಇತಿ ದೇಹಗೃಹಂ ಪ್ರೋಕ್ತಂ ನಿತ್ಯಸ್ಯಾನಿತ್ಯಮಾತ್ಮನಃ ।
ಅವಿಶುದ್ಧಂ ವಿಶುದ್ಧಸ್ಯ ಕರ್ಮಬಂಧವಿನಿರ್ಮಿತಂ ॥ ೪೨ ॥

---

೩೮. ಮತ್ತು ಆ ದೇಹವು ಎರಡು ತುಟಿಗಳೆಂಬ ಕವಾಟವುಳ್ಳುದ್ದಾಗಿಯೂ ದಂತ ಜಿಹ್ವೆಗಳೆಂಬ ಅಗುಳಿಗಳಿಂದ ಕೂಡಿದ್ದಾಗಿಯೂ, ನಾಡಿಗಳು ಮತ್ತು ಬೆವರು ಎಂಬ ಜಲಪ್ರವಾಹವುಳ್ಳುದ್ದಾಗಿಯೂ ಕಫ, ಪಿತ್ತಗಳಿಂದ ಪೂರ್ಣವಾಗಿಯೂ ಇದೆ.

೩೯. ಜರಾ ಶೋಕ ಇವುಗಳಿಂದ ಪರಿವೃತವಾಗಿಯೂ ಕಾಲಚಕ್ರವೆಂಬ ಅಗ್ನಿಯಲ್ಲಿರುವುದಾಗಿಯೂ, ಕಾಮ ಕ್ರೋಧಗಳಿಂದ ಆಕ್ರಾಂತವಾಗಿ ಅನೇಕ ವ್ಯಸನಗಳಿಂದಾವರಿಸಲ್ಪಟ್ಟುದಾಗಿಯೂ ಇದೆ.

೪೦. ಆ ದೇಹವು ಭೋಗಾಭಿಲಾಷೆಯಿಂದ ಮೋಹಗೊಂಡು ರಾಗದ್ವೇಷ ವಶವರ್ತಿಯಾಗಿಯೂ, ಗರ್ಭಾಶಯದಲ್ಲಿ ಅಂಗ ಪ್ರತ್ಯಂಗವನ್ನು ಪರಿವರ್ತಿಸುವುದಾಗಿಯೂ ಇದೆ.

೪೧. ಮತ್ತು ಅತಿಸಂಕಟದಿಂದ ಯೋನಿದ್ವಾರದಿಂದ ಹೊರಕ್ಕೆ ಬಂದುದಾಗಿಯೂ ವಿಟ್ ಮೂತ್ರಾದ್ಯಶುಚಿಪದಾರ್ಥಗಳಿಂದ ಸರ್ವತ್ರ ಆರ್ದ್ರವಾದ ಅಂಗವುಳ್ಳದ್ದಾಗಿಯೂ ಇರುವುದು.

೪೨. ನಿತ್ಯಸ್ವರೂಪನೂ, ವಿಶುದ್ಧನೂ ಆದ ಆತ್ಮನಿಗೆ ಈ ಪ್ರಕಾರ ಅನಿತ್ಯವೂ ಅಶುದ್ಧವೂ ಆದ ದೇಹವೆಂಬ ಗೃಹವು ಕರ್ಮಾನುಸಾರವಾಗಿ ನಿರ್ಮಿತವಾಗುವುದು.

ಶುಕ್ರಶೋಣಿತಸಂಯೋಗಾದ್ದೇಹಃ ಸಂಜಾಯತೇ ಯತಃ ।
ನಿತ್ಯಂ ವಿಣ್ಮೂತ್ರಪೂರ್ಣಶ್ಚ ತೇನಾಯಮಶುಚಿಃ ಸ್ಮೃತಃ ॥ ೪೩ ॥

ಯಥಾಂತರ್ವಿಷ್ಠಯಾ ಪೂರ್ಣಃ ಶುಚಿಃ ಸ್ಯಾನ್ನ ಬಹಿರ್ಘಟಃ ।
ಯತ್ನತಃ ಶೋಧ್ಯಮಾನೋಽಪಿ ದೇಹೋಽಯಮಶುಚಿಸ್ತಥಾ ॥ ೪೪ ॥

ಸಂಪ್ರಾಪ್ಯಾತ್ರ ಪವಿತ್ರಾಣಿ ಪಂಚಗವ್ಯಹವೀಂಷಿ ಚ ।
ಅಶುಚಿತ್ವಂ ಕ್ಷಣಾಚ್ಚಾಪಿ ಕಿಮನ್ಯದ್ವಸ್ತುಬಿಂದವಃ ॥ ೪೫ ॥

ದೇಹಃ ಸಂಶೋಧ್ಯಮಾನೋಽಪಿ ಪಂಚಗವ್ಯಕುಶಾಂಬುಭಿಃ ।
ಘೃಷ್ಯಮಾಣ ಇವಾಂಗಾರೋ ನಿರ್ಮಲತ್ವಂ ನ ಗಚ್ಛತಿ ॥ ೪೬ ॥

ಸ್ರೋತಾಂಸಿ ಯಸ್ಯ ಸತತಂ ಪ್ರವಹಂತಿ ಗಿರೇರಿವ ।
ಕಫಮೂತ್ರಪುರೀಷಾದ್ಯೈಃ ಸ ದೇಹಃ ಶುಧ್ಯತೇ ಕಥಂ ॥ ೪೭ ॥

---

೪೩. ಶುಕ್ರ ಶೋಣಿತಗಳ ಸಂಬಂಧದಿಂದ ಹುಟ್ಟಿದ ಈ ಶರೀರವು ಯಾವಾಗಲೂ ವಿಣ್ಮೂತ್ರಾದ್ಯಶುಚಿ ಪದಾರ್ಥಗಳಿಂದ ಪೂರಿತವಾದುದರಿಂದ ಅಶುಚಿಯೇ ಸರಿ.

೪೪. ಅಮೇಧ್ಯದಿಂದ ತುಂಬಿದ ಗಡಿಗೆಯು ಹೊರಗೆ ತೊಳೆದಮಾತ್ರದಿಂದ ಶುಚಿಯಾಗದೆ ಇರುವಂತೆ ಈ ಶರೀರವೂ ಬಾಹ್ಯಶೌಚ ಮಾತ್ರದಿಂದ ಶುಚಿಯಾಗಲಾರದು.

೪೫. ಪಂಚಗವ್ಯ ಹವಿಷ್ಯಾನ್ನ ಮೊದಲಾದ ಶುಚಿಯಾದ ವಸ್ತುಸಂಸರ್ಗದಿಂದಲೇ ಕ್ಷಣಮಾತ್ರವೂ ದೇಹವು ಶುಚಿಯಾಗಲಾರದೆಂದಮೇಲೆ ಇತರ ಪದಾರ್ಥಗಳ ಪಾಡೇನು ?

೪೬. ಪಂಚಗವ್ಯ ದರ್ಭಜಲ ಇವುಗಳಿಂದ ದೇಹವು ಶೋಧಿಸಲ್ಪಟ್ಟರೂ ತಿಕ್ಕಲ್ಪಟ್ಟ ಅಂಗಾರದಂತೆ ನಿರ್ಮಲವಾಗಲಾರದು.

೪೭. ಪರ್ವತಗಳಿಂದ ಪ್ರವಾಹವು ಹೊರಟಂತೆ ಸದಾ ಯಾವ ಶರೀರದಿಂದ ಕಫ, ಮೂತ್ರ, ಪುರೀಷಾದಿ ಪ್ರವಾಹಗಳು ಹರಿಯುವುವೋ ಅಂತಹ ಶರೀರವು ಹೇಗೆ ತಾನೆ ಪರಿಶುದ್ಧವಾದೀತು.

**ಸರ್ವಾಶುಚಿನಿಧಾನಸ್ಯ ಶರೀರಸ್ಯ ನ ವಿದ್ಯತೇ ।**
**ಶುಚಿರೇಕಃ ಪ್ರದೇಶೋಽಪಿ ವಿಟ್ಪೂರ್ಣಃ ಸ್ಯದಂತೇ ಕಿಲ ॥ ೪೮ ॥**

**ಕಾಯಃ ಸುಗಂಧಧೂಪಾದ್ಯೈರ್ಯತ್ನೇನಾಪಿ ತು ಸಂಸ್ಕೃತಃ ।**
**ನ ಜಹಾತಿ ಸ್ವಕಂ ಭಾವಂ ಶ್ವಪುಚ್ಛಮಿವ ನಾಮಿತಂ ॥ ೪೯ ॥**

**ಯಥಾ ಜಾತ್ಯೈವ ಕೃಷ್ಣೋ ಹಿ ನ ಶುಕ್ಲಃ ಸ್ಯಾದುಪಾಯತಃ ।**
**ಸಂಶೋಧ್ಯಮಾನಾಽಪಿ ತಥಾ ಭವೇನ್ಮೂರ್ತಿರ್ನ ನಿರ್ಮಲಾ ॥ ೫೦ ॥**

**ಜಿಘ್ರನ್ನಪಿ ಸ್ವದುರ್ಗಂಧಂ ಪಶ್ಯನ್ನಪಿ ಮಲಂ ಸ್ವಕಂ ।**
**ನ ವಿರಜ್ಯತಿ ಲೋಕೋಽಯಂ ಪೀಡಯನ್ನಪಿ ನಾಸಿಕಾಂ ॥ ೫೧ ॥**

**ಅಹೋ ಮೋಹಸ್ಯ ಮಾಹಾತ್ಮ್ಯಂ ಯೇನ ವ್ಯಾಮೋಹಿತಂ ಜಗತ್ ।**
**ಜಿಘ್ರನ್ಪಶ್ಯನ್ಸ್ವಕಂ ದೋಷಂ ಕಾಯಸ್ಯ ನ ವಿರಜ್ಯತೇ ॥ ೫೨ ॥**

---

೪೮. ಸಮಸ್ತ ಅಶುಚಿ ಪದಾರ್ಥಗಳಿಗೂ ನಿಧಿಯಾಗಿರುವ ಈ ಶರೀರದಲ್ಲಿ ಪರಿಶುದ್ಧವಾದ ಒಂದು ಪ್ರದೇಶವೂ ಇಲ್ಲ.

೪೯. ನಾಯಿಯ ಬಾಲವು ಡೊಂಕಾಗುವಂತೆ ಋಜುವಾಗಿ ಮಾಡಲ್ಪಟ್ಟರೂ ಉತ್ತಮವಾದ ಗಂಧಧೂಪಾದಿಗಳಿಂದ ಪ್ರಯತ್ನಪೂರ್ವಕವಾಗಿ ಸಂಸ್ಕರಿಸಲ್ಪಟ್ಟರೂ ಈ ಶರೀರವು ತನ್ನ ಸ್ವಭಾವವನ್ನು ಬಿಡಲಾರದು.

೫೦. ಸ್ವಭಾವತಃ ಕಪ್ಪಾದ ವಸ್ತುವು ಯಾವ ಉಪಾಯದಿಂದಲೂ ಬಿಳುಪಾಗಲಾರದೋ ಹಾಗೆ ಶರೀರವು ಶೋಧನೆಯಿಂದ ನಿರ್ಮಲವಾಗಲಾರದು.

೫೧. ಸ್ವದೇಹಾಶುಚಿಯ ಗಂಧವನ್ನು ಆ ಘ್ರಾಣಿಸಿದರೂ ಸ್ವಮಲವನ್ನು ನೋಡಿದರೂ ಅಸಹ್ಯವಾಗಿ ಮೂಗು ಮುಚ್ಚಿಕೊಳ್ಳುವಂತೆ ಮಾಡುವುದಾದರೂ ಲೋಕವು ವಿರಕ್ತಿಯನ್ನು ಹೊಂದುವುದಿಲ್ಲ.

೫೨. ಅಯ್ಯೋ ಮೋಹ ಮಹಾತ್ಮ್ಯೆಯೇ ! ಈ ಮೋಹದಿಂದ ಆವೃತವಾದ್ದರಿಂದಲೇ ಈ ಜಗತ್ತು ಸ್ವಶರೀರದ ದೋಷವನ್ನು ತಿಳಿದಿದ್ದರೂ ಶರೀರದಲ್ಲಿ ವಿರಕ್ತವಾಗಿಲ್ಲ.

ಏವಮೇತಚ್ಛರೀರಂ ಹಿ ನಿಸರ್ಗಾದಶುಚಿ ಧ್ರುವಂ ।
ತ್ವಙ್ಮಾತ್ರಸಾರಂ ನಿಃಸಾರಂ ಕದಲೀಸಾರಸಂನಿಭಂ ॥ ೫೩ ॥

ಗರ್ಭಸ್ಥಸ್ಯ ಸ್ಮೃತಿರ್ಯಾಸೀತ್ಸಾ ಜಾತಸ್ಯ ಪ್ರಣಶ್ಯತಿ ।
ಸಂಮೂರ್ಚ್ಛಿತಸ್ಯ ದುಃಖೇನ ಯೋನಿಯಂತ್ರಪ್ರಪೀಡನಾತ್ ॥ ೫೪ ॥

ಬಾಹ್ಯೇನ ವಾಯುನಾ ಚಾಸ್ಯ ಮೋಹಸಂಜ್ಞೇನ ದೇಹಿನಃ ।
ಸ್ಪೃಷ್ಟಮಾತ್ರೇಣ ಘೋರೇಣ ಜ್ವರಃ ಸಮುಪಜಾಯತೇ ॥ ೫೫ ॥

ತೇನ ಜ್ವರೇಣ ಮಹತಾ ಮಹಾಮೋಹಃ ಪ್ರಜಾಯತೇ ।
ಸಂಮೂಢಸ್ಯ ಸ್ಮೃತಿಭ್ರಂಶಃ ಶೀಘ್ರಂ ಸಂಜಾಯತೇ ಪುನಃ ॥ ೫೬ ॥

ಸ್ಮೃತಿಭ್ರಂಶಾತ್ತು ತಸ್ಯೇಹ ಪೂರ್ವಕರ್ಮವಶೇನ ಚ ।
ರತಿಃ ಸಂಜಾಯತೇ ತೂರ್ಣಂ ಜಂತೋಸ್ತತ್ರೈವ ಜನ್ಮನಿ ॥ ೫೭ ॥

---

೫೩. ಈರೀತಿ ಶರೀರವು ಸ್ವಭಾವತಃ ಅಶುಚಿಯೂ ಚರ್ಮ ಮಾತ್ರ ಸುಂದರವೂ ಒಳಗೆ ಬಾಳೆಯ ದಿಂಡಿನಂತೆ ನಿಸ್ಸಾರವೂ ಆಗಿದೆ.

೫೪. ಆ ಪುರುಷನಿಗೆ ಗರ್ಭದಲ್ಲಿದ್ದಾಗ ಇದ್ದ ಸ್ಮೃತಿಯು ಜನಿಸುವಾಗ ಯೋನಿಯಂತ್ರದಿಂದ ಪೀಡಿತವಾಗಿ ದುಃಖದಿಂದ ಆವೃತವಾದಾಗ ನಾಶ ವಾಗುವುದು.

೫೫. ಮೋಹವೆಂಬ ಘೋರಬಾಹ್ಯವಾಯುವು ಸ್ಪರ್ಶಿಸಿದ ಮಾತ್ರ ದಿಂದಲೇ ಆ ಪುರುಷನಿಗೆ ಜ್ವರವು ಉದ್ಭವಿಸುವುದು.

೫೬. ಆ ಮಹತ್ತಾದ ಜ್ವರದಿಂದ ಆವೃತನಾದ ಮೂಢನಿಗೆ ಮಹಾ ಮೋಹವು ಉದ್ಭವಿಸಿ, ತತ್‌ಕ್ಷಣವೇ ಸ್ಮೃತಿಭ್ರಂಶವಾಗುವುದು.

೫೭. ಸ್ಮೃತಿಭ್ರಂಶದಿಂದಲೂ, ಪೂರ್ವಕರ್ಮದ ವಾಸನೆಯಿಂದಲೂ ಶೀಘ್ರವಾಗಿ ಆ ಪ್ರಾಣಿಗೆ ಅದೇ ಜನ್ಮದಲ್ಲಿ ರತಿಯು ಅಂಕುರಿಸುವುದು.

ರಕ್ತೋ ಮೂಢಸ್ಯ ಲೋಕೋsಯಮಕಾರ್ಯೇ ಸಂಪ್ರವರ್ತತೇ ।
ನ ಚಾತ್ಮಾನಂ ವಿಜಾನಾತಿ ನ ಪರಂ ವಿಂದತೇ ಚ ಸಃ ॥ ೫೮ ॥

ನ ಶೃಣೋತಿ ಪರಂ ಶ್ರೇಯಃ ಸತಿ ಚಕ್ಷುಷಿ ನೇಕ್ಷತೇ ।
ಸಮೇ ಪಥಿ ಶನೈರ್ಗಚ್ಛನ್ ಸ್ಖಲತೀವ ಪದೇಪದೇ ॥ ೫೯ ॥

ಸತ್ಯಾಂ ಬುದ್ಧೌ ನ ಜಾನಾತಿ ಬೋಧ್ಯಮಾನೋ ಬುಧೈರಪಿ ।
ಸಂಸಾರೇ ಕ್ಲಿಶ್ಯತೇ ತೇನ ರಾಗಲೋಭವಶಾನುಗಃ ॥ ೬೦ ॥

ಗರ್ಭಸ್ಮೃತೇರಭಾವೇನ ಶಾಸ್ತ್ರಮುಕ್ತಂ ಮಹರ್ಷಿಭಿಃ ।
ತದ್ದುಃಖಮಥನಾರ್ಥಾಯ ಸ್ವರ್ಗಮೋಕ್ಷಪ್ರಸಾಧಕಂ ॥ ೬೧ ॥

ಯೇ ಸಂತ್ಯಸ್ಮಿನ್ಪರೇ ಜ್ಞಾನೇ ಸರ್ವಕಾಮಾರ್ಥಸಾಧಕೇ ।
ನ ಕುರ್ವಂತ್ಯಾತ್ಮನಃ ಶ್ರೇಯಸ್ತದತ್ರ ಮಹದದ್ಭುತಂ ॥ ೬೨ ॥

---

೫೮-೫೯. ಸರಾಗಿಯೂ ಮೂಢನೂ ಆದ ಪುರುಷನು ಆಗ ನಿಷಿದ್ಧ ಕಾರ್ಯದಲ್ಲಿ ತೊಡಗುವನು. ಮತ್ತು ಅವನು ಸ್ವಪರ ಜ್ಞಾನಶೂನ್ಯನಾಗುವನು. ಪರಮ ಶ್ರೇಯಸ್ಸಾಧನವನ್ನೂ ತಿಳಿಯಕೊಳ್ಳಲಾರನು. ನೇತ್ರಗಳಿದ್ದರೂ ನೋಡಲಾರನು. ಸಮಮಾರ್ಗವಲ್ಲಿ ಮೆಲ್ಲನೆ ನಡೆಯುತ್ತಿದ್ದರೂ ಹೆಜ್ಜೆಹೆಜ್ಜೆಗೂ ಸ್ಖಲಿತನಾಗುವನು.

೬೦. ಜ್ಞಾನಿಗಳು ಉಪದೇಶಿಸಿದರೂ ಸ್ವಬುದ್ಧಿಯಿಂದ ತಿಳಿಯಕೊಳ್ಳಲಾರನು. ಅದರಿಂದ ಆತನು ರಾಗಲೋಭವಶನಾಗಿ ಸಂಸಾರದಲ್ಲಿ ಅನೇಕ ಕ್ಲೇಶಗಳಿಗೆ ಭಾಗಿಯಾಗುವನು.

೬೧-೬೨. ಈ ರೀತಿ ಗರ್ಭಸ್ಥನಾಗಿ ಇರುವಾಗ ಇದ್ದ ಸ್ಮೃತಿಯು ಜನ್ಮವೆತ್ತಿದ ಮೇಲೆ ಭ್ರಂಶವಾಗುವುದರಿಂದ ಆ ಗರ್ಭವಾಸದ ದುಃಖನಿವಾರಣೆಗಾಗಿಯೂ ಸ್ವರ್ಗ ಮತ್ತು ಮೋಕ್ಷಗಳನ್ನು ಪಡೆಯುವುದಕ್ಕಾಗಿಯೂ ಮಹರ್ಷಿಗಳು ತತ್ಸಾಧನವಾದ ಜ್ಞಾನಪ್ರಾಪಕವಾದ ಶಾಸ್ತ್ರಗಳನ್ನು ರಚಿಸಿರುವರು.

೬೨. ಈ ರೀತಿ ಸರ್ವಪುರುಷಾರ್ಥಸಾಧಕವಾದ ಉತ್ತಮವಾದ ಜ್ಞಾನವೂ ತತ್ಸಾಧನವಾದ ಶಾಸ್ತ್ರವೂ ಇದ್ದರೂ, ಪುರುಷರು ಆತ್ಮಶ್ರೇಯಸ್ಸಾಧನವನ್ನು ಸಂಪಾದಿಸದೇ ಇರುವುದು ಅತ್ಯಾಶ್ಚರ್ಯಕರ.

ಅವ್ಯಕ್ತೇಂದ್ರಿಯವೃತ್ತಿತ್ವಾದ್ಬಾಲ್ಯೇ ದುಃಖಂ ಮಹತ್ಪುನಃ ।
ಇಚ್ಛನ್ನಪಿ ನ ಶಕ್ನೋತಿ ಕರ್ತುಂ ವಕ್ತುಂ ಚ ಸತ್ಕ್ರಿಯಾಂ ॥ ೬೩ ॥

ದಂತೋತ್ಥಾನೇ ಮಹದ್ದುಃಖಂ ಮೌಲೇನ ವ್ಯಾಧಿನಾ ತಥಾ ।
ಬಾಲರೋಗೈಶ್ಚ ವಿವಿಧೈಃ ಪೀಡಾಬಾಲಗ್ರಹೈರಪಿ ॥ ೬೪ ॥

ತೃಡ್ಬುಭುಕ್ಷಾಪರೀತಾಂಗಃ ಕಚ್ಚಿತ್ತಿಷ್ಠತಿ ರಾರಟನ್ ।
ವಿಣ್ಮೂತ್ರಭಕ್ಷಣಮಪಿ ಮೋಹಾದ್ಬಾಲಃ ಸಮಾಚರೇತ್ ॥ ೬೫ ॥

ಕೌಮಾರೇ ಕರ್ಣವೇಧೇನ ಮಾತಾಪಿತ್ರೋಶ್ಚ ತಾಡನಾತ್ ।
ಅಕ್ಷರಾಧ್ಯಯನಾತ್ಪುಂಸಾಂ ದುಃಖಂ ಸ್ಯಾದ್ಗುರುಶಾಸನಾತ್ ॥ ೬೬ ॥

ಪ್ರಸನ್ನೇಂದ್ರಿಯವೃತ್ತಿಶ್ಚ ಕಾಮರಾಗಪ್ರಪೀಡನಾತ್ ।
ರೋಗೋದ್ಧತಸ್ಯ ಸತತಂ ಕುತಃ ಸೌಖ್ಯಂ ಚ ಯೌವನೇ ॥ ೬೭ ॥

---

೬೩. ಬಾಲ್ಯದಲ್ಲಿ ಅಸ್ಪಷ್ಟವಾದ ಇಂದ್ರಿಯವೃತ್ತಿವುಳ್ಳವನಾದುದರಿಂದ ಅಭಿಲಾಷೆಯಿದ್ದರೂ ಸತ್ಕರ್ಮವನ್ನು ಮಾಡುವುದಕ್ಕೂ, ಸ್ವಹಿತವನ್ನು ಪರರಿಗೆ ಭೋಧಿಸುವುದಕ್ಕೂ ಅಸಮರ್ಥನಾಗುವನು.

೬೪. ಹಲ್ಲು ಹುಟ್ಟುವಾಗ ಮಹಾದುಃಖವು ಸಂಭವಿಸುವುದು. ಮತ್ತು ಪ್ರಾಕ್ತನ ವ್ಯಾಧಿಯಿಂದಲೂ ವಿವಿಧ ಬಾಲರೋಗಗಳಿಂದಲೂ, ಬಾಲಗ್ರಹಾದಿ ಗಳಿಂದಲೂ ಪೀಡೆಯು ಅನಿವಾರ್ಯವು.

೬೫. ಕೆಲವು ಶಿಶುಗಳು ಬಾಯಾರಿಕೆ ಹಸಿವುಗಳ ಬಾಧೆಗಳಿಂದ ಪೀಡಿತವಾಗಿ ಗಟ್ಟಿಯಾಗಿ ರೋದನಮಾಡುತ್ತಾ ಅಜ್ಞಾನದಿಂದ ತಮ್ಮ ವಿಣ್ಮೂತ್ರಗಳನ್ನೂ ಭುಂಜಿಸುವುವು.

೬೬. ಕೌಮಾರ ವಯಸ್ಸಿನಲ್ಲಿ ಕರ್ಣವೇಧದಿಂದಲೂ ಮಾತಾಪಿತೃಗಳ ತಾಡನದಿಂದಲೂ; ಅಕ್ಷರಾಭ್ಯಾಸದ ವೇಳೆಯಲ್ಲಿ ಗುರುಶಿಕ್ಷೆಯಿಂದಲೂ ಪುರುಷರಿಗೆ ದುಃಖವು ಸಂಭವಿಸುವುದು.

೬೭. ಯೌವನದಲ್ಲಿ ಪ್ರಸನ್ನವಾದ ಇಂದ್ರಿಯ ವ್ಯಾಪಾರವುಳ್ಳವನಾದರೂ ಸದಾ ಕಾಮರಾಗಗಳಿಂದ ಪೀಡಿತನಾದ್ದರಿಂದ ಅನುರಾಗಾಂಧನಾದವನಿಗೆ ಸುಖಕ್ಕೆ ಅವಕಾಶವಿಲ್ಲವು.

ಈರ್ಷ್ಯಯಾ ಚ ಮಹದ್ದುಃಖಂ ಮೋಹಾದ್ರಕ್ತಸ್ಯ ಜಾಯತೇ ।
ನೇತ್ರಸ್ಯ ಕುಪಿತಸ್ಯೈವ ರಾಗೋ ದುಃಖಾಯ ಕೇವಲಂ　　　॥ ೬೮ ॥

ನ ರಾತ್ರೌ ವಿಂದತೇ ನಿದ್ರಾಂ ಕೋಪಾಗ್ನಿಪರಿಪೀಡಿತಃ ।
ದಿವಾ ವಾಪಿ ಕುತಃ ಸೌಖ್ಯಮರ್ಥೋಪಾರ್ಜನಚಿಂತಯಾ　　　॥ ೬೯ ॥

ಸ್ತ್ರೀಷ್ವಾಯಾಸಿತದೇಹಸ್ಯ ಯೇ ಪುಂಸಃ ಶುಕ್ರಬಿಂದವಃ ।
ನ ತೇ ಸುಖಾಯ ಮಂತವ್ಯಾಃ ಸ್ವೇದಜಾ ಇವ ಬಿಂದವಃ　　　॥ ೭೦ ॥

ಕ್ರಿಮಿಭಿಸ್ತುದ್ಯಮಾನಸ್ಯ ಕುಷ್ಠಿನಃ ಕಾಮಿನಸ್ತಥಾ ।
ಕಂಡೂಯನಾಗ್ನಿತಾಪೇನ ಯದ್ಭವೇತ್ ಸ್ತ್ರೀಷು ತದ್ಧಿ ತತ್　　　॥ ೭೧ ॥

ಯಾದೃಶಂ ವಿಂದತೇ ಸೌಖ್ಯಂ ಗಂಡಾಸ್ರಯವಿನಿರ್ಗಮೇ ।
ತಾದೃಶಂ ಸ್ತ್ರೀಷು ಮಂತವ್ಯಂ ನಾಧಿಕಂ ತಾಸು ವಿದ್ಯತೇ　　　॥ ೭೨ ॥

---

೬೮. ಮತ್ತು ಕ್ರೋಧಾಂಧನಾದವನಿಗೆ ನೇತ್ರರಕ್ತಿಮವು ದುಃಖಸಾಧನವಾಂದತೆ ಮೋಹದಿಂದ ರಾಗವಶನಾದವನಿಗೆ ಈರ್ಷ್ಯೆಯು ಕೇವಲ ದುಃಖಕ್ಕೇ ಸಾಧನ.

೬೯. ಪ್ರಣಯಕೋಪಾಗ್ನಿಸಂತಪ್ತನಾದಾಗ ರಾತ್ರಿಯಲ್ಲಿ ಕಣ್ಣಿಗೆ ನಿದ್ರೆ ಹತ್ತುವುದಿಲ್ಲ. ದ್ರವ್ಯಾರ್ಜನೆಯ ಚಿಂತೆಯಿಂದ ಹಗಲೂ ಸೌಖ್ಯವಿಲ್ಲ.

೭೦. ಸ್ತ್ರೀಸಂಗ ಕಾಲದಲ್ಲಿ ಪುರುಷದೇಹದಿಂದ ನಿಷಿಕ್ತವಾಗುವ ರೇತೋಬಿಂದುಗಳು ಬೆವರಿನ ನೀರುಗಳಂತೆ ಪುರುಷನಿಗೆ ಸುಖ ಹೇತುಗಳಲ್ಲ.

೭೧. ಕ್ರಿಮಿಗಳಿಂದ ಕಡಿಯಲ್ಪಟ್ಟು ಕಂಡೂಯನವನ್ನು ಮಾಡಿಕೊಂಡವನಿಗೆ ಬರುವ ತಾಪಕ್ಕೆ ಸಮಾನವಾದ ತಾಪವು ಪುರುಷನಿಗೆ ಸ್ತ್ರೀ ಸಂಬಂಧದಿಂದ ಸಂಭವಿಸುವುದು.

೭೨. ದೇಹದಲ್ಲಿದ್ದ ಕುರುವು ಒಡೆಯುವಾಗ ಯಾವ ಸೌಖ್ಯ ವುಂಟಾಗುವುದೋ ಸ್ತ್ರೀಸಂಗ ಸೌಖ್ಯವು ಅದಕ್ಕೆ ಸಮಾನವು. ಅದಕ್ಕಿಂತ ಯಾವ ವಿಶೇಷವೂ ಇಲ್ಲ.

ಗಂಡಸ್ಯ ವೇದನಾ ಯದ್ವತ್ ಸ್ಫುಟಿತಸ್ಯ ನಿವರ್ತತೇ ।
ತದ್ವತ್ ಸ್ತ್ರೀಷ್ವಪಿ ಮಂತವ್ಯಂ ನ ಸೌಖ್ಯಂ ಪರಮಾರ್ಥತಃ ॥ ೭೩ ॥

ವಿಣ್ಮೂತ್ರಸ್ಯ ಸಮುತ್ಸರ್ಗಾತ್ಸುಖಂ ಭವತಿ ಯಾದೃಶಂ ।
ತಾದೃಶಂ ತೇಷು ವಿಜ್ಞೇಯಂ ಮೂಢೈಃ ಕಲ್ಪಿತಮನ್ಯಥಾ ॥ ೭೪ ॥

ನಾರೀಷ್ವಶುಚಿಭೂತಾಸು ಸರ್ವದೋಷಾಶ್ರಯಾಸು ಚ ।
ನಾಣುಮಾತ್ರಕಮಪ್ಯೇವಂ ಸುಖಮಸ್ತಿ ವಿಚಾರತಃ ॥ ೭೫ ॥

ಸನ್ಮಾನಮಪಮಾನೇನ ವಿಯೋಗೇನ ಸಂಸಂಗಮಃ ।
ಯೌವನಂ ಜರಯಾ ಗ್ರಸ್ತಂ ಕಿಂ ಸೌಖ್ಯಮನುಪದ್ರವಂ ॥ ೭೬ ॥

ವಲೀಪಲಿತಸ್ತ್ವಾಲಿತ್ಯೈಃ ಶಿಥಿಲೀಕೃತವಿಗ್ರಹಂ ।
ಸರ್ವಕ್ರಿಯಾಸ್ವಶಕ್ತಂ ಚ ಜರಯಾ ಜರ್ಜರೀಕೃತಂ ॥ ೭೭ ॥

---

೭೩. ಕುರುವು ಒಡೆಯುವಾದ ಆಗುವ ವೇದನೆಗೆ ಸದೃಶವಾದ ವೇದನೆಯು ಸ್ತ್ರೀಸಂಗದಿಂದುಂಟಾಗುವುದು. ಪರಮಾರ್ಥತಃ ಸ್ತ್ರೀಯರಿಂದ ಯಾವ ಸೌಖ್ಯವೂ ಇಲ್ಲವು.

೭೪. ಮಲಮೂತ್ರೋತ್ಸರ್ಜನೆಯಿಂದ ಯಾವವಿಧವಾದ ಸುಖವಾಗುವುದೋ ಆ ಸೌಖ್ಯಕ್ಕೆ ಸಮಾನವಾದ ಸುಖವು ಸ್ತ್ರೀಸಂಗದಿಂದಾಗುವುದು. ಅಜ್ಞಾನಿಗಳು ಅದನ್ನು ಅನ್ಯಥಾ ಕಲ್ಪಿಸುವರು.

೭೫. ವಿಚಾರಮಾಡಿದರೆ ಅಶುಚಿಗಳಾಗಿಯೂ ಸರ್ವದೋಷಗಳಿಗೆ ಆಶ್ರಯರಾಗಿಯೂ ಇರುವ ಸ್ತ್ರೀಯರಿಂದ ಅಣುಮಾತ್ರ ಸುಖವೂ ಇಲ್ಲವೆಂದು ಭಾಸವಾಗುವುದು.

೭೬. ಸನ್ಮಾನವು ಅಪಮಾನದಿಂದಲೂ, ಸಂಗಮವು ವಿಯೋಗದಿಂದಲೂ, ಯೌವನವು ವೃದ್ಧಾಪ್ಯದಿಂದಲೂ, ಗ್ರಸ್ತವಾಗಿರುವುದು. ದುಃಖದ ಸೋಂಕು ಇಲ್ಲದ ಸುಖವು ಎಲ್ಲಿತಾನೇ ದೊರಕೀತು.

೭೭. ಮುಪ್ಪಿನ ಶರೀರವು ಸುಕ್ಕುಚರ್ಮ ನರೆಗೂದಲು, ತಪ್ಪುಹೆಜ್ಜೆಗಳಿಂದ ಕೂಡಿದ್ದಾಗಿ ಶಿಥಿಲವಾಗತಕ್ಕುದಾಗಿದೆ. ಆದುದರಿಂದ ಅದು ಸರ್ವಕರ್ಮಗಳಿಗೂ ಅಶಕ್ತವಾದುದು.

**ಸ್ತ್ರೀಪುಂಸಯೋರ್ನವಂ ರೂಪಂ ತದಾನ್ಯೋನ್ಯಂ ಪ್ರಿಯಂ ಪುರಾ ।**
**ತದೇವ ಜರಯಾ ಗ್ರಸ್ತಮುಭಯೋರಪಿ ನ ಪ್ರಿಯಂ　　　　॥ ೭೮ ॥**

**ಅಪೂರ್ವವತ್ಸ್ವಮಾತ್ಮಾನಂ ಜರಯಾ ಪರಿವರ್ತಿತಃ ।**
**ಯಃ ಪಶ್ಯನ್ನಪಿ ರಜ್ಯೇತ ಕೋಽನ್ಯಸ್ತಸ್ಮಾದಚೇತನಃ　　　　॥ ೭೯ ॥**

**ಜರಾಭಿಭೂತಃ ಪುರುಷಃ ಪತ್ನೀಪುತ್ರಾದಿಬಾಂಧವೈಃ ।**
**ಅಶಕ್ತತ್ವಾದ್ದುರಾಚಾರೈರ್ಭೃತ್ಯೈಶ್ಚ ಪರಿಭೂಯತೇ　　　　॥ ೮೦ ॥**

**ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚ ನ ಜರೀ ಯತಃ ।**
**ಶಕ್ತಃ ಸಾಧಯಿತುಂ ತಸ್ಮಾಚ್ಛರೀರಮಿದಮಾತ್ಮನಃ　　　　॥ ೮೧ ॥**

**ವಾತಪಿತ್ತಕಫಾದೀನಾಂ ವೈಷಮ್ಯಂ ವ್ಯಾಧಿರುಚ್ಯತೇ ।**
**ತಸ್ಮಾದ್ವ್ಯಾಧಿಮಯಂ ಜ್ಞೇಯಂ ಶರೀರಮಿದಮಾತ್ಮನಃ　　　　॥ ೮೨ ॥**

---

೭೮. ಮೊದಲು ಯೌವನದಲ್ಲಿ ಸ್ತ್ರೀಪುರುಷರಿಗೆ ಪರಸ್ಪರ ಸುಂದರವಾಗಿ ತೋರಿ ಪ್ರಿಯವಾಗಿದ್ದ ಶರೀರವು ಮುಪ್ಪಿನಲ್ಲಿ ಅವರಿಗೆ ಪರಸ್ಪರವಾಗಿ ಅಪ್ರಿಯವಾಗುವುದು.

೭೯. ಜರೆಯಿಂದ ಪರಿವರ್ತಿತವಾದ ತನ್ನ ಶರೀರವು ಬೇರೆ ಶರೀರದಂತೆ ಕಂಡಾಗಲೂ ಪುರುಷನು ವಿರಕ್ತನಾಗದಿದ್ದರೆ ಅವನಿಗಿಂತ ಮೂಢರು ಇನ್ನಾರು ಇದ್ದಾರೆ?

೮೦. ಜರಾಭಿಭೂತನಾದ ಪುರುಷನು ಅಶಕ್ತನಾಗುವುದರಿಂದ ದುರಾಚಾರಿಗಳಾದ ಪತ್ನೀಪುತ್ರಬಂಧುಭೃತ್ಯಾದಿಗಳು ಅವನನ್ನು ತಿರಸ್ಕರಿಸುವರು.

೮೧. ಜರಾಭಿಭೂತವಾದ ಈ ಶರೀರವು ಆತ್ಮನಿಗೆ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಲಾರದು.

೮೨. ವಾತ, ಪಿತ್ತ ಕಫಾದಿ ಧಾತುಗಳ ವೈಷಮ್ಯವೇ ವ್ಯಾಧಿ ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಈ ಶರೀರವನ್ನು ವ್ಯಾಧಿಮಯವೆಂದು ತಿಳಿಯಬೇಕು.

ವಾತಾದ್ಯವ್ಯತಿರಿಕ್ತತ್ವಾದ್ವ್ಯಾಧೀನಾಂ ಪಂಜರಸ್ಯ ಚ ।
ರೋಗೈರ್ನಾನಾವಿಧೈರ್ಯಾನಿ ದೇಹದುಃಖಾನ್ಯನೇಕಧಾ ।
ತಾನಿ ಚ ಸ್ವಾತ್ಮವೇದ್ಯಾನಿ ಕಿಮನ್ಯತ್ಕಥಯಾಮ್ಯಹಂ ॥ ೮೩ ॥

ಏಕೋತ್ತರಂ ಮೃತ್ಯುಶತಮಸ್ಮಿನ್ದೇಹೇ ಪ್ರತಿಷ್ಠಿತಂ ।
ತತ್ರೈಕಃ ಕಾಲಸಂಯುಕ್ತಃ ಶೇಷಾಶ್ಚಾಗಂತವಃ ಸ್ಮೃತಾಃ ॥ ೮೪ ॥

ಯೇತ್ವಿಹಾಗಂತವಃ ಪ್ರೋಕ್ತಾಸ್ತೇ ಪ್ರಶಾಮ್ಯಂತಿ ಭೇಷಜೈಃ ।
ಜಪಹೋಮಪ್ರದಾನೈಶ್ಚ ಕಾಲಮೃತ್ಯುರ್ನ ಶಾಮ್ಯತಿ ॥ ೮೫ ॥

ಯದಿ ಚಾಪಿ ನ ಮೃತ್ಯುಃ ಸ್ಯಾದ್ವಿಷಮದ್ಯಾದಶಂಕಿತಃ ।
ನ ಸಂತಿ ಪುರುಷೇ ತಸ್ಮಾದಪಮೃತ್ಯುವಿಭೀತಯಃ ॥ ೮೬ ॥

ವಿವಿಧಾ ವ್ಯಾಧಯಃ ಶಸ್ತ್ರಂ ಸರ್ಪಾದ್ಯಾ ಪ್ರಾಣಿನಸ್ತಥಾ ।
ವಿಷಾಣಿ ಜಂಗಮಾದ್ಯಾನಿ ಮೃತ್ಯೋರ್ದ್ವಾರಾಣಿ ದೇಹಿನಾಂ ॥ ೮೭ ॥

---

೮೩. ಶರೀರವು ವಾತಾದಿ ಧಾತುಸಾಹಿತ್ಯದಿಂದ ವ್ಯಾಧಿ ಪಂಜರವಾಗಿದೆ. ಅನೇಕ ತರಹೆಯ ರೋಗಗಳಿಂದ ಹುಟ್ಟುವ ಬಹುವಿಧ ದುಃಖಗಳು ಸ್ವಾನುಭವೈಕವೇದ್ಯಗಳಾಗಿರುವಾಗ ಆ ವಿಷಯದಲ್ಲಿ ನಾನು ಏನನ್ನು ಹೇಳಲಿ?

೮೪. ಈ ಶರೀರದಲ್ಲಿ ನೂರೊಂದು ಬಗೆಯ ಮೃತ್ಯುಗಳು ಪ್ರತಿಷ್ಠಿತಗಳಾಗಿವೆ. ಅವುಗಳಲ್ಲಿ ಒಂದು ಮಾತ್ರ ಕಾಲಮೃತ್ಯು. ಉಳಿದವುಗಳು ಆಗಂತುಕಮೃತ್ಯುಗಳು.

೮೫. ಈ ಆಗಂತುಕಮೃತ್ಯುಗಳು ಔಷಧ, ಜಪ, ಹೋಮ ಮತ್ತು ದಾನ ಮೊದಲಾದ್ದರಿಂದ ಶಮನವಾಗುವುವು. ಕಾಲಮೃತ್ಯುವು ಇವು ಯಾವುದರಿಂದಲೂ ಶಾಂತವಾಗಲಾರದು.

೮೬. ಕಾಲಮೃತ್ಯುವು ಪ್ರಾಪ್ತವಾಗದೇ ಇದ್ದರೆ ನಿರ್ಭಯವಾಗಿ ವಿಷಪಾನಮಾಡಿದರೂ ಮೃತನಾಗಲಾರನು. ಆದ್ದರಿಂದ ಅಪಮೃತ್ಯುವು ಪುರುಷನಿಗೆ ಭಯಹೇತುವಲ್ಲ.

೮೭. ಪ್ರಾಣಿಗಳಿಗೆ ವಿವಿಧ ವ್ಯಾಧಿಗಳೂ, ಶಸ್ತ್ರಗಳೂ ಸಂಚರಿಸುವ ಸರ್ಪಾದಿವಿಷಜಂತುಗಳೂ ಮೃತ್ಯುವಿನ ದ್ವಾರಗಳಾಗಿವೆ.

**ಪೀಡಿತಂ ಸರ್ವರೋಗಾದ್ಯೈರಪಿ ಧನ್ವಂತರಿಃ ಸ್ವಯಂ ।**
**ಸ್ವಸ್ಥೀಕರ್ತುಂ ನ ಶಕ್ನೋತಿ ಪ್ರಾಪ್ತಮೃತ್ಯುಂ ಚ ದೇಹಿನಂ ॥ ೮೮ ॥**

**ನೌಷಧಂ ನ ತಪೋ ದಾನಂ ನ ಮಂತ್ರಾ ನ ಚ ಬಾಂಧವಾಃ ।**
**ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಂ ॥ ೮೯ ॥**

**ರಸಾಯನತಪೋಜಪ್ಯೈರ್ಯೋಗಸಿದ್ಧೈರ್ಮಹಾತ್ಮಭಿಃ ।**
**ಕಾಲಮೃತ್ಯುರಪಿ ಪ್ರಾಜ್ಞೈಃ ಸ್ತೀರ್ಯತೇ ನಾಲಸೈರ್ನರೈಃ ॥ ೯೦ ॥**

**ನಾಸ್ತಿ ಮೃತ್ಯುಸಮಂ ದುಃಖಂ ನಾಸ್ತಿಮೃತ್ಯು ಸಮಂ ಭಯಂ ।**
**ನಾಸ್ತಿ ಮೃತ್ಯುಸಮಸ್ತ್ರಾಸಃ ಸರ್ವೇಷಾಮೇವ ದೇಹಿನಾಂ ॥ ೯೧ ॥**

**ಸದ್ಭಾರ್ಯಾ ಪುತ್ರಮಿತ್ರಾಣಿ ರಾಜ್ಯೈಶ್ವರ್ಯಧನಾನಿ ಚ ।**
**ಅಬದ್ಧಾನಿ ಚ ವೈರಾಣಿ ಮೃತ್ಯುಃ ಸರ್ವಾಣಿ ಕೃಂತತಿ ॥ ೯೨ ॥**

---

೮೮. ಸರ್ವರೋಗಗಳಿಂದ ಪೀಡಿತನಾಗಿ ಕಾಲಮೃತ್ಯುವಶನಾದವನನ್ನು ಸಾಕ್ಷಾತ್ ಧನ್ವಂತರಿಯೂ ಬದುಕಿಸಲಾರನು.

೮೯. ಕಾಲಮೃತ್ಯುವಶನಾದವನನ್ನು ಔಷಧ, ತಪಸ್ಸು, ದಾನ, ಮಂತ್ರ ಇವಾಗಲಿ ಬಂಧುಗಳಾಗಲಿ ಬದುಕಿಸಲಾರರು.

೯೦. ಪ್ರಾಜ್ಞರಾದ ಮಹಾಪುರುಷರು ರಸಾಯನ, ತಪಸ್ಸು, ಮಂತ್ರ, ಜಪ, ಯೋಗಸಿದ್ಧಿ ಮೊದಲಾದುವುಗಳಿಂದ ಕಾಲಮೃತ್ಯುವನ್ನು ಜಯಿಸುವರು. ಆದರೆ ಅಲಸರಿಗೆ ಇದು ಅಸಾಧ್ಯವು.

೯೧. ಸರ್ವಪ್ರಾಣಿಗಳಿಗೂ ಕಾಲಮೃತ್ಯುಸಮಾನವಾದ ದುಃಖವೂ, ಭಯವೂ, ತ್ರಾಸವೂ ಇನ್ನಾವುದೂ ಇರುವುದಿಲ್ಲ.

೯೨. ಆ ಮೃತ್ಯುವು ಪುರುಷನ ಸದ್ಭಾರ್ಯೆ, ಪುತ್ರ, ಮಿತ್ರ, ರಾಜ್ಯ, ಐಶ್ವರ್ಯ, ಧನ, ನಿಷಿದ್ಧವೈರ ಇವೆಲ್ಲವನ್ನೂ ನಿರ್ಮೂಲಮಾಡುವುದು.

**ಹೇ ಜನಾಃ ಕಿಂ ನ ಪಶ್ಯಧ್ವಂ ಸಹಸ್ರಸ್ಯಾಪಿ ಮಧ್ಯತಃ ।**
**ಜನಾಃ ಶತಾಯುಷಃ ಪಂಚ ಭವಂತಿ ನ ಭವಂತಿ ಚ ॥ ೯೩ ॥**

**ಅಶೀತಿಕಾ ವಿಪದ್ಯಂತೇ ಕೇಚಿತ್ಸಪ್ತತಿಕಾ ನರಾಃ ।**
**ಪರಮಾಯುಷಂ ಸ್ಥಿತಂ ಷಷ್ಟಿಸ್ತಚ್ಚೈವಾನಿಶ್ಚಿತಂ ಪುನಃ ॥ ೯೪ ॥**

**ಯಸ್ಯ ಯಾವದ್ಧವೇದಾಯುರ್ದೇಹಿನಾಂ ಪೂರ್ವಕರ್ಮಭಿಃ ।**
**ತಸ್ಯಾರ್ಧಮಾಯುಷೋ ರಾತ್ರಿರ್ಹರತೇ ಮೃತ್ಯುರೂಪಿಣೀ ॥ ೯೫ ॥**

**ಬಾಲಭಾವೇನ ಮೋಹೇನ ವಾರ್ಧಕ್ಯೇ ಜರಯಾ ತಥಾ ।**
**ವರ್ಷಾಣಾಂ ವಿಂಶತಿರ್ಯಾತಿ ಧರ್ಮಕಾಮಾರ್ಥವರ್ಜಿತಾ ॥ ೯೬ ॥**

**ಆಗಂತುಕೈರ್ಭಯೈಃ ಪುಂಸಾಂ ವ್ಯಾಧಿಶೋಕೈರನೇಕಧಾ ।**
**ಭಕ್ಷ್ಯತೇರ್ಧಂ ಚ ತತ್ರಾಪಿ ಯಚ್ಛೇಷಂ ತಜ್ಜೀವತಿ ॥ ೯೭ ॥**

---

೯೩. ಎಲೈ ಮನುಜರೇ ! ಸಹಸ್ರಜನರಲ್ಲಿ ನೂರುವರ್ಷಪೂರ್ತ ಬದುಕುವವರು. ಐದು ಜನ ಇರಬಹುದು. ಇಲ್ಲದಿದ್ದರೂ ಇರಬಹುದು. ಈ ವಿಷಯವನ್ನು ನೀವು ಏತಕ್ಕೆ ಯೋಚಿಸುವುದಿಲ್ಲ ?

೯೪. ಕೆಲವರು ಎಂಭತ್ತು ವರ್ಷಕ್ಕೂ ಮತ್ತೆ ಕೆಲವರು ಎಪ್ಪತ್ತು ವಯಸ್ಸಿಗೂ ಮರಣ ಹೊಂದುವರು. ಪರಮಾಯುಸ್ಸು ಅರವತ್ತುವರ್ಷವೆಂದು ನಿರ್ಣೀತವಾದರೂ ಅಷ್ಟುದಿನ ಬದುಕುವುದೂ ಅನಿಶ್ಚಿತವಾಗಿದೆ.

೯೫. ಪೂರ್ವಕರ್ಮಾನುಸಾರವಾಗಿ ಯಾವನಿಗೆ ಎಷ್ಟು ಆಯುಸ್ಸುಎಂದು ನಿರ್ಣೀತವಾಗಿದೆಯೋ ಅವನ ಆ ಆಯುಸ್ಸಿನ ಅರ್ಧ ಭಾಗವನ್ನು ಮೃತ್ಯುರೂಪವಾದ ರಾತ್ರಿಯು ಅಪಹರಿಸುವುದು.

೯೬. ಮತ್ತು ಬಾಲ್ಯಭಾವದಲ್ಲಿ ಅವಿವೇಕದಿಂದಲೂ, ವಾರ್ಧಕ್ಯದಲ್ಲಿ ಜರೆಯಿಂದಲೂ ಇಪ್ಪತ್ತುವರ್ಷಗಳು ಧರ್ಮ, ಕಾಮ, ಅರ್ಥ ಈ ಪುರುಷಾರ್ಥಗಳಿಲ್ಲದೆ ವ್ಯರ್ಥವಾಗಿ ಕಳೆದುಹೋಗುವುದು.

೯೭. ಅದರಲ್ಲೂ ಅಕಸ್ಮಿಕವಾದ ಭಯದಿಂದಲೂ ಅನೇಕ ತರಹವಾದ ವ್ಯಾಧಿಗಳಿಂದಲೂ ಅರ್ಧಭಾಗದ ಜೀವಿತವು ಕಳೆಯುವುದು. ಉಳಿದ ಕಾಲವನ್ನು ಪುರುಷನು ಜನ್ಮಸಾರ್ಥಕತೆಗೆ ವಿನಿಯೋಗಿಸುವನು.

**ಜೀವಿತಾಂತೇ ಚ ಮರಣಂ ಮಹಾಘೋರಮವಾಪ್ನುಯಾತ್ ।**
**ಜಾಯತೇ ಜನ್ಮಕೋಟೀಷು ಮೃತಃ ಕರ್ಮವಶಾತ್ಪುನಃ ॥ ೯೮ ॥**

**ದೇಹಭೇದೇನ ಯಃ ಪುಂಸಾಂ ವಿಯೋಗಃ ಕರ್ಮಸಂಕ್ಷಯಾತ್ ।**
**ಮರಣಂ ತದ್ವಿನಿರ್ದಿಷ್ಟಂ ನಾನ್ಯಥಾ ಪರಮಾರ್ಥತಃ ॥ ೯೯ ॥**

**ಮಹಾತಪಪ್ರವಿಷ್ಟಸ್ಯ ಛಿದ್ಯಮಾನೇಷು ಮರ್ಮಸು ।**
**ಯದ್ದುಃಖಂ ಮರಣೇ ಜಂತೋರ್ನ ತಸ್ಯೇಹೋಪಮಾ ಕ್ವಚಿತ್ ॥೧೦೦॥**

**ಹಾ ತಾತ ಮಾತಃ ಕಾಂತೇತಿ ರುದನ್ನೇವಂ ಹಿ ದುಃಖಿತಃ ।**
**ಮಂಡೂಕ ಇವ ಸರ್ಪೇಣ ಗ್ರಸ್ಯತೇ ಮೃತ್ಯುನಾ ಜನಃ ॥ ೧೦೧ ॥**

**ಬಾಂಧವೈಃ ಸಂಪರಿಷ್ವಕ್ತೈಃ ಪ್ರಿಯೈಃ ಸಪರಿವಾರಿತಃ ।**
**ನಿಃಶ್ವಸನ್ ದೀರ್ಘಮುಷ್ಣಂ ಚ ಮುಖೇನ ಪರಿಶುಷ್ಯತಿ ॥ ೧೦೨ ॥**

---

೯೮. ಜೀವಿತಾವಸಾನದಲ್ಲಿ ಮಹಾಘೋರವಾದ ಮರಣವನ್ನು ಹೊಂದುವನು. ಆ ಮೃತನೇ ಪುನಃ ಕರ್ಮವಶನಾಗಿ ಕೋಟಿಜನ್ಮಗಳನ್ನು ಪಡೆಯುವನು.

೯೯. ಪ್ರಾರಬ್ಧಕರ್ಮನಾಶದಿಂದ ಪೂರ್ವಶರೀರದ ಪರಿತ್ಯಾಗವೇ ಮರಣವೆನಿಸುವುದು. ಪರಮಾರ್ಥತಃ ಆತ್ಮನಿಗೆ ಮರಣವಿಲ್ಲ.

೧೦೦. ಮರಣಕಾಲದಲ್ಲಿ ಮರ್ಮಸ್ಥಾನಭೇದನದಿಂದ ಸಂತಪ್ತವಾದ ಪ್ರಾಣಿಗೆ ಸಂಭವಿಸುವ ದುಃಖಕ್ಕೆ ಸಾದೃಶ್ಯವು ಈ ಜಗತ್ತಿನಲ್ಲಿ ಎಲ್ಲೂ ಯಾವ ಬಗೆಯಲ್ಲೂ ದೊರೆಯುವುದಿಲ್ಲ.

೧೦೧. ದುಃಖಪೀಡಿತನಾದ ಪುರುಷನು ಹಾ ತಾತಾ! ಮಾತೆ! ಕಾಂತೇ! ಎಂದು ಪ್ರಲಾಪಿಸುತ್ತಾ ಸರ್ಪದಿಂದ ನುಂಗಲ್ಪಡುವ ಕಪ್ಪೆಯಂತೆ ಮೃತ್ಯುವಿನಿಂದ ನುಂಗಲ್ಪಡುವನು.

೧೦೨–೧೦೩. ಮರಣಕಾಲದಲ್ಲಿ ಪುರುಷನು ಬಂಧುಗಳಿಂದಲೂ ಮಿತ್ರರಿಂದಲೂ ಪರಿವೃತನಾಗಿ ಉಷ್ಣವಾದ ದೀರ್ಘಶ್ವಾಸವನ್ನು ಬಿಡುತ್ತಾ ಬಾಡಿದ ಮುಖವುಳ್ಳವನಾಗಿಯೂ ಹಾ, ತಾತ ಇತ್ಯಾದಿಯಾಗಿ ಕೂಗುವನು. ಮಂಚ

ಕ್ರಂದತೇ ಚೈವ ಖಟ್ವಾಯಾಂ ಪರಿವರ್ತನ್ಮುಹುರ್ಮುಹುಃ ।
ಸಂಮೂಢಃ ಕ್ಷಿಪತೇsತ್ಯರ್ಥಂ ಹಸ್ತಪಾದಾವಿತಸ್ತತಃ ॥ ೧೦೩ ॥

ಖಟ್ವಾತೋ ಕಾಂಕ್ಷತೇ ಭೂಮಿಂ ಭೂಮೇಃ ಖಟ್ವಾಂ ಪುನರ್ಮಹೀಂ ।
ವಿವಶಸ್ತ್ಯಕ್ತಲಜ್ಜಶ್ಚ ಮೂತ್ರವಿಷ್ಠಾನುಲೇಪಿತಃ ॥ ೧೦೪ ॥

ಯಾಚಮಾನಶ್ಚ ಸಲಿಲಂ ಶುಷ್ಕಕಂಠೋಷ್ಠತಾಲುಕಃ ।
ಚಿಂತಯಾನಶ್ಚ ವಿತ್ತಾನಿ ಕಸ್ಯೈತಾನಿ ಮೃತೇ ಮಯಿ ॥ ೧೦೫ ॥

ಪಂಚಾವಟಾನ್ಖನ್ಯಮಾನಃ ಕಾಲಪಾಶೇನ ಕರ್ಷಿತಃ ।
ಮ್ರಿಯತೇ ಪಶ್ಯತಾಮೇವ ಜನಾನಾಂ ಘುರ್ಘುರಸ್ವನಃ ॥ ೧೦೬ ॥

ಜೀವಸ್ತೃಣಜಲೌಕೇವ ದೇಹಾದ್ದೇಹಂ ವಿಶೇತ್ಕ್ರಮಾತ್ ।
ಸಂಪ್ರಾಪ್ಯೋತ್ತರಕಾಯಂ ಹಿ ದೇಹಂ ತ್ಯಜತಿ ಪೌರ್ವಕಂ ॥ ೧೦೭ ॥

---

ದಲ್ಲಿ ಮಲಗಿದ್ದರೂ ಜ್ಞಾನವಿಲ್ಲದೆ ಹಸ್ತಪಾದಾದಿಗಳನ್ನು ಅತ್ತಿತ್ತ ಬಹಳವಾಗಿ ಎಸೆಯುವನು. ಮಂಚದಿಂದ ಭೂಮಿಯನ್ನೂ, ಭೂಮಿಯಿಂದ ಮಂಚವನ್ನೂ, ತಿರುಗಿ ಭೂಮಿಯನ್ನು ಆಶ್ರಯಿಸಲು ಅಪೇಕ್ಷಿಸುವನು.

೧೦೪. ವಿವಶತೆಯಿಂದ ವಸ್ತ್ರವಿಹೀನನಾಗಿ ಲಜ್ಜೆಗೆಟ್ಟು ಮಲಮೂತ್ರಾದಿಗಳಿಂದ ಲಿಪ್ತದೇಹನಾಗಿ ಬಾಯಾರಿಕೆಯಿಂದ ನೀರನ್ನು ಬೇಡುವನು.

೧೦೫-೧೦೬. ನಾನು ಸತ್ತಮೇಲೆ ಈ ಧನವು ಯಾರಿಗೂ ಸಿಕ್ಕದಿರಲಿ ಎಂದು ಯೋಚಿಸಿ ವಿಸ್ತಾರವಾದ ಗುಳಿಗೆಗಳನ್ನು ಅಗೆಯಿಸುತ್ತಿರುವಾಗಲೇ ಕಾಲಪಾಶಬದ್ಧನಾಗಿ ಎಲ್ಲರೂ ನೋಡುತ್ತಿರುವಂತೆಯೇ ಘುರ್, ಘುರ್ ಎಂಬ ಶಬ್ದವನ್ನು ಮಾಡುತ್ತಾ ಮರಣವನ್ನು ಹೊಂದುವನು.

೧೦೭. ಉತ್ಕ್ರಮಣಕಾಲದಲ್ಲಿ ಜೀವನು, ತೃಣಾಶ್ರಿತವಾದ ಜಲೂಕಾ (ಜಿಗಣೆ) ಎಂಬ ಕೀಟ ವಿಶೇಷದಂತೆ ಭಾವನಾದ್ವಾರಾ ಮುಂದಿನ ದೇಹವನ್ನು ಹೊಂದಿಯೇ ಪೂರ್ವದೇಹವನ್ನು ಬಿಡುವನು.

ಮರಣಾತ್ಪ್ರಾರ್ಥನಾದುಃಖಮಧಿಕಂ ಹಿ ವಿವೇಕಿನಃ ।
ಕ್ಷಣಿಕಂ ಮರಣಾದ್ದುಃಖಮನಂತಂ ಪ್ರಾರ್ಥನಾಕೃತಂ ॥ ೧೦೮ ॥

ಜಗತಾಂ ಪತಿರರ್ಥಿತ್ವಾದ್ವಿಷ್ಣುರ್ವಾಮನತಾಂ ಗತಃ ।
ಅಧಿಕಃ ಕೋऽಪರಸ್ತಸ್ಮಾದ್ಯೋ ನ ಯಾಸ್ಯತಿ ಲಾಘವಂ ॥ ೧೦೯ ॥

ಜ್ಞಾತಂ ಮಯೇದಮಧುನಾ ಮತಂ ಭವತಿ ಯದ್ಗುರು ।
ನ ಪರಂ ಪ್ರಾರ್ಥಯೇದ್ಭೂಯಸ್ತೃಷ್ಣಾ ಲಾಘವಕಾರಣಂ ॥ ೧೧೦ ॥

ಆದೌ ದುಃಖಂ ತಥಾ ಮಧ್ಯೇ ದುಃಖಮಂತೇ ಚ ದಾರುಣಂ ।
ನಿಸರ್ಗಾತ್ಸರ್ವಭೂತಾನಾಮಿತಿ ದುಃಖಪರಂಪರಾ ॥ ೧೧೧ ॥

ವರ್ತಮಾನಾನ್ಯತೀತಾನಿ ದುಃಖಾನ್ಯೇತಾನಿ ಯಾನಿ ತು ।
ನರಾ ನ ಭಾವಯಂತ್ಯಜ್ಞಾ ನ ವಿರಜ್ಯಂತಿ ತೇನ ತೇ ॥ ೧೧೨ ॥

---

೧೦೮. ವಿವೇಕಿಗೆ ಮರಣದುಃಖಕ್ಕಿಂತಲೂ ಯಾಚನಾದುಃಖವು ಅತ್ಯಂತ ಅಧಿಕವಾಗಿರುತ್ತದೆ. ಮರಣದುಃಖವು ಕ್ಷಣಿಕವು. ಪ್ರಾರ್ಥನಾದುಃಖವಾದರೋ ನಿರಂತರವಾದುದು.

೧೦೯. ಜಗದೀಶ್ವರನಾದ ಶ್ರೀಮಹಾವಿಷ್ಣುವು ಅರ್ಥಿತ್ವದಿಂದ ವಾಮನನಾದನು. ಯಾಚನೆಯಿಂದ ಬರುವ ಲಾಘವಕ್ಕಿಂತ ಅಧಿಕವಾದ ದುಃಖವು ಇನ್ನಾವುದಿದೆ.

೧೧೦. "ಗೌರವಾಭಿಲಾಷಿಯಾದವನು ಪರರನ್ನು ಪ್ರಾರ್ಥಿಸಬಾರದು" ಎಂಬುದು ಈಗ ನನಗೆ ತಿಳಿಯಿತು. ತೃಷ್ಣೆಯ ನಿಮಿತ್ತಕವಾದ ಯಾಚನೆಯು ಲಾಘವ ಹೇತುವು.

೧೧೧-೧೧೨. ಸರ್ವಪ್ರಾಣಿಗಳಿಗೂ ಆದಿಮಧ್ಯಾವಸಾನಗಳಲ್ಲಿ ಭಯಂಕರವಾದ ದುಃಖಪರಂಪರೆಯು ಸ್ವಭಾವತಃ ಇರುವುದು. ಅಜ್ಞರಾದ ಜನರು ವರ್ತಮಾನವೂ ಅತೀತವೂ ಆದ ದುಃಖಗಳನ್ನು ಯೋಚಿಸದೆ ಇರುವುದರಿಂದ ವೈರಾಗ್ಯಹೊಂದುವುದಿಲ್ಲ.

ಅತ್ಯಾಹಾರಾನ್ಮಹದ್ದುಃಖಮನಾಹಾರಾನ್ಮಹತ್ತಮಂ ।
ತುಲಿತಂ ಜೀವಿತಂ ಕಷ್ಟಂ ಮನುಷ್ಯಸ್ಯೇವಂ ಕುತಃ ಸುಖಂ ॥ ೧೧೩ ॥

ಬುಭುಕ್ಷಾ ಸರ್ವರೋಗಾಣಾಂ ವ್ಯಾಧಿಃ ಶ್ರೇಷ್ಠತಮಃ ಸ್ಮೃತಃ ।
ಸ ಚಾನ್ನೌಷಧಿಲೇಪೇನ ಕ್ಷಣಮಾತ್ರಂ ಪ್ರಶಾಮ್ಯತಿ ॥ ೧೧೪ ॥

ಕ್ಷುದ್ವ್ಯಾಧಿವೇದನಾತುಲ್ಯಾ ನಿಶ್ಶೇಷಬಲಕರ್ತನೀ ।
ತಯಾಭಿಭೂತೋ ಮ್ರಿಯತೇ ಯಥಾನ್ಯೈರ್ವ್ಯಾಧಿಭಿರ್ನ ಹಿ ॥ ೧೧೫ ॥

ತದ್ರಸೋಽಪಿ ಹಿ ಕಾಮಾದ್ವಾ ಜಿಹ್ವಾಗ್ರೇ ಪರಿವರ್ತತೇ ।
ತತ್ಕ್ಷಣಾದ್ವಾರ್ಧಕಾಲೇನ ಕಂಠಂ ಪ್ರಾಪ್ಯ ನಿವರ್ತತೇ ॥ ೧೧೬ ॥

ಇತಿ ಕ್ಷುದ್ವ್ಯಾಧಿತಪ್ತಾನಾಮನ್ನಮೌಷಧವತ್ಸ್ಮೃತಂ ।
ನ ತತ್ಸುಖಾಯ ಮಂತವ್ಯಂ ಪರಮಾರ್ಥೇನ ಪಂಡಿತೈಃ ॥ ೧೧೭ ॥

---

೧೧೩. ಅತ್ಯಾಹಾರದಿಂದ ಮಹಾದುಃಖವು. ನಿರಾಹಾರದಿಂದ ಮಹತ್ತರವಾದ ದುಃಖವು. ಆದುದರಿಂದ ಜೀವಿತವೇ ದುಃಖಮಯವೂ ಕಷ್ಟದಾಯಕವೂ ಆಗಿದೆ. ಸುಖಲಾಭವು ಎಲ್ಲಿಯದು?

೧೧೪. ಹಸಿವೆಯು ಸರ್ವರೋಗಗಳಲ್ಲಿ ಪ್ರಬಲವಾದ ರೋಗವು. ಈ ರೋಗವು ಅನ್ನವೆಂಬ ಔಷಧಿ ಲೇಪದಿಂದ ಕ್ಷಣಮಾತ್ರದಲ್ಲಿ ಶಾಂತವಾಗುವುದು.

೧೧೫. ಅಸದೃಶವಾದ ಕ್ಷುಧ್ವ್ಯಾಧಿವೇದನೆಯು ಸಮಸ್ತ ಸಾಮರ್ಥ್ಯವನ್ನೂ ಹಾಳುಮಾಡುವುದು. ಈ ವ್ಯಾಧಿಯಿಂದ ಮರಣ ಹೊಂದುವ ಹಾಗೆ ಅನ್ಯ ವ್ಯಾಧಿಗಳಿಂದ ಸಾಯುವುದಿಲ್ಲ.

೧೧೬–೧೧೭. ಅನ್ನರಸವು ಕಾಮನಾದ್ವಾರಾ ಜಿಹ್ವಾಗ್ರದಲ್ಲಿ ಪರಿವರ್ತಿತವಾದರೆ, ಕಂಠಗತವಾಗಿದ್ದ ಪ್ರಾಣವು ಪುನಃ ನಿವೃತ್ತವಾಗಿ ಸ್ವಸ್ಥಾನವನ್ನು ಹೊಂದುವುದು. ಆದ್ದರಿಂದ ಕ್ಷುಧ್ವ್ಯಾಧಿಸಂತಪ್ತರಾದವರಿಗೆ ಅನ್ನವು ಔಷಧ ಸಮಾನವು. ಪಂಡಿತರು ಈ ಅನ್ನವನ್ನು ಪರಮಾರ್ಥತಃ ಸುಖಹೇತುವೆಂದು ತಿಳಿಯಬಾರದು.

ಮೃತೋಪಮೋ ಯಶ್ಚೇಕ್ಷೇತ ಸರ್ವಕಾರ್ಯವಿವರ್ಜಿತಃ ।
ತತ್ರಾಪಿ ಚ ಕುತಃ ಸೌಖ್ಯಂ ತಮಸಾಚ್ಛಾದಿತಾತ್ಮನಃ ॥ ೧೧೮ ॥

ಪ್ರಬೋಧೋಽಪಿ ಕುತಃ ಸೌಖ್ಯಂ ಕಾರ್ಯೈರುಪಹತಾತ್ಮನಃ ।
ಕೃಷಿಗೋರಕ್ಷವಾಣಿಜ್ಯ ಸೇವಾಧ್ವಾದಿಪರಿಶ್ರಮೈಃ ॥ ೧೧೯ ॥

ಪ್ರಾತರ್ಮೂತ್ರಪುರೀಷಾಭ್ಯಾಂ ಮಧ್ಯಾಹ್ನೇ ತು ಬುಭುಕ್ಷಯಾ ।
ತೃಪ್ತಾಃ ಕಾಮೇನ ಬಾಧ್ಯಂತೇ ಜಂತವೋಽಪಿ ವಿನಿದ್ರಯಾ ॥ ೧೨೦ ॥

ಅರ್ಥಸ್ಯೋಪಾರ್ಜನೇ ದುಃಖಮಾರ್ಜಿತಸ್ಯಾಪಿ ರಕ್ಷಣೇ ।
ಆಯೇ ದುಃಖಂ ವ್ಯಯೇ ದುಃಖಮರ್ಥೇಭ್ಯಶ್ಚ ಕುತಃ ಸುಖಂ ॥ ೧೨೧ ॥

ಚೌರೇಭ್ಯಃ ಸಲಿಲಾದಗ್ನೇಃ ಸ್ವಜನಾತ್ಪಾರ್ಥಿವಾದಪಿ ।
ಭಯಮರ್ಥವತಾಂ ನಿತ್ಯಂ ಮೃತ್ಯೋಃ ಪ್ರಾಣಭೃತಾಮಿವ ॥ ೧೨೨ ॥

---

೧೧೮. ಸರ್ವಕಾರ್ಯವಿವರ್ಜಿತನಾಗಿ ಮೃತತುಲ್ಯನಾಗಿ ಕಾಣುತ್ತಿರುವವನು ಮೋಹಾಚ್ಛಾದಿತನಾದುದರಿಂದ ಸೌಖ್ಯಕ್ಕೆ ಎಲ್ಲಿಂದ ಅವಕಾಶವು.

೧೧೯. ಕೃಷಿ, ಗೋರಕ್ಷಣ, ವಾಣಿಜ್ಯ, ಸೇವಾ, ದಾರಿ ನಡೆವುದು ಮೊದಲಾದ ಕಾರ್ಯಗಳಿಂದ ಶ್ರಮವನ್ನು ಹೊಂದಿದವನಿಗೆ ಜಾಗ್ರದವಸ್ಥೆಯಲ್ಲಿ ತಾನೇ ಸೌಖ್ಯವು ಹೇಗೆ ಲಭಿಸುವುದು.

೧೨೦. ಜಂತುಗಳು ಪ್ರಾತಃಕಾಲದಲ್ಲಿ ಮಲಮೂತ್ರಾದಿ ಬಾಧೆಗಳಿಂದಲೂ ಮಧ್ಯಾಹ್ನದಲ್ಲಿ ಹಸಿವಿನಿಂದಲೂ ಪರಿವೃತರಾದ ಮೇಲೆ ರಾತ್ರಿಯಲ್ಲಿ ಕಾಮದಿಂದ ಪೀಡಿತರಾಗಿ ನಿದ್ರೆ ಇಲ್ಲದೆ ಬಾಧೆಯನ್ನು ಅನುಭವಿಸುವರು.

೧೨೧. ದ್ರವ್ಯಾರ್ಜನೆಯಲ್ಲೂ, ಅರ್ಜಿತದ್ರವ್ಯದ ರಕ್ಷಣೆಯಲ್ಲೂ, ಆದಾಯದಲ್ಲೂ, ವ್ಯಯದಲ್ಲೂ, ದುಃಖವೇ ಇರುವುದರಿಂದ ದ್ರವ್ಯವು ಹೇಗೆತಾನೆ ಸುಖ ಹೇತುವಾಗುವುದು ?

೧೨೨. ಪ್ರಾಣಿಗಳಿಗೆ ಯಮನಿಂದ ಭೀತಿಯು ಸಹಾ ಇರುವಂತೆ ಧನಿಕರಿಗೆ ಕಳ್ಳರಿಂದಲೂ ನೀರಿನಿಂದಲೂ ಅಗ್ನಿಯಿಂದಲೂ ಸ್ವಜನರಿಂದಲೂ ರಾಜನಿಂದಲೂ ಸದಾ ಭಯವಿರುತ್ತದೆ.

ಖೇಯಾತಂ ಪಕ್ಷಿಭಿರ್ಮಾಂಸಂ ಭಕ್ಷ್ಯತೇ ಶ್ವಾಪದೈರ್ಭುವಿ ।
ಜಲೇ ಚ ಭಕ್ಷ್ಯತೇ ಮತ್ಸ್ಯೈಸ್ತಥಾ ಸರ್ವತ್ರ ವಿತ್ತವಾನ್ ॥ ೧೨೩ ॥

ವಿಮೋಹಯಂತಿ ಸಂಪತ್ಸು ತಾಪಯಂತಿ ವಿಪತ್ತಿಷು ।
ಖೇದಯಂತ್ಯರ್ಜನಾಕಾಲೇ ಕದಾ ಹ್ಯರ್ಥಾಃ ಸುಖಾವಹಾಃ ॥ ೧೨೪ ॥

ಯಥಾರ್ಥಪತಿರುದ್ವಿಗ್ನೋ ಯಶ್ಚ ಸರ್ವಾರ್ಥನಿಃಸ್ಪೃಹಃ ।
ಯತಶ್ಚಾರ್ಥಪತಿರ್ದುಃಖೀ ಸುಖೀ ಸರ್ವಾರ್ಥನಿಃಸ್ಪೃಹಃ ॥ ೧೨೫ ॥

ಶೀತೇನ ದುಃಖಂ ಹೇಮಂತೇ ಗ್ರೀಷ್ಮೇ ತಾಪೇನ ದಾರುಣಂ ।
ವರ್ಷಾಸು ವಾತವರ್ಷಾಭ್ಯಾಂ ಕಾಲೇऽಪ್ಯೇವಂ ಕುತಃ ಸುಖಂ ॥ ೧೨೬ ॥

---

೧೨೩. ಮಾಂಸವು ಆಕಾಶದಲ್ಲಿ ಪಕ್ಷಿಗಳಿಂದಲೂ, ಭೂಮಿಯಲ್ಲಿ ದುಷ್ಟ ಮೃಗಗಳಿಂದಲೂ, ನೀರಿನಲ್ಲಿ ಮೀನುಗಳಿಂದಲೂ, ಭಕ್ಷಿಸಲ್ಪಡುವುದರಿಂದ ಎಲ್ಲಾ ಕಡೆಯಲ್ಲೂ ಹೇಗೆ ಅದು ವಿಪತ್ತುಳ್ಳದ್ದೋ ಹಾಗೆಯೇ ಧನಿಕನ ಸಂಪತ್ತು ಸರ್ವತ್ರ ವಿಪದ್ಗ್ರಸ್ತವಾದುದಾಗಿದೆ.

೧೨೪. ಸಂಪತ್ತು ಹೆಚ್ಚಿದಾಗ ಮೋಹವನ್ನೂ ನಾಶವಾದಾಗ ತಾಪವನ್ನೂ ಆರ್ಜನವೇಳೆಯಲ್ಲಿ ಖೇದವನ್ನೂ ಹುಟ್ಟಿಸುವುದರಿಂದ ಹಣವು ಯಾವಾಗಲೂ ಸುಖದಾಯಕವಲ್ಲ.

೧೨೫. ಧನಿಕನಿಗೇ ಆತಂಕ ಹೆಚ್ಚು. ನಿಃಸ್ಪೃಹನು ಅಷ್ಟು ವ್ಯಾಕುಲನಾಗಿರುವುದಿಲ್ಲ. ಧನಿಕನು ದುಃಖಿಯಾಗುವಷ್ಟು ನಿಸ್ಪೃಹನು ದುಃಖಿಯಾಗಲಾರನು.

೧೨೬. ಹೇಮಂತಋತುವಿನಲ್ಲಿ ಶೈತ್ಯದಿಂದ ದುಃಖ. ಗ್ರೀಷ್ಮಋತುವಿನಲ್ಲಿ ತಾಪದಿಂದ ದುಃಖ. ವರ್ಷಋತುವಿನಲ್ಲಿ ಮಳೆಗಾಳಿಗಳಿಂದ ದುಃಖ. ಹೀಗೆ ವರ್ಷದ ಯಾವ ಕಾಲದಲ್ಲೂ ಸುಖವು ಲಭಿಸಲಾರದು.

ವಿವಾಹವಿಸ್ತರೇ ದುಃಖಂ ತದ್ಗರ್ಭೋದ್ವಹನೇ ಪುನಃ ।
ಪ್ರಸವೇsಪತ್ಯದೋಷೈಶ್ಚ ದುಃಖಂ ದುಃಖಾದಿಕರ್ಮಭಿಃ ॥ ೧೨೭ ॥

ದಂತಾಕ್ಷಿರೋಗೈಃ ಪುತ್ರಸ್ಯ ಹಾ ಕಷ್ಟಂ ಕಿಂ ಕರೋಮ್ಯಹಂ ।
ಗಾವೋ ನಷ್ಟಾಃ ಕೃಷಿರ್ಭಗ್ನಾ ವೃಷಾಃ ಕ್ವಾಪಿ ಪಲಾಯಿತಾಃ ॥ ೧೨೮ ॥

ಅಮೀ ಪ್ರಾಘೂರ್ಣಿಕಾಃ ಪ್ರಾಪ್ತಾ ಭಕ್ತಚ್ಛೇದೇ ಚ ಮೇ ಗೃಹೇ ।
ಬಾಲಾಪತ್ಯಾ ಚ ಮೇ ಭಾರ್ಯಾ ಕಃ ಕರಿಷ್ಯತಿ ರಂಧನಂ ॥ ೧೨೯ ॥

ಪ್ರದಾನಕಾಲೇ ಕನ್ಯಾಯಾಃ ಕೀದೃಶಶ್ಚ ವರೋ ಭವೇತ್ ।
ಇತಿ ಚಿಂತಾಭಿಭೂತಾನಾಂ ಕುತಃ ಸೌಖ್ಯಂ ಕುಟುಂಬಿನಾಂ ॥ ೧೩೦ ॥

---

೧೨೭. ವಿವಾಹಕಾಲದಲ್ಲಿ ತತ್ಸಾಮಗ್ರ್ಯಾದಿ ಸಂಪಾದನಾ ದುಃಖವೂ, ಆಮೇಲೆ ಗರ್ಭೋತ್ಪತ್ತಿಯಾದಾಗ ತದ್ಧಾರಣ ದುಃಖವೂ, ಅನಂತರದಲ್ಲಿ ಪ್ರಸವ ದುಃಖವೂ ಇರುತ್ತದೆ.

೧೨೮–೧೨೯. ಆಮೇಲೆ ಶಿಶುವಿನ ರೋದನಾದಿ ದೋಷಗಳಿಂದ ದುಃಖವು ಆಗುತ್ತದೆ. ಸಂಸಾರಿಯು ಪುತ್ರನಿಗೆ ದಂತರೋಗ, ಅಕ್ಷಿರೋಗ ಮೊದಲಾದ ರೋಗಗಳು ಸಂಭವಿಸಿದಾಗ " ಅಯ್ಯೋ ಕಷ್ಟ ! ನಾನೇನು ಮಾಡಲಿ " ಎಂದು ಪ್ರಲಪಿಸುವನು. " ನನ್ನ ಗೋವುಗಳು ನಾಶವಾದುವು ಕೃಷಿಯು ನಾಶ ವಾಯಿತು. ಮತ್ತು ವೃಷಭಗಳು ಎಲ್ಲೋ ಓಡಿಹೋದುವು.

೧೩೦. " ನಮ್ಮ ಅನ್ನವನ್ನು ಅಪಹರಿಸಲು ಕಳ್ಳರು ಮನೆಗೆ ನುಗ್ಗಿರು ತ್ತಾರೆ. ನನ್ನ ಪತ್ನಿಯು ಎಳೆಮಗುವಿನ ತಾಯಿ, ಮುಂದೆ ನಮಗೆ ಅಡಿಗೆ ಪಾಕಮಾಡುವವರು ಯಾರು ಮುಂದೆ ನನ್ನ ಕನ್ನಿಕೆಗೆ ಕನ್ಯಾದಾನ ಕಾಲದಲ್ಲಿ ಎಂತಹ ವರನು ಸಿಗುವನೋ ? " ಈ ತರಹವಾದ ನಾನಾ ಬಗೆಯ ಚಿಂತೆಗಳಿಂದ ಆಕ್ರಾಂತರಾದ ಸಂಸಾರಿಗಳಿಗೆ ಸೌಖ್ಯವೆಲ್ಲಿಂದ ಬರುವುದು ?

ಕುಟುಂಬಚಿಂತಾಕುಲಿತಸ್ಯ ಪುಂಸಃ ।
ಶ್ರುತಂ ಚ ಶೀಲಂ ಚ ಗುಣಾಶ್ಚ ಸರ್ವೇ ।
ಅಪಕ್ವಕುಂಭೇ ನಿಹಿತಾ ಇವಾಪಃ ।
ಪ್ರಯಾಂತಿ ದೇಹೇನ ಸಮಂ ವಿನಾಶಂ ॥ ೧೩೦ ॥

ರಾಜ್ಯೇಪಿ ಚ ಮಹದ್ದುಃಖಂ ಸಂಧಿವಿಗ್ರಹಚಿಂತಯಾ ।
ಪುತ್ರಾದಪಿ ಭಯಂ ಯತ್ರ ತತ್ರ ಸೌಖ್ಯಂ ಹಿ ಕೀದೃಶಂ ॥ ೧೩೨ ॥

ಸಜಾತೀಯಾದ್ವಧಃ ಪ್ರಾಯಃ ಸರ್ವೇಷಾಮೇವ ದೇಹಿನಾಂ ।
ಏಕದ್ರವ್ಯಾಭಿಲಾಷಿತ್ವಾಚ್ಛುನಾಮಿವ ಪರಸ್ಪರಂ ॥ ೧೩೩ ॥

ನಾಪ್ರಧೃಷ್ಯಬಲಃ ಕಶ್ಚಿನ್ನೃಪಃ ಖ್ಯಾತೋಸ್ತಿ ಭೂತಲೇ ।
ನಿಖಿಲಂ ಯಸ್ತಿರಸ್ಕೃತ್ಯ ಸುಖಂ ತಿಷ್ಠತಿ ನಿರ್ಭಯಃ ॥ ೧೩೪ ॥

---

೧೩೧. ಕುಟುಂಬ ಚಿಂತಾಕ್ರಾಂತನಾದ ಸಂಸಾರಿಯ ಶಾಸ್ತ್ರಶ್ರವಣವೂ ಆಚಾರವೂ, ಎಲ್ಲಾ ಗುಣಗಳೂ, ಹಸಿಯ ಮಡಕೆಯಲ್ಲಿಟ್ಟ ನೀರಿನಂತೆ ದೇಹದ ಜತೆಯಲ್ಲಿಯೇ ನಾಶವಾಗುವುವು.

೧೩೨. ರಾಜ್ಯಾಧಿಪತ್ಯ ಸಂಧಿ, ವಿಗ್ರಹ ಮೊದಲಾದ ರಾಜ್ಯಾಂಗಗಳ ಯೋಚನೆಯಿಂದ ಮನಸ್ಸಿಗೆ ಮಹಾದುಃಖದಾಯಕವು ಸಂಸಾರದಲ್ಲಿ ಕದಾಚಿತ್ ಸ್ವಂತ ಪುತ್ರನಿಂದಲೇ ಭಯವಿರುವುದು. ಇನ್ನು ಬಾಳಿನಲ್ಲಿ ಏನು ಸುಖವಿದೆ.

೧೩೩. ಏಕ ದ್ರವ್ಯಾಭಿಲಾಷಿಗಳಾದ ಶುನಕಗಳಿಗೆ ಸ್ವಜಾತೀಯಪ್ರಾಣಿಗಳಿಂದಲೇ ಹೇಗೆ ಕೆಡುಕೋ ಹಾಗೆಯೇ ಏಕದ್ರವ್ಯಾಭಿಲಾಷಿಗಳಾದ ದೇಹಿಗಳಿಗೂ ಪ್ರಾಯಶಃ ಸ್ವಜಾತೀಯರಿಂದಲೇ ಮೃತ್ಯುವು ಸಂಭವಿಸುವುದು.

೧೯೪. ಭೂತಲದಲ್ಲಿ ಇತರ ರಾಜರುಗಳೆಲ್ಲರನ್ನೂ ಗೆದ್ದು ತಾನು ಅಜೇಯನಾಗಿಯೂ ನಿರ್ಭಯನಾಗಿಯೂ ಸುಖವಾಗಿಯೂ ಆಳಿ ಪ್ರಸಿದ್ಧನಾದ ರಾಜನು ಒಬ್ಬನೂ ಇಲ್ಲ.

ಆ ಜನ್ಮನಃ ಪ್ರಭೃತಿ ದುಃಖಮಯಂ ಶರೀರಂ ।
ಕರ್ಮಾತ್ಮಕಂ ತವ ಮಯಾ ಕಥಿತಂ ನರೇಂದ್ರ ।
ದಾನೋಪವಾಸನಿಯಮೈಶ್ಚ ಕೃತೈಸ್ತದೇವ ।
ಸರ್ವೋಪಭೋಗಸುಖಭಾಗ್ಭವತೀಹ ಪುಂಸಾಂ ॥ ೧೩೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸಂಸಾರದೋಷಾಖ್ಯಾನಂ ನಾಮ ಚತುರ್ಥೋಽಧ್ಯಾಯಃ.



---

೧೩೫. ಎಲೈ ಮಹಾರಾಜನೇ ! ಹುಟ್ಟಿದಂದಿನಿಂದ ದುಃಖದಾಯಕವೂ ಕರ್ಮಾರಬ್ಧವೂ ಆಗಿರುವ ಈ ಶರೀರದ ಸ್ವರೂಪವನ್ನು ನಿನಗೆ ನಿರೂಪಿಸಿರುವೆನು. ಇದೇ ಶರೀರವು ದಾನ, ಉಪವಾಸ, ನಿಯಾಮಾದ್ಯನುಷ್ಠಾನದಿಂದ ಪುರುಷರಿಗೆ ಸರ್ವಸುಖವೂ ಪುಲಸಿದ್ಧಿಪ್ರದಾಯಕವೂ ಆಗುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಸಂಸಾರದೋಷ ನಿರೂಪಣೆ ಎಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಅಧೋಽಧಃ ಪತನಂ ಪುಂಸಾಮಧಃ ಕರ್ಮಪ್ರಕೀರ್ತಿತಂ ।
ನರಕಾರ್ಣವಘೋರೇಷು ಯಾತನಾ ಪಾಪಮುಚ್ಯತೇ ॥ ೧ ॥

ಅಧರ್ಮಭೇದಾ ವಿಜ್ಞೇಯಾಶ್ಚಿತ್ತವೃತ್ತಿಪ್ರಭೇದತಃ ।
ಸ್ಥೂಲಾಃ ಸೂಕ್ಷ್ಮಾಃ ಸುಸೂಕ್ಷ್ಮಾಶ್ಚ ಕೋಟಿಭೇದೈರನೇಕಧಾ ॥ ೨ ॥

ತತ್ರ ಯೇ ಪಾಪನಿಚಯಾಃ ಸ್ಥೂಲಾ ನರಕಹೇತವಃ ।
ತೇ ಸಮಾಸೇನ ಕಥ್ಯಂತೇ ಮನೋವಾಕ್ಕಾಯಸಾಧನಾಃ ॥ ೩ ॥

---

### ಐದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಪುರುಷರಿಗೆ ಅವರ ಅಕ್ರಮದಿಂದ ಅಧಃಪತನವಾಗುವುದು ಸಿದ್ಧವು. ಘೋರವಾದ ನರಕಾರ್ಣವಗಳಲ್ಲಿ ಯಾತನೆಯನ್ನು ಅನುಭವಿಸುವುದೇ ಪಾಪದ ಫಲವು.

೨. ಸ್ಥೂಲ, ಸೂಕ್ಷ್ಮ ಸುಸೂಕ್ಷ್ಮರೂಪಗಳಾದ ಅನೇಕ ಕೋಟಿ ಅಧರ್ಮದ ಭೇದಗಳು ಮನೋವೃತ್ತಿವಿಶೇಷದಿಂದ ಹುಟ್ಟುವುವು.

೩. ಅವುಗಳಲ್ಲಿ ನರಕಹೇತುಗಳಾದ ಸ್ಥೂಲಪಾಪಗಳನ್ನು ಮನೋವಾಕ್ಕಾಯಗಳಿಂದ ಹುಟ್ಟಿದುವೆಂದು ಸಂಕ್ಷೇಪವಾಗಿ ನಿರೂಪಿಸಬಹುದು.

ಪರಸ್ತ್ರೀಷ್ವಥಸಂಕಲ್ಪಶ್ಚೇತಸಾನಿಷ್ಟಚಿಂತನಂ ।
ಅಕಾರ್ಯಾಭಿನಿವೇಶಶ್ಚ ಚತುರ್ಧಾ ಕರ್ಮ ಮಾನಸಂ ॥ ೪ ॥

ಅನಿಬದ್ಧಪ್ರಲಾಪಿತ್ವಮಸತ್ಯಂ ಚಾಪ್ರಿಯಂ ಚ ಯತ್ ।
ಪರಾಪವಾದಪೈಶುನ್ಯಂ ಚತುರ್ಧಾ ಕರ್ಮ ವಾಚಿಕಂ ॥ ೫ ॥

ಅಭಕ್ಷ್ಯಭಕ್ಷಣಂ ಹಿಂಸಾ ಮಿಥ್ಯಾಕಾಮಸ್ಯ ಸೇವನಂ ।
ಪರಸ್ವಾನಾಮುಪಾದಾನಂ ಚತುರ್ಧಾ ಕರ್ಮ ಕಾಯಿಕಂ ॥ ೬ ॥

ಇತ್ಯೇತದ್ದ್ವಾದಶವಿಧಂ ಕರ್ಮ ಪ್ರೋಕ್ತಂ ಸಸಾಧನಂ ।
ತೇಷಾಂ ಭೇದಂ ಪುನರ್ವಕ್ಷ್ಯೇ ಯೇಷಾಂ ಫಲಮನಂತಕಂ ॥ ೭ ॥

ಯೇ ದ್ವಿಷಂತಿ ಮಹಾದೇವಂ ಸಂಸಾರಾರ್ಣವತಾರಣಂ ।
ಸಮಸ್ತಪಾತಕೋಪೇತಾಸ್ತೇ ಯಾಂತಿ ನರಕಾಗ್ನಿಷು ॥ ೮ ॥

---

೪. ಪರಸ್ತ್ರೀಯರಲ್ಲಿ ಮನಸ್ಸಿಡುವುದು, ಮನಸ್ಸಿನಲ್ಲಿ ಆ ಬಗೆಯ ಸಂಕಲ್ಪ ಮಾಡುವುದು. ಅನಿಷ್ಟಚಿಂತನೆ, ಅಕಾರ್ಯಾಭಿನಿವೇಶ ಎಂದು ಮಾನಸಿಕ ಕರ್ಮವು ನಾಲ್ಕುವಿಧ.

೫. ಅಸಂಬದ್ಧಪ್ರಲಾಪ, ಅಸತ್ಯ, ಅಪ್ರಿಯಭಾಷಣ, ಪರಾಪವಾದ ಪೈಶುನ್ಯಗಳೆಂದು ವಾಚಿಕಕರ್ಮವು ನಾಲ್ಕು ತರಹ.

೬. ಅಭಕ್ಷ್ಯಭಕ್ಷಣ, ಹಿಂಸಾ, ಮಿಥ್ಯಾಕಾಮಸೇವನ, ಪರರ ಸ್ವತ್ತನ್ನು ಸ್ವೀಕರಿಸುವುದು. ಎಂದು ಕಾಯಿಕಕರ್ಮವೂ ನಾಲ್ಕು ವಿಧ.

೭. ಈ ತರಹವಾಗಿ ದ್ವಾದಶ ವಿಧ ಕರ್ಮವನ್ನು ಸಕಾರಣವಾಗಿ ಹೇಳಿದೆನು. ಅನಂತಫಲದಾಯಕಗಳಾದ ಈ ಕರ್ಮಗಳ ಅವಾಂತರ ಭೇದವನ್ನು ಮುಂದೆ ಹೇಳುವೆನು.

೮. ಯಾರು ಸಂಸಾರಾರ್ಣವತಾರಕನಾದ ಪರಮೇಶ್ವರನನ್ನು ದ್ವೇಷಿಸುವರೋ, ಆ ಪುರುಷರು ಸಮಸ್ತ ಪಾತಕಗಳಿಂದ ಯುಕ್ತರಾಗಿ ನರಕಾಗ್ನಿಯಲ್ಲಿ ಬೀಳುತ್ತಾರೆ.

ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಮಹಾಪಾತಕಿನಶ್ಚೈತೇ ತತ್ಸಂಸರ್ಗೀ ಚ ಪಂಚಮಃ ॥ ೯ ॥

ಕ್ರೋಧಾದ್ದ್ವೇಷಾದ್ಭಯಾಲ್ಲೋಭಾದ್ಬ್ರಾಹ್ಮಣಂ ವಿಶಸಂತಿ ಯೇ ।
ಪ್ರಾಣಾಂತಿಕೋ ಮಹಾದೋಷೋ ಬ್ರಹ್ಮಘ್ನಾಶ್ಚ ಪ್ರಕೀರ್ತಿತಾಃ ॥ ೧೦ ॥

ಬ್ರಾಹ್ಮಣಂ ಚ ಸಮಾಹೂಯ ಯಾಚಮಾನಮಕಿಂಚನಂ ।
ಪಶ್ಚಾನ್ನಾಸ್ತೀತಿ ತಂ ಬ್ರೂಯಾತ್ಸ ಚೈವ ಬ್ರಹ್ಮಹಾ ಸ್ಮೃತಃ ॥ ೧೧ ॥

ಯಸ್ತು ವಿದ್ಯಾಭಿಮಾನೇನ ನಿತ್ಯಂ ಜಯತಿ ವೈ ದ್ವಿಜಾನ್ ।
ಸಮಾಸೀನಃ ಸಭಾಮಧ್ಯೇ ಬ್ರಹ್ಮಹಾ ಸೋಽಪಿ ಕೀರ್ತಿತಃ ॥ ೧೨ ॥

ಮಿಥ್ಯಾಗುಣೈಃ ಸ್ವಮಾತ್ಮಾನಂ ನಯತ್ಯುತ್ಕರ್ಷಣಂ ಬಲಾತ್ ।
ಗುರೂಣಾಂ ಚ ವಿರುದ್ಧೋ ಯಃ ಸ ಚೈವ ಬ್ರಹ್ಮಹಾ ಸ್ಮೃತಃ ॥ ೧೩ ॥

---

೯. ಬ್ರಹ್ಮಹತ್ಯ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನ ಇವುಗಳನ್ನು ಮಾಡಿದವರು ಮಹಾಪಾತಕಿಗಳು. ಇವರ ಸಂಸರ್ಗವನ್ನು ಮಾಡಿದವನೂ ಐದನೇ ಮಹಾಪಾತಕಿಯು.

೧೦. ಕ್ರೋಧ, ದ್ವೇಷ, ಭಯ ಅಥವಾ ಲೋಭದಿಂದ ಯಾರು ಬ್ರಾಹ್ಮಣನನ್ನು ಕೊಲ್ಲುವರೋ ಅವರಿಗೆ ಪ್ರಾಣಾಂತಕವಾದ ಮಹಾದೋಷವು ಬರುವುದು. ಅವರು ಬ್ರಹ್ಮಘ್ನರೆನಿಸಿಕೊಳ್ಳುವರು.

೧೧. ಹೀಗೆಯೇ ದರಿದ್ರನಾದ ಯಾಚಕ ಬ್ರಾಹ್ಮಣನನ್ನು ಕರೆದು ಏನೂ ಇಲ್ಲ ಹೋಗು ಎನ್ನುವವನು ಬ್ರಹ್ಮಹತ್ಯಾದೋಷ ಭಾಗಿಯಾಗುವನು.

೧೨. ಯಾವನು ವಿದ್ಯಾಗರ್ವದಿಂದ ಸಭಾಮಧ್ಯದಲ್ಲಿ ಕುಳಿತು ಸದಾ ಬ್ರಾಹ್ಮಣರನ್ನು ವಾದದಲ್ಲಿ ಜಯಿಸುವನೋ ಅವನೂ ಬ್ರಹ್ಮಘ್ನನೆಂದು ಹೇಳಲ್ಪಟ್ಟಿದಾನೆ.

೧೩. ತನ್ನಲ್ಲಿಲ್ಲದ ಗುಣಗಳನ್ನು ಸುಳ್ಳುಸುಳ್ಳಾಗಿ ಆರೋಪಿಸಿಕೊಂಡು ತಾನು ಉತ್ಕೃಷ್ಟನೆಂದು ಹೆಮ್ಮೆಪಡುವನೂ, ಗುರುವಿರೋಧಿಯಾದವನೂ ಸಹ ಬ್ರಹ್ಮಘ್ನರು.

ಕ್ಷುತ್ತೃಟ್‌ಸಂತಪ್ತದೇಹಾನಾಂ ದ್ವಿಜಾನಾಂ ಭೋಕ್ತುಮಿಚ್ಛತಾಂ ।
ಸಮಾಚರತಿ ಯೋ ವಿಘ್ನಂ ತಮಾಹುರ್ಬ್ರಹ್ಮಘಾತುಕಂ ॥ ೧೪ ॥

ಪಿಶುನಃ ಸರ್ವಲೋಕಾನಾಂ ಛಿದ್ರಾನ್ವೇಷಣತತ್ಪರಃ ।
ಉದ್ವೇಗಜನನಃ ಕ್ರೂರಃ ಸ ಚೈವ ಬ್ರಹ್ಮಹಾ ಸ್ಮೃತಃ ॥ ೧೫ ॥

ಗವಾಂ ತೃಷ್ಣಾಭಿಭೂತಾನಾಂ ಜಲಾರ್ಥಮುಪಸರ್ಪತಾಂ ।
ಸಮಾಚರತಿ ಯೋ ವಿಘ್ನಂ ಸ ಚೈವ ಬ್ರಹ್ಮಹಾ ಸ್ಮೃತಃ ॥ ೧೬ ॥

ಪರದೋಷಮಭಿಜ್ಞಾಯ ನೃಪಕರ್ಣೇ ಕರೋತಿ ಯಃ ।
ಪಾಪೀಯಾನ್ ಪಿಶುನಃ ಕ್ಷುದ್ರಃ ಸ ಚೈವ ಬ್ರಹ್ಮಹಾ ಸ್ಮೃತಃ ॥ ೧೭ ॥

ದೇವದ್ವಿಜಗವಾಂ ಭೂಮಿಂ ಪೂರ್ವಭುಕ್ತಾಂ ಹರೇತ್ತು ಯಃ ।
ಪ್ರಣಷ್ಟಾಮಪಿ ಕಾಲೇನ ತಮಾಹುರ್ಬ್ರಹ್ಮಘಾತುಕಂ ॥ ೧೮ ॥

---

೧೪. ಹಸಿವು ಬಾಯಾರಿಕೆ ಇವುಗಳಿಂದ ತಪ್ತರಾಗಿ ಭೋಜನಾಭಿಲಾಷಿಗಳಾದ ಬ್ರಾಹ್ಮಣರಿಗೆ ವಿಘ್ನವನ್ನುಂಟುಮಾಡುವವನೂ ಬ್ರಹ್ಮಘಾತುಕನೆನಿಸಿಕೊಳ್ಳುವನು.

೧೫. ಪೈಶುನ್ಯ (ಚಾಡಿಕೋರತನ), ಸರ್ವಜನಛಿದ್ರಾನ್ವೇಷಣ, ಲೋಕಕ್ಕೆ ಉದ್ವೇಗಪಡಿಸುವುದು, ಕ್ರೌರ್ಯ, ಈ ಕೃತ್ಯಗಳನ್ನು ಮಾಡುವವನೂ ಬ್ರಹ್ಮಘ್ನನೆಂದು ತಿಳಿಯಬೇಕು.

೧೬. ಬಾಯಾರಿಕೆಯಿಂದ ಬಳಲಿ ಜಲಾರ್ಥವಾಗಿ ತಟಾಕಾದಿಗಳಿಗೆ ಹೋಗುತ್ತಿರುವ ಹಸು ಮತ್ತು ದನಗಳಿಗೆ ವಿಘ್ನಕರ್ತೃವನ್ನು ಸಹ ಬ್ರಹ್ಮಘ್ನನೆಂದು ಹೇಳಬೇಕು.

೧೭. ಪರರ ದೋಷವನ್ನು ಹುಡುಕಿ ರಾಜನಿಗೆ ಚಾಡಿಹೇಳುವ ಕ್ಷುದ್ರ ಪಾಪಿಯನ್ನೂ ಸಹ ಬ್ರಹ್ಮಘ್ನನೆನ್ನಬೇಕು.

೧೮. ದೇವ, ಗೋವು ಮತ್ತು ಬ್ರಾಹ್ಮಣರು ಇವರಿಂದ ಬಹುಕಾಲ ಉಪಭೋಗಿಸಲ್ಪಟ್ಟ ಭೂಮಿಯನ್ನೂ, ಹೊಲವನ್ನೂ ಅಪಹರಿಸಿದವನೂ ಸಹ ಬ್ರಹ್ಮಘ್ನನು.

ದ್ವಿಜವಿತ್ತಾಪಹರಣೇ ನ್ಯಾಯತಃ ಸಮುಪಾರ್ಜಿತೇ ।
ಬ್ರಹ್ಮಹತ್ಯಾ ಸಮಂ ಜ್ಞೇಯಂ ಪಾತಕಂ ನಾತ್ರ ಸಂಶಯಃ ॥ ೧೯ ॥

ಅಗ್ನಿಹೋತ್ರಪರಿತ್ಯಾಗೋ ಯಸ್ತು ಯಾಜ್ಞಿಕಕರ್ಮಣಾಂ ।
ಮಾತಾಪಿತೃಪರಿತ್ಯಾಗಃ ಕೂಟಸಾಕ್ಷ್ಯಂ ಸುಹೃದ್ವಧಃ ॥ ೨೦ ॥

ಗವಾಂ ಮಾರ್ಗೇ ವನೇ ಚಾಗ್ನಿಂ ಪುರೇ ಗ್ರಾಮೇ ಚ ದೀಪಯೇತ್ ।
ಇತಿ ಪಾಪಾನಿ ಘೋರಾಣಿ ಸುರಾಪಾನಸಮಾನಿ ತು ॥ ೨೧ ॥

ಹೀನಸ್ವಹರಣೇ ಚಾಪಿ ನರಸ್ತ್ರೀಗಜವಾಜಿನಾಂ ।
ಗೋ ಭೂ ರಜತ ರತ್ನಾನಾಮೌಷಧೀನಾಂ ರಜಸ್ಯ ಚ ॥ ೨೨ ॥

ಚಂದನಾಗರುಕರ್ಪೂರಕಸ್ತೂರೀಖಂಡವಾಸಸಾಂ ।
ಹಸ್ತೇ ನ್ಯಸ್ಯಾಪಹರಣಂ ರುಕ್ಮಸ್ತೇಯಸಮಂ ಸ್ಮೃತಂ ॥ ೨೩ ॥

ಕನ್ಯಾನಾಂ ವರಯೋಗ್ಯಾನಾಮದಾನಂ ಸದೃಶೇ ವರೇ ।
ಪುತ್ರಮಿತ್ರಕಲತ್ರೇಷು ಗಮನಂ ಭಗಿನೀಷು ಚ ॥ ೨೪ ॥

---

೧೯. ಬ್ರಾಹ್ಮಣರಿಂದ ನ್ಯಾಯಾರ್ಜಿತವಾದ ಧನದ ಅಪಹರಣವು ನಿಸ್ಸಂಶಯವಾಗಿ ಬ್ರಹ್ಮಹತ್ಯಾ ಸಮಾನವಾದ ಪಾತಕವೆಂದು ತಿಳಿಯಬೇಕು.

೨೦-೨೧. ಅಗ್ನಿಹೋತ್ರ ಪರಿತ್ಯಾಗ, ಯಜ್ಞಕರ್ಮ ಪರಿತ್ಯಾಗ, ಮಾತಾಪಿತೃ ಪರಿತ್ಯಾಗ, ಸುಳ್ಳುಸಾಕ್ಷ್ಯ, ಸುಹೃದ್ವಧ ಗೋಮಾಳ, ವನ, ಪುರ, ಮತ್ತು ಗ್ರಾಮ ಇವುಗಳಿಗೆ ಬೆಂಕಿ ಹತ್ತಿಸುವುದು ಈ ಘೋರಪಾಪಗಳು ಸುರಾಪಾನಕ್ಕೆ ಸಮಾನವಾದುವು.

೨೨-೨೩. ದರಿದ್ರ ವಿತ್ತಾಪಹರಣವೂ ನರ, ಸ್ತ್ರೀ, ಗಜ ಮತ್ತು ಅಶ್ವ, ಗೋ, ಭೂಮಿ, ರಜತ, ರತ್ನ, ಔಷಧಿ, ಚಂದನ, ಅಗರು, ಕರ್ಪೂರ, ಕಸ್ತೂರೀ ಖಂಡ, ವಸ್ತ್ರ ಇವುಗಳನ್ನು ದಾನಮಾಡಿ ಪುನಃ ಅಪಹರಿಸುವುದು ಸ್ವರ್ಣಸ್ತೇಯಕ್ಕೆ ಸಮಾನವು.

೨೪-೨೫. ವಿವಾಹಯೋಗ್ಯರಾದ ಕನ್ನಿಕೆಯರನ್ನು ಯೋಗ್ಯವರನಿಗೆ ದಾನಮಾಡದಿರುವುದು. ಪುತ್ರಸ್ತ್ರೀಗಮನ, ಮಿತ್ರಸ್ತ್ರೀಗಮನ, ಭಗಿನೀಗಮನ,

ಕುಮಾರೀಸಾಹಸಂ ಘೋರಮಂತ್ಯಜಸ್ತ್ರೀನಿಷೇವಣಂ ।
ಅವರ್ಣಾಯಾಶ್ಚ ಗಮನಂ ಗುರುತಲ್ಪಸಮಂ ಸ್ಮೃತಂ ॥ ೨೫ ॥

ಮಹಾಪಾತಕತುಲ್ಯಾನಿ ಪಾಪಾನ್ಯುಕ್ತಾನಿ ಯಾನಿ ತು ।
ತಾನಿ ಪಾತಕಸಂಜ್ಞಾನಿ ತದ್ವದೂನಮುಪಪಾತಕಂ ॥ ೨೬ ॥

ದ್ವಿಜಾರ್ಥಂ ಚ ಪ್ರತಿಜ್ಞಾಯ ನ ಪ್ರಯಚ್ಛತಿ ಯಃ ಪುನಃ ।
ತಸ್ಮಾನ್ನರಪತೇ ವಿಘ್ನತುಲ್ಯಂ ತದುಪಪಾತಕಂ ॥ ೨೭ ॥

ದ್ವಿಜದ್ರವ್ಯಾಪಹರಣಂ ಮರ್ಯಾದಾಯಾ ವ್ಯತಿಕ್ರಮಃ ।
ಅತಿಕೋಪಶ್ಚ ಮಾನಶ್ಚ ದಾಂಭಿಕತ್ವಂ ಕೃತಘ್ನತಾ ॥ ೨೮ ॥

ಅತ್ಯಂತ ವಿಷಯಾಸಕ್ತಿಃ ಕಾರ್ಪಣ್ಯಂ ಶ್ರೇಷ್ಠಮತ್ಸರಃ ।
ಪರದಾರಾಪಹರಣಂ ಸಾಧುಕನ್ಯಾವಿದೂಷಣಂ ॥ ೨೯ ॥

---

ಅವಿವಾಹಿತ ಕನ್ಯಕಾಗಮನ, ಅಂತ್ಯಜಸ್ತ್ರೀಗಮನ, ಮತ್ತು ಅಸವರ್ಣ ಸ್ತ್ರೀಗಮನ; ಇವುಗಳು ಗುರುದಾರ ಗಮನದ ಪಾಪಕ್ಕೆ ಸಮಾನಗಳು.

೨೬. ಆದಿಯಲ್ಲಿ ಹೇಳಿದ ಮಹಾಪಾತಕ ತುಲ್ಯಗಳಾದ ಈ ಪಾಪಗಳೂ ಮಹಾಪಾತಕ ಎಂಬ ಶಬ್ದದಿಂದ ವ್ಯವಹರಿಸಲ್ಪಡುವುವು. ಮುಂದೆ ಉಪಪಾತಕ ಗಳನ್ನು ಹೇಳುವೆನು.

೨೭. ಎಲೈ ಮಹಾರಾಜನೇ ! ಬ್ರಾಹ್ಮಣನಿಗೆಂದು ಮೊದಲು ಪ್ರತಿಜ್ಞೆ ಮಾಡಿ ಆಮೇಲೆ ಕೊಡದೇ ಇರುವುದೂ ಸಹ ವಿಘ್ನಸದೃಶವಾದ ಉಪಪಾತಕವು.

೨೮. ಬ್ರಾಹ್ಮಣ ದ್ರವ್ಯಾಪಹಾರವು ಮರ್ಯಾದಾವ್ಯತಿಕ್ರಮದ ಪಾಪ, ಅತಿ ಕೋಪ, ಅತಿಗರ್ವ, ದಾಂಭಿಕತ್ವ, ಕೃತಘ್ನತೆ ಇವೆಲ್ಲಾ ಉಪಪಾತಕಗಳು.

೨೯. ಇನ್ನೂ ಮುಂದೆ ಹೇಳುತ್ತೇನೆ ಕೇಳು, ಅತಿಯಾದ ವಿಷಯಾಸಕ್ತಿ, ಲೋಭ, ಉತ್ತಮರಲ್ಲಿ ಮಾತ್ಸರ್ಯ, ಪರದಾರಾಪಹಾರ, ಸಾಧುಕನ್ಯಾದೂಷಣ ಇವುಗಳೂ.

ಪರಿವಿತ್ತಿಃ ಪರೀವೇತ್ತಾ ಯಯಾ ಚ ಪರಿವಿದ್ಯತೇ ।
ತಯೋರ್ದಾನಂ ಚ ಕನ್ಯಾಯಾಸ್ತಯೋರೇವ ಚ ಯಾಜನಂ ॥ ೩೦ ॥

ಪುತ್ರಮಿತ್ರಕಲತ್ರಾಣಾಮಭಾವೇ ಸ್ವಾಮಿನಸ್ತಥಾ ।
ಶಿಷ್ಯಾನಾಂ ಚೈವ ಸಂನ್ಯಾಸಃ ಸಹಜಾನಾಂ ತಪಸ್ವಿನಾಂ ॥ ೩೧ ॥

ಭಂಗಶ್ಚ ಧರ್ಮಕೃತ್ಯಾನಾಂ ಸಹಾಯಾನಾಂ ವಿನಾಶನಂ ।
ಪೀಡಾಮಾಶ್ರಮಸಂಸ್ಥಾನಾನ್ನಾ ಚರೇತ್ವಲ್ಪಿಕಾಮಪಿ ॥ ೩೨ ॥

ಸ್ವಭೃತ್ಯಪರಿವರ್ಗಸ್ಯ ಪಶುಧಾನ್ಯಧನಸ್ಯ ಚ ।
ಕುಪ್ಯಧಾನ್ಯಪಶುಸ್ತೇಯಮಯಾಚ್ಯಾನಾಂ ಚ ಯಾಚನಂ ॥ ೩೩ ॥

---

೩೦. ಮತ್ತು ತಮ್ಮನಿಗೆ ವಿವಾಹವಾದ ಮೇಲೆ ವಿವಾಹ ಮಾಡಿಕೊಳ್ಳುವ ಪರಿವಿತ್ತಿ ಎಂದು ಹೇಳಲ್ಪಡುವ ಅಗ್ರಜನ ಪರಿವಿತ್ತೃತ್ವ. ಅಣ್ಣನಿಗೆ ಮದುವೆ ಯಾಗುವ ಮುಂಚೆ ಮದುವೆಮಾಡಿಕೊಳ್ಳುವ ಪರಿವೇತ್ತೃ ಎಂದು ಕರೆಯಲ್ಪಡುವ ಅನುಜನ ಪರಿವೇತ್ತೃತ್ವ. ಇವರಿಗೆ ವಿವಾಹಿತಳಾಗುವ ಕನ್ನಿಕೆಯು, ಈ ಪರಿವಿತಿ ಪರಿವೇತೃಗಳಿಗೆ ವಿವಾಹಮಾಡಿಸುವುದು, ಮತ್ತು ಅವರಿಗೆ ಯಜ್ಞಮಾಡಿಸು ವುದು, ಮತ್ತು

೩೧. ಪುತ್ರ ಮಿತ್ರ ಕಲತ್ರರೂ, ಸ್ವಾಮಿಯೂ ಶ್ರೇಷ್ಠರಾದ ತಪಸ್ವಿಗಳೂ ತನ್ನ ಒಡನಾಡಿಗಳೂ ಇಲ್ಲದಾಗ ಸಂನ್ಯಾಸ ಸ್ವೀಕಾರ ಮಾಡುವುದು ;

೩೨. ಮತ್ತು ಧರ್ಮಕೃತ್ಯಗಳಿಗೆ ಭಂಗವುಂಟುಮಾಡುವುದು, ಸಹಾಯ ಗಳನ್ನು ನಾಶಪಡಿಸುವುದು, ಆಶ್ರಮಸ್ಥರಿಗೂ ಸಹೋದರರಿಗೂ ತಪಸ್ವಿಗಳಿಗೂ ಪೀಡೆಮಾಡುವುದು.

೩೩. ಮತ್ತು ಸ್ವಭೃತ್ಯವರ್ಗಗಳನ್ನೂ ಪಶುಗಳನ್ನೂ ಪೀಡಿಸುವುದು, ಪಶುಸ್ತೇಯ ಯಾಚನೆಮಾಡಬಾರದ ಕಡೆಯಲ್ಲಿ ಯಾಚನೆಮಾಡುವುದು ;

**ಗವಾಂ ಕ್ಷತ್ರಿಯವೇಶ್ಯಾನಾಂ ಸ್ತ್ರೀಶೂದ್ರಾಣಾಂ ವಿಶೇಷತಃ ।**
**ಯಜ್ಞಾರಾಮತಟಾಕಾನಾಂ ದಾರಾಪತ್ಯಸ್ಯ ವಿಕ್ರಯಃ ।**
**ತೀರ್ಥಯಾತ್ರೋಪವಾಸಾನಾಂ ವ್ರತಾಯತನಕರ್ಮಣಾಂ ॥ ೩೪ ॥**

**ಸ್ತ್ರೀಧನಾನ್ಯುಪಜೀವಂತಿ ಸ್ತ್ರೀಭಿರತ್ಯಂತನಿರ್ಜಿತಾಃ ।**
**ಅರಕ್ಷಣಂ ಚ ನಾರೀಣಾಂ ಮದ್ಯಪಸ್ತ್ರೀನಿಷೇವಣಂ ॥ ೩೫ ॥**

**ಋಣಾನಾಮಪ್ರದಾನಂ ಚ ಧಾನ್ಯವೃಧ್ಯುಪಜೀವಿನಾಂ ।**
**ನಿಂದಿತಾಚ್ಚ ಧನಾದಾನಮಪಣ್ಯಾನಾಂ ಚ ವಿಕ್ರಯಃ ॥ ೩೬ ॥**

**ವಿಷಮಾರಣಮಂತ್ರಾಣಾಂ ಪ್ರಯೋಗೋ ಮೂಲಕರ್ಮಣಾಂ ।**
**ಉಚ್ಚಾಟನಾಭಿಚಾರಶ್ಚ ಗರವಿದ್ವೇಷಣಕ್ರಿಯಾ ॥ ೩೭ ॥**

**ಜಿಹ್ವಾಸಮುಪಭೋಗಾರ್ಥಂ ಯಸ್ಯಾರಂಭಃ ಸ್ವಕರ್ಮಸು ।**
**ಮೂಲ್ಯೇನಾಧ್ಯಾಪಯೇದ್ಯಶ್ಚ ಮೂಲ್ಯೇನಾಧೀಯತೇ ಚ ಯೋ ॥ ೩೮ ॥**

---

೩೪. ಹಸು, ಕ್ಷತ್ರಿಯ, ವೇಶ್ಯೆ, ಸ್ತ್ರೀ, ಶೂದ್ರ, ಯಜ್ಞ, ಆರಾಮ, ತಟಾಕ, ಪತ್ನೀಪುತ್ರರ ವಿಕ್ರಯ, ತೀರ್ಥಯಾತ್ರಾ, ಉಪವಾಸ, ವ್ರತ, ಆಯತನ ಕರ್ಮ ಇವುಗಳ ವಿಕ್ರಯಣವೂ (ಇವೆಲ್ಲಾ ಪಾತಕಗಳು).

೩೫. ಮತ್ತು ಸ್ತ್ರೀಧನೋಪಜೀವನ, ಅತ್ಯಂತ ಸ್ತ್ರೀನಿರ್ಜಿತತ್ವ, ಸ್ತ್ರೀರಕ್ಷಣ ತ್ಯಾಗ, ಮದ್ಯಪಾನಮಾಡುವ ಸ್ತ್ರೀಸಂಗ ; (ಇವೂ ಪಾತಕ).

೩೬. ಮತ್ತು ಸಾಲತೀರಿಸದೆ ಇರುವುದು. (ಋಣಾನಪಾಕರಣ) ಧಾನ್ಯ ಮತ್ತು ಹಣದ ಬಡ್ಡಿ ಇದರಿಂದ ಜೀವನವು, ನಿಂದಿತನಿಂದ ದ್ರವ್ಯಪ್ರತಿಗ್ರಹವೂ ಅವಿಕ್ರಯವಸ್ತುವಿನ ವಿಕ್ರಯವೂ, (ಇವೂ ಪಾತಕವು).

೩೭. ವಿಷಮಾರಣವು, ಮಂತ್ರಪ್ರಯೋಗವು, ಉಚ್ಚಾಟನ ಕರ್ಮ ವಿಷವನ್ನು ತಯಾರಿಸುವುದು, ವಿದ್ವೇಷಣ ಕರ್ಮ ಇವೂ ಪಾತಕಗಳು.

೩೮. ತನ್ನ ಉದರಪೂರ್ತಿಗಾಗಿಯೇ ಕೆಲಸಮಾಡುವುದು, ಮೂಲ್ಯ ತೆಗೆದುಕೊಂಡು ಅಧ್ಯಾಪನಮಾಡಿಸುವುದು, ಮೂಲ್ಯಕೊಟ್ಟು ಅಧ್ಯಯನ ಮಾಡುವುದು (ಇವು ಪಾತಕಗಳು).

ವ್ರಾತ್ಯತಾ ವ್ರತಸಂತ್ಯಾಗಃ ಸರ್ವಾಹಾರನಿಷೇವಣಂ ।
ಅಸದ್ದಾರಾಭಿಗಮನಂ ಶುಷ್ಕತರ್ಕಾವಲಂಬನಂ ॥ ೩೯ ॥

ದೇವಾಗ್ನಿಸಾಧುಸಾಧ್ವೀನಾಂ ನಿಂದಾ ಗೋಬ್ರಾಹ್ಮಣಸ್ಯ ಚ ।
ಪ್ರತ್ಯಕ್ಷಂ ವಾ ಪರೋಕ್ಷಂ ವಾ ರಾಜ್ಞಾಂ ಮಂಡಲಿಕಾಮಪಿ ।
ದುಃಶೀಲಾ ನಾಸ್ತಿಕಾಃ ಪಾಪಾಃ ಸರ್ವಶೂನ್ಯಸ್ಯ ವಾದಿನಃ ॥ ೪೦ ॥

ಪರ್ವಕಾಲೇ ದಿವಾ ಚೈವ ವಿಯೋನೌ ಪಶುಯೋನಿಷು ।
ರಜಸ್ವಲಾನಾಂ ಯೋನೌ ಚ ಮೈಥುನಂ ಚ ಸಮಾಚರೇತ್ ॥ ೪೧ ॥

ಸ್ತ್ರೀಪುತ್ರಮಿತ್ರಸಂಪ್ರೀತೇ ಗ್ರಾಸಾನ್ನಚ್ಛೇದಕಾಶ್ಚ ಯೇ ।
ಜನಸ್ಯಾಪ್ರಿಯವಕ್ತಾರೋ ಧೂರ್ತಾಃ ಸಮಯಭೇದಿನಃ ॥ ೪೨ ॥

ಭೇತ್ತಾ ತಡಾಗಚಕ್ರಾಣಾಂ ಸಂಕ್ರಮಾಣಾಂ ರಥಸ್ಯ ಚ ।
ಏಕಪಂಕ್ತಿಸ್ಥಿತಾನಾಂ ಚ ಪಾಕಭೇದಂ ಕರೋತಿ ಯಃ ॥ ೪೩ ॥

---

೩೯. ಮತ್ತು ಸಂಸ್ಕಾರಹೀನತೆ, ವ್ರತಪರಿತ್ಯಾಗವೂ, ಭಕ್ಷ್ಯಾಭಕ್ಷ್ಯ ವಿವೇಚನೆಯಿಲ್ಲದೆ ಆಹಾರವನ್ನು ಸೇವಿಸುವುದು, ಅಸದ್ಭಾರ್ಯಾಗಮನ, ಶುಷ್ಕ ತರ್ಕವನ್ನು ಹಿಡಿದು ವಾದಿಸುವುದು ಇವೂ ಪಾತಕಗಳು.

೪೦. ಮತ್ತು ದೇವ, ಅಗ್ನಿ, ಸಜ್ಜನ, ಪತಿವ್ರತಾಸ್ತ್ರೀ, ಗೋವು, ಬ್ರಾಹ್ಮಣರು ಇವರನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನಿಂದಿಸುವುದು, ದುರಾಚಾರ ಪಾಪಕರ್ಮಾನುಷ್ಠಾನ, ಸರ್ವನಾಸ್ತಿತ್ವವಾದ (ಇವೂ ಪಾತಕವು).

೪೧. ಮತ್ತು ಪರ್ವಕಾಲದಲ್ಲೂ, ಹಗಲಿನಲ್ಲೂ, ಯೋನಿವ್ಯತಿರಿಕ್ತಪ್ರದೇಶದಲ್ಲೂ, ಪಶುಯೋನಿಯಲ್ಲೂ, ರಜಸ್ವಲಾ, ಯೋನಿಯಲ್ಲೂ ಮೈಥುನಮಾಡುವುದು ಪಾತಕ.

೪೨. ಮತ್ತು ಸ್ತ್ರೀಪುತ್ರಮಿತ್ರರಿಗೆ ಪ್ರೀತಿವಿಷಯಕವಾದ ಗ್ರಾಸಾನ್ನವನ್ನು ಛೇದಿಸುವುದು. ಇತರರಿಗೆ ಅಪ್ರಿಯವಾಗಿ ಮಾತಾಡುವುದು, ಧೂರ್ತತೆ ಸಮಯಭೇದನ ಇವೂ ಪಾತಕಗಳೇ.

೪೩. ತಟಾಕ, ಚಕ್ರ, ಸೇತುವೆ ಮತ್ತು ರಥ ಇವುಗಳನ್ನು ಭೇದಿಸುವುದು. ಏಕಪಂಕ್ತಿಯಲ್ಲಿ ಭುಂಜಿಸುವವರಿಗೆ ಬಡಿಸುವ ವ್ಯತ್ಯಾಸದಿಂದ ಪಂಕ್ತಿಭೇಧ ಮಾಡುವುದು, ಇವೆಲ್ಲಾ ಪಾತಕಗಳು.

ಇತ್ಯೇತೈಸ್ತೇ ನರಾಃ ಪಾಪೈರುಪಪಾತಕಿನಃ ಸ್ಮೃತಾಃ ।
ಯುಕ್ತಾಸ್ತದೂನಸ್ಯೈಃ ಕ್ಷುದ್ರೈಃ ಪಾಪೈಃ ಪಾಪತರಾಃ ಸ್ಮೃತಾಃ ॥ ೪೪ ॥

ಯೇ ಗೋಬ್ರಾಹ್ಮಣಕನ್ಯಾನಾಂ ಸ್ವಾಮಿಮಿತ್ರತಪಸ್ವಿನಾಂ ।
ಅಂತರಂ ಯಾಂತಿ ಕಾರ್ಯೇಷು ತೇ ನರಾ ನಾರಕಾಃ ಸ್ಮೃತಾಃ ॥ ೪೫ ॥

ಪರಶ್ರಿಯಾ ಯೇ ತಪ್ಯಂತೇ ಯೇ ಪರದ್ರವ್ಯಸೂಚಕಾಃ ।
ಪರವ್ಯಾಪಾರನಿರತಾಃ ಪರಸ್ತ್ರೀನರದೂಷಕಾಃ ॥ ೪೬ ॥

ದ್ವಿಜಾಯ ದುಃಖಂ ಯಃ ಕುರ್ಯಾತ್ಪ್ರಕಾರೈರ್ಬಹುಭಿಃ ಸದಾ ।
ಸೇವತೇ ಯೋ ದ್ವಿಜಃ ಶೂದ್ರಾಂ ಸುರಾಂ ಜಿಘ್ರತಿ ಕಾಮತಃ ॥ ೪೭ ॥

ಯೇ ಪಾನಾಭಿರತಾಃ ಕ್ರೂರಾ ಯೇ ಚ ಹಿಂಸಾಪ್ರಿಯಾ ನರಾಃ ।
ವಿತ್ತಾರ್ಥಂ ಯೇ ಚ ಕುರ್ವಂತಿ ದಾನಯಜ್ಞಾದಿಕಾಂ ಕ್ರಿಯಾಂ ॥ ೪೮ ॥

---

೪೪. ಈ ಹಿಂದೆ ಹೇಳಿದ ಸಮಸ್ತ ಕೃತ್ಯಗಳಿಂದ, ಪುರುಷರು ಉಪಪಾತಕಿಗಳಾಗುವರು. ಇದಕ್ಕಿಂತ ನಿಕೃಷ್ಟವಾದ ಕ್ಷುದ್ರಪಾಪಗಳಿಂದ ಕೂಡಿದವರು ' ಪಾಪತರರು ' ಎನ್ನಲ್ಪಡುವರು.

೪೫. ಯಾವ ಪುರುಷರು ಗೋವು, ಬ್ರಾಹ್ಮಣ, ಕನ್ಯಾ, ಸ್ವಾಮಿ, ಮಿತ್ರ ತಪಸ್ವಿ ಇವರ ಕಾರ್ಯಗಳನ್ನು ಕೆಡಿಸುವರೋ ಅವರು ನರಕಭಾಗಿಗಳು.

೪೬–೪೭. ಪರರ ಧನವಲ್ಲಿ ಅಸೂಯಾಪರರು, ಪರಸಂಪತ್ತು ನೋಡಿ ಸಂತಾಪಹೊಂದುವರು, ಪರವ್ಯಾಪಾರ ನಿರತರು, ಪರಸ್ತ್ರೀ ಮತ್ತು ಪರಪುರುಷ ದೂಷಕರು, ಸದಾ ಅನೇಕಾನೇಕ ವಿಧವಾಗಿ ಬ್ರಾಹ್ಮಣರಿಗೆ ದುಃಖದಾಯಕರು ಶೂದ್ರಸ್ತ್ರೀಸಂಗ ಕರ್ತೃವು, ಜ್ಞಾನಪೂರ್ವಕವಾಗಿ ಸುರಾಪಾನ ಮಾಡುವವನು,

೪೮. ಮತ್ತು ಸದಾ ಪಾನರತನೂ, ಕ್ರೂರನೂ ಹಿಂಸಾತ್ಮಕನೂ, ಧನದಾಶೆಯಿಂದ ದಾನಯಜ್ಞಾದಿ ಕರ್ತೃವೂ,

ಗೋಷ್ಠಾಗ್ನಿಜಲರಥ್ಯಾಸು ತರುಚ್ಛಾಯಾ ಮಠೇಷು ಚ ।
ತ್ಯಜಂತ್ಯಮೇಧ್ಯಂ ಪುರುಷಾ ಆರಾಮಾಯತನೇಷು ಚ ॥ ೪೯ ॥

ಮದ್ಯಪಾನರತಾ ನಿತ್ಯಂ ಗಾನವಾದ್ಯರತಾ ನರಾಃ ।
ಕೇಲೀಕಲಾಭುಜಂಗಾಶ್ಚ ರಂಧ್ರಾನ್ವೇಷಣತತ್ಪರಾಃ ॥ ೫೦ ॥

ವಂಶೇಷು ಕಾಶಕಾಷ್ಠೈಶ್ಚ ಶುಭ್ರೈಃ ಶಂಕುಭಿರೇವ ವಾ ।
ಯೇ ಮಾರ್ಗಾನ್ಸಮುಪಘ್ನಂತಿ ಪರಸ್ತ್ರೀರಾಹರಂತಿ ಚ ॥ ೫೧ ॥

ಕೂಟಶಾಸನಹರ್ತಾರಃ ಕೂಟಕರ್ಮಕ್ರಿಯಾರತಾಃ ।
ಕೂಟಯುದ್ಧಾಶ್ಚ ಶಸ್ತ್ರೇಣ ಕೂಟಸಂವ್ಯವಹಾರಿಣಃ ॥ ೫೨ ॥

ಧನುಷಾಂ ಶಲ್ಯಶಸ್ತ್ರಾಣಾಂ ಯಃ ಕರ್ತಾ ಯಶ್ಚ ವಿಕ್ರಯೀ ।
ನಿರ್ದಯೋಽತೀವ ಭೃತ್ಯೇಷು ಪಶೂನಾಂ ದಮಕಶ್ಚ ಯಃ ॥ ೫೩ ॥

ಮಿಥ್ಯಾಪ್ರವದತೋ ವಾಕ್ಯಮಾಕರ್ಣಯತಿ ಯಃ ಶನೈಃ ।
ಸ್ವಾಮಿಮಿತ್ರಗುರುದ್ರೋಹೀ ಮಾಯಾವೀ ಚಪಲಃ ಶಠಃ ॥ ೫೪ ॥

---

೪೯. ಗೋಶಾಲಾ, ಅಗ್ನಿಶಾಲಾ, ಜಲಮಾರ್ಗ, ವೃಕ್ಷಚ್ಛಾಯಾ, ಮಠ, ಆರಾಮ, ಮತ್ತು ಆಯತನ (ಮನೆ) ಇವುಗಳಲ್ಲಿ ಮಲವಿಸರ್ಜನೆ ಮಾಡುವವನೂ,

೫೦. ಯಾವಾಗಲೂ ಮದ್ಯಪಾನ ಮಾಡುವವನೂ, ನಿತ್ಯವೂ ಗಾನವಾದ್ಯಾಸಕ್ತನೂ, ಕ್ರೀಡಾಕಲಾಭಿಮಾನಿಯೂ, ವಿಟನೂ, ಪರರಂಧ್ರಾನ್ವೇಷಿಯೂ,

೫೧. ಮತ್ತು ಬೊಂಬು, ಬಾಣ, ದರ್ಭೆ, ಕಾಷ್ಟ, ಗೂಟ ಇವೇ ಮೊದಲಾದುವನ್ನು ಮಾರ್ಗಗಳಲ್ಲಿ ನಾಟುವವನೂ ಪರವನಿತಾಪಹರ್ತೃವೂ,

೫೨-೫೩. ಕೂಟಶಾಸನಕರ್ತೃವೂ, ಕೂಟಕರ್ಮನಿರತನೂ, ಶಸ್ತ್ರಾಸ್ತ್ರಗಳಿಂದ ಕಪಟಯುದ್ಧವನ್ನು ಮಾಡುವವನೂ, ಕಪಟವ್ಯವಹಾರವುಳ್ಳವನೂ, ಧನುಸ್ಸು, ಶಸ್ತ್ರ ಮತ್ತು ಶಲ್ಯ ಇವುಗಳನ್ನು ಮಾಡುವವನೂ ಮತ್ತು ಇವುಗಳನ್ನು ಮಾರುವವನೂ, ಭೃತ್ಯರಲ್ಲಿ ಅತಿನಿರ್ದಯನೂ, ಮತ್ತು ಪಶುಶಿಕ್ಷಕನೂ,

೫೪. ಮಿಥ್ಯಾವಾದಿಯ ವಚನವನ್ನು ಶ್ರವಣಮಾಡುವವನೂ, ಸ್ವಾಮಿ, ಮಿತ್ರ, ಗುರು ಇವರಿಗೆ ದ್ರೋಹಮಾಡುವವನೂ, ಮಾಯಾವಿಯೂ, ಚಪಲನೂ, ನೀಚನೂ,

ಯೋ ಭಾರ್ಯಾಪುತ್ರಮಿತ್ರಾಣಿ ಬಾಲವೃದ್ಧಕೃಶಾತುರಾನ್ ।
ಭೃತ್ಯಾನತಿಥಿಬಂಧೂಂಶ್ಚ ಪ್ರಬಾಧಂತೇ ಬುಭುಕ್ಷಯಾ ॥ ೫೫ ॥

ಯಃ ಸ್ವಯಂ ಮಿಷ್ಟಮಶ್ನಾತಿ ವಿಪ್ರಾಯಾನ್ಯತ್ಪ್ರಯಚ್ಛತಿ ।
ವೃಥಾಪಾಕಃ ಸ ವಿಜ್ಞೇಯೋ ಬ್ರಹ್ಮವಾದಿಷು ಗರ್ಹಿತಃ ॥ ೫೬ ॥

ನಿಯಮಾನ್ಸ್ವಯಮಾದಾಯ ಯೇ ತ್ಯಜಂತ್ಯಜಿತೇಂದ್ರಿಯಾಃ ।
ಪ್ರವ್ರಜ್ಯಾವಾಸಿನೋ ಯೇ ಚ ರಹಸ್ಯಾನಾಂ ಚ ಭೇದಕಾಃ ॥ ೫೭ ॥

ತಾಡಯಂತಿ ಚ ವೇಗಾದ್ಯೇ ಶಪಂತಿ ಚ ಮುಹುರ್ಮುಹುಃ ।
ದುರ್ಬಲಾಂಶ್ಚ ನ ಪುಷ್ಣಂತಿ ಪುನಸ್ತಾನ್ವಾಹಯಂತಿ ಚ ॥ ೫೮ ॥

ಪೀಡಯಂತ್ಯತಿಭಾರೇಣ ಸಕ್ಷತಾನ್ವಾಹಯಂತಿ ಚ ।
ಸಾರ್ಧಯಾಮಾದುಪರಿತಃ ಸಂಯುಕ್ತೇಷು ಚ ಭುಂಜತೇ ॥ ೫೯ ॥

---

೫೫–೫೬. ಮತ್ತು ಹಸಿವಿನಿಂದ ಭಾರ್ಯೆ ಪುತ್ರ, ಮಿತ್ರ, ಬಾಲ ವೃದ್ಧ ಕೃಶ, ರೋಗಿ, ಭೃತ್ಯ, ಅತಿಥಿ ಮತ್ತು ಬಂಧುಗಳನ್ನು ಪೀಡಿಸುವವರೂ, ರುಚಿಯಾದ ಪದಾರ್ಥವನ್ನು ತಾನು ಭುಂಜಿಸಿ ಬ್ರಾಹ್ಮಣನಿಗೆ ಅರುಚಿ ಪದಾರ್ಥವನ್ನು ಕೊಡುವವನಾಗಿ ವೃಥಾಪಾಕನೆಂಬ ನಿಂದಾರ್ಹ.

೫೭. ತಾನೇ ಬಂದು ನಿಯಮವನ್ನವಲಂಬಿಸಿ ಆಮೇಲೆ ಅಜಿತೇಂದ್ರಿಯತೆಯಿಂದ ಆ ನಿಯಮವನ್ನು ಪರಿತ್ಯಾಗಮಾಡುವವನೂ, ಪರರ ರಹಸ್ಯ ಭೇತ್ತೃವೂ, ವೃಥಾ ತಾಡನ ಮಾಡತಕ್ಕವನೂ,

೫೮. ಮತ್ತು ಯಾವಾಗಲೂ ಇತರರನ್ನು ಶಪಿಸುವವನೂ, ಅಶಕ್ತರನ್ನು ಪೋಷಿಸದೆ ಅವರಿಂದ ಕಾರ್ಯವನ್ನು ಮಾಡಿಸತಕ್ಕವನೂ, ಹೊರಲಾರದ ಹೊರೆಯನ್ನು ಹೊರಿಸುವವನೂ,

೫೯. ಮತ್ತು ಗಾಯಗೊಂಡ ಪ್ರಾಣಿಗಳಿಂದ ಹೊರೆಹೊರಿಸುವವನೂ, ಪಾಕಾನಂತರ ಒಂದೂವರೆ ಯಾಮವಾದಮೇಲೆ ಭುಂಜಿಸುವವನೂ, ಸಂಘಭೋಜಿಯೂ,

ಯೇ ಭಗ್ನ ಕ್ಷತರೋಗಾರ್ತಾನ್ಸ್ವಗೋರೂಪಾನ್ಬುಭುಕ್ಷಯಾ ।
ನ ಪಾಲಯಂತಿ ಯತ್ನೇನ ತೇ ಗೋಘ್ನಾ ನಾರಕಾ ನರಾಃ ॥ ೬೦ ॥

ವೃಷಾಣಾಂ ವೃಷಣಾನ್ಯೇವ ಪಾಪಿಷ್ಠಾ ಗಾಲಯಂತಿ ಯೇ ।
ವಾಹಯಂತಿ ಚ ಗಾಂ ವಧ್ಯಾಂ ತೇ ಮಹಾನಾರಕಾಃ ಸ್ಮೃತಾಃ ॥ ೬೧ ॥

ಆಶ್ರಮಂ ಸಮನುಪ್ರಾಪ್ತಂ ಕ್ಷುತ್ತೃಷ್ಣಾ ಶ್ರಮಪೀಡಿತಂ ।
ಯೇಽತಿಥಿಂ ನಾಭಿಮನ್ಯಂತೇ ತೇ ವೈ ನಿರಯಗಾಮಿನಃ ॥ ೬೨ ॥

ಅನಾಥಂ ವಿಕಲಂ ದೀನಂ ಬಾಲಂ ವೃದ್ಧಂ ಕೃಶಾತುರಂ ।
ನಾನುಕಂಪಂತಿ ಯೇ ಮೂಢಾಸ್ತೇಯಾಂತಿ ನಿರಯಾರ್ಣವಂ ॥ ೬೩ ॥

ಅಜಾವಿಕೋ ಮಾಹಿಷಿಕಃ ಸಾಮುದ್ರೋ ವೃಷಲೀಪತಿಃ ।
ಶೂದ್ರವಿಟ್‌ಕ್ಷತ್ರವೃತ್ತಿಶ್ಚ ನಾರಕೀ ಸ್ಯಾದ್ದ್ವಿಜಾಧಮಃ ॥ ೬೪ ॥

---

೬೦. ಮತ್ತು ಭಗ್ನ ಕ್ಷತಾಂಗವುಳ್ಳದ್ದಾಗಿ ರೋಗಾರ್ತವಾದ ತನ್ನ ಹಸುವಿಗೆ ಹಸಿವನ್ನು ನಿವಾರಣೆಮಾಡಿ ಪಾಲಿಸದಿರುವ ಗೋಘ್ನನೇ, ಮೊದಲಾದ ಮೇಲೆ ಹೇಳಿದ ಸಮಸ್ತ ಪಾಪಿಗಳೂ ನರಕಭಾಗಿಗಳು.

೬೧. ವೃಷಭಗಳ ವೃಷಣಗಳನ್ನು ಮರ್ದನಮಾಡಿ ·ಜಾರಿಸುವ ಪಾಪಿಗಳೂ, ವಂಧ್ಯಗೋವಿನಿಂದ ಗಾಡಿಯನ್ನು ಎಳೆಸುವವರೂ ಮಹಾಪಾತಕಿಗಳು.

೬೨, ಕ್ಷುತ್ತೃಷ್ಣಾ ಶ್ರಮ ಪೀಡಿತರಾಗಿ ಆಶ್ರಮಕ್ಕೆ ಬಂದ ಅತಿಥಿಗಳನ್ನು ಸತ್ಕರಿಸದೆ ಇದ್ದವರು ನರಕಗಾಮಿಗಳಾಗುವರು.

೬೩. ಅನಾಥ, ವಿಕಲಾಂಗ, ದೀನ, ಬಾಲ, ವೃದ್ಧ, ಕೃಶ ಆತುರ ಇವರ ವಿಷಯವಲ್ಲಿ ದಯತೋರಿಸದ ಮೂಢರು ನರಕಕ್ಕೆ ತೆರಳುವರು.

೬೪. ಆಡು, ಮಹಿಷ, ಸಮುದ್ರ ಇವುಗಳಿಂದ ಜೀವಿಸುವ ಬ್ರಾಹ್ಮಣನೂ, ಶೂದ್ರಸ್ತ್ರೀ ಪತಿಯೂ, ಶೂದ್ರ, ವೈಶ್ಯ, ಕ್ಷತ್ರಿಯ ಇವರ ವೃತ್ತಿಯುಳ್ಳವನೂ ಆದ ಬ್ರಾಹ್ಮಣನೂ ಸಹ ನರಕಭಾಗಿಯಾಗುವನು.

ಶಿಲ್ಪಿನಃ ಕಾರುಕಾ ವೈದ್ಯಾ ಹೇಮಕಾರಾ ನಟಾ ದ್ವಿಜಾಃ ।
ಕೃತಕೌಕ್ಷೇಯ ಸಂಯುಕ್ತಾಸ್ತಥಾನ್ಯೇ ನಾರಕಾಃ ಸ್ಮೃತಾಃ ॥ ೬೫ ॥

ಯಶ್ಶೋದಿತಮತಿಕ್ರಮ್ಯ ಸ್ವೇಚ್ಛಯಾ ವಾ ಹರೇತ್ಕರಂ ।
ನರಕೇ ತು ಸ ಪಚ್ಯೇತ ಯಶ್ಚ ದಂಡರುಚಿರ್ಭವೇತ್ ॥ ೬೬ ॥

ಉತ್ಕೋಚಕೈರಧಿಕೃತೈಸ್ತಸ್ಕರೈಶ್ಚ ಪ್ರಪೀಡ್ಯತೇ ।
ಯಸ್ಯ ರಾಜ್ಞಃ ಪ್ರಜಾ ರುಷ್ಟಾ ಪಚ್ಯತೇ ನರಕೇಷು ಸಃ ॥ ೬೭ ॥

ಯೇ ದ್ವಿಜಾಃ ಪ್ರತಿಗೃಹ್ಣಂತಿ ನೃಪಸ್ಯಾನ್ಯಾಯವರ್ತಿನಃ ।
ಪ್ರಯಾಂತಿ ತೇಪಿ ಘೋರಾಣಿ ನರಕಾಣಿ ನ ಸಂಶಯಃ ॥ ೬೮ ॥

ಪಾರದಾರಿಕಚೌರ್ಯಾಣಾಂ ಯತ್ಪಾಪಂ ಪಾರ್ಥಿವಸ್ಯ ತತ್ ।
ಭವೇದರಕ್ಷತಸ್ತಸ್ಮಾತ್ ಘೋರಸ್ತಸ್ಯ ಪ್ರತಿಗ್ರಹಃ ॥ ೬೯ ॥

---

೬೫. ಶಿಲ್ಪಕರ್ಮಕರ್ತೃ, ದಾರುಕರ್ಮಕಾರಿ, ವೈದ್ಯ, ಸ್ವರ್ಣಕಾರ, ನಟ ಈ ವೃತ್ತಿಯ ಬ್ರಾಹ್ಮಣರೂ, ಕೃತಕಪಟ್ಟಿಮಡಿಯುಳ್ಳ ಬ್ರಾಹ್ಮಣರೂ ನರಕಗಾಮಿಗಳು.

೬೬. ಶಾಸ್ತ್ರೋಕ್ತವಾದ ಕಂದಾಯದ ಪರಿಮಿತಿಯನ್ನತಿಕ್ರಮಿಸಿ ಸ್ವೇಚ್ಛೆಯಿಂದ ಮಿತಿಮೀರಿ ಕಂದಾಯವನ್ನು ವಸೂಲ್ಮಾಡುವವನಾಗಿಯೂ ದಂಡನೆಯಲ್ಲಿಯೇ ಅತ್ಯಾಸಕ್ತನಾಗಿಯೂ ಇರುವ ರಾಜನು ನರಕದಲ್ಲಿ ಯಾತನೆಯನ್ನು ಅನುಭವಿಸುವನು.

೬೭. ಯಾವ ರಾಜನ ಪ್ರಜೆಗಳು ಲಂಚ ತೆಗೆದುಕೊಳ್ಳುವ ಅಧಿಕಾರಿಗಳಿಂದಲೂ, ಕಳ್ಳರಿಂದಲೂ, ಪೀಡಿಸಲ್ಪಟ್ಟು, ರೋಷಗೊಳ್ಳುವರೋ ಅಂತಹ ರಾಜನು ನರಕದಲ್ಲಿ ಬಿದ್ದು ಬೇಯುವನು.

೬೮. ಅನ್ಯಾಯವರ್ತಿಯಾದ ರಾಜನಿಂದ ಪ್ರತಿಗ್ರಹಮಾಡುವ ಬ್ರಾಹ್ಮಣರಿಗೂ ನಿಶ್ಚಯವಾಗಿ ಘೋರನರಕವೇ ಪ್ರಾಪ್ತಿಯಾಗುವುದು.

೬೯. ಪರದಾರಚೌರ್ಯಮಾಡುವ ಪುರುಷನಿಗೆ ಬರುವ ಪಾಪವು ಆ ಕಾರ್ಯವನ್ನು ತಡೆಗಟ್ಟದ ರಾಜನಿಗೆ ಪ್ರಾಪ್ತಿಯಾಗುವುದು. ಅಂತಹ ರಾಜನಿಂದ ಪ್ರತಿಗ್ರಹಮಾಡುವುದು ಘೋರನರಕಕ್ಕೆ ಸಾಧನ.

ಅಚೌರಂ ಚೌರವತ್ಪಶ್ಯೇಚ್ಚೋರಂ ವಾಽಚೌರರೂಪವತ್ ।
ಅವಿಚಾರ್ಯ ನೃಪಸ್ತಸ್ಮಾದ್ಘಾತಯನ್ನರಕಂ ವ್ರಜೇತ್ ॥ ೭೦ ॥

ಘೃತತೈಲಾನ್ನಪಾನಾನಿ ಮಧುಮಾಂಸಸುರಾಸವಂ ।
ಗುಡೇಕ್ಷುಕ್ಷಾರಶಾಕಾನಿ ದಧಿಮೂಲಫಲಾನಿ ಚ ॥ ೭೧ ॥

ತೃಣಂ ಕಾಷ್ಠಂ ಪುಷ್ಪಪತ್ರಮೌಷಧಂ ಕಾಂಸ್ಯಭಾಜನಂ ।
ಉಪಾನಚ್ಛತ್ರಶಕಟಮಾಸನಂ ಶಯನಾಂಬರಂ ॥ ೭೨ ॥

ತಾಮ್ರಂ ಸೀಸಂ ತ್ರಪುಂ ಕಾಚಂ ಶಂಖಾದ್ಯಂಚ ಜಲೋದ್ಭವಂ ।
ವಾರ್ಕ್ಷಂ ವಾ ವೈಣವಾದ್ಯಂ ವಾ ಗೃಹೇಷೂಪಸ್ಕರಾಣಿ ಚ ॥ ೭೩ ॥

ಊರ್ಣಾಕಾರ್ಪಾಸಕೌಶೇಯ ಭಂಗಪಟ್ಟೋದ್ಭವಾನಿ ಚ ।
ಸ್ಥೂಲಸೂಕ್ಷ್ಮಾಣಿ ವಸ್ತ್ರಾಣಿ ಯೇ ಚ ಲೋಭಾದ್ಧರಂತಿ ಚ ॥ ೭೪ ॥

ಏವಮಾದೀನಿ ಚಾನ್ಯಾನಿ ದ್ರವ್ಯಾಣಿ ವಿವಿಧಾನಿ ಚ ।
ನರಕಾಣಿ ಧ್ರುವಂ ಯಾಂತಿ ನರಾ ವಾ ನಾತ್ರ ಸಂಶಯಃ ॥ ೭೫ ॥

---

೭೦. ಚೋರನನ್ನು ಅಚೋರನೆಂದೂ, ಅಚೋರನನ್ನು ಚೋರನೆಂದೂ ವಿಚಾರವಿಲ್ಲದೆ ತೀರ್ಮಾನಿಸಿ ದಂಡಿಸುವ ರಾಜನೂ ಸಹ ನರಕಭಾಗಿ.

೭೧–೭೩. ಘೃತ, ತೈಲ, ಅನ್ನ, ಪಾನ, ಮಧು, ಮಾಂಸ, ಸುರಾ, ಆಸವ, ಗುಡ, ಕಬ್ಬು, ಕ್ಷಾರ, ತರಕಾರಿಗಳು, ಮೊಸರು, ಕಂದಮೂಲಾದಿಗಳು, ಫಲ, ತೃಣ, ಕಾಷ್ಠ, ಪುಷ್ಪ, ಪತ್ರ, ಔಷಧ, ಕಂಚಿನಪಾತ್ರೆ, ಪಾದರಕ್ಷೆ ಛತ್ರಿ, ಶಕಟ, ಆಸನ, ಶಯನ ಇವೇ ಮೊದಲಾದುವುಗಳನ್ನೂ,

೭೪–೭೫. ವಸ್ತ್ರ, ತಾಮ್ರ, ಸೀಸ, ತವರ, ಗಾಜು, ಶಂಖಾದಿಜಲೋದ್ಭವ ವಸ್ತುಗಳು, ದಾರುವಿನಿಂದ ತಯಾರಾದ ವಸ್ತು, ಬಿದಿರುಬೊಂಬಿನಿಂದ ನಿರ್ಮಿಸಿದ ಪದಾರ್ಥ, ಶಯ್ಯಾದಿ ಗೃಹೋಪಕರಣಗಳು, ಉಣ್ಣೆಬಟ್ಟೆ, ಹತ್ತಿಬಟ್ಟೆ, ಪಟ್ಟೆ, ನಯವಾದ, ಮತ್ತು ಒರಟು ಬಟ್ಟೆಗಳು ಇದೇ ತರಹದ ಇತರ ಪದಾರ್ಥಗಳನ್ನು ಲೋಭದಿಂದ ಅಪಹರಿಸುವವರು ನಿಜವಾಗಿಯೂ ನರಕಗಾಮಿಗಳು.

ಯದ್ವಾ ತದ್ವಾ ಪರದ್ರವ್ಯಮಪಿ ಸರ್ಷಪಮಾತ್ರಕಂ ।
ಅಪಹೃತ್ಯ ನರೋ ಯಾತಿ ನರಕಂ ನಾತ್ರ ಸಂಶಯಃ ॥ ೭೬ ॥

ಏವಮಾದ್ಯೈರ್ನರಃ ಪಾಪೈರುತ್ಕ್ರಾಂತೇಃ ಸಮನಂತರಂ ।
ಶರೀರಂ ಯಾತನಾರ್ಥಾಯ ಪೂರ್ವಾಕಾರಮವಾಪ್ನುಯಾತ್ ॥ ೭೭ ॥

ಯಮಲೋಕಂ ವ್ರಜೇತ್ತೇನ ಶರೀರೇಣ ಯಮಾಜ್ಞಯಾ ।
ಯಮದೂತೈರ್ಮಹಾಘೋರೈರ್ನೀಯಮಾನಃ ಸುದುಃಖಿತಃ ॥ ೭೮ ॥

ತಿರ್ಯಗ್ಮಾನುಷದೇಹಾನಾಮಧರ್ಮನಿರತಾತ್ಮನಾಂ ।
ಧರ್ಮರಾಜಃ ಸ್ಮೃತಃ ಶಾಸ್ತಾ ಸುಘೋರೈರ್ವಿವಿಧೈರ್ವಧೈಃ ॥ ೭೯ ॥

ವಿನಯಾಚಾರಯುಕ್ತಾನಾಂ ಪ್ರಮಾದಾತ್ಸ್ಖಲಿತಾತ್ಮನಾಂ ।
ಪ್ರಾಯಶ್ಚಿತ್ತೈರ್ಗುರುಃ ಶಾಸ್ತಾ ನ ಚ ತೈರ್ದೃಶ್ಯತೇ ಯಮಃ ॥ ೮೦ ॥

---

೭೬. ಯಾವುದೆ ಆಗಲಿ ಸಾಸುವೆಯಷ್ಟಾದರೂ ಪರರಸ್ವತ್ತನ್ನು ಅಪಹಾರಮಾಡಿದವನು ನರಕಭಾಗಿಯಾಗುವನು.

೭೭. ಈ ತರಹವಾದ ಪಾಪಾಚರಣೆಗಳಿಂದ ಪುರುಷನು ಉತ್ಕ್ರಾಂತ್ಯನಂತರದಲ್ಲಿ ಯಾತನೆಯನ್ನನುಭವಿಸುವುದಕ್ಕೆ ಪೂರ್ವಶರೀರಸದೃಶವಾದ ಶರೀರವನ್ನು ಪಡೆಯುವನು.

೭೮. ಆ ಶರೀರವನ್ನು ಧರಿಸಿ ಯಮಾಜ್ಞಾನುವರ್ತಿಗಳೂ ಘೋರ ರೂಪಿಗಳೂ ಆದ ಯಮದೂತರಿಂದ ಯಮಲೋಕಕ್ಕೆ ಒಯ್ಯಲ್ಪಡುವನು.

೭೯. ತಿರ್ಯಗ್ ಮತ್ತು ಮನುಷ್ಯ ಶರೀರವನ್ನು ಪಡೆದು ಅಧರ್ಮನಿರತವಾಗಿದ್ದ ಪ್ರಾಣಿಗಳಿಗೆ ಯಮಧರ್ಮರಾಜನು ವಿವಿಧ ಘೋರಹಿಂಸೆ ವಿಧಿಸಿ ನ್ಯಾಯವನ್ನು ಕಾಪಾಡುವ ಶಿಕ್ಷಕನಾಗುವನು.

೮೦. ವಿನಯ ಮತ್ತು ಸದಾಚಾರಸಂಪನ್ನರಾದವರಿಗೆ ಕದಾಚಿತ್ ಪ್ರಮಾದದಿಂದ ಧರ್ಮಸ್ಖಾಲಿತ್ಯವು ಸಂಭವಿಸಿದರೆ, ಅಂಥವರಿಗೆ ಗುರುವು ಪ್ರಾಯಶ್ಚಿತ್ತವಿಧಿಸಿ ಶಾಸಕನಾಗುವನು. ಅವರು ಯಮನ ಮುಖವನ್ನೇ ನೋಡುವುದಿಲ್ಲ.

ಪಾರದಾರಿಕಚೌರಾಣಾಮನ್ಯಾಯವ್ಯವಹಾರಿಣಾಂ ।
ನೃಪತಿಃ ಶಾಸಕಸ್ತೇಷಾಂ ಪ್ರಚ್ಛನ್ನಾನಾಂ ಚ ಧರ್ಮರಾಟ್ ॥ ೮೧ ॥

ತಸ್ಮಾತ್ ಕೃತಸ್ಯ ಪಾಪಸ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।
ನಾಭುಕ್ತಸ್ಯಾನ್ಯಥಾ ನಾಶಃ ಕಲ್ಪಕೋಟಿಶತೈರಪಿ ॥ ೮೨ ॥

ಯಃ ಕರೋತಿ ಸ್ವಯಂ ಕರ್ಮ ಕಾರಯೇದ್ವಾಪಿ ಮೋದಯೇತ್ ।
ಕಾಯೇನ ಮನಸಾ ವಾಚಾ ತಸ್ಯ ಚಾಧೋಗತಿಃ ಫಲಂ ॥ ೮೩ ॥

ಇತಿ ಸಂಕ್ಷೇಪತಃ ಪ್ರೋಕ್ತಾಃ ಪಾಪಭೇದಾಃ ಸಸಾಧನಾಃ ।
ಕಥ್ಯಂತೇ ಗತಯಶ್ಚಿತ್ರಾ ನರಾಣಾಂ ಪಾಪಕರ್ಮಣಾಂ ॥ ೮೪ ॥

---

೮೧. ಪರದಾರಚೋರನಿಗೂ ಅನ್ಯಾಯವ್ಯವಹಾರಿಗಳಿಗೂ ರಾಜನೇ ಶಿಕ್ಷಕನು. ಗುಪ್ತವಾಗಿ ಕಾರ್ಯಗಳು ನಡೆದು ರಾಜನ ಗಮನಕ್ಕೇ ಬಾರದಿರುವ ಸಂದರ್ಭದಲ್ಲಿ ಅವರಿಗೆ ಪರಲೋಕದಲ್ಲಿ ಯಮಧರ್ಮರಾಯನು ನ್ಯಾಯಾನ್ಯಾಯ ನಿರ್ಣಯಿಸುವ ಶಿಕ್ಷಕನಾಗುವನು.

೮೨. ಆದುದರಿಂದ ಮಾಡಿದ ಪಾಪನಿವೃತ್ತಿಗಾಗಿ ಅದರ ಪ್ರಾಯಶ್ಚಿತ್ತವನ್ನನುಭವಿಸಬೇಕು. ಆ ಪ್ರಕಾರ ಉಪಭೋಗಿಸದೆ, ಕೋಟಿಕಲ್ಪ ಕಳೆದರೂ ಕರ್ಮವು ನಾಶವಾಗುವುದಿಲ್ಲ.

೮೩. ಕಾಯಿಕ, ವಾಚಿಕ, ಮಾನಸಿಕವೆಂಬ ಮೂರುವಿಧವಾದ ನಿಷಿದ್ಧ ಕರ್ಮವನ್ನು ಸ್ವಯಂಮಾಡಿದವನೂ. ಪ್ರೇರೇಪಿಸಿ ಮಾಡಿಸಿದವನೂ, ಮತ್ತು ಅದನ್ನು ಅನುಮೋದಿಸಿದವನೂ ಸಹ ಅಧೋಗತಿಯನ್ನು ಹೊಂದುವರು.

೮೪. ಪಾಪವಿಶೇಷಗಳು ಈರೀತಿ ಸಕಾರಣವೂ ಸಂಕ್ಷೇಪವೂ ಆಗಿ ನಿರೂಪಿಸಲ್ಪಟ್ಟುವು. ಈ ಪಾಪಿಪಳಿಗೆ ಉಂಟಾಗುವ ವಿಚಿತ್ರಗತಿಗಳು ಮುಂದೆ ನಿರೂಪಿಸಲ್ಪಟ್ಟಿವೆ.

ವಾಕ್ಕಾಯಚಿತ್ತಜನಿತೈರ್ಬಹುಭೇದಭಿನ್ನೈಃ ।
ಕೃತ್ಯೈಃ ಶುಭಾಶುಭ ಫಲೋದಯಹೇತುಭೂತೈಃ ।
ಭಾಸ್ವತ್ಸುರೇಶಭುವನಂ ನರಕಾನನೇಕಾನ್ ।
ಸಂಪ್ರಾಪ್ನುವಂತಿ ಮನುಜಾ ಮನುಜೇಂದ್ರಚಂದ್ರ ॥ ೮೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಪಾಪ
ಭೇದಾಖ್ಯಾನಂ ನಾಮ ಪಂಚಮೋಽಧ್ಯಾಯಃ.



---

೮೫. ಎಲೈ ಮಹಾರಾಜನೇ ! ಪುರುಷರು ಮನೋವಾಕ್ಕಾಯಗಳಿಂದ ಮಾಡಿದ ಶುಭ ಕರ್ಮಗಳಿಂದ ಸ್ವರ್ಗವನ್ನೂ ಮತ್ತು ಅಶುಭ ಕರ್ಮಗಳಿಂದ ನರಕವನ್ನೂ ಸಹ ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಉತ್ತರಪರ್ವದಲ್ಲಿ ಐದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಷ್ಠೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅಥೈಭಿಃ ಪಾತಕೈರ್ಯಾಂತಿ ಯಮಲೋಕಂ ಚತುರ್ವಿಧೈಃ ।
ಸಂತ್ರಾಸಜನನಂ ಘೋರಂ ವಿವಶಾಃ ಸರ್ವದೇಹಿನಃ ॥ ೧ ॥

ಗರ್ಭಸ್ಥೈರ್ಜಾಯಮಾನೈಶ್ಚ ಬಾಲೈಸ್ತರುಣಮಧ್ಯಮೈಃ ।
ಪುಂಸ್ತ್ರೀನಪುಂಸಕೈರ್ವೃದ್ಧೈರ್ಜ್ಞಾತವ್ಯಂ ಸರ್ವಜಂತುಭಿಃ ॥ ೨ ॥

ಶುಭಾಶುಭಫಲಂ ತತ್ರ ದೇಹಿನಾಂ ಪ್ರವಿಚಾರ್ಯತೇ ।
ಚಿತ್ರಗುಪ್ತಾದಿಭಿಃ ಸಭ್ಯೈರ್ಮಧ್ಯಸ್ಥೈಃ ಸರ್ವದರ್ಶಿಭಿಃ ॥ ೩ ॥

---

## ಆರನೆಯ ಅಧ್ಯಾಯ

೧-೨. ಶ್ರೀ ಕೃಷ್ಣನು ಹೇಳುತ್ತಾನೆ—ಹಿಂದೆ ಹೇಳಿದ ಪಾತಕಗಳಿಂದ ಸರ್ವಪ್ರಾಣಿಗಳೂ ಘೋರವಾದ ಯಮಲೋಕಕ್ಕೆ ಹೋಗುವುವು ಎಂದು ಗರ್ಭಸ್ಥರೂ, ಬಾಲರೂ, ಯುವಕರೂ, ಪುರುಷರೂ, ಸ್ತ್ರೀಯರೂ, ನಪುಂಸಕರೂ' ವೃದ್ಧರೂ, ಸರ್ವಪ್ರಾಣಿಗಳೂ ತಿಳಿದುಕೊಳ್ಳಬೇಕು.

೩. ಆ ಯಮಲೋಕದಲ್ಲಿ ಪ್ರಾಣಿಗಳ ಕರ್ಮಗಳಿಗೆ ಸಾಕ್ಷಿಗಳಾಗಿಯೂ, ನಿಷ್ಪಕ್ಷಪಾತಿಗಳಾಗಿಯೂ, ಯಮನಸಭಾಸದರಾಗಿಯೂ ಇರುವ ಚಿತ್ರಗುಪ್ತಾದಿಗಳು ಪ್ರಾಣಿಗಳ ಶುಭಾಶುಭಕರ್ಮಗಳನ್ನು ವಿಚಾರಿಸುವರು.

ನ ತೇಽತ್ರ ಪ್ರಾಣಿನಃ ಸಂತಿ ಯೇ ನ ಯಾಂತಿ ಯಮಕ್ಷಯಂ ।
ಅವಶ್ಯಂ ಹಿ ಕೃತಂ ಕರ್ಮ ಭೋಕ್ತವ್ಯಂ ತದ್ವಿಧಾರಿತಂ ॥ ೪ ॥

ತತ್ರ ಯೇ ಶುಭಕರ್ಮಾಣಃ ಸೌಮ್ಯಚಿತ್ತಾ ದಯಾನ್ವಿತಾಃ ।
ತೇ ನರಾ ಯಾಂತಿ ಸೌಮ್ಯೇನ ಪಥಾ ಯಮನಿಕೇತನಂ ॥ ೫ ॥

ಯಃ ಪ್ರದದ್ಯಾದ್ದ್ವಿಜೇಂದ್ರಾಣಾಮುಪಾನತ್ಕಾಷ್ಠಪಾದುಕಾಂ ।
ಸ ನರಾಶ್ವೇನ ಮಹತಾ ಸುಖಂ ಯಾತಿ ಯಮಾಲಯಂ ॥ ೬ ॥

ಛತ್ರದಾನೇನ ಗಚ್ಛಂತಿ ಯಥಾ ಛತ್ರೇಣ ದೇಹಿನಃ ।
ದಿವ್ಯವಸ್ತ್ರಪರೀಧಾನಾ ಯಾಂತಿ ವಸ್ತ್ರಪ್ರದಾಯಿನಃ ॥ ೭ ॥

ಶಿಬಿಕಾಶ್ವ ಪ್ರದಾನೇನ ತತಸ್ತೇನ ಸುಖಂ ವ್ರಜೇತ್ ।
ಶಯ್ಯಾಸನಪ್ರದಾನೇನ ಸುಖಂ ಯಾಂತಿ ಯಮಾಶ್ರಯಂ ॥ ೮ ॥

೪. ಯಮಲೋಕಕ್ಕೆ ಹೋಗದಿರುವ ಪ್ರಾಣಿಯು ಈ ಭೂಲೋಕದಲ್ಲಿ ಒಂದೂ ಇರುವುದಿಲ್ಲ. ಚಿತ್ರಗುಪ್ತಾದಿಗಳು ಮತ್ತು ಯಮಸಭಾಸದರು ನಿರ್ಧರಿಸಿದಂತೆ ಪ್ರಾಣಿಯು ಮಾಡಿದ ಕರ್ಮಕ್ಕೆ ಫಲವನ್ನು ಅನುಭವಿಸಲೇಬೇಕು.

೫. ಅವರಲ್ಲಿ ಸೌಮ್ಯಚಿತ್ತರಾಗಿಯೂ, ಕೃಪಾಳುಗಳಾಗಿಯೂ ಶುಭಕರ್ಮನಿರತರೂ ಆದ ಪುರುಷರು. ಸೌಮ್ಯಮಾರ್ಗದಿಂದ ಯಮಾಲಯಕ್ಕೆ ಹೋಗುವರು.

೬. ಬ್ರಾಹ್ಮಣರಿಗೆ ಪಾದುಕಾದಾನ ಮಾಡಿದವನು ಉತ್ತಮಾಶ್ವಾರೂಢನಾಗಿ ಸುಖವಾಗಿ ಯಮಾಲಯವನ್ನು ಸೇರುವನು.

೭. ಛತ್ರಿದಾತೃವು ಛತ್ರಿಸಹಿತನಾಗಿಯೂ, ವಸ್ತ್ರದಾತೃವು ದಿವ್ಯವಸ್ತ್ರವನ್ನು ಧರಿಸಿದವನಾಗಿಯೂ ಪರಲೋಕಕ್ಕೆ ಹೋಗುವರು.

೮. ಪಲ್ಲಕ್ಕಿ ಮತ್ತು ಅಶ್ವಗಳನ್ನು ದಾನಮಾಡಿದವನು ತದಾರೂಢನಾಗಿಯೂ, ಶಯ್ಯಾ ಮತ್ತು ಆಸನದಾತೃವು ಸುಖವಾಗಿಯೂ ಯಮಲೋಕವನ್ನು ಹೊಂದುವರು.

ಆರಾಮಕರ್ತಾ ಛಾಯಾಸು ಶೀತಲಾಸು ಸುಖಂ ವ್ರಜೇತ್ ।
ಯಾಂತಿ ಪುಷ್ಪಕಯಾನೇನ ಪುಷ್ಪಾರಾಮಪ್ರದಾಯಿನಃ ॥ ೯ ॥

ದೇವಾಯತನಕರ್ತಾ ಚ ಯತೀನಾಮಾಶ್ರಮಸ್ಯ ಚ ।
ಅನಾಥಮಂಡಪಾನಾಂ ಚ ಕ್ರೀಡನ್ಯಾತಿ ಗೃಹೋತ್ತಮೈಃ ॥ ೧೦ ॥

ದೇವಾಗ್ನಿಗುರುವಿಪ್ರಾಣಾಂ ಮಾತಾಪಿತ್ರೋಶ್ಚ ಪೂಜಕಾಃ ।
ಪೂಜ್ಯಮಾನಾ ನರಾ ಯಾಂತಿ ಕಾಮಿಕೇನ ಪಥಾ ಸುಖಂ ॥ ೧೧ ॥

ದ್ಯೋತಯಂತೋ ದಿಶಃ ಸರ್ವಾ ಯಾಂತಿ ದೀಪಪ್ರದಾಯಿನಃ ।
ಪ್ರತಿಶ್ರಯಪ್ರದಾನೇನ ಸುಖಂ ಯಾಂತಿ ಗೃಹಂ ಸ್ವಯಂ ॥ ೧೨ ॥

ಸರ್ವಕಾಮಸಮೃದ್ಧೇನ ಪಥಾ ಗಚ್ಛಂತಿ ಗೋಪ್ರದಾಃ ।
ಯೇ ನ ಪಾಪಾನಿ ಕುರ್ವಂತಿ ತೇ ತೃಪ್ತಾ ಯಾಂತಿ ನಾನ್ಯಥಾ ॥ ೧೩ ॥

---

೯. ಆರಾಮಕರ್ತೃವು ಶೀತಲವಾದ ಛಾಯೆಯಲ್ಲಿ ಸುಖವಾಗಿ ಯಮಗೃಹಕ್ಕೆ ತೆರಳುವನು. ಪುಷ್ಪವಾಟಿಕೆಯನ್ನು ಮಾಡಿಸಿದವನು ಪುಷ್ಪಕವಿಮಾನದಲ್ಲಿ ಯಮನಿಲಯವನ್ನು ಸೇರುವನು.

೧೦. ದೇವಸ್ಥಾನವನ್ನು ಕಟ್ಟಿಸಿದವನೂ ಯತ್ಯಾಶ್ರಮನಿರ್ಮಾತೃವೂ ಅನಾಥಾಲಯದಾತೃವೂ, ಮಂಟಪಕರ್ತೃವೂ ಮಾರ್ಗಮಧ್ಯದಲ್ಲಿ ಉತ್ತಮಗೃಹಗಳಲ್ಲಿ ಕ್ರೀಡಿಸುತ್ತಾ ಯಮಲೋಕವನ್ನು ಹೊಂದುವರು,

೧೧. ದೇವ, ಅಗ್ನಿ, ಗುರು, ವಿಪ್ರ, ಮಾತೃ, ಪಿತೃ ಇವರ ಪೂಜಕರು ಯಮಭಟರಿಂದ ಪೂಜ್ಯಮಾನರಾಗಿ ಸ್ವೇಚ್ಛೆಯಿಂದ (ಮನಸ್ಸಿಗೆ ಬಂದ ಮಾರ್ಗದಲ್ಲಿ) ಸುಖವಾಗಿ ಯಮಾಲಯವನ್ನು ಸೇರುವರು.

೧೨. ದೀಪದಾನ ಮಾಡಿದವರು ಸರ್ವದಿಕ್ಕುಗಳನ್ನೂ ಪ್ರಕಾಶಪಡಿಸುತ್ತಾ ಹೋಗುವರು. ಗೃಹದಾನಮಾಡಿದವರು ಸುಖವಾಗಿ ಯಮಗೃಹವನ್ನು ಸೇರುವರು.

೧೩. ಗೋದಾನ ಮಾಡಿದವರು ಸರ್ವಕಾಮ್ಯ ವಸ್ತುಸಮೃದ್ಧವಾದ ದಾರಿಯಲ್ಲಿ ಯಮಗೃಹಕ್ಕೆ ನಡೆಯುವರು. ನಿಷಿದ್ಧಕರ್ಮಗಳನ್ನು ಮಾಡದಿರುವವರು ತೃಪ್ತರಾಗಿ ಹೋಗುವರು.

**ಆರ್ತೌಷಧಪ್ರದಾತಾರಃ ಸುಖಂ ಯಾಂತಿ ನಿರಾಕುಲಾಃ ।**
**ವಿಶ್ರಾಮ್ಯಮಾಣಾ ಗಚ್ಛಂತಿ ಗುರುಶುಶ್ರೂಷಣೇ ರತಾಃ ॥ ೧೪ ॥**

**ಪಾದಶೌಚಪ್ರದಾನೇನ ಶೀತಲೇನ ಪಥಾ ವ್ರಜೇತ್ ।**
**ಪಾದಾಭ್ಯಂಗಂ ಚ ಯಃ ಕುರ್ಯಾದಶ್ವಪೃಷ್ಠೇನ ಸ ವ್ರಜೇತ್ ॥ ೧೫ ॥**

**ಹೇಮರತ್ನಪ್ರದಾನೇನ ಯಾತಿ ದುರ್ಗಾಣಿ ನಿಸ್ತರನ್ ।**
**ಯಾನವಾಹನದಾನೇನ ನರಯಾನೇನ ಗಚ್ಛತಿ ॥ ೧೬ ॥**

**ಸರ್ವಕಾಮಸಮೃದ್ಧಾತ್ಮಾ ಭೂಮಿದಾನೇನ ಗಚ್ಛತಿ ।**
**ಅನ್ನಪಾನಪ್ರದಾನೇನ ಪಿಬನ್ ಖಾದಂಶ್ಚ ಗಚ್ಛತಿ ॥ ೧೭ ॥**

**ಇತ್ಯೇವಮಾದಿಭಿರ್ದಾನೈಃ ಸುಖಂ ಯಾಂತಿ ಯಮಕ್ಷಯಂ ।**
**ಸ್ವರ್ಗೇಽಪಿ ವಿಪುಲಾನ್ಭೋಗಾನ್ಪ್ರಾಪ್ನುವಂತಿ ನರೋತ್ತಮ ॥ ೧೮ ॥**

---

೧೪. ರೋಗಾರ್ತರಿಗೆ ಔಷಧದಾತೃವು ನಿರಾಕುಲನಾಗಿ ಸುಖದಿಂದ ಯಾಮಾಲಯವನ್ನು ಹೊಂದುತ್ತಾನೆ. ಗುರುಸೇವಾಸಕ್ತರು ಮಾರ್ಗದಲ್ಲಿ ವಿಶ್ರಾಂತಿಪಡೆದು ಸಾಗುವರು.

೧೫. ಪಾದಪ್ರಕ್ಷಾಳನ ಮಾಡಿದವನು ಶೀತಲಮಾರ್ಗದಲ್ಲಿಯೂ, ಅಭ್ಯಂಗನಮಾಡಿಸಿದವನು ಅಶ್ವಾರೋಹಿಯಾಗಿಯೂ ಗಮನಮಾಡುವರು.

೧೬. ಸ್ವರ್ಣ ಮತ್ತು ರತ್ನದಾತೃವು ದುರ್ಗಗಳನ್ನು ಸುಖವಾಗಿ ದಾಟಿಕೊಂಡೂ, ಯಾನವಾಹನದಾತೃವು ನರಯಾನದಿಂದಲೂ ಆ ಪರಲೋಕವನ್ನು ಸೇರುವರು.

೧೭. ಭೂದಾನಮಾಡುವುದರಿಂದ ಸರ್ವಕಾಮಸಮೃದ್ಧನಾಗಿಯೂ, ಅನ್ನಪಾನಾದಿ ದಾನದಿಂದ ಪಾನಭೋಜನಸಂಪೂರ್ಣನಾಗಿಯೂ ಯಮಲೋಕ ಪ್ರಯಾಣ ಮಾಡುವರು.

೧೮. ಎಲೈ ಮಹಾರಾಜನೇ ! ಇವೇ ಮೊದಲಾದ ದಾನಗಳಿಂದ ಪುರುಷನು ಸುಖವಾಗಿ ಯಮಗೃಹಕ್ಕೆ ಹೋಗುವುದಲ್ಲದೆ ಸ್ವರ್ಗದಲ್ಲಿ ವಿವಿಧ ಭೋಗಗಳನ್ನೂ ಅನುಭವಿಸುವನು.

ಸರ್ವೇಷಾಮೇವ ದಾನಾನಾಮನ್ನದಾನಂ ಪರಂ ಸ್ಮೃತಂ ।
ಸದ್ಯಃ ಪ್ರೀತಿಕರಂ ದಿವ್ಯಂ ಬಲಬುದ್ಧಿವಿವರ್ಧನಂ ॥ ೧೯ ॥

ತ್ರಯಾಣಾಮಪಿ ಲೋಕಾನಾಂ ಜೀವಿತಂ ಹ್ಯುದಕಂ ಸ್ಮೃತಂ ।
ಪವಿತ್ರಮಮೃತಂ ದಿವ್ಯಂ ಶುದ್ಧಂ ಸರ್ವರಸಾಯನಂ ॥ ೨೦ ॥

ಅನ್ನಂ ಪಾನಂ ಚ ಗೋವಸ್ತ್ರಭೂಶಯ್ಯಾಚ್ಛತ್ರಮಾಸನಂ ।
ಪರಲೋಕೇ ಪ್ರಶಸ್ತಾನಿ ದಾನಾನ್ಯಷ್ಟೌ ವಿಶೇಷತಃ ॥ ೨೧ ॥

ಅನ್ನದಾನಂ ವಿಶೇಷೇಣ ಧರ್ಮರಾಜಪುರೇ ನರಾಃ ।
ಯಸ್ಮಾದ್ಯಾಂತಿ ಸುಖೇನೈವ ತಸ್ಮಾದ್ಧರ್ಮಂ ಸಮಾಚರೇತ್ ॥ ೨೨ ॥

ಯೇ ಪುನಃ ಕ್ರೂರಕರ್ಮಾಣಃ ಪಾಪಾ ದಾನವಿವರ್ಜಿತಾಃ ।
ತೇ ಘೋರೇಣ ಪಥಾ ಯಾಂತಿ ದಕ್ಷಿಣೇನ ಯಮಾಲಯಂ ॥ ೨೩ ॥

---

೧೯. ಸದ್ಯಃ ಪ್ರೀತಿಕರವಾಗಿಯೂ ಬಲ, ಬುದ್ಧಿ ವಿವರ್ಧಕವಾಗಿಯೂ ಇರುವ ಅನ್ನದಾನವೇ ಎಲ್ಲಾ ದಾನಗಳಲ್ಲೂ ಅತ್ಯುತ್ತಮವಾದುದು.

೨೦. ಪವಿತ್ರವಾಗಿಯೂ, ಶುದ್ಧವಾಗಿಯೂ, ಅಮೃತಪ್ರಾಯವಾಗಿಯೂ, ಸರ್ವರಸಾಯನಕ್ಕೆ ಸಮನಾಗಿಯೂ, ಇರುವ ಉದಕವು ಮೂರು ಲೋಕಗಳಿಗೂ ಜೀವಿತವು. ಆದ್ದರಿಂದ ಈ ಉದಕದಾನವು ಸಹ ಶ್ರೇಷ್ಠವಾದುದು.

೨೧. ಅನ್ನ, ಉದಕ, ಗೋ, ವಸ್ತ್ರ, ಭೂ, ಶಯ್ಯಾ ಛತ್ರಿ, ಆಸನಗಳೆಂಬ ಈ ಎಂಟುದಾನಗಳೂ ಪರಲೋಕಕ್ಕೆ ಪ್ರಶಸ್ತವಾದ ಸಾಧನಗಳು.

೨೨. ಈ ಅನ್ನದಾನವು ವಿಶೇಷತಃ ಯಮಲೋಕದಲ್ಲಿ ಸಹಾಯಮಾಡುವುದು. ಧಾರ್ಮಿಕರು ಸುಖವಾಗಿ ಯಾಮಾಲಯಕ್ಕೆ ಹೋಗುತ್ತಾರಾದ್ದರಿಂದ ಎಲ್ಲರೂ ಧರ್ಮಾನುಷ್ಠಾನನಿರತರಾಗಬೇಕು.

೨೩. ದಾನವಿವರ್ಜಿತರಾಗಿ ಕ್ರೂರಕರ್ಮನಿರತರಾಗಿರುವರು ಘೋರವಾದ ದಕ್ಷಿಣದ ಮಾರ್ಗದಿಂದ ಯಮಾಲಯಕ್ಕೆ ಹೋಗುವರು.

ಷಡಶೀತಿಸಹಸ್ರಾಣಿ ಯೋಜನಾನಾಮತೀತ್ಯ ಯತ್ ।
ವೈವಸ್ವತಪುರಂ ಜ್ಞೇಯಂ ನಾನಾರೂಪವ್ಯವಸ್ಥಿತಂ ॥ ೨೪ ॥

ಸಮೀಪಸ್ಥಮಿವಾಭಾತಿ ನರಾಣಾಂ ಶುಭಕರ್ಮಣಾಂ ।
ಪಾಪಾನಾಮತಿದೂರಸ್ಥಂ ಪಥಾ ರೌದ್ರೇಣ ಗಚ್ಛತಾಂ ॥ ೨೫ ॥

ತೀವ್ರಕಂಟಕಯುಕ್ತೇನ ಶರ್ಕರಾನಿಚಿತೇನ ಚ ।
ಕ್ಷುರಧಾರಾನಿಭೈಸ್ತೀವ್ರೈಃ ಪಾಷಾಣೈರ್ನಿಚಿತೇನ ಚ ॥ ೨೬ ॥

ಕ್ವಚಿತ್ಪಂಕೇನ ಮಹತಾ ದುರುತ್ತಾರೈಶ್ಚ ಖಾತಕೈಃ ।
ಲೋಹಸೂಚೀನಿಭೈರ್ದರ್ಭೈಃ ಸಂಛನ್ನೇನ ಪಥಾ ಕ್ವಚಿತ್ ॥ ೨೭ ॥

ತಟಪ್ರಪಾತವಿಷ್ಟಂಭೈಃ ಪರ್ವತೈರ್ವೃಕ್ಷ ಸಂಕುಲೈಃ ।
ಪ್ರತಪ್ತಾಂಗಾರಯುಕ್ತೇನ ಯಾಂತಿ ಮಾರ್ಗೇಣ ದುಃಖಿತಾಃ ॥ ೨೮ ॥

ಕ್ವಚಿದ್ವಿಷಮಗರ್ತೈಶ್ಚ ಕ್ವಚಿಲ್ಲೋಷ್ಟೈಃ ಸುಪಿಚ್ಛಲೈಃ ।
ಪ್ರತಪ್ತವಾಲುಕಾಭಿಶ್ಚ ತಥಾ ತೀಕ್ಷ್ಣೈಶ್ಚ ಶಂಕುಭಿಃ ॥ ೨೯ ॥

---

೨೪. ನಾನಾರೂಪವಾದ ನರಕಗಳಿಂದ ಕೂಡಿದ ಯಮನ ಪಟ್ಟಣವು ಎಂಭತ್ತಾರು ಸಹಸ್ರಯೋಜನ ದೂರದಲ್ಲಿದೆ.

೨೫. ಇಂಥ ನರಕವು ಶುಭಕರ್ಮಿಗಳಿಗೆ ಸಮೀಪದಲ್ಲಿರುವ ಹಾಗೂ ಮತ್ತು ರೌದ್ರಮಾರ್ಗದಿಂದ ಹೋಗುವ ಪಾಪಿಗಳಿಗೆ ಬಹಳ ದೂರವಲ್ಲಿರುವ ಹಾಗೂ ತೋರುವುದು.

೨೬–೨೮. ಪಾಪಿಗಳು ಹೋಗುವ ದಾರಿಯಲ್ಲಿ ಕೆಲವು ಕಡೆ ತೀವ್ರವಾದ ಕಂಟಕಗಳೂ, ಮತ್ತೆಕೆಲವು ಕಡೆ ಕ್ಷುರಧಾರಾಸದೃಶವಾದ ತೀಕ್ಷ್ಣಪಾಷಾಣಗಳೂ, ಕೆಲವುಕಡೆ ಕೆಸರುಗಳೂ, ಮತ್ತೆ ಕೆಲವುಕಡೆ ಮಹತ್ತಾದ ದಾಟಲಾರದ ಕಂದಕಗಳೂ, ಕೆಲವುಕಡೆ ಲೋಹದಸೂಜಿಗೆ ಸಮನಾದ ದರ್ಭೆಗಳೂ ಇರುತ್ತವೆ.

೨೯-೩೦. ಮತ್ತೆ ಕೆಲವು ಕಡೆಗಳಲ್ಲಿ ತಟಪ್ರಪಾತದಿಂದ ದುರ್ಗಮವಾದ ಪರ್ವತಗಳೂ ಕೆಲವು ಪ್ರದೇಶಗಳಲ್ಲಿ ತಪ್ತಾಂಗಾರಗಳೂ ಹೀಗೆ ವಿಷಮ

ಅನೇಕತಾಪ್ಯೈರ್ವಿತತೈರ್ವ್ಯಾಪ್ತಂ ವಂಶವನಂ ಕ್ವಚಿತ್ ।
ಕ್ವಚಿದ್ವಾಲುಕಯಾ ವ್ಯಾಪ್ತಂ ಕಷ್ಟೇನೈವ ಪ್ರವೇಶನಂ ॥ ೩೦ ॥

ಕ್ವಚಿದುಷ್ಣಾಂಬುನಾ ವ್ಯಾಪ್ತಂ ಕ್ವಚಿತ್ಕಾರೀಷ ವಹ್ನಿನಾ ।
ಕ್ವಚಿತ್ಸಿಂಹೈರ್ವೃಕೈರ್ವ್ಯಾಪ್ತಂ ದಂಶೈಃ ಕೀಟೈಶ್ಚ ದಾರುಣೈಃ ॥ ೩೧ ॥

ಕ್ವಚಿನ್ಮಹಾಜಲೌಕಾಭಿಃ ಕ್ವಚಿಚ್ಚಾಜಗರೈಃ ಪುನಃ ।
ಮಕ್ಷಿಕಾಭಿಶ್ಚ ರೌದ್ರಾಭಿಃ ಕ್ವಚಿತ್ಸರ್ಪೈರ್ವಿಷೋಲ್ಬಣೈಃ ॥ ೩೨ ॥

ಮತ್ತಮಾತಂಗಯೂಥೈಶ್ಚ ಬಲೋನ್ಮತ್ತೈಃ ಪ್ರಮಾಥಿಭಿಃ ।
ಪಂಥಾನಮುಲ್ಲಿಖದ್ಭಿಶ್ಚ ತೀಕ್ಷ್ಣಶೃಂಗೈರ್ಮಹಾವೃಷೈಃ ॥ ೩೩ ॥

ಮಹಾವಿಷಾಣೈರ್ಮಹಿಷೈರುಷ್ಟ್ರೈರ್ಮತ್ತೈಶ್ಚ ಖಾದಕೈಃ ।
ಡಾಕಿನೀಭಿಶ್ಚ ರೌದ್ರಾಭಿರ್ವಿಕರಾಲೈಶ್ಚ ರಾಕ್ಷಸೈಃ ॥ ೩೪ ॥

ವ್ಯಾಧಿಭಿಶ್ಚ ಮಹಾಘೋರೈಃ ಪೀಡ್ಯಮಾನಾ ವ್ರಜಂತಿ ಚ ।
ಮಹಾಧೂಲೀವಿಮಿಶ್ರೇಣ ಮಹಾಚಂಡೇನ ವಾಯುನಾ ॥ ೩೫ ॥

---

ಗರ್ತಗಳೂ ಮಣ್ಣುಹೆಂಟೆಗಳೂ ಮರಳು ದಿಣ್ಣೆಗಳೂ, ತೀಕ್ಷ್ಣವಾದ ಗೂಟಗಳೂ ವಿಸ್ತ್ರತವಾದ ವಂಶವನಗಳೂ, ಮತ್ತು ದುಷ್ಪ್ರವೇಶ್ಯವಾದ ವಾಲುಕೆಗಳೂ ಸಹ ಇರುತ್ತವೆ.

೩೧-೩೩. ಮತ್ತೆ ಕೆಲವುಕಡೆ ಉಷ್ಣಾಂಬುಗಳೂ ಬೆರಣಿಯ ಬೆಂಕಿಗಳೂ ದಾರುಣವಾದ ಸಿಂಹ, ತೋಳ, ಕಾಡುನೊಣ, ಕೀಟಗಳು, ಮಹಾಜಿಗಣೆ, ಹೆಬ್ಬಾವು, ರೌದ್ರಮಕ್ಷಿಕ, ವಿಷೋಲ್ಬಣಸರ್ಪ, ಮತ್ತಗಜಗಳು, ತೀಕ್ಷ್ಣವಾದ ಕೊಂಬನ್ನುಳ್ಳ ವೃಷಭಗಳು ಇವೇ ಮೊದಲಾದ ದಾರುಣವಾದ ಪ್ರಾಣಿಗಳಿಂದ ಆವರಿಸಲ್ಪಟ್ಟಿದೆ.

೩೪-೩೫. ಪಾಪಿಗಳು ಮಹಾವಿಷಾಣವುಳ್ಳ ಕೋಣಗಳಿಂದಲೂ ಒಂಟೆಗಳಿಂದಲೂ, ಹಿಂಸ್ರವೂ ಮತ್ತವೂ ಆದ ಪ್ರಾಣಿಗಳಿಂದಲೂ, ಶಾಕಿನಿ ಡಾಕಿನ್ಯಾದಿ ಪಿಶಾಚಿಗಳಿಂದಲೂ, ಕರಾಲ ರಾಕ್ಷಸರಿಂದಲೂ, ಮಹಾಘೋರತಮವಾದ ರಾಕ್ಷಸಿಯರಿಂದಲೂ, ಪೀಡಿತರಾಗುತ್ತಾ ಸಾಗುವರು.

ಮಹಾಪಾಷಾಣವರ್ಷೇಣ ಹನ್ಯಮಾನಾ ನಿರಾಶ್ರಯಾಃ ।
ಕ್ವಚಿದ್ವಿದ್ಯುತ್ಪ್ರಪಾತೇನ ದೀರ್ಯಮಾಣಾ ವ್ರಜಂತಿ ಚ ॥ ೩೬ ॥

ಮಹತಾ ಬಾಣವರ್ಷೇಣ ವಿಧ್ಯಮಾನಾಶ್ಚ ಸರ್ವಶಃ ।
ಪತದ್ಭಿರ್ವಜ್ರಸಂಘಾತೈರುಲ್ಕಾಪಾತೈಶ್ಚ ದಾರುಣೈಃ ॥ ೩೭ ॥

ಪ್ರತಪ್ತಾಂಗಾರವರ್ಷೇಣ ದಹ್ಯಮಾನಾ ವ್ರಜಂತಿ ಚ ।
ತಪ್ತೇನ ಪಾಂಸುವರ್ಷೇಣ ಪೂರ್ಯಮಾಣಾ ರುದಂತಿ ಚ ॥ ೩೮ ॥

ಮಹಾಮೇಘರವೈರ್ಘೋರೈರ್ವಿತ್ರಾಸ್ಯಂತೇ ಮುಹುರ್ಮುಹುಃ ।
ನಿಶಿತಾಯುಧವರ್ಷೇಣ ಚೂರ್ಯಮಾಣಾ ನಿರ್ವೃತಾಃ ॥ ೩೯ ॥

ಮಹಾಕ್ಷಾರಾಂಬುಧಾರಾಭಿಃ ಸಿಚ್ಯಮಾನಾ ದ್ರವಂತಿ ಚ ।
ಮಹಾಶೀತೇನ ಮರುತಾ ತೀಕ್ಷ್ಣೇನ ಪರುಷೇಣ ಚ ।
ಸಮಂತಾತ್ಪೀಡ್ಯಮಾನಾಸ್ತೇ ಶುಷ್ಯಂತೇ ಸಂಕುಚಂತಿ ಚ ॥ ೪೦ ॥

---

೩೬-೩೭. ಮತ್ತು ಮಹಾಧೂಳಿ ಮತ್ತು ಪಾಷಾಣಗಳಿಂದ ಮಿಶ್ರವಾದ ಪ್ರಚಂಡವಾಯುವಿನಿಂದ ಹೊಡೆಸಿಕೊಂಡವರಾಗಿಯೂ, ನಿರಾಶ್ರಯರಾಗಿಯೂ, ಮತ್ತೆ ಕೆಲವು ಪ್ರದೇಶಗಳಲ್ಲಿ ವಿದ್ಯುತ್ತಿನಿಂದ ಸೀಳಲ್ಪಟ್ಟವರಾಗಿಯೂ, ಸರ್ವಾಂಗಗಳಲ್ಲೂ ಮಹಾಬಾಣವೃಷ್ಟಿಯಿಂದ ಹೊಡೆಸಿಕೊಂಡವರಾಗಿಯೂ,

೩೮-೩೯. ಮತ್ತು ದಾರುಣವಾದ ವಜ್ರಸಂಘಾತಗಳಿಂದಲೂ ಉಲ್ಕಾಪಾತಗಳಿಂದಲೂ ದಪ್ಪಕೆಂಡದ ವೃಷ್ಟಿಗಳಿಂದಲೂ ಸುಡಿಸಿಕೊಂಡವರಾಗಿಯೂ, ತಪ್ತಪಾಂಸುವರ್ಷಗಳಿಂದ ಮುಚ್ಚಲ್ಪಟ್ಟವರಾಗಿ ರೋದನಮಾಡುವವರಾಗಿಯೂ ಮಹಾಮೇಘಗರ್ಜನೆಯಿಂದ ಭಯಪಟ್ಟವರಾಗಿಯೂ ನಿಶಿತಾಯುಧಗಳಿಂದ ಚೂರ್ಣಿತರಾಗಿಯೂ,

೪೦-೪೧. ಮತ್ತು ಉಪ್ಪುನೀರಿನ ಧಾರೆಗಳಿಂದ ನೆನೆದವರಾಗಿಯೂ, ಮಹಾತೀಕ್ಷ್ಣವೂ ಮತ್ತು ರಭಸವೂ ಆದ ಗಾಳಿಯಿಂದ ಪೀಡಿಸಲ್ಪಟ್ಟು, ಒಣಗು

ಇತ್ಥಂ ಮಾರ್ಗೇಣ ರೌದ್ರೇಣ ಪಾಂಥೈರ್ವಿರಹಿತೇನ ಚ ।
ನಿರಾಲಂಬೇನ ದುರ್ಗೇಣ ನಿರ್ಜಲೇನ ಸಮಂತತಃ ॥ ೪೧ ॥

ಅವಿಶ್ರಾಮೇಣ ಮಹತಾ ನಿರ್ಗತಾದಾಶ್ರಯೇಣ ಚ ।
ತಮೋರೂಪೇಣ ಕಷ್ಟೇನ ಸರ್ವದುಃಖಾಶ್ರಯೇಣ ಚ ॥ ೪೨ ॥

ನೀಯಂತೇ ದೇಹಿನಃ ಸರ್ವೇ ಯೇ ಮೂಢಾಃ ಪಾಪಕರ್ಮಿಣಃ ।
ಯಮದೂತೈರ್ಮಹಾಘೋರೈಸ್ತದಾಜ್ಞಾಕಾರಿಭಿರ್ಬಲಾತ್ ॥ ೪೩ ॥

ಏಕಾಕಿನಃ ಪರಾಧೀನಾ ಮಿತ್ರಬಂಧುವಿವರ್ಜಿತಾಃ ।
ಶೋಚಂತಃ ಸ್ವಾನಿ ಕರ್ಮಾಣಿ ರುದಂತಶ್ಚ ಮುಹುರ್ಮುಹುಃ ॥ ೪೪ ॥

ಪ್ರೇತಭೂತಾ ವಿವಸ್ತ್ರಾಶ್ಚ ಶುಷ್ಕಕಂಠೋಷ್ಠತಾಲುಕಾಃ ।
ಕೃಶಾಂಗಾ ಭೀತಭೀತಾಶ್ಚ ದಹ್ಯಮಾನಾ ಕ್ಷುಧಾಗ್ನಿನಾ ॥ ೪೫ ॥

---

ವವರಾಗಿಯೂ, ಸಂಕೋಚಹೊಂದುವರಾಗಿಯೂ ಇರುತ್ತಾ ಪಾಂಥವಿವರ್ಜಿತವಾಗಿಯೂ ನಿರಾಲಂಬವಾಗಿಯೂ ದುರ್ಗಮವಾಗಿಯೂ ನಿರ್ಜಲವಾಗಿಯೂ,

೪೨-೪೩. ಮತ್ತು ನಿರಾಶ್ರಯವಾಗಿಯೂ, ತಮೋಮಯವಾಗಿಯೂ, ಸರ್ವದುಃಖಾಶ್ರಯವಾಗಿಯೂ ರೌದ್ರವಾಗಿಯೂ ಇರುವ ಮಾರ್ಗದಲ್ಲಿ ಪಾಪಕರ್ಮಿಗಳಾದ ಮೂಢರು ಯಮಾಜ್ಞಾಧಾರಕರೂ ಘೋರತಮರೂ ಆದ ಯಮದೂತರಿಂದ ಮೇಲೆ ಹೇಳಿದ ಸ್ಥಿತಿಗಳಿಂದ ಕೂಡಿದ ಪ್ರದೇಶದಲ್ಲಿ ವಿಶ್ರಾಂತಿ ಇಲ್ಲದೆ ಒಯ್ಯಲ್ಪಡುವರು.

೪೪. ಆಗ ಏಕಾಕಿಗಳಾಗಿಯೂ, ಪರಾಧೀನರಾಗಿಯೂ, ಮಿತ್ರಬಂಧುವಿವರ್ಜಿತರಾಗಿಯೂ, ತಮ್ಮ ಪಾಪಕರ್ಮಗಳಿಗಾಗಿ ಪಶ್ಚಾತ್ತಾಪಪಡುವವರಾಗಿಯೂ ಪುನಃ ಪುನಃ ರೋದನಮಾಡುವವರಾಗಿಯೂ,

೪೫-೪೬. ಮತ್ತು ಪ್ರೇತಶರೀರವನ್ನು ಧರಿಸಿರುವವರಾಗಿಯೂ, ವಸ್ತ್ರಹೀನರಾಗಿಯೂ, ಆರಿದ ಕಂಠೋಷ್ಠತಾಲುಗಳುಳ್ಳವರಾಗಿಯೂ, ಕೃಶಾಂಗರಾಗಿಯೂ, ಕ್ಷುಧಾಗ್ನಿಯಿಂದ ದಗ್ಧರಾಗಿಯೂ, ಪಾದಗಳಲ್ಲಿ ಶೃಂಖಲೆಯಿಂದ ಬದ್ಧರಾಗಿಯೂ,

ಬದ್ಧಾಃ ಶೃಂಖಲಯಾ ಕೇಚಿದುತ್ತಾನಾಃ ಪಾದಯೋರ್ನರಾಃ ।
ಆಕೃಷ್ಯಂತೇ ಘೃಷ್ಯಮಾಣಾ ಯಮದೂತೈರ್ಬಲೋತ್ಕಟೈಃ ॥ ೪೬ ॥

ಪುನಶ್ಚಾಧೋಮುಖಾಶ್ಚಾನ್ಯೇ ಘೃಷ್ಯಮಾಣಾ ಸುದುಃಖಿತಾಃ ।
ಕೇಶಪಾಶನಿಬದ್ಧಾಶ್ಚ ಕೃಷ್ಯಂತೇ ರಜ್ಜುಭಿರ್ನರಾಃ ॥ ೪೭ ॥

ಲಲಾಟೇ ಚಾಂಕುಶೈಸ್ತೀಕ್ಷ್ಣೈರ್ಭಿನ್ನಾಃ ಕೃಷ್ಯಂತಿ ದೇಹಿನಃ ।
ಉತ್ತಾನಾ ರಟಮಾನಾಶ್ಚ ಕ್ವಚಿದಂಗಾರವರ್ತ್ಮನಾ ॥ ೪೮ ॥

ಪಶ್ಚಾದ್ಬಾಹ್ವಂಸಬದ್ಧಾಶ್ಚ ಜಠರೇ ಚ ಪ್ರಪೀಡಿತಾಃ ।
ಪೂರಿತಾಃ ಶೃಂಖಲಾಭಿಶ್ಚ ಹಸ್ತಯೋಶ್ಚ ಪ್ರಕೀಲಿತಾಃ ॥ ೪೯ ॥

ಗ್ರೀವಾಯಾಮರ್ಧಚಂದ್ರೇಣ ಕ್ಷಿಪ್ಯಮಾಣಾ ಇತಸ್ತತಃ ।
ಶಿಶ್ನೇ ಚ ವೃಷಣೇ ಬದ್ಧಾ ನೀಯಂತೇ ಚರ್ಮರಜ್ಜುನಾ ॥ ೫೦ ॥

ವಿಭಿನ್ನಾ ಉದರೇ ಚಾನ್ಯೇ ತಪ್ತಶೃಂಖಲಯಾ ನರಾಃ ।
ಕೃಷ್ಯಂತೇ ಕರ್ಣಯೋಶ್ಚಾನ್ಯೇ ಭಿನ್ನಾಶ್ಚ ಚಿಬುಕೋಪರಿ ॥ ೫೧ ॥

ಕಾಲು ಮೇಲ್ಮುಖವೂ ಆಗಿ ಬಲೋನ್ಮತ್ತರೂ ಗರ್ವಿಷ್ಠರೂ ಆದ ಯಮದೂತರಿಂದ ಸೆಳೆಯಲ್ಪಡುವರು.

೪೭. ಮತ್ತೆ ಕೆಲವರು ಹಗ್ಗಗಳಿಂದ ಕೇಶಪಾಶಗಳಲ್ಲಿ ಕಟ್ಟಲ್ಪಟ್ಟು ದುಃಖಿತರಾಗಿಯೂ, ಅಧೋಮುಖರಾಗಿಯೂ ಒಯ್ಯಲ್ಪಡುತ್ತಾರೆ.

೪೮. ಇನ್ನು ಕೆಲವರ ಲಲಾಟದಲ್ಲಿ ತೀಕ್ಷ್ಣ ಅಂಕುಶಗಳನ್ನು ನಾಟಿ ಅಂಗತ್ತನಾಗಿ ಮಾಡಿ ಅಂಗಾರಪೂರಿತವಾದ ಮಾರ್ಗದಲ್ಲಿ ಎಳೆದು ಒಯ್ಯಲ್ಪಡುವರು.

೪೯–೫೧. ಕೆಲವರ ಹಸ್ತಬಾಹುಗಳನ್ನು ಶೃಂಖಲೆಯಿಂದ ಹಿಂದಕ್ಕೆ ಕಟ್ಟಿ ಅರ್ಧಚಂದ್ರ ಪ್ರಯೋಗದಿಂದ ಕತ್ತನ್ನು ಅತ್ತಿತ್ತ ನೂಕುತ್ತಾ ಚರ್ಮರಜ್ಜುವಿನಿಂದ ಶಿಶ್ನವೃಷಣಗಳನ್ನು ಬಂಧಿಸಿ ಎಳೆದುಕೊಂಡು ಹೋಗುವರು. ಮತ್ತೆ ಕೆಲವರು ಉದರದಲ್ಲಿ ತಪ್ತಶೃಂಖಲೆಯಿಂದ ಕಟ್ಟಲ್ಪಟ್ಟವರಾಗಿಯೂ, ಛಿನ್ನವಾದ ಕರ್ಣಗಳನ್ನುಳ್ಳವರಾಗಿಯೂ ಭಿನ್ನವಾದ ಚುಬುಕವುಳವರಾಗಿಯೂ ಸಾಗುವರು.

ಛಿನ್ನಾಗ್ರಪಾದಹಸ್ತಾಶ್ಚ ಛಿನ್ನಕರ್ಣೋಷ್ಠನಾಸಿಕಾಃ ।
ಸಂಛಿನ್ನ ಶಿಶ್ನವೃಷಣಾಶ್ಛಿನ್ನಭಿನ್ನಾಂಗಸಂಧಯಃ ॥ ೫೨ ॥

ಪ್ರತುದ್ಯಮಾನಾ ಕುಂತೈಶ್ಚ ಸಾಯಕೈಶ್ಚ ತತಸ್ತತಃ ।
ಭಿದ್ಯಮಾನಾಃ ಪ್ರಧಾವಂತಿ ಕ್ರಂದಮಾನಾ ನಿರಾಶ್ರಯಾಃ ॥ ೫೩ ॥

ಮುದ್ಗರೈರ್ಲೋಹದಂಡೈಶ್ಚ ಹನ್ಯಮಾನಾ ಮುಹುರ್ಮುಹುಃ ।
ಕಶೈಶ್ಚ ವಿವಿಧೈರ್ಘೋರೈರ್ಜ್ವಲಿತಾಗ್ನಿಸಮಪ್ರಭೈಃ ॥ ೫೪ ॥

ಭಿಂದಿಪಾಲೈರ್ವಿಭಿದ್ಯಂತೇ ಸ್ರವಂತಃ ಪೂಯಶೋಣಿತಂ ।
ಮಾಂಸೇ ಕ್ಷತಾಶ್ಚ ಕೃಮಿಭಿರ್ನೀಯಂತೇ ವಿವಶಾ ನರಾಃ ॥ ೫೫ ॥

ಯಾಚಮಾನಾಶ್ಚ ಸಲಿಲಮನ್ನಂ ಚಾಪಿ ಬುಭುಕ್ಷಿತಾಃ ।
ಛಾಯಾಂ ಪ್ರಾರ್ಥಯಮಾನಾಶ್ಚ ಶೀತಾರ್ತಾ ಬಹುವಾಯುನಾ ॥ ೫೬ ॥

---

೫೨–೫೩. ಕೆಲವರು ಛಿನ್ನ ಪಾದಾಗ್ರ ಹಸ್ತವುಳ್ಳವರಾಗಿಯೂ ಕರ್ಣ ಓಷ್ಠ ನಾಸಿಕಾ ಶಿಶ್ನ ವೃಷಣ ಮತ್ತು ಅಂಗ ಸಂಧಿಗಳಲ್ಲಿ ಛಿನ್ನರಾಗಿಯೂ ಕುಂತ ಮತ್ತು ಬಾಣಗಳಿಂದ ವ್ಯಥೆಹೊಂದಿದವರಾಗಿಯೂ ನಿರಾಶ್ರಯರಾಗಿಯೂ ದುಃಖಿಸುತ್ತಾ ಓಡುವರು. ಮತ್ತೆ ಕೆಲವರು ಲಗುಡಗಳಿಂದಲೂ, ಲೋಹದಂಡಗಳಿಂದಲೂ ಮತ್ತೆ ಮತ್ತೆ ಆಹುತರಾಗುತ್ತಲೂ ಇರುವರು.

೫೪. ಪ್ರಜ್ವಲಿತಾಗ್ನಿಗೆ ಸಮದೀಪ್ತಿಯುಳ್ಳ ವಿವಿಧ ಚಾವಟಿಗಳಿಂದಲೂ ಭಿಂದಿಪಾಲವೆಂಬ ಆಯುಧ ವಿಶೇಷದಿಂದಲೂ ಭೇಧಿಸಲ್ಪಟ್ಟವರಾಗಿ ರಕ್ತವನ್ನು ಸುರಿಸುವವರಾಗಿಯೂ ಇರುವರು.

೫೫. ಮತ್ತೆ ಕೆಲವರು ತಮ್ಮ ದೇಹದ ಮಾಂಸವ ಕ್ರಿಮಿಗಳಿಂದ ಕಡಿಸಿಕೊಂಡವರಾಗಿ ಪರಾಧೀನರಾಗಿದ್ದರೂ ತೀಕ್ಷ್ಣರಾದ ಯಮಭಟರಿಂದ ಎಳೆಸಿಕೊಳ್ಳುತ್ತಾ ಸಾಗುವರು.

೫೬. ಮಾರ್ಗಮಧ್ಯದಲ್ಲಿ ಜಲವನ್ನು ಯಾಚಿಸುವವರಾಗಿಯೂ, ಕ್ಷುತ್ ಪಿಪಾಸಾ ಪೀಡಿತರಾಗಿ ಅನ್ನವನ್ನು ಬೇಡುವವರಾಗಿಯೂ ಸಾಗುವರು.

ದಾನಹೀನಾ ಪ್ರಯಾಂತ್ಯೇವಂ ಯಾವಂತೋ ವಿಮುಖಾ ನರಾಃ ।
ಗೃಹೀತದಾನಪಾಥೇಯಾಃ ಸುಖಂ ಯಾಂತಿ ಯಮಾಲಯಂ ॥ ೫೭ ॥

ಏವಂ ಪಥಾತಿಕಷ್ಟೇನ ಪ್ರಾಪ್ತಾ ಯಮಪುರಂ ತದಾ ।
ಪ್ರಜ್ಞಾಪಿತಾಸ್ತದಾ ದೂತೈರ್ನಿವೇಶ್ಯಂತೇ ಯಮಾಗ್ರತಃ ॥ ೫೮ ॥

ತತ್ರ ಯೇ ಶುಭಕರ್ಮಾಣಸ್ತಾಂಶ್ಚ ಸಂಮಾನಯೇದ್ಯಮಃ ।
ಸ್ವಾಗತಾಸನದಾನೇನ ಪಾದ್ಯಾರ್ಘ್ಯೇಣ ಪ್ರಿಯೇಣ ಚ ॥ ೫೯ ॥

ಧನ್ಯಾ ಯೂಯಂ ಮಹಾತ್ಮಾನ ಆತ್ಮನೋ ಹಿತಕಾರಿಣಃ ।
ಯೇನ ದಿವ್ಯಸುಖಾರ್ಥಾಯ ಭವದ್ಭಿಃ ಸುಕೃತಂ ಕೃತಂ ॥ ೬೦ ॥

ಇದಂ ವಿಮಾನಮಾರುಹ್ಯ ದಿವ್ಯಸ್ತ್ರೀಭೋಗಭೂಷಿತಂ ।
ಸ್ವರ್ಗಂ ಗಚ್ಛಧ್ವಮತುಲಂ ಸರ್ವಕಾಮಸಮನ್ವಿತಂ ॥ ೬೧ ॥

---

೫೭. ದಾನಮಾಡದ ಪಾಪಿಗಳು ಛಾಯಾಶ್ರಯವನ್ನು ಯಾಚಿಸುವವರಾಗಿಯೂ, ಮಹಾವಾಯುವಿನಿಂದ ಶೀತಾರ್ತರಾಗಿ ಮಹಾಹಿಂಸೆಯನ್ನನುಭವಿಸುವವರಾರಾಗಿಯೂ, ಯಮಾಲಯಕ್ಕೆ ಹೋಗುತ್ತಾರೆ. ದಾನವೆಂಬ ಪಾಥೇಯ ಗ್ರಾಹಿಗಳಾದರೋ ಸುಖವಾಗಿ ಯಮಾಲಯವನ್ನು ಸೇರುತ್ತಾರೆ.

೫೮. ಈ ಮಾರ್ಗದಿಂದ ಯಮನ ಮಂದಿರಕ್ಕೆ ಬಂದಿರುವ ಪ್ರಾಣಿಗಳನ್ನು ಯಮನ ಆಜ್ಞಾನುಸಾರವಾಗಿ ಯಮನ ಸಮ್ಮುಖದಲ್ಲಿ ನಿಲ್ಲಿಸುವರು.

೫೯. ಅವರಲ್ಲಿ ಶುಭಕರ್ಮಿಗಳನ್ನೂ ಶ್ರೇಷ್ಠರನ್ನೂ ಯಮನು ಸ್ವಾಗತಾದಿ ಪ್ರಿಯವಚನಗಳಿಂದಲೂ, ಪಾದ್ಯ ಆಸನಾದ್ಯುಪಚಾರಗಳಿಂದಲೂ, ಸನ್ಮಾನಿಸುವನು.

೬೦–೬೧. ಮತ್ತು "ನೀವು ಧನ್ಯರು, ಮಹಾತ್ಮರು, ದಿವ್ಯ ಸುಖಭೋಗಕ್ಕಾಗಿ ಪುಣ್ಯಮಾಡಿ ಆತ್ಮೋದ್ಧಾರಮಾಡಿಕೊಂಡವರು, ಈ ವಿಮಾನಾರೂಢರಾಗಿ ದಿವ್ಯ ಸ್ತ್ರೀಭೋಗ ಸಮನ್ವಿತರಾಗಿ ಸರ್ವಕಾಮ ಪೂರಿತವಾಗಿರುವ ಸ್ವರ್ಗದಲ್ಲಿ ಮಹಾಭೋಗ ಫಲಗಳನ್ನನುಭವಿಸಿ, "

**ತತೋ ಭುಕ್ತ್ವಾ ಮಹಾಭೋಗಾನಂತೇ ಪುಣ್ಯಸ್ಯ ಸಂಕ್ಷಯಾತ್ ।**
**ಯತ್ಕಿಂಚಿದಲ್ಪಮಶುಭಂ ಪುನಸ್ತದಿಹ ಭೋಕ್ಷ್ಯಥ ॥ ೬೨ ॥**

**ತೇ ಚಾಪಿ ಧರ್ಮರಾಜಾನಂ ನರಾಃ ಪುಣ್ಯಾನುಭಾವತಃ ।**
**ಪಶ್ಯಂತಿ ಸೌಮ್ಯವದನಂ ಪಿತೃಭೂತಮಿವಾತ್ಮನಃ ॥ ೬೩ ॥**

**ಯೇ ಪುನಃ ಪಾಪಕರ್ಮಾಣಸ್ತೇ ಪಶ್ಯಂತಿ ಭಯಾನಕಂ ।**
**ಪಾಪಾವಿಶುದ್ಧನಯನಾ ವಿಪರೀತಾತ್ಮಬುದ್ಧಯಃ ॥ ೬೪ ॥**

**ದಂಷ್ಟ್ರಾಕರಾಲವದನಂ ಭ್ರುಕುಟೀಕುಟಿಲೇಕ್ಷಣಂ ।**
**ಊರ್ಧ್ವಕೇಶಂ ಮಹಾಶ್ಮಶ್ರು ಪ್ರಸ್ಫುರದಧರೋತ್ತರಂ ॥ ೬೫ ॥**

**ಅಷ್ಟಾದಶಭುಜಂ ಕ್ರುದ್ಧಂ ನೀಲಾಂಜನಚಯೋಪಮಂ ।**
**ಸರ್ವಾಯುಧೋದ್ಯತಕರಂ ಬ್ರಹ್ಮದಂಡೇನ ತರ್ಜಕಂ ॥ ೬೬ ॥**

---

೬೨. "ಮತ್ತು ಆ ಪುಣ್ಯ ಕ್ಷಯವಾದಮೇಲೆ ಯತ್ಕಿಂಚಿತ್ ಅಶುಭವನ್ನು ಮಾಡಿದ್ದಾರೆ ಪುನಃ ಇಲ್ಲಿಗೆ ಬಂದು ನಿಮ್ಮ ಅದೃಷ್ಟವನ್ನು ಅನುಭವಿಸಿರಿ" ಎಂದು ಆಜ್ಞಾಪಿಸುವನು.

೬೩. ಅಂಥ ಪುರುಷರು ತಮ್ಮ ಪುಣ್ಯಪ್ರಭಾವದಿಂದ ಯಮಧರ್ಮ ಸೌಮ್ಯವಾದ ರಾಜನ ಮುಖವನ್ನು ತಮ್ಮ ಪಿತೃವದನವೆಂಬಂತೆ ಸಂದರ್ಶಿಸುವರು.

೬೪–೬೫. ಪಾಪಿಗಳು ಮಲಿನದೃಷ್ಟಿಯವರು, ಬುದ್ಧಿವೈಪರೀತ್ಯಹೊಂದುವರು ಇವರಿಗೆ ಯಮನು ದಂಷ್ಟ್ರಾದಿಗಳಿಂದ ಕರಾಳವದನವುಳ್ಳವನಾಗಿಯೂ, ಭ್ರುಕುಟೀ ಮಧ್ಯದಲ್ಲಿ ಕುಟಿಲ ದೃಷ್ಟಿಯುಳ್ಳವನಾಗಿಯೂ, ಊರ್ಧ್ವ ಕೇಶವುಳ್ಳವನಾಗಿಯೂ, ದೀರ್ಘಶ್ಮಶ್ರುವುಳ್ಳವನಾಗಿಯೂ, ಮತ್ತು ಪ್ರಸುರಿತ ಅಧರ ಓಷ್ಠಗಳುವುಳ್ಳವನಾಗಿಯೂ

೬೬. ಮತ್ತು ಅಷ್ಟಾದಶ ಭುಜಸಮೇತನಾಗಿಯೂ ಕ್ರುದ್ಧನಾಗಿಯೂ, ನೀಲ (ಅಜಂನ) ಪರ್ವತೋಪಮನಾಗಿಯೂ ಸರ್ವಾಯುಧಹಸ್ತನಾಗಿಯೂ, ಬ್ರಹ್ಮದಂಡದಿಂದ ತರ್ಜಿಸುವವನಾಗಿಯೂ,

ಮಹಾಮಹಿಷಮಾರೂಢಂ ದೀಪ್ತಾಗ್ನಿಸಮಲೋಚನಂ ।
ರಕ್ತಮಾಲ್ಯಾಂಬರಧರಂ ಮಹಾಮೇರುಮಿವೋಚ್ಛ್ರಿತಂ ॥ ೬೭ ॥

ಪ್ರಲಯಾಂಬುದನಿರ್ಘೋಷಂ ಪಿಬಂತಮಿವ ಸಾಗರಂ ।
ಗ್ರಸಂತಮಿವ ಲೋಕಾನಾಮುದ್ಗಿರಂತಮಿವಾನಲಂ ॥ ೬೮ ॥

ಮೃತ್ಯುಶ್ಚ ತತ್ಸಮೀಪಸ್ಥಃ ಕಾಲಾನಲಸಮಪ್ರಭಃ ।
ಕಾಲಶ್ಚಾಂಜನಸಂಕಾಶಃ ಕೃತಾಂತಶ್ಚ ಭಯಾನಕಃ ॥ ೬೯ ॥

ಮಾರೀ ಚೋಗ್ರಾ ಮಹಾಮಾರೀ ಕಾಲರಾತ್ರಿಃ ಸುದಾರುಣಾ ।
ವಿವಿಧಾ ವ್ಯಾಧಯಃ ಕಷ್ಟಾ ನಾನಾರೂಪಭಯಾವಹಾಃ ॥ ೭೦ ॥

ಶಕ್ತಿಶೂಲಾಂಕುಶಧರಾಃ ಪಾಶಚಕ್ರಾಸಿ ಧಾರಿಣಃ ।
ವಜ್ರದಂಡಧರಾ ರೌದ್ರಾಃ ಕ್ಷುದ್ರತೂಣೀಧನುರ್ಧರಾಃ ॥ ೭೧ ॥

---

೬೭. ಮತ್ತು ಮಹಾಮಹಿಷಾರೂಢನಾಗಿಯೂ, ಪ್ರಜ್ವಲಿತಾಗ್ನಿಸದೃಶ ನೇತ್ರವುಳ್ಳವನಾಗಿಯೂ, ರಕ್ತಮಾಲ್ಯ ರಕ್ತವಸ್ತ್ರಧಾರಿಯಾಗಿಯೂ, ಮಹಾಮೇರು ಸಮವಾಗಿ ಬಹಳ ಎತ್ತರವಾಗಿಯೂ,

೬೮. ಪ್ರಳಯಕಾಲಿಕ ಮೇಘಸಮವಾದ ಗರ್ಜನೆಯುಳ್ಳವನಾಗಿಯೂ, ಸಾಗರವನ್ನು ಪಾನಮಾಡುವಂತೆಯೂ, ಲೋಕಗಳನ್ನು ಗ್ರಸನಮಾಡುವಂತೆಯೂ, ಅಗ್ನ್ಯುದ್ಗಾರಮಾಡುವಂತೆಯೂ ಇರುವ ಭಯಾನಕವಾದ ಅವನ ಮುಖವನ್ನು ಅವಲೋಕಿಸುವರು.

೬೯-೭೦. ಯಮ ಸಮೀಪವರ್ತಿಯಾದ ಮೃತ್ಯುವು ಕಾಲಾನಲಸಮವಾಗಿಯೂ, ಕಾಲನು ಅಂಜನಸಮನಾಗಿಯೂ, ಕೃತಾಂತನು ಭಯಾನಕನಾಗಿಯೂ, ಮಾರಿಯು ಉಗ್ರಳಾಗಿಯೂ, ಮಹಾಮಾರಿ ಮತ್ತು ಕಾಳ ರಾತ್ರಿಯರು ಭಯಂಕರರಾಗಿಯೂ, ಮತ್ತು ವಿವಿಧ ಕಷ್ಟದಾಯಕ ವ್ಯಾಧಿಗಳು ಭಯೋತ್ಪಾದಕಗಳಾದ ನಾನಾ ರೂಪವಾಗಿಯೂ,

೭೧-೭೨. ಅಸಂಖ್ಯಾತ ಯಮದೂತರು, ಶಕ್ತಿ, ಶೂಲ, ಅಂಕುಶ, ಪಾಶ, ಚಕ್ರ, ಖಡ್ಗ ವಜ್ರದಂಡ, ತೂಣೀರ ಮತ್ತು ಧನುಸ್ಸು ಇವು

ಅಸಂಖ್ಯಾತಾ ಮಹಾವೀರ್ಯಾಃ ಕ್ರೂರಾಶ್ಚಾಂಜನ ಸಂಪ್ರಭಾಃ ।
ಸರ್ವಾಯುಧೋದ್ಯತಕರಾ ಯಮದೂತಾ ಭಯಾನಕಾಃ ॥ ೭೨ ॥

ಅನೇನ ಪರಿವಾರೇಣ ಮಹಾಘೋರೇಣ ಸಂವೃತಂ ।
ಯಮಂ ಪಶ್ಯಂತಿ ಪಾಪಿಷ್ಠಾಶ್ಚಿತ್ರಗುಪ್ತಂ ಚ ಭೀಷಣಂ ।
ನಿರ್ಭರ್ತ್ಸಯಂತಂ ಚಾತ್ಯಂತಂ ಯಮಂ ಸದುಪಕಾರಿಣಂ ॥ ೭೩ ॥

ಚಿತ್ರಗುಪ್ತಶ್ಚ ಭಗವಾನ್ ಧರ್ಮವಾಕ್ಯೈಃ ಪ್ರಬೋಧಯನ್ ।
ಭೋ ಭೋ ದುಷ್ಕೃತಕರ್ಮಾಣಃ ಪರದ್ರವ್ಯಾಪಹಾರಿಣಃ ।
ಗರ್ವಿತಾ ರೂಪವೀರ್ಯೇಣ ಪರದಾರವಿಮರ್ದಕಾಃ ॥ ೭೪ ॥

ಯತ್ಸ್ವಯಂ ಕ್ರಿಯತೇ ಕರ್ಮ ತತ್ಸ್ವಯಂ ಭುಜ್ಯತೇ ಪುನಃ ।
ತತ್ಕಿಮಾತ್ಮೋಪಘಾತಾರ್ಥಂ ಭವದ್ಭಿರ್ದುಷ್ಕೃತಂ ಕೃತಂ ॥ ೭೫ ॥

ಇದಾನೀಂ ಕಿಂ ಪ್ರತಪ್ಯಧ್ವಂ ಪೀಡ್ಯಮಾನಾಃ ಸ್ವಕರ್ಮಭಿಃ ।
ಭುಂಜಧ್ವಂ ಸ್ವಾನಿ ಕರ್ಮಾಣಿ ನಾತ್ರ ದೋಷೋಽಸ್ತಿ ಕಸ್ಯಚಿತ್ ॥ ೭೬ ॥

---

ಗಳನ್ನು ಧರಿಸಿದವರಾಗಿಯೂ ಅಸಮ ಜನವರ್ಣವುಳ್ಳವರಾಗಿಯೂ ಭಯಾನಕ ರಾಗಿಯೂ ಕಾಣಿಸಿಕೊಳ್ಳುವರು.

೭೩. ಪಾಪಿಗಳು ಈ ಘೋರಪರಿವಾರ ಪರಿವೃತನಾಗಿಯೂ, ಭೀಷಣನಾದ ಚಿತ್ರಗುಪ್ತನಿಂದ ಸಮೇತನಾಗಿಯೂ, ಸದುಪಕಾರಿಯಾಗಿಯೂ ಇರುವ ಯಮ ನನ್ನು ಸಾಕ್ಷಾತ್ತಾದ ಭಯಾನಕಾಕೃತಿಯಲ್ಲಿ ವೀಕ್ಷಿಸುವರು.

೭೪-೭೫. ಚಿತ್ರಗುಪ್ತನು ಆ ಸಮಯದಲ್ಲಿ ಧರ್ಮೋಪದೇಶ ಸಹಿತವಾದ ವಚನದಿಂದ ಪಾಪಿಗಳನ್ನು ಬೋಧಿಸುವನು. ಯಮಧರ್ಮರಾಜನು "ಎಲೈ ಪಾಪಿಗಳಿರಾ ! ಪರಧನಾಪಹಾರಿಗಳೇ ! ನೀವು ಮಾಡಿದ ಕರ್ಮಫಲವನ್ನು ಈಗ ನೀವೇ ಭುಂಜಿಸಬೇಕು.

೭೬. ಆತ್ಮೋಪಘಾತುಕವಾದ ಈ ಕರ್ಮಗಳನ್ನು ಏತಕ್ಕೆ ಮಾಡಿದಿರಿ? ಸ್ವಕರ್ಮ ಪೀಡಿತರಾಗಿ ಈಗ ಏತಕ್ಕೆ ತಪಿಸುತ್ತೀರಿ ? ನಿಮ್ಮ ಕರ್ಮಫಲವನ್ನು ಭುಂಜಿಸಿರಿ. ಈ ವಿಷಯದಲ್ಲಿ ಯಾರದ್ದೂ ಅಪರಾಧವಿಲ್ಲ.

ಏತೇ ಚ ಪೃಥಿವೀಪಾಲಾಃ ಸಂಪ್ರಾಪ್ತಾ ಮತ್ಸಮೀಪತಃ ।
ಸ್ವಕೀಯೈಃ ಕರ್ಮಭಿರ್ಘೋರೈರ್ದುಷ್ಪ್ರಜ್ಞಾ ಬಲಗರ್ವಿತಾಃ ॥ ೭೭ ॥

ಭೋಭೋ ನೃಪಾ ದುರಾಚಾರಾಃ ಪ್ರಜಾವಿಧ್ವಂಸಕಾರಿಣಃ ।
ಅಲ್ಪಕಾಲಸ್ಯ ರಾಜ್ಯಸ್ಯ ಕೃತೇ ಕಿಂ ದುಷ್ಕೃತಂ ಕೃತಂ ॥ ೭೮ ॥

ರಾಜ್ಯಲೋಭೇನ ಮೋಹಾದ್ವಾ ಬಲಾದನ್ಯಾಯತಃ ಪ್ರಜಾಃ ।
ಯತ್ಪೀಡಿತಾಃ ಫಲಂ ತಸ್ಯ ಭುಂಜಧ್ವಮಧುನಾ ನೃಪಾಃ ॥ ೭೯ ॥

ಕೃಶಂ ರಾಜ್ಯಂ ಕಲತ್ರಂ ಚ ಯದರ್ಥಮಶುಭಂ ಕೃತಂ ।
ತತ್ಸರ್ವಂ ಸಂಪರಿತ್ಯಜ್ಯ ಯೂಯಮೇಕಾಕಿನಃ ಸ್ಥಿತಾಃ ॥ ೮೦ ॥

ಪಶ್ಯಾಮ ತದ್ಬಲಂ ತುಭ್ಯಂ ಯೇನ ವಿಧ್ವಂಸಿತಾಃ ಪ್ರಜಾಃ ।
ಯಮದೂತೈಸ್ತಾಡ್ಯಮಾನಾ ಅಧುನಾ ಕೀದೃಶಂ ಭವೇತ್ ॥ ೮೧ ॥

---

೭೭. ಬಲಗರ್ವಿತರಾಗಿಯೂ, ಅಜ್ಞಾನಿಗಳಾಗಿಯೂ ಇರುವ ಈ ರಾಜರು ತಮ್ಮ ಘೋರ ಪಾಪಕರ್ಮಾನುಸಾರವಾಗಿ ನನ್ನ ಸಮೀಪಕ್ಕೆ ಬಂದಿರುತ್ತಾರೆ.

೭೮-೭೯. ದುರಾಚಾರಿಗಳೂ ಪ್ರಜಾವಿಧ್ವಂಸಕರೂ ಆದ ಎಲೈ ರಾಜರುಗಳೇ ! ಅಲ್ಪಕಾಲದ ರಾಜ್ಯಸುಖಕ್ಕಾಗಿ ಎಷ್ಟು ಪಾಪವನ್ನು ಗಳಿಸಿದ್ದೀರಿ ? ಓ ನೃಪರೇ ! ರಾಜ್ಯದಾಸೆಯಿಂದಾಗಲಿ ಅಜ್ಞಾನದಿಂದಾಗಲಿ ಬಲಾತ್ಕಾರದಿಂದ ಅನ್ಯಾಯವಾಗಿ ಪ್ರಜಾಪೀಡನೆ ಮಾಡಿದ ಫಲವನ್ನು ಈಗ ಅನುಭವಿಸಿರಿ.

೮೦. ಯಾವ ರಾಜ್ಯ ಮತ್ತು ಕಲತ್ರಕ್ಕಾಗಿ ಈ ಪಾಪಕೃತ್ಯಗಳನ್ನು ನಡೆಸಿದರೋ ಅವುಗಳನ್ನು ತ್ಯಜಿಸಿ ನೀವು ಏಕಾಕಿಗಳಾಗಿ ಇಲ್ಲಿಗೆ ಬಂದಿರುವಿರಿ.

೮೧-೮೨. ಯಾವ ಬಲದಿಂದ ಪ್ರಜಾವಿಧ್ವಂಸನ ಮಾಡಿರುವಿರೋ ಅಂಥ ಬಲವನ್ನು ನೋಡೋಣ. ಈಗ ಯಮದೂತರು ತಾಡನೆಮಾಡುವಾಗ ನಿಮ್ಮ ಆ ಬಲವು ಏನಾಯಿತು? ಓ ಯುಧಿಷ್ಠಿರ! ಈ ತರಹವಾದ ಅನೇಕ ವಚನಗಳಿಂದ

ಏವಂ ಬಹುವಿಧೈರ್ವಾಕ್ಯೈರುಪಾಲಬ್ಧಾ ಯಮೇನ ತೇ ।
ಶೋಚಂತಃ ಸ್ವಾನಿ ಕರ್ಮಾಣಿ ತೂಷ್ಣೀಂ ತಿಷ್ಠಂತಿ ಪಾರ್ಥಿವ ॥ ೮೨ ॥

ಇತಿ ಧರ್ಮಂ ಸಮಾದಿಶ್ಯ ನೃಪಾಣಾಂ ಧರ್ಮರಾಟ್ ಪುನಃ ।
ತತ್ಪಾಪಪಂಕಶುದ್ಧ್ಯರ್ಥಮಿದಂ ವಚನಮಬ್ರವೀತ್ ॥ ೮೩ ॥

ಭೋಭೋಶ್ಚಂಡ ಮಹಾಚಂಡ ಗೃಹೀತ್ವಾ ನೃಪತೀನಿಮಾನ್ ।
ವಿಶೋಧಯಧ್ವಂ ಪಾಪೇಭ್ಯಃ ಕ್ರಮೇಣ ನರಕಾಗ್ನಿಷು ॥ ೮೪ ॥

ತತಃ ಶೀಘ್ರಂ ಸಮುತ್ಥಾಯ ನೃಪಾನ್ಸಂಗೃಹ್ಯ ಪಾದಯೋಃ ।
ಭ್ರಾಮಯಿತ್ವಾತಿವೇಗೇನ ವಿಕ್ಷಿಪ್ಯೋರ್ಧ್ವಂ ವಿಗೃಹ್ಯ ಚ ॥ ೮೫ ॥

ಸರ್ವಪ್ರಾಣೇನ ಮಹತಾ ಸುತಪ್ತೇ ತು ಶಿಲಾತಲೇ ।
ಆಸ್ಫಾಲಯಂತಿ ತರಸಾ ವಜ್ರೇಣೇವ ಮಹಾದ್ರುಮಂ ॥ ೮೬ ॥

ತತಃ ಸ ರಕ್ತಸ್ರೋತೋಭಿಃ ಸ್ರವತೇ ಜರ್ಜರೀಕೃತಃ ।
ಸ ನಿಃಸಂಜ್ಞಸ್ತದಾ ದೇಹೀ ನಿಶ್ಚೇಷ್ಟಃ ಸಂಪ್ರಜಾಯತೇ ॥ ೮೭ ॥

---

ಯಮನಿಂದ ಉಪಾಲಬ್ಧರಾದ ಪಾಪಿಗಳು ತಮ್ಮ ದುಷ್ಕೃತ್ಯಗಳಿಗಾಗಿ ಪಶ್ಚಾತ್ತಾಪಪಡುತ್ತಾ ಮೌನವಾಗಿರುವರು.

೮೩–೮೪. ಯಮಧರ್ಮರಾಯನು ರಾಜರಿಗೆ ಈ ತೆರನಾದ ಧರ್ಮೋಪದೇಶಮಾಡಿ ಆ ಪಾಪಪಂಕಶೋಧನಾರ್ಥವಾಗಿ ತನ್ನ ಕಿಂಕರರಾದ ಚಂಡ ಮತ್ತು ಮಹಾಚಂಡರನ್ನು ಕುರಿತು "ಎಲೈ ದೂತರೇ! ಕ್ರಮವಾಗಿ ನರಕಾಗ್ನಿಗಳಲ್ಲಿ ಈ ರಾಜರ ಪಾಪಶೋಧನೆವನ್ನು ಮಾಡಿರಿ" ಎಂದು ಆಜ್ಞಾಪಿಸಿದನು.

೮೫-೮೬. ಆ ಮೇಲೆ ಅವರು ಎದ್ದು ಆ ರಾಜರ ಪಾದಗಳನ್ನು ಬಿಗಿಯಾಗಿ ಹಿಡಿದು ವೇಗವಾಗಿ ತಿರುಗಿಸಿ ಮೇಲಕ್ಕೆ ಎತ್ತಿ ಹಿಡಿದು ವಜ್ರಾಯುಧದಿಂದ ಮಹಾವೃಕ್ಷವನ್ನು ಹೊಡೆದಂತೆ ವೇಗವಾಗಿ ಅತ್ಯುನ್ನತವಾದ ತಪ್ತಶಿಲೆಯ ಮೇಲೆ ಹೊಡೆಯುವರು.

೮೭. ಆದರಿಂದ ಆ ಪ್ರಾಣಿಯು ಜರ್ಝರಿತವಾದ ಅಂಗವುಳ್ಳದ್ದಾಗಿ ರಕ್ತಪ್ರವಾಹವನ್ನು ಸುರಿಸುತ್ತಾ ಪ್ರಜ್ಞೆತಪ್ಪಿ ನಿಶ್ಚೇಷ್ಟವಾಗಿ ಬೀಳುವುದು.

ತತಃ ಸ ವಾಯುನಾ ಸ್ಪೃಷ್ಟಃ ಶನೈರುಜ್ಜೀವತೇ ಪುನಃ ।
ತತಃ ಪಾಪವಿಶುದ್ಧ್ಯರ್ಥಂ ಕ್ಷಿಪ್ಯತೇ ನರಕಾರ್ಣವೇ ॥ ೮೮ ॥

ಅಷ್ಟಾವಿಂಶತಿರೇವಾಧಃ ಕ್ಷಿತೇರ್ನರಕಕೋಟಯಃ ।
ಸಪ್ತಮಸ್ಯ ತಲಸ್ಯಾಂತೇ ಘೋರೇ ತಮಸಿ ಸಂಸ್ಥಿತಾಃ ॥ ೮೯ ॥

ರೌರವಪ್ರಭೃತೀನಾಂ ಚ ನರಕಾಣಾಂ ಶತಂ ಸ್ಮೃತಂ ।
ಚತ್ವಾರಿಂಶತ್ಸಮಧಿಕಂ ಮಹಾನರಕಮಂಡಲಂ ॥ ೯೦ ॥

ಯೇಷು ಪಾಪಾಃ ಪ್ರಪಚ್ಯಂತೇ ನರಾಃ ಕರ್ಮಾನುರೂಪತಃ ।
ಯಾತನಾಭಿರ್ವಿಚಿತ್ರಾಭಿರಾಕರ್ಮಪ್ರಕ್ಷಯಾದ್ಭೃಶಂ ॥ ೯೧ ॥

ಆ ಮಲಪ್ರಕ್ಷಯಾದ್ಯದ್ವದಗ್ನೌ ಧಾಸ್ಯಂತಿ ಧಾತವಃ ।
ತಥಾ ಪಾಪಕ್ಷಯಾತ್ಪಾಪಾಶ್ಶೋಧ್ಯಂತೇ ನರಕಾಗ್ನಿಷು ॥ ೯೨ ॥

---

೮೮. ಪುನಃ ವಾಯುಸ್ಪರ್ಶನದಿಂದ ಮೆಲ್ಲನೆ ಪ್ರಜ್ಞೆ ಬಂದ ಮೇಲೆ ಮತ್ತೆ ಪಾಪ ಶೋಧನಾರ್ಥವಾಗಿ ಆ ಪುರುಷನು ನರಕಾಗ್ನಿಯಲ್ಲಿ ತಳ್ಳಲ್ಪಡುವನು.

೮೯. ಭೂಲೋಕದ ಕೆಳಗಿರುವ ಏಳುಲೋಕಗಳಲ್ಲಿ ಸಪ್ತಮಲೋಕವೂ ಅಂಧಕಾರಾವೃತವೂ ಆದ ಪಾತಾಳಲೋಕದಲ್ಲಿ ಇಪ್ಪತ್ತೆಂಟು ಕೋಟಿ ನರಕಗಳಿವೆ.

೯೦. ಅದರಲ್ಲೂ ರೌರವವೇ ಮೊದಲಾದ ನೂರನಲವತ್ತು ಮಹಾನರಕಗಳು ಪ್ರಸಿದ್ಧವಾಗಿ ಇರುವುವು.

೯೧-೯೨. ಕಶ್ಮಲನಾಶವಾಗುವವರೆಗೆ ಸುವರ್ಣಾದಿ ಧಾತುಗಳನ್ನು ಅಗ್ನಿಯಲ್ಲಿ ದಹಿಸುವಂತೆ ಪಾಪ ಕ್ಷಯವಾಗುವವರೆಗೂ ಪಾಪಿಗಳನ್ನು ಕರ್ಮಾನುರೂಪವಾಗಿ ವಿವಿಧ ಯಾತನೆಗಳಿಂದ ಈ ನರಕಾಗ್ನಿಗಳಲ್ಲಿ ದಹಿಸುವರು.

ಸುಗಾಢಹಸ್ತಯಾ ಬಾಢಂ ತಪ್ತಶೃಂಖಲಯಾ ನರಾಃ ।
ಮಹಾವೃಕ್ಷಾಗ್ರಶಾಖಾಯಾಂ ಲಂಬ್ಯಂತೇ ಯಮಕಿಂಕರೈಃ ॥ ೯೩ ॥

ತತಸ್ತೇ ಸರ್ಪಯಂತ್ರೇಣ ಕ್ಷಿಪ್ತಾ ದೋಲ್ಯಂತಿ ಕಿಂಕರೈಃ ।
ದೋಲ್ಯಂತಶ್ಚಾತಿವೇಗೇನ ನಿಃಸಂಜ್ಞಾ ಯಾಂತಿ ಯೋಜನಂ ॥ ೯೪ ॥

ಅಂತರಿಕ್ಷಸ್ಥಿತಾನಾಂ ಚ ಲೋಹಭಾರಶತಂ ತತಃ ।
ಪಾದಯೋರ್ಬಧ್ಯತೇ ತೇಷಾಂ ಯಮದೂತೈರ್ಮಹಾಬಲೈಃ ॥ ೯೫ ॥

ತೇನ ಭಾರೇಣ ಮಹತಾ ಭೃಶಮಾತರ್ದಿತಾ ನರಾಃ ।
ಧ್ಯಾಯಂತಃ ಸ್ವಾನಿ ಕರ್ಮಾಣಿ ತೂಷ್ಣೀಂ ತಿಷ್ಠಂತಿ ವಿಹ್ವಲಾಃ ॥ ೯೬ ॥

ಜ್ವಾಲಾಭಿರಗ್ನಿವರ್ಣಾಭಿರ್ಲೋಹದಂಡೈಃ ಸಕಂಟಕೈಃ ।
ಹನ್ಯಂತೇ ಕಿಂಕರೈರ್ಘೋರೈಃ ಸಮಂತಾತ್ಪಾಪಕಾರಿಣಃ ॥ ೯೭ ॥

---

೯೩. ಯಮಭಟರು ಪಾಪಿಗಳನ್ನು ತಪ್ತಶೃಂಖಲೆಗಳಿಂದ ಕೈಕಾಲುಗಳನ್ನು ಬಂಧಿಸಿ ಮಹಾವೃಕ್ಷಾಗ್ರಶಾಖೆಯಲ್ಲಿ ಜೋಲಾಡಿಸುವರು.

೯೪. ಆ ಮೇಲೆ ಯಮಕಿಂಕರರು ಅವರನ್ನು ಸರ್ಪಯಂತ್ರದಿಂದ ಒಂದು ಯೋಜನ ವಿಸ್ತಾರದಲ್ಲಿ ನಿಃಸಂಜ್ಞರಾಗಿ ದೋಲಾಯಮಾನರಾಗುವಂತೆ ತಳ್ಳಿತಳ್ಳಿ, ತೂಗುತ್ತಾರೆ.

೯೫. ಮತ್ತು ಮಹಾಬಲಿಷ್ಠರಾದ ಯಮದೂತರು ಅಂತರಿಕ್ಷದಲ್ಲಿ ದೋಲಾಯಮಾನರಾದ ಆ ಪಾಪಿಗಳ ಕಾಲುಗಳಲ್ಲಿ ಶತಲೋಹಭಾರವನ್ನು ಬಂಧಿಸಿ ತೂಗಿಸುವರು.

೯೬. ಆ ಮಹತ್ತಾದ ಭಾರದಿಂದ ಅತಿವೇದನೆಯನ್ನು ಹೊಂದಿದ ಆ ಪಾಪಿಗಳು, ಭಯಗ್ರಸ್ತರಾಗಿ ತಮ್ಮ ಪ್ರಾಚೀನ ದುಷ್ಕೃತ್ಯಗಳನ್ನು ನೆನೆಯುತ್ತಾ ಮೌನವಾಗಿ ದುಃಖಿಸುವರು.

೯೭. ಭಯಂಕರರಾದ ಯಮಭಟರು ಕಂಟಕ ಸಹಿತವಾಗಿಯೂ ಅಗ್ನಿವರ್ಣವಾಗಿಯೂ ಜ್ವಲಿಸುತ್ತಿರುವ ಲೋಹದಂಡಗಳಿಂದ ಪಾಪಿಗಳ ಸರ್ವಾವಯವಗಳನ್ನೂ ನಿಷ್ಕರುಣದಿಂದ ಹೊಡೆಯುವರು.

ತತಃ ಕ್ಷಾರೇಣ ದೀಪ್ತೇನ ವಹ್ನೇರಪಿ ವಿಶೇಷತಃ ।
ಸಮಂತತಃ ಪ್ರಲಿಪ್ಯಂತೇ ಕ್ಷತಾಂಗಾ ಜರ್ಜರೀಕೃತಾಃ ॥ ೯೮ ॥

ಪುನರ್ವಿದಾರ್ಯ ಚಾಂಗೇಷು ಶಿರಸಃ ಪ್ರಭೃತಿ ಕ್ರಮಾತ್ ।
ವೃಂತಾಕವತ್ಪ್ರಪಚ್ಯಂತೇ ತಪ್ತತೈಲಕಟಾಹಕೇ ॥ ೯೯ ॥

ವಿಷ್ಠಾಪೂರ್ಣೇ ತತಃ ಕೂಪೇ ಕೃಮೀಣಾಂ ನಿಚಯೇ ತತಃ ।
ಮೇದಸ್ತ್ವಕ್ಪೂಯ ಪೂರ್ಣಾಯಾಂ ವಾಪ್ಯಾಂ ಕ್ಷಿಪ್ಯಂತಿ ತೇ ಪುನಃ॥೧೦೦॥

ಭಕ್ಷ್ಯಂತೇ ಕ್ರಿಮಿಭಿಸ್ತೀಕ್ಷ್ಣೈರ್ಲೋಹತುಂಡೈಶ್ಚ ವಾಯಸೈಃ ।
ಶ್ವಭಿರ್ದಂಶೈರ್ವೃಕೈರ್ಘೋರೈರ್ವ್ಯಾಘ್ರೈರಪ್ಯಥ ವಾನರೈಃ ॥ ೧೦೧ ॥

ಪಚ್ಯಂತೇ ಮಾಂಸವಚ್ಚಾಪಿ ಪ್ರದೀಪ್ತಾಂಗಾರರಾಶಿಷು ।
ಪ್ರೋತಾಃ ಶೂಲೇಷು ತೀಕ್ಷ್ಣೇಷು ನರಾಃ ಪಾಪೇನ ಕರ್ಮಣಾ ॥ ೧೦೨ ॥

---

೯೮-೯೯. ಅದರಿಂದ ಗಾಯಗೊಂಡ ಪಾಪಿಗಳ ಶರೀರಕ್ಕೆ ಬೆಂಕಿಗಿಂತಲೂ ದೀಪ್ತವಾದ ಲವಣರಸವನ್ನು ಲೇಪನಮಾಡಿ, ಶಿರವೇ ಮೊದಲಾದ ಅವಯವಗಳನ್ನು ಪುನಃ ಶೀಳುಮಾಡಿ ಕತ್ತರಿಸಿ, ತಪ್ತತೈಲಪೂರಿತ ಕಟಾಹದಲ್ಲಿ ಬದನೆಯಕಾಯಿ ಬೇಯಿಸುವರಂತೆ ಬೇಯಿಸುವರು.

೧೦೦. ಆ ಮೇಲೆ ಮಲಪೂರ್ಣ ಕೂಪದಲ್ಲೂ, ಕ್ರಿಮಿರಾಶಿಯಲ್ಲೂ, ಮೇದಸ್ತ್ವಗಾದಿ ಕಲ್ಮಷಪೂರಿತವಾದ ಭಾವಿಯಲ್ಲೂ ಕೆಡವುತ್ತಾರೆ.

೧೦೧. ತೀಕ್ಷ್ಣ ಕ್ರಿಮಿಗಳಿಂದಲೂ, ಲೋಹಮಯವಾದ ಕೊಕ್ಕುಗಳಿಂದ ಕೂಡಿರುವ ಕಾಗೆಗಳಿಂದಲೂ, ನಾಯಿ, ನೊಣ, ತೋಳ, ಘೋರವ್ಯಾಘ್ರ ಮತ್ತು ಕಪಿ ಇವೇ ಮೊದಲಾದ ಪ್ರಾಣಿಗಳಿಂದಲೂ ಭಕ್ಷಿಸಲ್ಪಡುತ್ತಾರೆ.

೧೦೨. ಮತ್ತು ತಮ್ಮ ಪಾಪಕರ್ಮಾನುಸಾರವಾಗಿ ದೀಪ್ತಾಂಗಾರರಾಶಿಗಳಲ್ಲಿ ಮಾಂಸದಂತೆ ಪಾಕಮಾಡಲ್ಪಡುತ್ತಾರೆ. ಅದೂ ಅಲ್ಲದೆ ತೀಕ್ಷ್ಣಾಗ್ರಗಳುಳ್ಳ ಶೂಲಗಳಲ್ಲಿ ಏರಿಸಲ್ಪಡುತ್ತಾರೆ.

ತಿಲಪಿಂಡೈರಿವಾಕ್ರಮ್ಯ ಘೋರೈಃ ಕರ್ಮಭಿರಾತ್ಮನಃ ।
ತಿಲವತ್ಸಂಪ್ರಪೀಡ್ಯಂತೇ ಚಕ್ರಾಖ್ಯೇ ನರಕೇ ತಥಾ ॥ ೧೦೩ ॥

ಭಿದ್ಯಂತೇ ಚಾಪಿ ತಲ್ಪೇಷು ಲೋಹಭ್ರಾಷ್ಟ್ರೇಷ್ವನೇಕಧಾ ।
ತೈಲಪೂರ್ಣಕಟಾಹೇಷು ಸುತಪ್ತೇಷು ಪುನಃ ಪುನಃ ॥ ೧೦೪ ॥

ಬಹುಶಃ ಪೀಡ್ಯತೇ ಜಿಹ್ವಾ ಯ್ಯಾಸತ್ಯಪ್ರಿಯವಾದಿನೀ ।
ಸಂದಂಶೇನ ಸುತಪ್ತೇನ ಪ್ರಪೀಡ್ಯಂತೇ ಚ ಪಾದಯೋಃ ॥ ೧೦೫ ॥

ಮಿಥ್ಯಾಗಮಪ್ರವಕ್ತುಶ್ಚ ದ್ವಿಜಿಹ್ವಸ್ಯ ಚ ನಿರ್ಗತಾ ।
ಜಿಹ್ವಾರ್ಧಕ್ರೋಶವಿಸ್ತೀರ್ಣಾ ಹಲೈಸ್ತೀಕ್ಷ್ಣೈಶ್ಚ ಬಾಧ್ಯತೇ ॥ ೧೦೬ ॥

ನಿರ್ಭರ್ತ್ಸಯಂತಿ ಯೇ ಕ್ರೂರಾ ಮಾತರಂ ಪಿತರಂ ಗುರುಂ ।
ತೇಷಾಂ ವಕ್ತ್ರ ಉಲೂಕಾಭಿರ್ಮುಖಮಾಪೂರ್ಯ ಸೇವ್ಯತೇ ॥ ೧೦೭ ॥

---

೧೦೩. ತಿಲಪಿಂಡಗಳನ್ನು ತಿಲಯಂತ್ರದಲ್ಲಿ ಹಾಕಿ ಮರ್ದಿಸುವಂತೆ ತಮ್ಮ ಪಾಪಕರ್ಮಾನುಸಾರವಾಗಿ ಚಕ್ರಾಖ್ಯನರಕದಲ್ಲಿ ತಿಲಸದೃಶವಾಗಿ ಮರ್ದಿಲ್ಪಡುವರು.

೧೦೪. ಮತ್ತು ಲೋಹಮಯವಾದ ಬಾಣ್ಲೆಗಳಲ್ಲೂ ತಪ್ತತೈಲ ಪೂರ್ಣ ಕಟಾಹಗಳಲ್ಲೂ ಪುನಃ ಪುನಃ ಹಾಕಿ ಭೇದಿಸಲ್ಪಡುವರು.

೧೦೫. ಅಸತ್ಯ ಮತ್ತು ಅಪ್ರಿಯವಾದಿಯ ಜಿಹ್ವೆ ಮತ್ತು ಪಾದಗಳನ್ನು ಕೆಂಪಗೆ ಕಾಯಿಸಿದ ಕತ್ತರಿಯಿಂದ ಕತ್ತರಿಸುವರು.

೧೦೬. ಮಿಥ್ಯಾಗಮ ಪ್ರಚಾರಕ ಮತ್ತು ಅಸತ್ಯವಾದಿ ಇವರುಗಳ ನಾಲಗೆಯು ಅರ್ಧಕ್ರೋಶ ವಿಸ್ತೀರ್ಣವುಳ್ಳ ಚೂಪಾದ ನೇಗಿಲಿನಿಂದ ಬಾಧಿಸಲ್ಪಡುತ್ತದೆ.

೧೦೭–೧೦೮. ಮಾತಾ, ಪಿತೃ, ಗುರು, ಇವರುಗಳನ್ನು ಭರ್ತ್ಸನಮಾಡಿದ ಕ್ರೂರರ ಮುಖವನ್ನು ಗೂಬೆಗಳಿಂದ ಖಂಡನೆಮಾಡಿಸಿ ಆಮೇಲೆ ದೀಪ್ತಕ್ಷಾರ

ತತಃ ಕ್ಷಾರೇಣ ದೀಪ್ತೇನ ತಾಮ್ರೇಣ ತು ಪುನಃ ಪುನಃ ।
ಹತೇನಾಪೂರ್ಯತೇಽತ್ಯರ್ಥಂ ತಪ್ತತೈಲೈಶ್ಚ ತನ್ಮುಖಂ ॥ ೧೦೮ ॥

ಇತಸ್ತತಃ ಪುನರ್ವಕ್ತ್ರಂ ಭೃಶಮಾಪೂರ್ಯ ಹನ್ಯತೇ ।
ವಿಷ್ಠಾಭಿಃ ಕೃಮಿಭಿಶ್ಚಾಪಿ ಸುವರ್ಣಹರಣೈರ್ನರಃ ॥ ೧೦೯ ॥

ಪರಿಷ್ವಜತಿ ಚಾತ್ಯುಗ್ರಾಂ ಪ್ರದೀಪ್ತಾಂ ಲೋಹಶಾಲ್ಮಲೀಂ ।
ಹನ್ಯತೇ ಪೃಷ್ಠದೇಶೇ ಚ ಪುನಸ್ತೀಕ್ಷ್ಣೈರ್ಮಹಾಘನೈಃ ॥ ೧೧೦ ॥

ದಂತುರೇಣಾತಿಕೂಟೇನ ಕ್ರಕಚೇನ ಬಲೀಯಸಾ ।
ಶಿರಃ ಪ್ರಭೃತಿ ಪಾದಾಂತಂ ಘೋರೈಃ ಕರ್ಮಭಿರಾತ್ಮಜೈಃ ।
ಖಾದ್ಯತೇ ಸ್ವಾನಿ ಮಾಂಸಾನಿ ಪಾಯತೇ ಶೋಣಿತಂ ಸ್ವಕಂ ॥ ೧೧೧ ॥

ಅನ್ನಂ ಪಾನಂ ನ ದತ್ತಂ ಯೈರ್ಮೂಢೈರ್ನಾಪ್ಯನುಮೋದಿತಂ ।
ಇಕ್ಷುವತ್ತೇ ಪ್ರಪೀಡ್ಯಂತೇ ಜರ್ಜರೀಕೃತಮಸ್ತಕಾಃ ॥ ೧೧೨ ॥

---

ರಸ, ತಾಮ್ರ, ತಪ್ತತೈಲ, ಇವೇ ಮೊದಲಾದುವುಗಳಿಂದ ಪುನಃ ಪುನಃ ಪೂರ್ಣ ಮಾಡುವರು.

೧೦೯-೧೧೦. ಸುವರ್ಣಾಪಹಾರಿಯ ವಕ್ತ್ರವನ್ನು ಮಲ ಮತ್ತು ಕ್ರಿಮಿಗಳಿಂದ ಪೂರ್ಣಮಾಡಿ, ಸರ್ವಾಂಗಗಳಲ್ಲಿಯೂ ತಾಡನಮಾಡುವರು. ಮತ್ತು ತಪ್ತಲೋಹಮಯವೂ ಅತ್ಯುಗ್ರವೂ ಆದ ಬೂರಗದ ವೃಕ್ಷವನ್ನು ಆಲಿಂಗನೆ ಮಾಡಿಸಿ, ತೀಕ್ಷ್ಣವಾದ ಬಾಯುಳ್ಳ ದೊಡ್ಡ ಹಾರೆಗಳಿಂದ ಪೃಷ್ಠದ ಮೇಲೆ ಹೊಡೆಯಿಸುತ್ತಾರೆ.

೧೧೧. ಘೋರ ಪಾಪಕರ್ಮವನ್ನು ಮಾಡಿದವರಿಗೆ ಅತಿವೃದ್ಧವಾಗಿಯೂ ತೀಕ್ಷ್ಣಾಗ್ರವುಳ್ಳದ್ದೂ ಆದ ಗರಗಸದಿಂದ ಶಿರಃ ಪ್ರಭೃತಿ (ಮೊದಲ್ಗೊಂಡು) ಪಾದಾಂತಾವಯವಗಳನ್ನು ಕುಯ್ಯುವುದಲ್ಲದೆ ಮಾಂಸವನ್ನು ಕಿತ್ತು ಅವರಿಗೇ ತಿನ್ನಿಸುವರು. ಮತ್ತು ಅವರ ರಕ್ತವನ್ನೇ ಪಾನಮಾಡಿಸುವರು.

೧೧೨. ಅನ್ನೋದಕಗಳನ್ನು ದಾನಮಾಡದೆಯೂ, ಇತರರು ದಾನಮಾಡಿದುದನ್ನು ಅನುಮೋದಿಸದೆಯೂ, ಇರುವ ಪುರುಷರನ್ನು ಕಬ್ಬಿನ ಗಾಣದಲ್ಲಿ ಕಬ್ಬನ್ನು ಮರ್ದಿಸಿದಂತೆ ಮರ್ದಿಸುತ್ತಾರೆ.

ಅಸಿತಾಲವನೇ ಘೋರೇ ಛಿದ್ಯಂತೇ ಖಂಡಖಂಡಶಃ ।
ಸೂಚೀಭಿರ್ಭಿನ್ನಸರ್ವಾಂಗಾಸ್ತಪ್ತಶೂಲಪ್ರರೋಪಿತಾಃ ।
ಸಂಬಾಧ್ಯಮಾನಾ ವಿವಶಾಃ ಕ್ಲಿಶ್ಯಂತೇ ನ ಮ್ರಿಯಂತಿ ವೈ ॥ ೧೧೩ ॥

ದೇಹಾದುತ್ಪಾದ್ಯ ಮಾಂಸಾನಿ ಭಿದ್ಯಂತೇsಸ್ಥೀನಿ ಮುದ್ಗರೈಃ ।
ದೃಷ್ಟಿರಾಕೃಷ್ಯತೇ ತೂರ್ಣಂ ಯಮದೂತೈರ್ಬಲೋತ್ಕಟೈಃ ॥ ೧೧೪ ॥

ನಿರಸ್ತಾಸ್ತೇ ನಿರುಚ್ಛ್ವಾಸಾಸ್ತಿಷ್ಠಂತಿ ನರಕೇ ಧ್ರುವಂ ।
ಉಚ್ಛ್ವಸಂತಿ ಸದಾ ಶ್ವಾಸೈರ್ವಾಲುಕಾವದನಾವೃತಾಃ ॥ ೧೧೫ ॥

ರೌರವೇ ರೋದಮಾನಾಶ್ಚ ಪೀಡ್ಯಂತೇ ವಿವಿಧೈಃ ಶರೈಃ ।
ಮಹಾರೌರವಪೀಡಾಭಿರ್ಮಹತೀಭಿಸ್ತದಂತಿಕೇ ॥ ೧೧೬ ॥

---

೧೧೩. ಅದರಿಂದ ಜರ್ಜರಿತವಾದ ಮಸ್ತಕವುಳ್ಳ ಅವರನ್ನು ಘೋರವಾದ ಅಸಿತಾಲವನದಲ್ಲಿ ಖಂಡಖಂಡವಾಗಿ ಛೇದಿಸುತ್ತಲೂ, ಸೂಜಿಗಳಿಂದ ಸರ್ವಾಂಗ ಗಳನ್ನು ಭೇಧಿಸುತ್ತಲೂ,

೧೧೪. ಮತ್ತು ತಪ್ತಶೂಲಾಗ್ರದಲ್ಲಿ ಏರಿಸುತ್ತಲೂ ಮತ್ತು ಅನೇಕತರಹ ವಾಗಿ ಪೀಡಿಸಿ ದಂಡಿಸುವರು. ಆದರೂ ಆ ಪಾಪಿಗಳು ಮೃತರಾಗುವುದಿಲ್ಲ.

೧೧೫. ಮತ್ತು ನಿರ್ದಯರೂ ಮದೋನ್ಮತ್ತರೂ ಅದ ಯಮದೂತರು ಆ ಪಾಪಿಗಳ ದೇಹದಿಂಡ ಮಾಂಸವನ್ನು ಪೂರ್ತಿಯಾಗಿ ಕಿತ್ತು, ಅಸ್ಥಿಗಳ ಮೇಲೆ ಮುದ್ಗರಗಳಿಂದ ಹೊಡೆಯುವರು. ಮತ್ತು ನೇತ್ರಗಳನ್ನು ಕೀಳುವರು. ಈರೀತಿ ಮಾಡಲ್ಪಟ್ಟು ರೌರವಾದಿ ನರಕಗಳಲ್ಲಿ ತಳ್ಳಲ್ಪಟ್ಟವರಾಗಿ ಉಚ್ಛ್ವಾಸಾದಿ ರಹಿತ ರಾಗಿಯೂ,

೧೧೬. ಮತ್ತೆ ಕೆಲವುಕಾಲ ಉಚ್ಛ್ವಾಸಾದಿ ಯುಕ್ತರಾಗಿಯೂ, ಮರಳಿ ನಂತೆ ವಸ್ತ್ರಾದ್ಯನಾವೃತರಾಗಿಯೂ, ವಿವಿಧ ಶರಗಳಿಂದ ಪೀಡಿತರಾಗಿ ರೋದನ ಮಾಡುವರು.

ಪದೋರಾಸ್ಯೇ ಗುದೇ ಚೈವ ಪಾರ್ಶ್ವೇ ಚೋರಸಿ ಮಸ್ತಕೇ ।
ನಿಖನ್ಯಂತೇ ಘನೈಸ್ತೀಕ್ಷ್ಣೈಃ ಸುತಪ್ತೈರ್ಲೋಹಶಂಕುಭಿಃ ॥ ೧೧೭ ॥

ಸುತಪ್ತವಾಲುಕಾಯಾಂ ಚ ಪ್ರಲುಠ್ಯಂತೇ ಪುನಃ ಪುನಃ ।
ಜತುಪಂಕೇ ಭೃಶಂ ತಪ್ತೇ ಕ್ಷಿಪ್ತಾಃ ಕ್ರಂದಂತಿ ವಿಸ್ತರಂ ॥ ೧೧೮ ॥

ತೇನತೇನ್ನೈವ ರೂಪೇಣ ಹಸಂತೇ ಪಾರದಾರಿಣಂ ।
ಗಾಢಮಾಲಿಂಗ್ಯತೇ ನಾರೀಂ ಜ್ವಲಂತೀಂ ಲೋಹನಿರ್ಮಿತಾಂ ॥ ೧೧೯ ॥

ಪೂರ್ವಾಕಾರಂ ಚ ಪುರುಷಂ ಪ್ರಜ್ವಲಂತಂ ಸಮಂತತಃ ।
ದುಶ್ಚಾರಿಣೀಃ ಸ್ತ್ರಿಯೋ ಗಾಢಮಾಲಿಂಗಂತಿ ವದಂತಿ ಚ ॥ ೧೨೦ ॥

ಕಿಂ ಪ್ರಧಾವಸಿ ವೇಗೇನ ತೇ ನ ಮೋಕ್ಷೋಽಸ್ತಿ ಸಾಂಪ್ರತಂ ।
ಲಂಘಿತಸ್ತೇ ಯಥಾ ಭರ್ತಾ ಪಾಪಂ ಭುಂಕ್ಷ್ವ ತಥಾಧುನಾ ॥ ೧೨೧ ॥

---

೧೧೭–೧೧೮. ಮತ್ತು ತೀಕ್ಷ್ಣವಾಗಿಯೂ ದೃಢವಾಗಿಯೂ ಇರುವ ತಪ್ತ ಲೋಹ ಶಂಕುಗಳನ್ನು ಕಾಲುಗಳಲ್ಲೂ, ಮುಖದಲ್ಲೂ, ಗುದಪ್ರದೇಶದಲ್ಲಿಯೂ, ಪಕ್ಕಗಳಲ್ಲೂ, ಎದೆಯಮೇಲೂ, ತಲೆಯಲ್ಲೂ ನಾಟುತ್ತಾರೆ. ಮತ್ತು ತಪ್ತ ವಾಲುಕೆಗಳಲ್ಲಿ ಪುನಃ ಪುನಃ ಹೊರಳಿಸಿ ರೋದನಮಾಡುವ ಪಾಪಿಗಳನ್ನು ಅತ್ಯುಷ್ಣವಾದ ಜತುಮಯ ನರಕದಲ್ಲಿ ಬೀಳಿಸುವರು.

೧೧೯. ಪರಸ್ತ್ರೀಯ ರೂಪವನ್ನು ಅಪಹಾಸ್ಯಮಾಡಿದ ಪಾಪಿಗಳಿಗೆ ಸುತಪ್ತಲೋಹ ನಿರ್ಮಿತ ಸ್ತ್ರೀ ಪ್ರತಿಮೆಯನ್ನು ಆಲಿಂಗನ ಮಾಡಿಸುವರು.

೧೨೦–೧೨೧. ವ್ಯಭಿಚಾರಿಣಿಯರಾದ ಸ್ತ್ರೀಯರಿಗೆ ತತ್ಪ್ರೀತಿ ವಿಷಯಕ ಪುರುಷಾಕಾರದ ತಪ್ತಲೋಹ ನಿರ್ಮಿತವಾದ ಪ್ರತಿಮೆಯನ್ನು ಆಲಿಂಗನೆ ಮಾಡಿಸುವರು. ಮತ್ತು "ವೇಗದಿಂದಓಡುತ್ತಿದ್ದೆಯಲ್ಲಾ ನಿನಗೀಗ ಈ ಶಿಕ್ಷೆಯಿಂದ ಬಿಡುಗಡೆಯಿಲ್ಲ. ನೀನು ನಿನ್ನ ಪತಿಯನ್ನತಿಕ್ರಮಿಸಿ ಅನ್ಯಪುರುಷಾಸಕ್ತಳಾದ ಪಾಪಿಯಾದುದರಿಂದ ಅದರ ಫಲವನ್ನು ಈಗ ಭುಂಜಿಸು" ಎಂದು ಕ್ರೂರರಾದ ಯಮದೂತರು ಹೇಳುವರು.

ಲೋಹಕುಂಭೇ ತಥಾ ಕ್ಷಿಪ್ತಾಃ ಸವಿಧಾನ್ಯೈಃ ಶನೈಃ ಶನೈಃ ।
ಮೃದ್ವಗ್ನಿನಾಥ ಪಚ್ಯಂತೇ ಸ್ವಪಾಪೈರೇವ ಮಾನವಾಃ ॥ ೧೨೨ ॥

ಕ್ವಣಂತ್ಯುಲೂಖಲೇ ಸಾಸ್ರಾಃ ಪ್ರಕ್ಷಿಪ್ಯಂತೇ ಶಿಲಾಸು ಚ ।
ಕ್ಷಿಪ್ಯಂತೇ ಚಾಂಧಕೂಪೇಷು ದಶ್ಯಂತೇ ಭ್ರಮರೈರ್ಭೃಶಂ ॥ ೧೨೩ ॥

ಕೃಮಿಭಿರ್ಭಿನ್ನಸರ್ವಾಂಗಾಃ ಶತಶೋ ಜರ್ಜರೀಕೃತಾಃ ।
ಸುತೀಕ್ಷ್ಣಕ್ಷಾರ ಕೂಪೇಷು ಕ್ಷಿಪ್ಯಂತೇ ತದನಂತರಂ ॥ ೧೨೪ ॥

ಮಹಾಜ್ವಾಲೇ ಚ ನರಕೇ ಪಾಪಾಃ ಫೂತ್ಕಾರಯಂತಿ ಚ ।
ಇತಸ್ತತಶ್ಚ ಧಾವಂತಿ ದಹ್ಯಮಾನಾಸ್ತದರ್ಚಿಷಾ ॥ ೧೨೫ ॥

ಪೃಷ್ಠೇ ಚಾನೀಯ ಜಂಘೇ ದ್ವೇ ವಿನ್ಯಸ್ತೇ ಸ್ಕಂಧಯೋಃ ಸ್ಥಿತೇ ।
ತಯೋರ್ಮಧ್ಯೇನ ಚಾಕೃಷ್ಯ ಬಾಹುಪೃಷ್ಠೇನ ಗಾಢತಃ ।
ವಧ್ವಾಃ ಪರಸ್ಪರಂ ಸರ್ವಂ ಸುದೃಢಂ ಗಾಢರಜ್ಜುಭಿಃ ॥ ೧೨೬ ॥

---

೧೨೨. ಪಾಪಿ ಪುರುಷರನ್ನು ಲೋಹ ಕುಂಭಗಳಲ್ಲಿ ಹಾಕಿ ಮೃದುವಹ್ನಿಯಿಂದ ಪಾಕಮಾಡುತ್ತಾರೆ.

೧೨೩-೧೨೪. ಮತ್ತು ಒರಳುಗಳಲ್ಲೂ ಶಿಲಾತಲಗಳಲ್ಲೂ ಬಡಿದು ಅಂಧಕೂಪದಲ್ಲಿಸೆದು, ಭ್ರಮರ ಮತ್ತು ಕ್ರಿಮಿಗಳಿಂದ ಭಿನ್ನವಾದ ಸರ್ವಾಂಗವುಳ್ಳವರೂ, ಮತ್ತು ಜರ್ಜರಿತ ಶರೀರರೂ ಆದ ಪಾಪಿಗಳನ್ನು ತೀಕ್ಷ್ಣಕ್ಷಾರ ಕೂಪಗಳಲ್ಲಿ ಹಾಕುವರು.

೧೨೫. ಪಾಪಿಗಳು ಪುನಃ ಪುನಃ ಮಹಾಜ್ವಾಲೆಯುಳ್ಳ ಆ ನರಕದಲ್ಲಿ ಬಿದ್ದು ಫೂತ್ಕರಿಸುತ್ತಾ ಅಗ್ನಿ ಜ್ವಾಲೆಯನ್ನು ಸಹಿಸಲಾರದೆ ಅಲ್ಲಿಂದಿಲ್ಲಿಗೆ ಧಾವಿಸುವರು.

೧೨೬-೧೨೭. ಪೂರ್ವಜನ್ಮದಲ್ಲಿ ಮಾನಿಗಳಾಗಿಯೂ, ಕ್ರೋಧಿಗಳಾಗಿಯೂ, ಮಾಡಿದ ಪಾಪವು ಕ್ಷಯಿಸುವವರೆಗೂ ಅವರ ಜಂಘಾ ಮತ್ತು ಸ್ಕಂಧಗಳನ್ನು ಪೃಷ್ಠಪ್ರದೇಶಕ್ಕೆ ಮುಟ್ಟಿಸಿ, ಅವುಗಳ ಮಧ್ಯೆ ಬಾಹುಗಳನ್ನು

ಪೀಡಯಂತಿ ಸುಸಂರಬ್ಧಾ ಭ್ರಮರಾಸ್ತೀಕ್ಷ್ಣಲೋಹಜಾಃ ।
ಮಾನಿನಾಂ ಕ್ರೋಧಿನಾಂ ಚೈವ ಪುರಾ ಪಾಪಸ್ಯ ಸಂಕ್ಷಯಾತ್ ॥ ೧೨೭ ॥

ಪಾಪಾನಾಂ ನರಕೇ ಪುಂಸಾಂ ಘೃಷ್ಯತೇ ಚಂದನಂ ಯಥಾ ।
ಶರೀರಾಭ್ಯಂತರಗತಂ ತರುಣಾನಾಂ ಚ ದಾರುಣಂ ॥ ೧೨೮ ॥

ಪಿಂಡಬಂಧಃ ಸ್ಮೃತೋ ಯಾಮ್ಯೇ ಮಹಾಜ್ವಾಲೇಷು ಯಾತನಾಃ ।
ರಜ್ಜುಭಿರ್ವೇಷ್ಟಿತಾಂಗಾಶ್ಚ ಪ್ರಲಿಪ್ತಾಃ ಕರ್ದಮೇನ ಚ ।
ಕರೀಷರೂಕ್ಷವಹ್ನೌ ಚ ಪಚ್ಯಂತೇ ನ ಮ್ರಿಯಂತಿ ಚ ॥ ೧೨೯ ॥

ಸುತೀಕ್ಷ್ಣಕ್ಷಾರತೋಯೇನಶರ್ಕರಾಸು ಶಿಲಾಸು ಚ ।
ಆಪಾಪಸಂಕ್ಷಯಾತ್ಪಾಪಾ ಘೃಷ್ಯಂತೇ ಚಂದನಂ ಯಥಾ ॥ ೧೩೦ ॥

ಶರೀರಾಭ್ಯಂತರಗತೈಃ ಪ್ರಭೂತೈಃ ಕೃಮಿಭಿರ್ನರಾಃ ।
ಭಕ್ಷ್ಯಂತೇ ತೀಕ್ಷ್ಣವದನೈರಾದೇಹಸ್ಯಕ್ಷಯಾದ್ಭೃಶಂ ॥ ೧೩೧ ॥

---

ಪ್ರವೇಶಮಾಡಿಸಿ, ದೃಢರಜ್ಜುಗಳಿಂದ ಸಮಸ್ತವನ್ನೂ ಬಿಗಿಯಾಗಿ ಹಿಡಿದು ಕಟ್ಟಿ, ತೀಕ್ಷ್ಣವಾದ ಲೋಹಮಯ ಭ್ರಮರಗಳಿಂದ ಪೀಡಿಸುವರು.

೧೨೮-೧೨೯. ಪಾಪಿಗಳನ್ನು ನರಕದಲ್ಲಿ ಚಂದನದಂತೆ ಮರ್ದಿಸಿಯೂ ಶರೀರಕ್ಕೆ ದಾರುಣಪೀಡೆಯುಂಟುಮಾಡಿಯೂ, ಮಹಾಜ್ವಾಲೆಗಳುಳ್ಳ ನರಕಗಳಲ್ಲಿ ರಜ್ಜುಗಳಿಂದ ಸರ್ವಾಂಗವನ್ನು ವೇಷ್ಟನಮಾಡಿಯೂ, ಪಂಕಲೇಪನ ಮಾಡಿಯೂ, ಬೆರಣಿಯ ಬೆಂಕಿಯಲ್ಲಿ ಪಾಕಮಾಡುವರು. ಆದರೂ ಪಾಪಿಗಳು ಮೃತಿಹೊಂದದೆ ಅಲ್ಲೇ ಯಾತನೆಯನ್ನನುಭವಿಸುವರು.

೧೩೦. ಪಾಪಶೋಧಿತವಾಗುವವರೆಗೂ ಪಾಪಿಗಳನ್ನು ತೀಕ್ಷ್ಣಕ್ಷಾರ ಜಲದಲ್ಲೂ, ಮರಳಲ್ಲೂ, ಶಿಲಾತಲದಲ್ಲೂ, ಚಂದನವನ್ನು ತೆಯ್ದಂತೆ ಮಥನ ಮಾಡುತ್ತಾರೆ.

೧೩೧. ಶರೀರಾಂತಃ ಪ್ರವಿಷ್ಟಗಳಾದ ತೀಕ್ಷ್ಣವದನವುಳ, ಬಹು ಕ್ರಿಮಿಗಳು ದೇಹಕ್ಷಯವಾಗುವವರೆಗೂ ಆ ಪಾಪಿಯ ಶರೀರವನ್ನು ಭಕ್ಷಣಮಾಡದೇ ಬಿಡವು.

ಕೃಮೀಣಾಂ ನಿಚಯೇ ಕ್ಷಿಪ್ತಾಃ ಪೂತಿಮಾಂಸಸ್ಯ ರಾಶಿಷು ।
ತಿಷ್ಠಂತ್ಯುದ್ವಿಗ್ನಹೃದಯಾಃ ಪರ್ವತಾಭ್ಯಾಂ ಚ ಪೀಡಿತಾಃ ॥ ೧೩೨ ॥

ಸುತಪ್ತವಜ್ರಲೇಪೇನ ಶರೀರಮನುಲಿಪ್ಯತೇ ।
ಅಧೋಮುಖೋರ್ಧ್ವಪಾದಾಶ್ಚ ಧೃತಾಸ್ತಪ್ಯಂತಿ ವಹ್ನಿಷು ॥ ೧೩೩ ॥

ವದನಾಂತೇ ಪ್ರವಿನ್ಯಸ್ತಂ ಸುತಪ್ತಾಯೋಮಯಂ ಗುಡಂ ।
ತೇ ಖಾದಂತಿ ಪರಾಧೀನಾ ಹನ್ಯಮಾನಾಸ್ತು ಮುದ್ಗರೈಃ ॥ ೧೩೪ ॥

ಯೇ ಶಿವಾಯತನಾರಾಮವಾಪೀಕೂಪಮಠಾಂಗಣಾತ್ ।
ಅಭಿದ್ರವಂತಿ ಪಾಪಿಷ್ಠಾ ನರಾಸ್ತತ್ರ ವಸಂತಿ ಚ ॥ ೧೩೫ ॥

ವ್ಯಾಯಾಮೋದ್ವರ್ತನಾಭ್ಯಂಗಸ್ನಾನಪಾನಭೋಜನಂ ।
ಕ್ರೀಡನಂ ಮೈಥುನಂ ದ್ಯೂತಮಾಚರಂತಿ ರಮಂತಿ ಚ ॥ ೧೩೬ ॥

---

೧೩೨. ಮತ್ತು ಕ್ರಿಮಿರಾಶಿಯಲ್ಲೂ, ದುರ್ಗಂಧಿಮಾಂಸರಾಶಿಯಲ್ಲೂ, ಎಸೆಯಲ್ಪಟ್ಟು ಉದ್ವಿಗ್ನಮನಸ್ಕರಾಗಿ ಪಾಪಿಗಳು ಎರಡು ಪಾರ್ಶ್ವಗಳಲ್ಲೂ ಪರ್ವತಗಳ ಹತಿಯಿಂದ ಪೀಡಿಸಲ್ಪಡುತ್ತಾರೆ.

೧೩೩. ತಪ್ತವಜ್ರಲೇಪದಿಂದ ಪಾಪಿಗಳ ಶರೀರವನ್ನು ಲೇಪಿಸಿ ವಹ್ನಿಮಧ್ಯದಲ್ಲಿ ಅಧೋಮುಖವಾಗಿ ಲಂಬಿಸಿ ದಹಿಸುತ್ತಾರೆ.

೧೩೪. ಮತ್ತು ತಪ್ತ ಅಯೋಮಯಗುಡವನ್ನು ಬಾಯಿಯಲ್ಲಿಟ್ಟು ಮುದ್ಗರಗಳಿಂದ ತಿವಿದು ತಿನ್ನಿಸುವರು.

೧೩೫. ಯಾವ ಪಾಪಿಷ್ಟರು ಶಿವಾಲಯ, ಉದ್ಯಾನ, ವಾಪೀ, ಕೂಪ, ಮಠಾಂಗಣ ಇವುಗಳನ್ನು ನೋಡಿ ದ್ವೇಷದಿಂದ ಓಡುವರೋ.

೧೩೬–೧೩೭. ಮತ್ತು ಅವುಗಳಲ್ಲಿದ್ದುಕೊಂಡು ವ್ಯಾಯಾಮ, ಶರೀರೋದ್ವರ್ತನ, ಅಭ್ಯಂಗನ, ಸ್ನಾನ, ಪಾನ, ಭೋಜನ, ಕ್ರೀಡನ, ಮೈಥುನ ಮತ್ತು ದ್ಯೂತ ಇವುಗಳನ್ನು ಆಚರಿಸಿ ರಮಿಸುವರೋ ಅಂಥ ಪಾಪಿಗಳನ್ನು ವಿವಿಧ

ತೇ ಬಾಧ್ಯೈರ್ವಿವಿಧೈರ್ಘೋರೈರಿಕ್ಷುಯಂತ್ರಾದಿಪೀಡನೈಃ ।
ನಿರಯಾಗ್ನಿಷು ಪಚ್ಯಂತೇ ಯಾವದಾಚಂದ್ರತಾರಕಂ ॥ ೧೩೭ ॥

ಯೇ ಶೃಣ್ವಂತಿ ಗುರೋರ್ನಿಂದಾಂ ತೇಷಾಂ ಕರ್ಣಃ ಪ್ರಪೂರ್ಯತೇ ।
ಅಗ್ನಿವರ್ಣೈರಯಃಕೀಲೈಸ್ತಪ್ತತಾಮ್ರಾದಿಭಿದ್ರುತೈಃ ॥ ೧೩೮ ॥

ತ್ರಪುಸೀಸಾರಕೂಟಾದ್ಯೈಃ ಕ್ಷಾರೇಣ ಜತುನಾ ಪುನಃ ।
ಕ್ರಮಾದಾಪೂರ್ಯತೇ ಕರ್ಣೋ ನರಕೇಷು ಚ ಯಾತನಾಃ ।
ಅನುಕ್ರಮೇಣ ಸರ್ವೇಷು ಭವಂತ್ಯೇತಾಃ ಸಮಂತತಃ ॥ ೧೩೯ ॥

ಸರ್ವೇಂದ್ರಿಯಾಣಾಮಪ್ಯೇವಂ ಕ್ರಮಾತ್ಪಾಪೇನ ಯಾತನಾಃ ।
ಭವಂತಿ ಘೋರಾಃ ಪ್ರತ್ಯೇಕಂ ಶರೀರೇ ತತ್ಕೃತೇನ ಚ ॥ ೧೪೦ ॥

ಸ್ಪರ್ಶಲೋಭೇನ ಯೇ ಮೂಢಾಃ ಸಂಸ್ಪೃಶಂತಿ ಪರಸ್ತ್ರಿಯಂ ।
ತೇಷಾಂ ತ್ವಗಗ್ನಿವರ್ಣಾಭಿಃ ಸೂಚೀಭಿಃ ಪೂರ್ಯತೇ ಭೃಶಂ ॥ ೧೪೧ ॥

---

ವಾದ ಇಕ್ಷುಯಂತ್ರ ಪೀಡನಾದಿಗಳಿಂದ ನರಕಾಗ್ನಿಯಲ್ಲಿ ಆ ಚಂದ್ರಾರ್ಕವಾಗಿ ಪಾಕಮಾಡುವರು.

೧೩೮-೧೩೯. ಗುರುನಿಂದೆಯನ್ನು ಶ್ರವಣಮಾಡಿದ ಪಾಪಿಯ ಕರ್ಣಗಳಿಗೆ ಅಗ್ನಿವರ್ಣದ ಅಯಃಶಂಕುವನ್ನು ನಾಟಿಸುವುದಲ್ಲದೆ ಕ್ರಮವಾಗಿ ತಾಮ್ರ, ತವರ, ಸೀಸ, ಹಿತ್ತಾಳೆ, ಅರಗು ಮೊದಲಾದುವುಗಳ ಕಾದರಸವನ್ನು ತುಂಬಿಸಿ ಅನೇಕ ನರಕಗಳಲ್ಲಿ ನಾನಾ ಯಾತನೆಗಳನ್ನು ಕೊಡುವರು.

೧೪೦. ಈರೀತಿ ಸರ್ವೇಂದ್ರಿಯಗಳಿಂದ ಪಾಪಮಾಡುವ ಪಾಪಿಗಳಿಗೂ ಯಮಲೋಕದಲ್ಲಿ ಕ್ರಮವಾಗಿ ಆಯಾಯ ಇಂದ್ರಿಯಗಳಿಗೆ ಘೋರಯಾತನೆಯನ್ನುಂಟುಮಾಡುತ್ತಾರೆ.

೧೪೧-೧೪೨. ಸ್ಪರ್ಶಲೋಭದಿಂದ ಪರನಾರೀಸ್ಪರ್ಶಮಾಡಿದ ಪಾಪಿಯ ಸರ್ವಾಂಗಗಳಲ್ಲೂ ಅಗ್ನಿವರ್ಣದಸೂಚಿಗಳನ್ನು ನಾಟಿಸಿ ಅನಂತರ ಕ್ಷಾರಾದಿ

ತತಃ ಕ್ಷಾರಾದಿಭಿಃ ಸರ್ವೈಃ ಶರೀರಮನುಲಿಪ್ಯತೇ ।
ಯಾತನಾ ಚ ಮಹಾಕಷ್ಟಾ ಸರ್ವೇಷು ನರಕೇಷು ಚ ॥ ೧೪೨ ॥

ಗುರೋಃ ಕುರ್ವಂತಿ ಭ್ರುಕುಟಿಂ ಕ್ರೂರಂ ಚಕ್ಷುಶ್ಚ ಯೇ ನರಾಃ ।
ಪರದಾರಾಂಶ್ಚ ಪಶ್ಯಂತಿ ಲುಬ್ಧಾಃ ಸ್ನಿಗ್ಧೇನ ಚಕ್ಷುಷಾ ॥ ೧೪೩ ॥

ಸೂಚೀಭಿರಗ್ನಿವರ್ಣಾಭಿಸ್ತೇಷಾಂ ನೇತ್ರಂ ಪ್ರಪೂರ್ಯತೇ ।
ಕ್ಷಾರಾದ್ಯೈಶ್ಚ ಕ್ರಮಾತ್ಸರ್ವೈರ್ದೇಹೇ ಸರ್ವಾಶ್ಚ ಯಾತನಾಃ ॥ ೧೪೪ ॥

ದೇವಾಗ್ನಿಗುರುವಿಪ್ರಾಣಾಂ ಯೋಽನಿವೇದ್ಯ ಪ್ರಭುಂಜತೇ ।
ಲೋಹಕೀಲಶತೈಸ್ತಪ್ತೈಸ್ತಜ್ಜಿಹ್ವಾಸ್ಯಂ ಪ್ರಪೂರ್ಯತೇ ॥ ೧೪೫ ॥

ತತಃ ಕ್ಷಾರೇಣ ದೀಪ್ತೇನ ತೈಲತಾಮ್ರಾದಿಭಿಃ ಕ್ರಮಾತ್ ।
ಶರೀರೇ ಚ ಮಹಾಘೋರಾಶ್ಚಿತ್ರಾ ನರಕಯಾತನಾಃ ॥ ೧೪೬ ॥

---

ದ್ರವವಸ್ತುಗಳಿಂದ ಶರೀರವನ್ನು ಲೇಪಿಸುವರು. ಸರ್ವನರಕಗಳಲ್ಲೂ ಹೀಗೆ ಯಾತನೆಯನ್ನು ಕೊಡುವರು.

೧೪೩-೧೪೪. ಭ್ರುಕುಟೀ ಸಹಿತವಾಗಿ ಕ್ರೂರಚಕ್ಷುಸ್ಸಿನಿಂದ ಗುರುವನ್ನು ವೀಕ್ಷಣಮಾಡಿದವರಿಗೂ ಮತ್ತು ಅನುರಕ್ತವಾದ ನೇತ್ರಗಳಿಂದ ಪರಸ್ತ್ರೀ ವೀಕ್ಷಣ ಮಾಡಿದವರಿಗೂ, ಅಗ್ನಿವರ್ಣವಾದ ಸೂಜಿಗಳಿಂದ ನೇತ್ರಗಳನ್ನು ಚುಚ್ಚಿ ಕ್ಷಾರಾದಿ ರಸಗಳಿಂದ ಶರೀರವನ್ನೆಲ್ಲಾ ಲೇಪಿಸಿ ನಾನಾ ಯಾತನೆಗಳಿಗೆ ಗುರಿಮಾಡುತ್ತಾರೆ.

೧೪೫-೧೪೬. ದೇವ, ಅಗ್ನಿ, ಗುರು, ಮತ್ತು ದ್ವಿಜರಿಗೆ ಸಮರ್ಪಿಸದೆ ಭೋಜನಮಾಡುವವರ ನಾಲಗೆ ಮತ್ತು ವದನದಲ್ಲಿ ಲೋಹಮಯದ ನೂರಾರು ಮೊಳೆಗಳನ್ನು ನಾಟಿಸಿ ಪ್ರಜ್ವಲಿಸುವ ಕ್ಷಾರ, ತೈಲ, ತಾಮ್ರಾದಿ ರಸಗಳನ್ನು ಕ್ರಮವಾಗಿ ಸೇರಿಸಿ ಶರೀರಕ್ಕೂ ಮಹಾಘೋರವಾದ ನರಕಯಾತನೆಗಳನ್ನು ಕೊಡುವರು.

ಯೇ ಶಿವಾರಾಮಪುಷ್ಪಾಣಿ ಲೋಭಾತ್ಸಂಗೃಹ್ಯ ಪಾಣಿನಾ ।
ಜಿಘ್ರಂತಿ ಮೂಢಮನಸಃ ಶಿರಸಾ ಧಾರಯಂತಿ ಚ ॥ ೧೪೭ ॥

ಆಪೂರ್ಯಂತೇ ಶಿರಸ್ತೇಷಾಂ ಸುತಪ್ತೈರ್ಲೋಹಶಂಕುಭಿಃ ।
ನಾಸಿಕಾ ಚಾತಿಬಹುಶಸ್ತತಃ ಕ್ಷಾರಾದಿಭಿಃ ಪುನಃ ॥ ೧೪೮ ॥

ಯೇ ನಿಂದಂತಿ ಮಹಾತ್ಮಾನಮಾಚಾರ್ಯಂ ಧರ್ಮದೇಶಿಕಂ ।
ಶಿವಭಕ್ತಾಂಶ್ಚ ಯೇ ಮೂಢಾಃ ಶಿವಧರ್ಮಂ ಚ ಶಾಶ್ವತಂ ॥ ೧೪೯ ॥

ತೇಷಾಮುರಸಿ ಕಂಠೇ ಚ ಜಿಹ್ವಾಯಾಂ ದಂತಸಂಧಿಷು ।
ತಾಲುಕೋಷ್ಠೇ ಚ ನಾಸಾಯಾಂ ಮೂರ್ಧ್ನಿ ಸರ್ವಾಂಗಸಂಧಿಷು ॥೧೫೦॥

ಅಗ್ನಿವರ್ಣಾಃ ಸುತಪ್ತಾಶ್ಚ ತ್ರಿಶಿಖಾ ಲೋಹಶಂಕವಃ ।
ಆಖನ್ಯಂತೇ ಸುಬಹುಶಃ ಸ್ಥಾನೇಷ್ವೇತೇಷು ಮುದ್ಗರೈಃ ॥ ೧೫೧ ॥

ತತಃ ಕ್ಷಾರೇಣ ತಪ್ತೇನ ತಾಮ್ರೇಣ ತ್ರಪುನಾ ಪುನಃ ।
ತಪ್ತತೈಲಾದಿಭಿಃ ಸರ್ವೈರಾಪೂರ್ಯಂತೇ ಸಮಂತತಃ ॥ ೧೫೨ ॥

---

೧೪೭-೧೪೮. ಯಾರು ಶಿವಾಲಯದ ಪುಷ್ಪೋದ್ಯಾನದ ಪುಷ್ಪಗಳನ್ನು ಕುಸುಮಲೋಭದಿಂದ ಕಿತ್ತು ಆಘ್ರಾಣಿಸುವರೋ ಅಂಥ ಮೂಢಪಾಪಿಗಳ ಶಿರಸ್ಸು ಮತ್ತು ನಾಸಿಕಗಳಲ್ಲಿ ತಪ್ತಲೋಹ ಶಂಕುಗಳನ್ನು ಹೂಳಿ, ತಪ್ತ ಕ್ಷಾರಾದಿ ದ್ರವಗಳನ್ನು ಸುರಿಯುವರು.

೧೪೯-೧೫೦. ಮಹಾತ್ಮನೂ ಧರ್ಮೋಪದೇಷ್ಟೃವೂ ಆದ ಆಚಾರ್ಯನನ್ನೂ, ಶಿವಭಕ್ತರನ್ನೂ, ಮತ್ತು ಶಾಶ್ವತವಾದ ಶಿವಧರ್ಮವನ್ನೂ, ದೂಷಿಸುವ ಮೂಢರ ಎದೆ, ಕತ್ತು, ನಾಲಗೆ, ಹಲ್ಲಿನ ಸಂದುಗಳು.

೧೫೧-೧೫೨. ಮತ್ತು ದವಡೆ, ತುಟಿ, ಮೂಗು, ತಲೆ ಸರ್ವಾಂಗ ಸಂಧಿಗಳು ಇವುಗಳಲ್ಲಿ ಅಗ್ನಿವರ್ಣವಾದ ತ್ರಿಶಿಖೆಯುಳ್ಳ ತಪ್ತಲೋಹ ಶಂಕು

ಕ್ಷಾರತಾಮ್ರಾದಿಭಿರ್ದೀಪ್ತೈರ್ದಹ್ಯಂತೇ ಬಹುಶಃ ಪುನಃ ।
ನರಕೇಷು ಚ ಸರ್ವೇಷು ವಿಚಿತ್ರಾ ದೇಹಯಾತನಾಃ ॥ ೧೫೩ ॥

ಭವಂತಿ ಬಹುಶಃ ಕಷ್ಟಾಃ ಪಾಣಿಪಾದಸಮುದ್ಭವಾಃ ।
ಶಿವಾಯತನಪರ್ಯಂತೇ ಶಿವಾರಾಮೇ ಚ ಕುತ್ರಚಿತ್ ॥ ೧೫೪ ॥

ಸಮುತ್ಸೃಜಂತಿ ಯೇ ಪಾಪಾಃ ಪುರೀಷಂ ಮೂತ್ರಮೇವ ವಾ ।
ತೇಷಾಂ ಲಿಂಗಂ ಸವೃಷಣಂ ಚೂರ್ಣ್ಯತೇ ಲೋಹಮುದ್ಗರೈಃ ॥ ೧೫೫ ॥

ಸೂಚೀಭಿರಗ್ನಿವರ್ಣಾಭಿಸ್ತತಶ್ಚಾಪೂರ್ಯತೇ ಪುನಃ ।
ಲೋಹದಂಡಶ್ಚ ಸುಮಹಾನಗ್ನಿವರ್ಣಃ ಸಕಂಟಕಃ ।
ಆಖನ್ಯತೇ ಗುದೇ ತೇಷಾಂ ಯಾವನ್ಮೂರ್ಧ್ನಿ ವಿನಿರ್ಗತಃ ॥ ೧೫೬ ॥

ತತಃ ಕ್ಷಾರೇಣ ಮಹತಾ ತಾಮ್ರೇಣ ತ್ರಪುಣಾ ಪುನಃ ।
ದ್ರುತೇನಾಪೂರ್ಯತೇ ಗಾಢಂ ಗುದಂ ಶಿಶ್ನಂ ಹಿ ದೇಹಿನಾಂ ॥ ೧೫೭ ॥

---

ಗಳನ್ನು ಖನನಮಾಡಿ ಈ ಸ್ಥಾನಗಳನ್ನು ಲೋಹಮುದ್ಗರಗಳಿಂದ ಬಹಳವಾಗಿ ಹೊಡೆದು ಸರ್ವನರಕಗಳಲ್ಲೂ ದೇಹಕ್ಕೆ ವಿಚಿತ್ರ ಯಾತನೆಯನ್ನು ಕೊಡುತ್ತಾರೆ.

೧೫೪. ಶಿವದೇವಾಲಯದ ಸಮೀಪದಲ್ಲೋ ಶಿವೋದ್ಯಾನದಲ್ಲೋ ಮಲ ಅಥವಾ ಮೂತ್ರೋತ್ಸರ್ಗವನ್ನು ಮಾಡಿದ ಪಾಪಿಗಳ ಶಿಶ್ನ ಮತ್ತು ವೃಷಣಗಳನ್ನು ಲೋಹಮುದ್ಗರಗಳಿಂದ ಚೂರ್ಣಮಾಡುವರು.

೧೫೫-೧೫೬. ಮತ್ತು ಅಗ್ನಿವರ್ಣದ ಸೂಜಿಗಳನ್ನು ಅವುಗಳಲ್ಲಿ ಚುಚ್ಚುವರು. ಕಂಟಕಸಹಿತವೂ ಮಹತ್ತಾಗಿ ಕೆಂಪಗೂ ಕಾಯಿಸಿದ ಲೋಹದ ದಂಡವನ್ನು ಆಸನ ಪ್ರದೇಶದಲ್ಲಿಟ್ಟು ಶಿರಸ್ಸಿನಿಂದ ಹೊರಬರುವವರೆಗೂ ಹೊಡೆಯುವರು.

೧೫೭. ಆಮೇಲೆ ಕಾಯಿಸಿದ ಕ್ಷಾರ, ತಾಮ್ರ, ತವರ ಇವುಗಳ ರಸವನ್ನು ಗುದ ಮತ್ತು ಶಿಶ್ನಗಳಲ್ಲಿ ತುಂಬಿಸುತ್ತಾರೆ.

ಮನಃ ಸರ್ವೇಂದ್ರಿಯಾಣಾಂ ಚ ಯಸ್ಮಾದುಕ್ತಂ ಪ್ರವರ್ತಕಂ ।
ತಸ್ಮಾದಿಂದ್ರಿಯದುಃಖೇನ ಜಾಯತೇ ತತ್ಸುದುಃಖಿತಂ ॥ ೧೫೮ ॥

ಧನೇ ಸತ್ಯಪಿ ಯೇ ದಾನಂ ನ ಪ್ರಯಚ್ಛಂತಿ ತೃಷ್ಣಯಾ ।
ಅತಿಥಿಂ ಚಾವಮನ್ಯಂತೇ ಕಾಲಪ್ರಾಪ್ತಂ ಗೃಹಾಶ್ರಮೇ ॥ ೧೫೯ ॥

ತೇ ಲೋಹತೋರಣೇ ಬದ್ಧಾ ಹಸ್ತಪಾದಾವತಾಡಿತಾಃ ।
ವಿದಾರಿತಾಂಗಾಃ ಶುಷ್ಯಂತೇ ತಿಷ್ಠಂತ್ಯಬ್ದಶತಂ ನರಾಃ ॥ ೧೬೦ ॥

ಹಸ್ತಪಾದಲಲಾಟೇಷು ಕೀಲಿತಾ ಲೋಹಶಂಕುಭಿಃ ।
ನಿತ್ಯಂ ಚ ನೀವೃತಂ ವಕ್ತ್ರಂ ಕೀಲಕದ್ವಯನಾಡಿತಂ ॥ ೧೬೧ ॥

ಕೃಮಿಭಿಃ ಪ್ರಾಣಿಭಿಶ್ಚೋಗ್ರೈರ್ಲೋಹದಂಡೈಶ್ಚ ವಾಯಸೈಃ ।
ಉಪದ್ರವೈರ್ಬಹುವಿಧೈಃ ಸರ್ಪೈರ್ಮುಖರಕ್ಷೈಸ್ತತಃ ॥ ೧೬೨ ॥

---

೧೫೮. ಸರ್ವೇಂದ್ರಿಯಗಳ ಪ್ರವೃತ್ತಿಗೂ ಮನಸ್ಸೇ ಮೂಲಕಾರಣವಾದ್ದರಿಂದ, ಆಯಾಯಾ ಇಂದ್ರಿಯಗಳಿಗೆ ಕೊಟ್ಟ ಯಾತನೆಗಳಿಂದ ಮನಸ್ಸಿಗೇ ಯಾತನೆಯಾಗುವುದು.

೧೫೯–೧೬೦. ಹಣವಿದ್ದರೂ ಲೋಭದಿಂದ ದಾನಮಾಡದೆಯೂ, ಗೃಹಸ್ಥಾಶ್ರಮಿಗಳಾಗಿದ್ದೂ ಕಾಲಪ್ರಾಪ್ತನಾದ ಅತಿಥಿಯನ್ನು ಸತ್ಕರಿಸದೆಯೂ ಅವಮಾನಿಸಿದ ಪಾಪಿಗಳ ಕೈಕಾಲುಗಳನ್ನು ಲೋಹತೋರಣಗಳಲ್ಲಿ ಬಂಧಿಸಿ, ಅವಯವಗಳನ್ನು ಭೇದಿಸಿ ಅಲ್ಲಿ ನೂರಾರುವರ್ಷಗಳು ಶೋಷಣೆಮಾಡುವರು.

೧೬೧. ಅವರ ಹಸ್ತ ಪಾದ ಲಲಾಟಗಳಲ್ಲಿ ಲೋಹಶಂಕುಗಳನ್ನು ಹೊಡೆದು, ವದನದಲ್ಲಿ ಎರಡು ಕೀಲುಗಳನ್ನು ನಾಟಿಸಿ, ಅದು ಸದಾ ಅನಾವೃತವಾಗಿ ಇರುವ ಹಾಗೆಮಾಡಿ ಅದನ್ನು ಕ್ರಿಮಿಗಳಿಂದಲೂ ಇತರ ಉಗ್ರಪ್ರಾಣಿಗಳಿಂದಲೂ, ಲೋಹದಂಡಗಳಿಂದಲೂ, ಕಾಗೆಗಳಿಂದಲೂ,

೧೬೨-೧೬೪. ಮತ್ತು ಸರ್ಪಗಳಿಂದಲೂ ಈ ತೆರನಾದ ಬಹುವಿಧ ಉಪದ್ರವಗಳಿಂದ ಪೀಡಿಸಿ, ಅವರ ಜಿಹ್ವಾಮೂಲವನ್ನು ಸರಪಳಿಯಿಂದ ಬಂಧಿಸಿ,

**ಆಪೀಡ್ಯಂತೇ ಜಿಹ್ವಾಮೂಲೇ ನಿಬಧ್ಯ ಶೃಂಖಲಾಃ ಪುನಃ ।**
**ತಿಷ್ಠಂತಿ ಲಂಬಮಾನಾಶ್ಚ ಲೋಹಭಾರಪ್ರಪೀಡಿತಾಃ ॥ ೧೬೩ ॥**

**ಸ್ನಿಗ್ಧೇ ಚ ವೃಷಣೇ ನದ್ಧೇ ಲೋಹಭಾರದ್ವಯಂ ಪುನಃ ।**
**ತಿಷ್ಠತೇ ಲಂಬಮಾನಂ ಚ ಬಹುಭಾರಚತುರ್ಗುಣಂ ॥ ೧೬೪ ॥**

**ತತಃ ಸ್ವಮಾಂಸಮುತ್ಕೃತ್ಯ ತಿಲಮಾತ್ರಪ್ರಮಾಣತಃ ।**
**ಭೋಜನಂ ದೀಯತೇ ತೇಷಾಂ ಸೂಚ್ಯಗ್ರೇಣ ಸಶೋಣಿತಂ ॥ ೮೬೫ ॥**

**ಯದಾ ನಿರ್ಮಾಂಸತಾಂ ಪ್ರಾಪ್ತಾಃ ಕಾಲೇನ ಮಹತಾ ಪುನಃ ।**
**ತತಃ ಕ್ಷಾರೇಣ ದೀಪ್ತೇನ ವಪುಸ್ತೇಷಾಂ ಪ್ರಲಿಪ್ಯತೇ ॥ ೧೬೬ ॥**

**ಸಿಚ್ಯಂತೇ ವರ್ಷಧಾರಾಭಿಃ ಶೋಷ್ಯಂತೇ ವಾಯುನಾ ಪುನಃ ।**
**ಸಿಚ್ಯಂತೇ ತಪ್ತತೈಲೇನ ಪ್ರತಪ್ತೇನ ಸಮಂತತಃ ॥ ೧೬೭ ॥**

**ಪಶ್ಚಾತ್ತೇ ವಹ್ನಿನಾ ಭೂಯೋ ದೂರಸ್ಥೇನ ಶನೈಃ ಶನೈಃ ।**
**ನಿಃಶೇಷಯಾತನಾಭಿಶ್ಚ ಪೀಡ್ಯಂತೇ ಕ್ರಮಶಃ ಪುನಃ ॥ ೧೬೮ ॥**

---

ಕಾಲುಗಳಿಗೂ, ವೃಷಣಗಳಿಗೂ ಲೋಹಭಾರಗಳನ್ನು ತೂಗಹಾಕಿ ತಿಲಪ್ರಮಾಣ ರಕ್ತಮಿಶ್ರಿತವಾದ ಮಾಂಸವನ್ನು ಸೂಚ್ಯಾಗ್ರದಮೂಲಕ ಅವರ ಶರೀರದಿಂದಲೇ ಕಿತ್ತು ಭೋಜನಾರ್ಥವಾಗಿ ಕೊಡುತ್ತಾರೆ.

೧೬೫-೧೬೬. ಯಾವಾಗಲೂ ಹೀಗೆಯೂ ಕೊಡುವುದರಿಂದ ಕಾಲ ಕ್ರಮೇಣ ಅವರ ಶರೀರವು ನಿರ್ಮಾಂಸವಾದಮೇಲೆ ಉಷ್ಣವಾದ ಕ್ಷಾರರಸದಿಂದ ಲೇಪಿಸಲ್ಪಡುತ್ತದೆ. ಮತ್ತು ವರ್ಷಧಾರೆಗಳಿಂದ ತೋಯಿಸಲ್ಪಡುತ್ತದೆ.

೧೬೭-೧೬೮, ಮತ್ತು ವಾಯುವಿನಿಂದ ಶೋಷಿಸಲ್ಪಡುವುದು. ತಪ್ತ ತೈಲದಿಂದ ಸೇವಿಸಲ್ಪಡುವುದು. ಆಮೇಲೆ ವಹ್ನಿಯಿಂದ ದಹಿಸಲ್ಪಡುವುದು. ಈರೀತಿ ಕ್ರಮಶಃ ಅನೇಕ ಯಾತನೆಗಳಿಂದ ಪಾಪಿಗಳು ಪುನಃಪುನಃ ಪೀಡಿಸಲ್ಪಡುತ್ತಾರೆ.

ಭೃಶಂ ಬುಭುಕ್ಷಯಾ ಪೀಡಾ ಮೂರ್ಛಯಾತಿಪಿಪಾಸಯಾ ।
ಅತ್ಯುಷ್ಣೇನಾತಿಶೀತೇನ ಪಾಷಾನಾಂ ಸಮರೇಣ ಚ ॥ ೧೬೯ ॥

ಏವಮಾದಿಮಹಾಘೋರಾ ಯಾತನಾಃ ಪಾಪಕಾರಿಣಃ ।
ಏಕೈಕೇ ನರಕೇ ಚೈವ ಶತಶೋಥ ಸಹಸ್ರಶಃ ॥ ೧೭೦ ॥

ಪ್ರತ್ಯೇಕಂ ಯಾತನಾಶ್ಚಿತ್ರಾಃ ಸರ್ವೇಷು ನರಕೇಷು ಚ ।
ಕಷ್ಟಂ ವರ್ಷಶತೇನಾಪಿ ಸೋಢುಂ ಸರ್ವೈಶ್ಚ ನಾರಕೇ ॥ ೧೭೧ ॥

ಏತೇ ಚ ವಿವಿಧೈರ್ಘೋರೈರ್ಯಾತ್ಯಮಾನಾಶ್ಚ ಕರ್ಮಭಿಃ ।
ಮ್ರಿಯಂತೇ ನೈವ ಪಾಪಿಷ್ಠಾ ವಿವಿಧಾಃ ಪಾಪಕಾರಿಣಃ ॥ ೧೭೨ ॥

ಮಹಾಘೋರಾಭಿಘೋರಾಖ್ಯಾಃ ಕಾಲಾಗ್ನಿಸದೃಶೋಪಮಾಃ ।
ಶ್ರುತೈರೇತೈರ್ಮಹಾರೌದ್ರೈರ್ಮ್ರಿಯಂತೇ ಮೃದುಚೇತಸಃ ॥ ೧೭೩ ॥

ತತಸ್ತೇನಾತ್ರ ಕಥಿತಾಃ ಪಾಪಾ ಗಚ್ಛಂತಿ ತಾನ್ಸ್ವಯಂ ।
ಪುತ್ರಮಿತ್ರಕಲತ್ರಾರ್ಥಂ ಯದಾ ಪುಣ್ಯಂ ತ್ವಪಾಕೃತಂ ॥ ೧೭೪ ॥

---

೧೬೯–೧೭೧. ಪಾಪಿಗಳು ಸಾವಿರಾರು ನರಕಗಳಲ್ಲಿ ಒಂದೊಂದರಲ್ಲೂ ಪ್ರತ್ಯೇಕವಾಗಿ ಹಸಿವಿನಿಂದಲೂ, ದಾಹದಿಂದಲೂ, ಮೂರ್ಛೆಯಿಂದಲೂ, ಅತ್ಯುಷ್ಣ, ಮತ್ತು ಅತಿಶೀತ ಇತ್ಯಾದಿಗಳಿಂದಲೂ ಸಹಿಸಲಸಾಧ್ಯವೂ, ವಿಚಿತ್ರವೂ ಆದ ಘೋರಯಾತನೆಗಳನ್ನು ನೂರಾರುವರ್ಷ ಅನುಭವಿಸಬೇಕು.

೧೭೨. ವಿವಿಧ ಪಾಪಕರ್ಮವನ್ನಾಚರಿಸಿದ ಈ ಪಾಪಿಗಳು ಅನೇಕವಿಧ ಘೋರಯಾತನೆಗಳನ್ನು ಅನುಭವಿಸಿದರೂ ಮರಣಹೊಂದುವುದಿಲ್ಲ.

೧೭೩. ಕಾಲಾಗ್ನಿಸದೃಶಗಳಾದ ಮಹಾಘೋರ ಮತ್ತು ಅಭಿಘೋರ ಗಳೆಂಬ ನರಕಗಳ ನಾಮಶ್ರವಣ ಮಾತ್ರದಿಂದಲೇ ಮೃದುಹೃದಯರೂ, ಕರುಣಾ ರ್ದ್ರಯರೂ ಮರಣವನ್ನೇ ಹೊಂದುವರು.

೧೭೪–೧೭೫. ಪಾಪಿಗಳು ಈ ನರಕಗಳಲ್ಲಿ ಬಿದ್ದು ದುಃಖವನ್ನು ಅನು ಭವಿಸುವರು. ನರನು ಪುಣ್ಯಕರ್ಮ ಮಾಡದೆ ಪುತ್ರ ಮಿತ್ರ ಕಳತ್ರರಿಗಾಗಿ ಪಾಪ

ಏಕಾಕೀ ದಹ್ಯತೇ ತೇನ ನ ಚ ಪಶ್ಯತಿ ತಾನಿ ಸಃ ।
ಆತ್ಮನಾ ಚ ಕೃತಂ ಪಾಪಂ ಭೋಕ್ತವ್ಯಂ ಧ್ರುವಮಾತ್ಮನಾ ॥ ೧೭೫ ॥

ತಸ್ಮಿಮನ್ಯೋಪಘಾತಾರ್ಥಂ ಮೂಢ ಪಾಪಂ ಕೃತಂ ತ್ವಯಾ ।
ಏವಂ ದೂತೈರುಪಾಲಬ್ಧಾಸ್ತೇ ಪೃಚ್ಛಂತಿ ತತಃ ಪುನಃ ॥ ೧೭೬ ॥

ಕಿಯಂತಂ ಕೇನ ಪಾಪೇನ ಕಾಲಮತ್ರಾಯತೇ ನರಃ ।
ದೇವದ್ರವ್ಯವಿನಾಶೇನ ಗುರುದ್ರೋಹಾದಿಕರ್ಮಭಿಃ ।
ಪಾಪಾತ್ಸರ್ವೇಷು ಪಚ್ಯಂತೇ ನರಕೇಷ್ವಾಮಹಾಕ್ಷಯಾತ್ ॥ ೧೭೭ ॥

ಮಹಾಪಾತಕಿನಶ್ಚಾಪಿ ಸರ್ವೇಷು ನರಕೇಷ್ವಿಹ ।
ಆಚಂದ್ರತಾರಕಂ ಯಾವತ್ಪೀಡ್ಯಂತೇ ವಿವಿಧೈರ್ವಧೈಃ ॥ ೧೭೮ ॥

ಮಹಾಪಾತಕಿನಶ್ಚಾನ್ಯೇ ನರಕಾರ್ಣವಕೋಟಿಷು ।
ಚತುರ್ದಶಸು ಪಚ್ಯಂತೇ ಕಲಾರ್ಧಂ ವಿವಿಧೈರ್ವಧೈಃ ॥ ೧೭೯ ॥

---

ಕರ್ಮಮಾಡಿ ಅದರಿಂದ ತಾನು ಏಕಾಕಿಯಾಗಿ ನರಕಗಳಲ್ಲಿ ದಗ್ಧನಾಗುವನು. ಈ ವಿಷಯವನ್ನು ಯಾವನೊಬ್ಬನೂ ಸಹ ಯೋಚಿಸುವುದಿಲ್ಲ.

೧೭೬-೧೭೭. "ಎಲೈ ಮೂಢನೇ ! ಪ್ರತಿಯೊಬ್ಬನೂ ತಾನು ಮಾಡಿದ ಕರ್ಮವನ್ನು ತಾನೇ ಅನುಭವಿಸಬೇಕು. ಆದ್ದರಿಂದ ಮತ್ತೊಬ್ಬರಿಗಾಗಿ ನೀನು ಏತಕ್ಕೆ ಪಾಪಕರ್ಮವನ್ನಾಚರಿಸಿದೆ ?" ಎಂದು ಯಮದೂತರಿಂದ ಉಪಾಲಬ್ಧನಾದ ಪಾಪಿಯು "ಎಲೈ ಯಮಭಟರೇ ! ಯಾವ ಪಾಪಕ್ಕೆ ಎಷ್ಟುಕಾಲ ನರಕದಲ್ಲಿ ದುಃಖವನ್ನನುಭವಿಸಬೇಕು" ಎಂದು ಪ್ರಶ್ನಿಸಲಾಗಿ ಭಟರು ಹೀಗೆಂದರು.

೧೭೮-೧೭೯. ದೇವ ದ್ರವ್ಯನಾಶ, ಮತ್ತು ಗುರುದ್ರೋಹ ಇತ್ಯಾದಿ ಪಾಪ ಕರ್ಮಗಳಿಗೆ ಮಹಾಪ್ರಳಯಾವಧಿ ಸರ್ವನರಕಗಳಲ್ಲೂ ಪಕ್ವರಾಗಬೇಕು. ಈ ಮಹಾಪಾತಕಿಗಳು ಈ ಯಮಪುರದಲ್ಲಿ ಸರ್ವನರಕಗಳಲ್ಲೂ ಆಚಂದ್ರಾರ್ಕವಾಗಿ ವಿವಿಧ ಹಿಂಸೆಗಳನ್ನು ಅನುಭವಿಸುತ್ತಾರೆ. ಇತರ ಮಹಾಪಾತಕಿಗಳು ಹದಿನಾಲ್ಕು ಕೋಟಿ ನರಕಗಳಲ್ಲಿ ಅರ್ಧ, ಅರ್ಧ ಕಲಾಪರಿಮಾಣದಲ್ಲಿ ವಿವಿಧ ಹಿಂಸೆಗಳನ್ನು ಅನುಭವಿಸುತ್ತಾರೆ.

**ಉಪಪಾತಕಿನಶ್ಚಾಪಿ ತದರ್ಧಂ ಯಾಂತಿ ಮಾನವಾಃ ।**
**ಶೇಷಪಾಪೈಸ್ತದರ್ಧಂ ತು ಕಾಲಂ ಚಾಪಿ ತಥಾವಿಧಂ ॥ ೧೮೦ ॥**

**ತಸ್ಮಾತ್ಪಾಪಂ ನ ಕುರ್ವೀತ ಚಂಚಲೇ ಜೀವಿತೇ ಸತಿ ।**
**ಪಾಪೇನ ಹಿ ಧ್ರುವಂ ಯಾಂತಿ ನರಕೇಷು ನರಾಃ ಸ್ವಯಂ ॥ ೧೮೧ ॥**

**ಯಃ ಕರೋತಿ ನರಃ ಪಾಪಂ ತಸ್ಯಾತ್ಮಾ ಧ್ರುವಮಪ್ರಿಯಃ ।**
**ಪಾಪಸ್ಯೇಹ ಫಲಂ ದುಃಖಂ ತದ್ಭೋಕ್ತವ್ಯಮಿಹಾತ್ಮನಾ ॥ ೧೮೨ ॥**

**ಕಥಂ ತೇ ಪಾಪನಿರತಾ ನರಾ ರಾತ್ರಿಷು ಶೇರತೇ ।**
**ಮರಣಾಂತರಿತಾ ಯೇಷಾಂ ನಾರಕೀ ತೀವ್ರಯಾತನಾ ॥ ೧೮೩ ॥**

**ಏವಂ ಕ್ಲಿಷ್ಟವಿಶುದ್ಧಾಶ್ಚ ಸಾವಶೇಷೇಣ ಕರ್ಮಣಾ ।**
**ತತಃ ಕ್ಷಿತಿಂ ಸಮಾಸಾದ್ಯ ಜಾಯಂತೇ ದೇಹಿನಃ ಪುನಃ ।**
**ಸ್ಥಾವರಾ ವಿವಿಧಾಕಾರಾಸ್ತೃಣಗುಲ್ಮಾದಿಭೇದತಃ ॥ ೧೮೪ ॥**

---

೧೮೦–೧೮೧. ಉಪಪಾತಕಿಗಳು ಅದರರ್ಧಕಾಲವಲ್ಲೂ, ಅವಶಿಷ್ಟ ಪಾಪಿಗಳು ಪೂರ್ವೋಕ್ತ ಸಂಖ್ಯಾಕವಾದ ನರಕಗಳಲ್ಲಿ ಅಂಥ ಹಿಂಸೆಗಳನ್ನು ಅದರಲ್ಲಿ ಅರ್ಧಕಾಲವನ್ನೂ ಅನುಭವಿಸಬೇಕು. ಆದ್ದರಿಂದ ಅಸ್ಥಿರವಾದ ಜೀವಿತಕ್ಕಾಗಿ ಪಾಪಕರ್ಮವನ್ನಾಚರಿಸಬಾರದು. ಪಾಪದಿಂದ ನಿಯತವಾಗಿ ನರಕಪ್ರಾಪ್ತಿಯಾಗುವುದು.

೧೮೨. ಯಾವನು ಪಾಪಕರ್ಮವನ್ನಾಚರಿಸುವನೋ ಅಂಥವನು ತನಗೆ ತಾನೇ ಅಪ್ರಿಯನು. ಪಾಪಫಲವಾದ ದುಃಖವನ್ನಷ್ಟೆ ಆ ಪರಲೋಕದಲ್ಲಿ ಅನುಭವಿಸತಕ್ಕುದು,

೧೮೩. ಪಾಪಕರ್ಮಾಸಕ್ತರಾದ ಪುರುಷರಿಗೆ ರಾತ್ರಿಯಲ್ಲಿ ನಿದ್ರೆಯು ಹೇಗೆ ಬರುತ್ತದಪ್ಪಾ ಎಂದು ಅತ್ಯಾಶ್ಚರ್ಯವಾಗಿದೆ. ಏಕೆಂದರೆ ಅವರ ನರಕ ಯಾತನಾನುಭವವು ಕೇವಲ ಮರಣ ವ್ಯವಹಿತವಾಗಿದೆ.

೧೮೪, ಈ ರೀತಿ ನರಕಗಳಲ್ಲಿ ಕ್ಲೇಶಗಳನ್ನನುಭವಿಸಿ ಶುದ್ಧರಾದ ಪ್ರಾಣಿಗಳು, ಅವಶಿಷ್ಟಕರ್ಮದಿಂದ ಭೂಲೋಕದಲ್ಲಿ ತೃಣ ಗುಲ್ಮಾದಿ ವಿವಿಧ ಸ್ಥಾವರ ಜನ್ಮವನ್ನು ಪಡೆಯುವುವು.

ತತ್ರಾನುಭೂಯ ದುಃಖಾನಿ ಜಾಯಂತೇ ಕೀಟಯೋನಿಷು ।
ನಿಷ್ಕ್ರಾಂತಾಃ ಕೀಟಯೋನಿಭ್ಯೋ ಜಾಯಂತೇ ಪಕ್ಷಿಣಸ್ತತಃ ॥ ೧೮೫ ॥

ಸಂಕ್ಲಿಷ್ಟಾಃ ಪಕ್ಷಿಭಾವೇನ ಭವಂತಿ ಮೃಗಜಾತಿಷು ।
ಮಾರ್ಗಂ ದುಃಖಮತಿಕ್ರಮ್ಯ ಜಾಯಂತೇ ಪಶುಯೋನಿಷು ॥ ೧೮೬ ॥

ಕ್ರಮಾದ್ಗೋಯೋನಿಮಾಸಾದ್ಯ ಜಾಯಂತೇ ಮಾನವಾಃ ಪುನಃ ।
ಏವಂ ಯೋನಿಷು ಸರ್ವಾಸು ಪರಿಕ್ರಮ್ಯ ಕ್ರಮೇಣ ತು ।
ಕಾಲಾಂತರವಶಾದ್ಯಾಂತಿ ಮಾನುಷ್ಯಮತಿದುರ್ಲಭಂ ॥ ೧೮೭ ॥

ವ್ಯುತ್ಕ್ರಮೇಣಾಪಿ ಮಾನುಷ್ಯಂ ಪ್ರಾಪ್ಯತೇ ಪುಣ್ಯಗೋಚರಾತ್ ।
ವಿಚಿತ್ರಾ ಗತಯಃ ಪ್ರೋಕ್ತಾಃ ಕರ್ಮಣಾಂ ಗುರುಲಾಘವಾತ್ ॥ ೧೮೮ ॥

ಮಾನುಷ್ಯಂ ಯಃ ಸಮಾಸಾದ್ಯ ಸ್ವರ್ಗಮೋಕ್ಷಪ್ರಸಾಧಕಂ ।
ದ್ವಯೋರ್ನ ಸಾಧಯತ್ಯೇಕಂ ಸ ಮೃತಸ್ತಪ್ಯತೇ ಚಿರಂ ॥ ೧೮೯ ॥

---

೧೮೫. ಈ ಸ್ಥಾವರಜನ್ಮದಲ್ಲಿ ದುಃಖವನ್ನನುಭವಿಸಿ ಆ ಮೇಲೆ ಕೀಟಯೋನಿಯಲ್ಲಿ ಜನಿಸಿ ಅಲ್ಲಿಂದ ನಿಷ್ಕ್ರಾಂತರಾಗಿ ಪಕ್ಷಿಜನ್ಮವನ್ನು ಪಡೆಯುವರು.

೧೮೬-೧೮೭. ಪಕ್ಷಿ ಜನ್ಮವನ್ನನುಭವಿಸಿದಮೇಲೆ ಮೃಗಜಾತಿಯಲ್ಲಿ ಉದ್ಭವಿಸಿ, ಮಾರ್ಗದಲ್ಲಿ ಭಾರವಹನ ದುಃಖವನ್ನು ಅನುಭವಿಸಿ ಪಶು ಜನ್ಮ ಜನನ ಕ್ರಮದಿಂದ ಗೋಜನ್ಮವನ್ನು ಹೊಂದುತ್ತಾರೆ. ಈ ರೀತಿ ಸರ್ವಯೋನಿಗಳಲ್ಲೂ ಉದ್ಭವಿಸಿ ಕ್ರಮೇಣ ಕಾಲಾಂತರದಲ್ಲಿ ಅತಿ ದುರ್ಲಭವಾದ ಮನುಷ್ಯ ಜನ್ಮವನ್ನು ಪಡೆಯುತ್ತಾರೆ.

೧೮೮. ಪುಣ್ಯಪರಿಪಕ್ವವಶಾತ್ ವ್ಯುತ್ಕ್ರಮವಾಗಿಯೂ ಮನುಷ್ಯ ಜನ್ಮ ಪ್ರಾಪ್ತಿಯಾಗುವುದುಂಟು. ಗೌರವ ಲಾಘವಗಳನ್ನು ಅವಲಂಬಿಸಿ ಕರ್ಮ ಗತಿಯು ವಿಚಿತ್ರವಾಗಿದೆ.

೧೮೯. ಮನುಷ್ಯನಾಗಿ ಜನಿಸಿ ಅಭ್ಯುದಯ, ನಿಃಶ್ರೇಯಸದ ಸಾಧನಗಳಲ್ಲಿ ಒಂದನ್ನೂ ಆಚರಣೆಮಾಡದಿರುವ ಪುರುಷನು ಮರಣಾನಂತರದಲ್ಲಿ ಬಹುಕಾಲ ಪಶ್ಚಾತ್ತಾಪಪಡುವನು.

**ದೇವಾಸುರಾಣಾಂ ಸರ್ವೇಷಾಂ ಮಾನುಷ್ಯಮತಿದುರ್ಲಭಂ ।**
**ತತ್ಸಂಪ್ರಾಪ್ಯ ಕಥಾಃ ಕುರ್ಯಾನ್ನ ಗಚ್ಛೇನ್ನರಕಂ ಯಥಾ　॥ ೧೯೦ ॥**

**ಸ್ವರ್ಗಾಪವರ್ಗಲಾಭಾಯ ಯದಿ ನಾಸ್ತಿ ಸಮುದ್ಯತಃ ।**
**ಸ್ವರ್ಗಸ್ಯ ಮೂಲಂ ಮಾನುಷ್ಯಂ ತದ್ಯತ್ನಾದನುಪಾಲಯೇತ್　॥ ೧೯೧ ॥**

**ಧರ್ಮಮೂಲೇನ ಮಾನುಷ್ಯಂ ಲಬ್ಧ್ವಾ ಸರ್ವಾರ್ಥಸಾಧಕಂ ।**
**ಯದಿ ಲಾಭೇ ನ ಯತ್ನಸ್ತೇ ಮೂಲಂ ರಕ್ಷಸ್ವ ಯತ್ನತಃ　॥ ೧೯೨ ॥**

**ಮನುಷ್ಯತ್ವೇ ಚ ವಿಪ್ರತ್ವಂ ಯಃ ಸಂಪ್ರಾಪ್ಯಾತಿ ದುರ್ಲಭಂ ।**
**ನ ಕರೋತ್ಯಾತ್ಮನಃ ಶ್ರೇಯಃ ಕೋನ್ಯಸ್ತಸ್ಮಾದಚೇತನಃ　॥ ೧೯೩ ॥**

**ಸರ್ವೇಷಾಮೇವ ದೇಶಾನಾಂ ಮಧ್ಯದೇಶಃ ಪರಃ ಸ್ಮೃತಃ ।**
**ಅತಃ ಸ್ವರ್ಗಶ್ಚ ಮೋಕ್ಷಶ್ಚ ಯಶಃ ಸಂಪ್ರಾಪ್ಯತೇ ನರೈಃ　॥ ೧೯೪ ॥**

---

೧೯೦. ದೇವಾಸುರಾದಿ ನಿಖಿಲ ಜನ್ಮಗಳಲ್ಲಿ ಮನುಷ್ಯ ಜನ್ಮವು ಅತಿ ದುರ್ಲಭವು. ಅಂಥ ಜನ್ಮವನ್ನು ಪಡೆದಮೇಲೆ ಹೇಗೆ ನಡೆದರೆ ನರಕ ಪ್ರಾಪ್ತಿಯಾಗದಿರುವುದೋ ಹಾಗೆ ತನ್ನ ವರ್ತನೆಯನ್ನಿಟ್ಟಿರಬೇಕು.

೧೯೧. ಸ್ವರ್ಗ ಅಥವಾ ಮೋಕ್ಷಕ್ಕೆ ಸಾಧನವನ್ನು ಸಂಪಾದಿಸುವುದರಲ್ಲಿ ಉದ್ಯೋಗಮಾಡದಿರುವ ಮನುಷ್ಯನು ಸ್ವರ್ಗಪ್ರಾಪ್ತಿಗೆ ಮೂಲವಾದ ಈ ಮನುಷ್ಯ ಜನ್ಮವನ್ನು ಪ್ರಯತ್ನಪೂರ್ವಕವಾಗಿಯಾದರೂ ಏಕೆ ಕಾಪಾಡಿಕೊಂಡಿರಬೇಕು.

೧೯೨. ಧರ್ಮಾನುಷ್ಠಾನದಿಂದ ಸರ್ವಪುರುಷಾರ್ಥ ಸಾಧನವಾದ ಈ ಮನುಷ್ಯ ಜನ್ಮವನ್ನು ಪಡೆದು, ಅಧಿಕ ಲಾಭಕ್ಕೆ ಪ್ರಯತ್ನಮಾಡದೇ ಇದ್ದರೂ ಮೂಲರಕ್ಷಣೆಗಾದರೂ ಪ್ರಯತ್ನಮಾಡಲೇಬೇಕು.

೧೯೩. ಮನುಷ್ಯ ಜನ್ಮದಲ್ಲೂ ಬ್ರಾಹ್ಮಣ ಜನ್ಮವು ಅತಿದುರ್ಲಭವು ಅದನ್ನು ಪಡೆದು ಯಾವನು ಆತ್ಮಶ್ರೇಯಸ್ಸನ್ನು ಸಂಪಾದಿಸುವುದಿಲ್ಲವೋ ಅವನಿಗಿಂತಲೂ ಮೂಢನು ಯಾರೂ ಇಲ್ಲ.

೧೯೪. ಸರ್ವದೇಶಗಳಿಗಿಂತ ಮಧ್ಯದೇಶವು ಪುಣ್ಯಭೂಮಿಯಾದುದರಿಂದ ಶ್ರೇಷ್ಠವು. ಈ ದೇಶವಾಸದಿಂದ ಸ್ವರ್ಗ, ಮೋಕ್ಷ ಮತ್ತು ಕೀರ್ತಿ ಇವುಗಳನ್ನು ಸಾಧಿಸಬಹುದು.

ಏತಸ್ಮಿನ್ಭಾರತೇ ಪುಣ್ಯೇ ಪ್ರಾಪ್ಯ ಮಾನುಷ್ಯಮಧ್ರುವಂ ।
ಯಃ ಕುರ್ಯಾದಾತ್ಮನಃ ಶ್ರೇಯಸ್ತೇನಾತ್ಮಾ ರಕ್ಷಿತಃ ಸ್ವಯಂ ।
ಯಃ ಕುರ್ಯಾನ್ನಾತ್ಮನಃ ಶ್ರೇಯಸ್ತೇನಾತ್ಮಾ ವಂಚಿತಃ ಸ್ವಯಂ ॥೧೯೫॥

ಭೋಗಭೂಮಿಃ ಸ್ಮೃತಃ ಸ್ವರ್ಗಃ ಕರ್ಮಭೂಮಿರಿಯಂ ಮತಾ ।
ಇಹ ಯತ್ಕ್ರಿಯತೇ ಕರ್ಮ ಸ್ವರ್ಗೇ ತದುಪಭುಜ್ಯತೇ ॥ ೧೯೬ ॥

ಯಾವತ್ಸ್ವಾಸ್ಥ್ಯಂ ಶರೀರಸ್ಯ ತಾವದ್ಧರ್ಮಂ ಸಮಾಚರ ।
ಅಸ್ವಸ್ಥಃ ಶ್ಚಾತಿಯತ್ನೇನ ನ ಕಿಂಚಿತ್ಕರ್ತುಮುತ್ಸಹೇತ್ ॥ ೧೯೭ ॥

ಅಧ್ರುವೇಣ ಶರೀರೇಣ ಹ್ಯಧ್ರುವಂ ಯಃ ಪ್ರಸಾಧಯೇತ್ ।
ಧ್ರುವಂ ತಸ್ಯ ಪರಿಭ್ರಷ್ಟಮಧ್ರುವಂ ನಷ್ಟಮೇವ ಚ ॥ ೧೯೮ ॥

ಆಯುಷಃ ಖಂಡಖಂಡಾನಿ ನಿಪತಂತಿ ತವಾಗ್ರತಃ ।
ಅಹೋರಾತ್ರಾಪದೇಶೇನ ಕಿಮರ್ಥಂ ನಾವಬುಧ್ಯಸೇ ॥ ೧೯೯ ॥

---

೧೯೫. ಇಂಥ ಪವಿತ್ರವಾದ ಭಾರತದೇಶದಲ್ಲಿ ಅಶಾಶ್ವತವಾದ ಮನುಷ್ಯ ಜನ್ಮವನ್ನು ಪಡೆದು ಯಾವನು ಆತ್ಮಶ್ರೇಯಸ್ಸನ್ನು ಸಾಧಿಸುವನೋ ಅಂಥವನು ತನ್ನ ಆತ್ಮರಕ್ಷಣೆಯನ್ನು ಮಾಡಿದಂತಾಗುವುದು. ಅದನ್ನು ಸಾಧಿಸದೆ ಇರುವವನು ಆತ್ಮವಂಚನೆಯನ್ನು ಮಾಡಿದವನಿಗೆ ಸಮನು.

೧೯೬. ಸ್ವರ್ಗವು ಭೋಗ ಭೂಮಿಯು. ಈ ಲೋಕವಾದರೋ ಕರ್ಮ ಭೂಮಿಯು. ಇಹ ಲೋಕದಲ್ಲಿ ಮಾಡಿದ ಕರ್ಮಫಲವನ್ನು ಸ್ವರ್ಗದಲ್ಲಿ ಅನುಭವಿಸುವರು.

೧೯೭. ಶರೀರಾರೋಗ್ಯವಿರುವಾಗಲೇ ಧರ್ಮಾನುಷ್ಠಾನ ಮಾಡಬೇಕು. ಅಸ್ವಸ್ಥನು ಮಹಾಪ್ರಯತ್ನಪಟ್ಟರೂ ಒಂದು ಶುಭಕರ್ಮವನ್ನೂ ಸಾಧಿಸಲಾರನು.

೧೯೮. ಅಶಾಶ್ವತವಾದ ಶರೀರದಿಂದ ಅಶಾಶ್ವತವಾದುದನ್ನೇ ಸಾಧಿಸಿದವನಿಗೆ ಶಾಶ್ವತಸುಖ ಲಾಭವಾಗಲಾರದು. ಅಶಾಶ್ವತವು ನಷ್ಟವೆಂಬುದು ಸಿದ್ಧಾಂತ.

೧೯೯. ಅಹೋ ರಾತ್ರಿಗಳ ನೆಪದಿಂದ ಆಯುಃಖಂಡಗಳು ತನ್ನಿದಿರಾಗಿ ನಶಿಸುತ್ತಿಸುವುದನ್ನು ಈ ಮನುಷ್ಯನು ಕಂಡರೂ ಅದು ಏತಕ್ಕೆ ಆಲೋಚಿಸುವುದಿಲ್ಲ.

ಯದಾ ನ ಜ್ಞಾಯತೇ ಮೃತ್ಯುಃ ಕದಾ ಕಸ್ಯ ಭವಿಷ್ಯತಿ ।
ಆಕಸ್ಮಿಕೇ ಹಿ ಮರಣೇ ಧೃತಿಂ ವಿಂದೇತ ಕಸ್ತದಾ　　　॥ ೨೦೦ ॥

ಪರಿತ್ಯಜ್ಯ ಯದಾ ಸರ್ವಮೇಕಾಕೀ ಯಾಸ್ಯತಿ ಧ್ರುವಂ ।
ನ ದದಾಸಿ ತದಾ ಕಸ್ಮಾತ್ಪಾಥೇಯಾರ್ಥಮಿದಂ ಧನಂ　　　॥ ೨೦೧ ॥

ಗೃಹೀತದಾನಪಾಥೇಯಾ ಸುಖಂ ಯಾಂತಿ ಮಹಾಧ್ವನಿ ।
ಅನ್ಯಥಾ ಕ್ಲಿಶ್ಯತೇ ಜಂತುಃ ಪಾಥೇಯರಹಿತಃ ಪಥಿ　　　॥ ೨೦೨ ॥

ಯೇಷಾಂ ದ್ವಿಜೇಂದ್ರನಾವಿತ್ರೀ ಪೂರ್ಣಭಾಂಡಾ ತು ಗಚ್ಛತಿ ।
ಸ್ವರ್ಗದೇಶಸ್ಯ ಪುರತಸ್ತೇಷಾಂ ಲಾಭಃ ಪದೇ ಪದೇ　　　॥ ೨೦೩ ॥

---

೨೦೦. ಯಾವನಿಗೆ ಯಾವಾಗ ಮರಣವೆಂಬುದು ಅನಿರ್ಣೀತವಾಗಿರುವುದರಿಂದ ಆಕಸ್ಮಿಕವಾಗಿ ಮರಣ ಪ್ರಾಪ್ತಿಯಾಗುವುದನ್ನು ನೋಡಿದಮೇಲೆ ಯಾವನಿಗೆ ಧೈರ್ಯಬರಬಹುದು ?

೨೦೧. "ಧನಾದಿ ಸರ್ವಸ್ವವನ್ನೂ ಇಲ್ಲೇ ಪರಿತ್ಯಾಗಮಾಡಿ ಏಕಾಕಿಯಾಗಿಯೇ ಪರಲೋಕಕ್ಕೆ ಹೋಗುವುದು" ಎಂದು ನಿರ್ಣೀತವಾದ ಮೇಲೆ ಯಾತ್ರಾಸಮಯದಲ್ಲಿ ಪಾಥೇಯಾರ್ಥವಾಗಿ ಧನ ಧಾನ್ಯ ತ್ಯಾಗವನ್ನು ಏತಕ್ಕೆ ಮಾಡುವುದಿಲ್ಲವು.

೨೦೨. ದಾನರೂಪವಾದ ಪಾಥೇಯವನ್ನು ಸಂಪಾದಿಸಿಕೊಂಡಿರುವ ಪ್ರಾಣಿಯು ಮಹಾಮಾರ್ಗದಲ್ಲಿ ಸುಖವಾಗಿ ಪ್ರಯಾಣಮಾಡುವುದು. ಇತರ ಪ್ರಾಣಿಗಳು ದಾನರೂಪವಾದ ಪಾಥೇಯವಿಲ್ಲದೆ ಮಾರ್ಗದಲ್ಲಿ ಕ್ಲೇಶಪಡುವುದು.

೨೦೩. ಪರಲೋಕಯಾತ್ರಾವೇಳೆಯಲ್ಲಿ ಭಾಂಡಪೂರಿತರಾದ ದ್ವಿಜೇಂದ್ರರೆಂಬ ನೌಕೆಯು ಯಾರ ಪುರೋಭಾಗದಲ್ಲಿ ಹೋಗುವುದೋ ಅಂತಹ ಪುಣ್ಯಾತ್ಮರಿಗೆ ಹೆಜ್ಜೆ ಹೆಜ್ಜೆಗೂ ಇಷ್ಟಲಾಭವಿದೆ.

ಇತಿ ಜ್ಞಾತ್ವಾ ನರಃ ಪುಣ್ಯಂ ಕುರ್ಯಾತ್ಪಾಪಂ ವಿವರ್ಜಯೇತ್ ।
ಪುಣ್ಯೇನ ಯಾತಿ ದೇವತ್ವಮಪುಣ್ಯಾನ್ನರಕಂ ವ್ರಜೇತ್ ॥ ೨೦೪ ॥

ಯೇ ಮನಾಗಪಿ ದೇವೇಶಂ ಪ್ರಪನ್ನಾಃ ಶರಣಂ ಶಿವಂ ।
ತೇಪಿ ಘೋರಂ ನ ಪಶ್ಯಂತಿ ಯಮಸ್ಯ ವದನಂ ನರಾಃ ॥ ೨೦೫ ॥

ಕಿಂತು ಪಾಪೈರ್ಮಹಾಘೋರೈಃ ಕಿಂಚಿತ್ಕಾಲಂ ಶಿವಾಜ್ಞಯಾ ।
ಭವಂತಿ ಪ್ರೇತರಾಜಾನಸ್ತತೋ ಯಾಂತಿ ಶಿವಾಲಯಂ ॥ ೨೦೬ ॥

ಯೇ ಪುನಃ ಸರ್ವಭಾವೇನ ಪ್ರತಿಪನ್ನಾ ಮಹೇಶ್ವರಂ ।
ನ ತೇ ಲಿಪ್ಯಂತಿ ಪಾಪೇನ ಪದ್ಮಪತ್ರಮಿವಾಂಭಸಾ ॥ ೨೦೭ ॥

---

೨೦೪. ಮನುಷ್ಯನು ಇದನ್ನು ತಿಳಿದುಕೊಂಡು ವಿಹಿತವನ್ನಾಚರಿಸಿ ಪುಣ್ಯವನ್ನು ಗಳಿಸಬೇಕು. ನಿಷಿದ್ಧವನ್ನು ತ್ಯಜಿಸಿದವನಾಗಿ ಪಾಪಕೂಪದಿಂದ ವಿಮುಕ್ತತೆಯನ್ನು ಪಡೆಯಬೇಕು. ಪುಣ್ಯದಿಂದ ದೇವತ್ವ ಪ್ರಾಪ್ತಿಯೂ ಪಾಪದಿಂದ ನರಕಪ್ರಾಪ್ತಿಯೂ ಸಹ ಆಗುವುದು.

೨೦೫. ದೇವದೇವನಾದ ಪರಮೇಶ್ವರನನ್ನು ಮನಃಪೂರ್ತಿಯಾಗಿ ಸ್ವಲ್ಪವಾದರೂ ಶರಣು ಹೊಂದಿದವರು ಘೋರತಮವಾದ ಯಮನ ಮುಖವನ್ನು ಸಂದರ್ಶಿಸುವುದಿಲ್ಲ.

೨೦೬. ಮತ್ತೆ ಅವರು ಮಹಾಘೋರ ಪಾಪಗಳಿಗನುಸಾರವಾಗಿ ಸ್ವಲ್ಪ ಕಾಲ ಶಿವಾಜ್ಞಾನುಧಾರಕರಾಗಿ ಪ್ರೇತರಾಜರಾಗಿದ್ದುಕೊಂಡು ಆಮೇಲೆ ಆ ಪರಮಪದವನ್ನು ಹೊಂದುವರು.

೨೦೭. ಸರ್ವಭಾವದಿಂದಲೂ ಸದಾ ಪರಮೇಶ್ವರನನ್ನೇ ಅನನ್ಯ ಭಕ್ತಿಯಿಂದ ಮರೆಹೊಕ್ಕವರು ಕಮಲಪತ್ರವು ಯಾವರೀತಿ ಜಲಾರ್ದ್ರವಾಗದಿರುವುದೋ ಅದರಂತೆ ಪಾಪದಿಂದ ಲಿಪ್ತರಾಗುವುದಿಲ್ಲ.

ತಸ್ಮಾದ್ವಿವರ್ಧಯೇದ್ಭಕ್ತಿಮೀಶ್ವರೇ ಸತತಂ ಬುಧಃ ।
ತನ್ಮಾಹಾತ್ಮ್ಯವಿಚಾರೇಣ ಭವದೋಷವಿರಾಗತಃ ॥ ೨೦೮ ॥

ಪಾಪಾನಿ ಪಂಚ ಪರಮಾರ್ಥತಯೈವ ಪಾರ್ಥ ।
ದುಃಖಪ್ರದಾನಿ ಸುಚಿರಂ ಪಿತೃರಾಜಲೋಕೇ ।
ಅನ್ಯಾನಿ ಯಾನಿ ಚಿರಕಾಲಭಯಾನಕಾನಿ ।
ವಕ್ತುಂ ನ ಯಾಂತಿ ಕಿಲ ತಾನಿ ಪರಿಸ್ಫುಟಾನಿ ॥ ೨೦೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಶುಭಾಶುಭ ಫಲನಿರ್ದೇಶೋ
ನಾಮ ಷಷ್ಠೋಽಧ್ಯಾಯಃ.



---

೨೦೮. ಆದುದರಿಂದ ಪಂಡಿತನು ಸಂಸಾರದಲ್ಲಿ ದೋಷದರ್ಶನ ಪೂರ್ವಕವಾಗಿ ವಿರಕ್ತನಾಗಿ ಪರಮೇಶ್ವರ ಮಾಹಾತ್ಮ್ಯ ಶ್ರವಣಾದಿಗಳಿಂದ ಈಶ್ವರನಲ್ಲಿ ಭಕ್ತಿಯನ್ನು ವೃದ್ಧಿಪಡಿಸಬೇಕು.

೨೦೯. ಎಲೈ ಧರ್ಮರಾಜನೇ ! ಈ ಪೂರ್ವೋಕ್ತ ಪಂಚವಿಧ ಪಾಪಗಳು ಪರಮಾರ್ಥತಃ ಪ್ರಾಣಿಗೆ ಯಮಲೋಕದಲ್ಲಿ ಬಹುಕಾಲ ದುಃಖಪ್ರದಗಳು. ಇತರ ಚಿರಕಾಲ ಭಯಾನಕಗಳೂ ವಾಚಾಮಗೋಚರಗಳೂ ಆಗಿರುವ ಪಾಪಗಳು ಪ್ರಸಿದ್ಧವಾಗಿಯೇ ಇವೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ
ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಯದೇತತ್ತೇ ಸಮಾಖ್ಯಾತಂ ಗಂಭೀರಂ ನರಕಾರ್ಣವಂ ।
ವ್ರತೋಪವಾಸನಿಯಮಪ್ಲವೇನೋತ್ತೀರ್ಯತೇ ಸುಖಂ ॥ ೧ ॥

ದುರ್ಲಭಂ ಪ್ರಾಪ್ಯ ಮಾನುಷ್ಯಂ ವಿದ್ಯುತ್ಪತನಚಂಚಲಂ ।
ತಥಾತ್ಮಾನಂ ಸಮಾದಧ್ಯಾದ್ಭ್ರಶ್ಯತೇ ನ ಪುನರ್ಯಥಾ ॥ ೨ ॥

ದಾನವ್ರತಮಯೀ ಕೀರ್ತಿರ್ಯಸ್ಯ ಸ್ಯಾದಿಹ ದೇಹಿನಃ ।
ಪರಲೋಕೇಽಪಿ ಸ ತಯಾ ಜ್ಞಾಯತೇ ಜ್ಞಾತಿವರ್ಧನಃ ॥ ೩ ॥

---

### ಏಳನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ–ಎಲೈ ಯುಧಿಷ್ಠಿರನೇ ! ನಿನಗೆ ವಿವರಿಸಿ ಹೇಳಿದ ಈ ಗಂಭೀರವಾದ ನರಕಾರ್ಣವವನ್ನು ವ್ರತೋಪವಾಸ ನಿಯಮವೆಂಬ ನಾವೆಯಿಂದ ಸುಖವಾಗಿ ದಾಟಬಹುದು.

೨. ವಿದ್ಯುತ್ತಿನಂ ಚಪಲವೂ ದುರ್ಲಭವೂ ಆದ ಈ ಮನುಷ್ಯ ಜನ್ಮವನ್ನು ಪಡೆದಮೇಲೆ ಪುನಃ ತಾನು ಇದರಿಂದ ಭ್ರಂಶಹೊಂದಿ ಅಧೋಗತಿಪ್ರಾಪ್ತವಾಗದಂತೆ ಮಾಡಿಕೊಳ್ಳಬೇಕು.

೩. ಇಹಲೋಕದಲ್ಲಿ ದಾನ ಮತ್ತು ವ್ರತಾನುಷ್ಠಾನಗಳಿಂದ ಯಶಸ್ವಿಯಾದ ಪುರುಷನು ಆ ಕೀರ್ತಿಯಿಂದಲೇ ಪರಲೋಕದಲ್ಲೂ ಪ್ರಸಿದ್ಧನಾಗುವನು.

ಜ್ಞಾಯತೇ ನೇಹ ನಾಮುತ್ರ ವ್ರತಸ್ವಾಧ್ಯಾಯವರ್ಜಿತಃ ।
ಪುರುಷಃ ಪುರುಷವ್ಯಾಘ್ರ ತಸ್ಮಾದ್ವ್ರತಪರೋ ಭವೇತ್ ॥ ೪ ॥

ಅತ್ರ ತೇ ಕಥಯಿಷ್ಯಾಮಿ ಇತಿಹಾಸಂ ಪುರಾತನಂ ।
ಸಿದ್ಧೇನ ಸಹ ಸಂವಾದಮವಂತ್ಯಾಂ ಬ್ರಾಹ್ಮಣಸ್ಯ ಹಿ ॥ ೫ ॥

ಯೋಗರ್ಧಿಸಿದ್ಧ್ಯಾ ಸಂಸಿದ್ಧಃ ಕಶ್ಚಿತ್ಸಿದ್ಧೋ ಮಹೀತಲಂ ।
ಚಚಾರ ವಿಕೃತಂ ಕೃತ್ವಾ ವಪುಃ ಪರಮಭೀಷಣಂ ॥ ೬ ॥

ನಿಗೀರ್ಣದಂತೋ ಲಂಬೋಷ್ಠಃ ಪಿಂಗಾಕ್ಷಸ್ತಸುಮೂರ್ಧಜಃ ।
ತ್ರುಟಿತೈಕಕರ್ಣೋ ದುರ್ವ್ರಣಃ ಶೀರ್ಣವಸ್ತ್ರೋ ಮಹೋದರಃ ॥ ೭ ॥

ಚಿಪಿಟಾಕ್ಷಃ ಸ್ಫುಟಿತಪಾಜ್ಜಂಘಾಢ್ಯಃ ಕೃಶಕೂರ್ಪರಃ ।
ದಿಶಃ ಪಶ್ಯತಿ ಸಂಹೃಷ್ಟೋ ಬಭ್ರಾಮೋದ್ಭ್ರಾಂತಚಿತ್ತವತ್ ॥ ೮ ॥

೪. ಎಲೈ ರಾಜನೇ ವ್ರತಾನುಷ್ಠಾನ ಮತ್ತು ಅಧ್ಯಯನವರ್ಜಿತ ನಾದವನು ಇಹಪರ ಲೋಕಗಳಲ್ಲಿ ಪ್ರಸಿದ್ಧಿಗೆ ಬರಲಾರನು. ಆದುದರಿಂದ ಪುರುಷನು ವ್ರತಾನುಷ್ಠಾನ ಪರನಾಗಿರಬೇಕು.

೫. ಈ ವಿಷಯದಲ್ಲಿ ಅವಂತೀಪುರದ ಒಬ್ಬ ಬ್ರಾಹ್ಮಣನಿಗೂ ಸಿದ್ಧ ಪುರುಷನಿಗೂ ನಡೆದ ಸಂವಾದ ರೂಪವಾದ ಪ್ರಾಚೀನ ಚರಿತ್ರೆಯನ್ನು ನಿನಗೆ ಹೇಳುವೆನು ಕೇಳು.

೬-೭. ಯೋಗಾಭ್ಯಾಸ ಬಲದಿಂದ ಸಿದ್ಧಿಹೊಂದಿದ ಒಬ್ಬ ಸಿದ್ಧಪುರುಷನು ಕದಾಚಿತ್ ಅವ್ಯಕ್ತದಂತ, ಲಂಬಮಾನವಾದ ಓಷ್ಠ, ಪಿಂಗಳವರ್ಣದ ನೇತ್ರ ಗಳು, ಜಡೆಗಟ್ಟಿದ ಕೂದಲು, ಭಗ್ನವಾದ ಒಂದೇ ಕಿವಿ, ದುರ್ವ್ರಣಗಳು, ಹರಿದ ವಸ್ತ್ರ, ಮಹಾಲುದರ, ಸೂಕ್ಷ್ಮನೇತ್ರ, ಸ್ಫುಟಿತಪಾದ ಬೃಹಜ್ಜಂಘ ಕೃಶವಾದ ಮೊಣಕೈಗಳು ಉಳ್ಳವನಾಗಿ ಇದ್ದನು.

೮. ಮೇಲೆ ಹೇಳಿದ ರೂಪಿನಿಂದ ಅತಿಭಯಾನಕವಾದ ವಿಕಾರರೂಪ ವನ್ನು ಧರಿಸಿ, ಸಂಹೃಷ್ಟನಾಗಿ ಉನ್ಮತ್ತನಂತೆ ಸಮಸ್ತ ದಿಗವಲೋಕನ್ನು ಮಾಡುತ್ತಾ ಭೂಮಿಯಲ್ಲಿ ಸಂಚರಿಸುತ್ತಿದ್ದನು.

ಮೂಲಜಾಲಿಕವಿಪ್ರೇಣ ಹೃಷ್ಟಃ ಪೃಷ್ಟಶ್ಚ ಕೋ ಭವಾನ್ ।
ಕದಾ ಸ್ವರ್ಗಾತ್ಸಮಾಯಾತಃ ಕೇನ ಕಾರ್ಯೇಣ ಮೇ ವದ ॥ ೯ ॥

ಕಚ್ಚಿದ್ದೃಷ್ಟಾ ತ್ವಯಾ ರಂಭಾ ಭಾಭಾಸಿತದಿಗಂತರಾ ।
ಚಿತ್ತಸಂಮೋಹನಕರೀ ದೇವಾನಾಮೇಕಸುಂದರೀ ॥ ೧೦ ॥

ಗತ್ವಾ ಮದ್ವಚನಾದ್ವಾಚ್ಯಾ ನಿರ್ವಾಚ್ಯಾ ದೋಷದರ್ಶಿಭಿಃ ।
ಆವಂತ್ಯಸ್ತ್ವಾಂ ಕುಶಲಿನೀಂ ಪೃಚ್ಛತಿಸ್ಮ ದ್ವಿಜೋತ್ತಮಃ ॥ ೧೧ ॥

ಸಿದ್ಧಃ ಪ್ರಸಿದ್ಧಂ ತಂ ವಿಪ್ರಂ ಪ್ರಾಹೇದಂ ವಿಸ್ಮಯಾನ್ವಿತಃ ।
ಕಥಂ ತ್ವಯಾಹಂ ವಿಜ್ಞಾತಃ ಸ್ವರ್ಗಾದಭ್ಯಾಗತಃ ಸ್ಫುಟಂ ॥ ೧೨ ॥

ಬ್ರಾಹ್ಮಣಸ್ತಮುಥೋವಾಚ ವಿಜ್ಞಾತೋಽಸಿ ಮಯಾ ಯಥಾ ।
ತಥಾ ತೇಽಹಂ ಪ್ರವಕ್ಷ್ಯಾಮಿ ಕ್ಷೀಣಾಘೌಘಾವಧಾರಯ ॥ ೧೩ ॥

---

೯. ಆಗ ಕಂದ ಮೂಲ ಭಕ್ಷಣದಿಂದ ಜೀವಿಸುತ್ತಿದ್ದ ಒಬ್ಬ ಬ್ರಾಹ್ಮಣನು ಅವನನ್ನು ನೋಡಿ "ನೀನು ಯಾರು ? ಯಾವಾಗ ಸ್ವರ್ಗದಿಂದ ಬಂದೆ ? ಯಾವ ಕಾರ್ಯಕ್ಕಾಗಿ ಬಂದದ್ದು ? ಇದೆಲ್ಲವನ್ನೂ ನನಗೆ ಹೇಳು."

೧೦-೧೧. ಅಲ್ಲಿ ತನ್ನ ಸೌಂದರ್ಯದಿಂದ ದಿಗಂತರಗಳನ್ನು ಬೆಳಗುವವಳಾಗಿಯೂ, ದೇವತೆಗಳಿಗೆ ಮೋಹಜನಕಳಾಗಿಯೂ, ಅದ್ವಿತೀಯಸುಂದರಿಯೂ ಆದ ರಂಭೆಯನ್ನು ನೀನು ನೋಡಿದ್ದೆಯಾ ? ಎಂದು ಪ್ರಶ್ನೆ ಮಾಡಿ, ದೋಷದರ್ಶಿಗಳಾದ ಜ್ಞಾನಿಗಳಿಗೆ ಗರ್ಹಣೀಯಳಾದ ರಂಭೆಗೆ ಅವಂತೀದೇಶದ ದ್ವಿಜೋತ್ತಮನು ನಿನ್ನ ಕುಶಲ ಪ್ರಶ್ನೆ ಮಾಡಿರುವನು ಎಂದು ಈ ಸಂದೇಶ ವಚನವನ್ನು ಶ್ರುತಪಡಿಸು ಎಂದನು.

೧೨. ಆಗ ಆ ಸಿದ್ಧಪುರುಷನು ವಿಸ್ಮಿತನಾಗಿ "ನಾನು ಸ್ವರ್ಗದಿಂದ ಬಂದೆನೆಂದು ನೀನು ಸ್ಪಷ್ಟವಾಗಿ ಹೇಗೆ ತಿಳಿದೆ"? ಎಂದು ಪ್ರಶ್ನಿಸಲಾಗಿ ಅದಕ್ಕೆ ಬ್ರಾಹ್ಮಣನು,

೧೩-೧೪. ಓ ನಿಷ್ಕಲ್ಮಷನಾದ ಸಿದ್ಧನೇ ! ಕೇಳು, ಮಾನವನಿಗೆ ಸ್ವಾಭಾವಿಕವಾಗಿ ಎರಡು ಅಥವಾ ಮೂರು ಅಂಗಗಳು ವಿಕೃತಗಳಾಗಬಹುದು. ನಿನ್ನ

ಗಾತ್ರತ್ರಯಂ ವಿರೂಪಂ ಸ್ಯಾದ್ದ್ವಿತೀಯಂ ವಾ ಸ್ವರೂಪತಃ ।
ದೃಷ್ಟ್ವಾ ಸರ್ವಾಂಗವೈರೂಪ್ಯಂ ವಿಜ್ಞಾತೋಽಸಿ ತತೋ ಮಯಾ ॥ ೧೪ ॥

ದುರ್ಲಂಘ್ಯಾ ಪ್ರಕೃತಿಃ ಸಾಕ್ಷಾದನುಭೂತಕರೀ ಭವೇತ್ ।
ಪ್ರಕೃತೇರನ್ಯಥಾಭಾವಃ ಸರ್ವಥಾ ಲಕ್ಷ್ಯತೇ ಜನೈಃ ॥ ೧೫ ॥

ವಿಪ್ರಸ್ಯೈವಂ ವಚಃ ಶ್ರುತ್ವಾ ಜಗಾಮಾದರ್ಶನಂ ಶನೈಃ ।
ಪುನಃ ಕೈಶ್ಚಿದಹೋರಾತ್ರೈರಾಜಗಾಮ ಸ ತಾಂ ಪುರೀಂ ॥ ೧೬ ॥

ಮೂಲಜಾಲಕವಿಪ್ರೇಣ ಪೃಷ್ಟಃ ಪ್ರಾಹಾಮರಾವತೀಂ ।
ಗತೋಽಹಂ ಪೃಷ್ಟವಾಂಸ್ತತ್ರ ರಂಭಾಂ ವಿಭ್ರಮಕಾರಿಣೀಂ ॥ ೧೭ ॥

ಶಕ್ರಸ್ಯಾವಸರೇ ವೃತ್ತೇ ವ್ರಜಂತ್ಯಾಃ ಸ್ವಗೃಹಂ ಮಯಾ ।
ತ್ವತ್ಸಂದೇಶಃ ಸಮಾಖ್ಯಾತಃ ಸಾವದತ್ಕೋ ನ ವೇದ್ಮಿ ತಂ ॥ ೧೮ ॥

---

ಸರ್ವಾಂಗಗಳಲ್ಲೂ ಇರುವ ವಿಕಾರವನ್ನು ನೋಡಿ ನೀನು ವಿಕೃತವೇಷಧಾರಿಯಾದ ಸಿದ್ಧಪುರುಷನೆಂದು ಕಂಡುಹಿಡಿದೆನು.

೧೫. ಸ್ವಭಾವವನ್ನತಿಕ್ರಮಿಸುವುದು ಅಸಾಧ್ಯ ಸ್ವಭಾವಾತಿಕ್ರಮವಾದರೆ ಜನರು ಅದರ ತತ್ವವನ್ನು ಪರೀಕ್ಷಿಸಿ ಕಂಡು ಹಿಡಿಯುತ್ತಾರೆ " ಎಂದನು.

೧೬. ಈ ಮಾತುಗಳನ್ನು ಕೇಳಿ ಆ ಸಿದ್ಧಪುರುಷನು ಅಲ್ಲೇ ಅಂತರ್ಹಿತನಾಗಿ ಕೆಲವು ದಿನಗಳು ಕಳೆದಮೇಲೆ ಪುನಃ ಆ ಅವಂತೀನಗರಕ್ಕೆ ಬಂದನು.

೧೭. ಆಗ ಅಲ್ಲಿ ಆ ಬ್ರಾಹ್ಮಣನು ಸಿದ್ಧಪುರುಷನನ್ನು ಪ್ರಶ್ನೆಮಾಡಲಾಗಿ ಆತನು "ನಾನು ಇಲ್ಲಿಂದ ಅಮರಾವತಿಗೆ ಹೋದೆನು. ಇಂದ್ರಸೇವೆಯನ್ನು ಮಾಡಿ ಪುನಃ ಸ್ವಗೃಹಕ್ಕೆ ಹೋಗುತ್ತಿರುವ ವಿಲಾಸವತಿಯಾದ ರಂಭೆಗೆ ನಿನ್ನ ಸಂದೇಶ ವಚನವನ್ನು ಶ್ರುತಪಡಿಸಿದಾಗ ಅವಳು,

೧೮-೧೯. " ವಿದ್ಯಾ, ಕಲೆ ಪೌರುಷ, ವ್ರತ ಅಥವಾ ತಪಸ್ಸು ಇವುಗಳಿಂದ ಪ್ರಸಿದ್ಧಿ ಹೊಂದಿದ ಭೂಲೋಕವಾಸಿಯಾದ ಮನುಷ್ಯನ ಪರಿಚಯವು ಸ್ವರ್ಗಸ್ಥರಿಗೂ ಇರುತ್ತದೆ. ಆದರೆ ಇದಾವುದರಿಂದಲೂ ಪ್ರಸಿದ್ಧಿ ಹೊಂದದ

ವಿದ್ಯಯಾ ಕಲಯಾ ಚಾಪಿ ಪೌರುಷೇಣ ವ್ರತೇನ ಚ ।
ತಪಸಾ ವಾ ಪುಮಾನ್ ಮರ್ತ್ಯೋ ದಿವಿ ವಿಜ್ಞಾಯತೇ ಚಿರಂ ॥ ೧೯ ॥

ಬ್ರಾಹ್ಮಣಸ್ತಮಥೋವಾಚ ಮುಗ್ಧಾ ದಗ್ಧಾಗ್ನಿಸಂಭವಾ ।
ನ ಭಕ್ಷಯಾಮಿ ಶಕಟಂ ವ್ರತೇನೈತೇನ ವೇತ್ತಿ ಮಾಂ ॥ ೨೦ ॥

ತಸ್ಯೈದ್ವಚನಂ ಶ್ರುತ್ವಾ ಸ ಸಿದ್ಧಃ ಸುವಿಶುದ್ಧಧೀಃ ।
ಪ್ರಹಸ್ಯಾಮಂತ್ರ್ಯ ತಂ ವಿಪ್ರಂ ಜಗಾಮಾದರ್ಶನಂ ಪುನಃ ॥ ೨೧ ॥

ಕದಾಚಿಚ್ಚ ರತಾ ತೇನ ಸ್ವರ್ಗಮಾರ್ಗಂ ಯದೃಚ್ಛಯಾ ।
ದೃಷ್ಟ್ವಾ ರಂಭಾಂ ದ್ವಿಜಪ್ರೋಕ್ತಂ ಸರ್ವಮೇವ ನಿವೇದಿತಂ ॥ ೨೨ ॥

ರಂಭೋವಾಚ

ಕೋ ನ ಜಾನಾಮಿ ತಂ ವಿಪ್ರಂ ಶಕಟವ್ರತಚಾರಿಣಂ ।
ಮೂಲಜಾಲೈರ್ವರ್ತಯಂತಂ ಮಹಾಕಾಲವನಾಶ್ರಯಂ ॥ ೨೩ ॥

---

ಆ ಬ್ರಾಹ್ಮಣನಾರೆಂಬುದನ್ನು ನಾನರಿಯೆ '' ಎಂದು ಹೇಳಿದಳು ಎಂಬಮಾತನ್ನು ಕೇಳಿ,

೨೦. ಆ ಬ್ರಾಹ್ಮಣನು "ಅನಶನ ಪೂರ್ವಕವಾಗಿ ಶಕಟವ್ರತವನ್ನಾಚರಿಸುವವನು ಎಂಬದಾಗಿ ಹೇಳು. ಆಗ ಅವಳು ನನ್ನನ್ನು ಗುರುತಿಸುವಳು '' ಎಂದು ಹೇಳಿದನು.

೨೧-೨೨. ಆಗ ಆ ಸಿದ್ಧಪುರುಷನು ಬ್ರಾಹ್ಮಣನ ಈ ಮಾತನ್ನು ಕೇಳಿ ನಕ್ಕು ಆ ಬ್ರಾಹ್ಮಣನಿಂದ ಗಮನಾನುಜ್ಞೆಯನ್ನು ಪಡೆದು ಅಲ್ಲಿಂದ ಅಂತರ್ಹಿತನಾಗಿ ಕದಾಚಿತ್ ಸ್ವರ್ಗ ಮಾರ್ಗದಲ್ಲಿ ಸಂಚರಿಸುತ್ತಿರುವಾಗ ಅಕಸ್ಮಾತ್ ರಂಭೆಯನ್ನು ನೋಡಿ ಆ ಬ್ರಾಹ್ಮಣನು ಹೇಳಿದ ಎಲ್ಲಾ ವಿಷಯಗಳನ್ನೂ ತಿಳಿಸಿದನು.

೨೩. ಆಗ ರಂಭೆಯು ಹೇಳುತ್ತಾಳೆ—ಮಹಾಕಾಲವನವಾಸಿಯಾಗಿದ್ದು ಕೊಂಡು, ಕಂದ ಮೂಲ ಫಲಾದಿಗಳಿಂದ ಜೀವಿಸುತ್ತಾ ಶಕಟವ್ರತಾನುಷ್ಠಾನ ತತ್ಪರನಾದಾ ಬ್ರಾಹ್ಮಣನ ಪರಿಚಯವು ನನಗಿಲ್ಲ.

ದರ್ಶನಾದಥ ಸಂಭಾಷಾದುಪಕಾರಾತ್ಸಹಾಸನಾತ್ ।
ಚತುರ್ಧಾ ಸ್ನೇಹನಿರ್ಬಂಧೋ ನೃಣಾಂ ಸಂಜಾಯತೇಽಧಿಕಃ ॥ ೨೪ ॥

ನ ದರ್ಶನಂ ನ ಸಂಭಾಷಾ ಕದಾಚಿತ್ಸಹ ತೇನ ಮೇ ।
ನಾಮಶ್ರವಣಮಾತ್ರೇಣ ಸ್ನೇಹಃ ಸಂದರ್ಶಿತೋ ಮಹಾನ್ ॥ ೨೫ ॥

ಇತ್ಯೇವಮುಕ್ತ್ವಾ ರಂಭೋರೂ ರಂಭಾ ಜಂಭಾರಿಣೋಂತಿಕಂ ।
ವಿಸ್ಮಯೋತ್ಫುಲ್ಲನಯನಾ ಜಗಾಮ ಗಜಗಾಮಿನೀ ॥ ೨೬ ॥

ಗತ್ವಾ ನಿವೇದಯಾಮಾಸ ಸ್ನೇಹವ್ರತವಿಚೇಷ್ಟಿತಂ ।
ಪುರತೋ ರುದ್ಧಹೃದಯಾ ಬ್ರಾಹ್ಮಣಸ್ಯ ಚ ಧೀಮತಃ ॥ ೨೭ ॥

ಶಕ್ರಃ ಪ್ರೋವಾಚ ಚಾರ್ವಂಗೀಂ ಗೀರ್ವಾಣಹೃದಯಂಗಮಾಂ ।
ಕಿಮಾನಯಾಮಿ ತಂ ವಿಪ್ರಂ ಸಮೀಪಂ ತವ ಸುವ್ರತಂ ॥ ೨೮ ॥

---

೨೪-೨೫. "ದರ್ಶನ, ಸಂಭಾಷಣೆ, ಉಪಕಾರ ಮತ್ತು ಸಹವಾಸ ಈ ನಾಲ್ಕರಿಂದ ಮನುಷ್ಯರಿಗೆ ಅನ್ಯೋನ್ಯಸ್ನೇಹವು ಬೆಳೆಯುವುದು. ಆದರೆ ನೀನು ಹೇಳುವ ಆ ಬ್ರಾಹ್ಮಣನಿಗೂ ನನಗೂ ದರ್ಶನ ಸಂಭಾಷಣಾದಿಗಳು ಯಾವಾಗಲೂ ನಡೆದಿಲ್ಲ."

೨೬-೨೭. ಆದರೆ ಕೇವಲ ನಾಮಶ್ರವಣಮಾತ್ರದಿಂದ ಮಹತ್ತಾದ ಸ್ನೇಹವು ಪ್ರದರ್ಶಿತವಾಗಿದೆ" ಎಂದು ಹೇಳಿ ಗಜಗಾಮಿನಿಯಾದ ಆ ರಂಭೆಯು ವಿಸ್ಮಯದಿಂದ ಅರಳಿದ ನಯನಗಳುಳ್ಳವಳಾಗಿ ಇಂದ್ರನ ಸಮೀಪಕ್ಕೆ ಹೋಗಿ ಸ್ನೇಹದಿಂದ ಆ ಬ್ರಾಹ್ಮಣನಲ್ಲಿ ಉತ್ಕಂಠಿತಮನಸ್ಕಳಾಗಿ ಪೂರ್ವೋಕ್ತವಾದ ವಿಷಯವನ್ನು ಅರಿಕೆಮಾಡಿದಳು.

೨೮-೨೯. ಸೌಂದರ್ಯದಿಂದ ದೇವತೆಗಳ ಮನೋಹಾರಿಣಿಯಾದ ಆ ರಂಭೆಯನ್ನು ಕುರಿತು ಇಂದ್ರನು "ಓ ರಂಭೆಯೇ! ವ್ರತಾಚರಣ ತತ್ಪರನಾದ ಆ ಬ್ರಾಹ್ಮಣನನ್ನು ನಿನ್ನ ಸಮೀಪಕ್ಕೆ ಕರೆಯಿಸಲೇ?" ಎಂದು ಕೇಳಿ ದಿವ್ಯ ಮಾಲ್ಯಾಂಬರಧಾರಿಯಾಗಿಯೂ, ದಿವ್ಯಗಂಧಾನುಲಿಪ್ತನಾಗಿಯೂ ಇರುವ ಆ

ದಿವ್ಯಮಾಲ್ಯಾಂಬರಧರಂ ದಿವ್ಯಸ್ರಗನುಲೇಪನಂ ।
ವಿಮಾನವರಮಾರೋಪ್ಯ ದರ್ಶಯಾಮಾಸ ತಂ ಪುನಃ ॥ ೨೯ ॥

ತತ್ರಸ್ಥಃ ಸ ದ್ವಿಜೋ ಭೋಗಾನ್ಭುನಕ್ತಿ ಸಹ ರಂಭಯಾ ।
ಶಕಟವ್ರತಮಾಹಾತ್ಮ್ಯ ಮಿತ್ಯೇತತ್ತೇ ಮಯೋದಿತಂ ॥ ೩೦ ॥

ರಾಜ್ಯಶ್ರಿಯಂ ಜಗತಿ ಸರ್ವಜನೋಪಭೋಗ್ಯಾ
ಮಾಪ್ನೋತಿ ಶಕ್ರಶಿವಕೇಶವಯೋರ್ನಿವಾಸಂ ।
ನಾಪ್ರಾಪ್ಯಮಸ್ತಿ ಭುವನೇ ಸುದೃಢವ್ರತಾನಾಂ,
ತಸ್ಮಾತ್ಸದಾ ವ್ರತಪರೇಣ ನರೇಣ ಭಾವ್ಯಂ ॥ ೩೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಶಕಟವ್ರತ ಮಾಹಾತ್ಮ್ಯಕಥನಂ
ನಾಮ ಸಪ್ತಮೋಽಧ್ಯಾಯಃ.



---

ಬ್ರಾಹ್ಮಣನನ್ನು ಉತ್ತಮದ ವಿಮಾನದಲ್ಲಿ ಕರೆತಂದು ರಂಭೆಗೆ ದರ್ಶನ ಮಾಡಿಸಿದನು.

೩೦. ಆ ಬ್ರಾಹ್ಮಣನು ಸ್ವರ್ಗದಲ್ಲಿದ್ದುಕೊಂಡು ರಂಭೆಯ ಜತೆಯಲ್ಲಿ ದಿವ್ಯಭೋಗಗಳನ್ನು ಅನುಭವಿಸುತ್ತಿದ್ದನು. ಓ ಯುಧಿಷ್ಠಿರನೇ ! ಈ ರೀತಿ ಶಕಟ ವ್ರತ ಮಾಹಾತ್ಮ್ಯವನ್ನು ನಿನಗೆ ಹೇಳಿದೆನು.

೩೧. ವ್ರತಾನುಷ್ಠಾನಪರನು ಸರ್ವಜನೋಪಭೋಗ್ಯವಾದ ಇಹದಲ್ಲಿ ರಾಜ್ಯಲಕ್ಷ್ಮಿಯನ್ನು ಪಡೆದು ಪರತ್ರ ಸ್ವರ್ಗ ವೈಕುಂಠ ಅಥವಾ ಕೈಲಾಸವನ್ನೂ ಹೊಂದುವನು. ದೃಢವ್ರತ ಪರಿಗ್ರಹಮಾಡಿದವರಿಗೆ ಲೋಕದಲ್ಲಿ ಅಪ್ರಾಪ್ಯವು ಯಾವುದೂ ಇಲ್ಲ. ಆದುದರಿಂದ ಮಾನವನು ಸದಾ ವ್ರತಾಚರಣ ಪರನಾಗಿರ

ಇಲ್ಲಿಗೆ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶಕಟವ್ರತ ಮಹಾತ್ಮ್ಯ
ಕಥನವೆಂಬ ಏಳನೆಯ ಅಧ್ಯಾಯವು ಮುಗಿದುದು..



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಬ್ರಹ್ಮೇಶ ಕೇಶವಾದೀನಾಂ ಗೌರ್ಯಾ ಗಣಪತೇಸ್ತಥಾ ।
ದುರ್ಗಾಸೂರ್ಯಾಗ್ನಿಸೋಮಾನಾಂ ವ್ರತಾನಿ ಮಧುಸೂದನ ॥ ೧ ॥

ಶಾಸ್ತ್ರಾಂತರೇಷು ದೃಷ್ಟಾನಿ ತವ ಬುದ್ಧಿಗತಾನಿ ಚ ।
ತಾನಿ ಸರ್ವಾಣಿ ಮೇ ದೇವ ವದ ದೇವಕಿನಂದನ ॥ ೨ ॥

ಪ್ರತಿಪತ್ಕ್ರಮಯೋಗೇನ ವಿಹಿತಾ ಯಸ್ಯ ಯಾ ತಿಥಿಃ ।
ದೇವಸ್ಯ ತಸ್ಯಾಂ ಯತ್ಕಾರ್ಯಂ ತದಶೇಷೇಣ ಕೀರ್ತಯ ॥ ೩ ॥

---

## ಎಂಟನೆಯ ಅಧ್ಯಾಯ

ಯುಧಿಷ್ಠಿರನು ಹೇಳುತ್ತಾನೆ--ಎಲೈ ದೇವಕೀ ಪುತ್ರನಾದ ಶ್ರೀ ಕೃಷ್ಣನೇ! ಬ್ರಹ್ಮ, ವಿಷ್ಣು, ಮಹೇಶ್ವರ, ಗೌರಿ, ಗಣಪತಿ, ದುರ್ಗಿ, ಸೂರ್ಯ, ಅಗ್ನಿ ಮತ್ತು ಚಂದ್ರಾದಿಗಳ ಉದ್ದೇಶ್ಯಕವಾದ ಶಾಸ್ತ್ರಾಂತರಗಳಲ್ಲಿ ಹೇಳಿದ ನಿನ್ನ ಬುದ್ಧಿಸ್ಥವಾದ ವ್ರತಗಳನ್ನು ಸಂಪೂರ್ಣವಾಗಿ ನನಗೆ ಉಪದೇಶಮಾಡು.

೩. ಮತ್ತು ಪ್ರತಿಪದಾತಿ ತಿಥಿಗಳಲ್ಲಿ ಯಾವ ದೇವತೆಗೆ ಯಾವ ತಿಥಿಯು ವಿಹಿತವಾಗಿದೆಯೋ ಆ ತಿಥಿಯಲ್ಲಿ ಆ ದೇವತೆಯನ್ನು ಉದ್ದೇಶಿಸಿ ಮಾಡಬೇಕಾದ ವ್ರತಗಳನ್ನು ಸಂಪೂರ್ಣವಾಗಿ ಹೇಳು '' ಎಂದನು.

॥ ಶ್ರೀ ಕೃಷ್ಣ ಉವಾಚ ॥

ವಸಂತೇ ಕಿಂಶುಕಾಶೋಕಶೋಭನೇ ಪ್ರತಿಪತ್ತಿಥಿಃ ।
ಶುಕ್ಲಾ ತಸ್ಯಾಂ ಪ್ರಕುರ್ವೀತ ಸ್ನಾನಂ ನಿಯಮತತ್ಪರಃ ॥ ೪ ॥

ನಾರೀ ನರೋ ವಾ ರಾಜೇಂದ್ರ ಸಂತರ್ಪ್ಯ ಪಿತೃದೇವತಾಃ ।
ನದ್ಯಾಸ್ತೀರೇ ತಡಾಗೇ ವಾ ಗೃಹೇ ವಾ ನಿಯತಾತ್ಮವಾನ್ ॥ ೫ ॥

ಪಿಷ್ಟಾತಕೇನ ವಿಲಿಖೇದ್ವತ್ಸರಂ ಪುರುಷಾಕೃತಿಂ ।
ತತಶ್ಚಂದನಚೂರ್ಣೇನ ಪುಷ್ಪಧೂಪಾದಿನಾರ್ಚಯೇತ್ ॥ ೬ ॥

ದೀಪೈಶ್ಚಾಪಿ ಸನೈವೇದ್ಯೈಃ ಪೂಜಯೇದ್ವತ್ಸರಂ ಸದಾ ।
ಮಾಸರ್ತುನಾಮಭಿಃ ಪಶ್ಚಾನ್ನಮಸ್ಕಾರಾಂತಯೋಜಿತೈಃ ।
ಪೂಜಯೇದ್ಬ್ರಾಹ್ಮಣಾನ್ವಿದ್ವಾನ್ಮಂತ್ರೈರ್ವೇದೋದಿತೈಃ ಶುಭೈಃ ॥ ೭ ॥

ಸಂವತ್ಸರೋಽಸಿ ಪರಿವತ್ಸರೋ ಽಸೀಡಾವತ್ಸರೋಽಭಿವತ್ಸರೋಽಸಿ ಉಷಸಸ್ತೇ ।
ಕಲ್ಪಂತಾಮಹೋರಾತ್ರಾಸ್ತೇ ಕಲ್ಪಂತಾಮರ್ಧಮಾಸಸ್ತೇ ಕಲ್ಪತಾಂ ಮಾಸಾಸ್ತೇ ।
ಕಲ್ಪಂತಾಮೃತವಸ್ತೇ ಕಲ್ಪಂತಾಂ ಸಂವತ್ಸರಸ್ತೇ ಕಲ್ಪತಾಂ ॥ ೮ ॥

---

೪-೫. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜೇಂದ್ರನೇ ! ಕಿಂಶುಕ, ಅಶೋಕವೃಕ್ಷಗಳಿಂದ ಸುಂದರವಾದ, ವಸಂತಋತುವಿನ ಚೈತ್ರ ಶುಕ್ಲ ಪ್ರತಿಪತ್ತಿಥಿಯಲ್ಲಿ ಪುರುಷನಾಗಲಿ ಸ್ತ್ರೀಯಾಗಲಿ ನಿಯಮಪೂರ್ವಕವಾಗಿ ಸ್ನಾನ ಮಾಡಿ, ಪಿತೃದೇವತೆಗಳನ್ನು ತೃಪ್ತಿಪಡಿಸಿ, ನದೀ ತೀರವಲ್ಲಾಗಲಿ ತಟಾಕತೀರವಲ್ಲಾಗಲಿ ಸ್ವಗೃಹದಲ್ಲಾಗಲಿ ಯಮನಿಷ್ಠೆಯಿಂದ ಕೂಡಿ,

೬-೭. ಹಿಟ್ಟಿನಿಂದ ಪುರುಷಾಕಾರವಾದ ಸಂವತ್ಸರಾಭಿಮಾನಿದೇವತೆಯನ್ನು ಬರೆದು, ಅನಂತರ ಚಂದನ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ಆ ದೇವತೆಯನ್ನು ಅರ್ಚಿಸಬೇಕು. ಮತ್ತು ನಮಃಶಬ್ದಾಂತವಾದ ಮಾಸನಾಮ ಋತುನಾಮ (ಚೈತ್ರಾಯನಮಃ ಇತ್ಯಾದಿ ನಾಮ) ಗಳಿಂದ ಪೂಜಿಸಿ ವೇದೋಕ್ತ ಮಂತ್ರಗಳಿಂದ ದೇವ ಮತ್ತು ಬ್ರಾಹ್ಮಣರನ್ನು ಪೂಜಿಸಬೇಕು.

೮-೯. ಸಂವತ್ಸರೋಽಸಿ, ಪರಿವತ್ಸರೋಽಸಿ, ಇಡಾವತ್ಸರೋಽಸಿ, ಅಭಿವತ್ಸರೋಽಸಿ, ಉಷಸಸ್ತೇ ಕಲ್ಪಂತಾಂ, ಅಹೋರಾತ್ರಾಸ್ತೇ ಕಲ್ಪಂತಾಂ, ಅರ್ಧ

ಏವಮಭ್ಯರ್ಚ್ಯ ವಾಸೋಭಿಃ ಪಶ್ಚಾತ್ತಮಭಿವೇಷ್ಟಯೇತ್ ।
ಕಾಲೋದ್ಭವೈರ್ಮೂಲಫಲೈರ್ನೈವೇದ್ಯೈರ್ಮೋದಕಾದಿಭಿಃ ॥ ೯ ॥

ತತಸ್ತಂ ಪ್ರಾರ್ಥಯೇತ್ಪಶ್ಚಾತ್ಪುರಃ ಸ್ಥಿತ್ವಾ ಕೃತಾಂಜಲಿಃ ।
ಭಗವಂಸ್ತ್ವತ್ಪ್ರಸಾದೇನ ವರ್ಷಂ ಶುಭದಮಸ್ತು ಮೇ ॥ ೧೦ ॥

ಏವಮುಕ್ತ್ವಾ ಯಥಾಶಕ್ತಿ ದದ್ಯಾದ್ವಿಪ್ರಾಯ ದಕ್ಷಿಣಾಂ ।
ಲಲಾಟೆ ಪಟ್ಟೇತಿಲಕಂ ಕುರ್ಯಾಚ್ಚಂದನಪಂಕಜಂ ॥ ೧೧ ॥

ತತಃ ಪ್ರಭೃತ್ಯನುದಿನಂ ತಿಲಕಾಲಂಕೃತಂ ಮುಖಂ ।
ಧಾರ್ಯಂ ಸಂವತ್ಸರಂ ಯಾವಚ್ಛಶಿನೇವ ನಭಸ್ಥಲಂ ॥ ೧೨ ॥

ಏವಂ ನರೋ ವಾ ನಾರೀ ವಾ ವ್ರತಮೇತತ್ಸಮಾಚರೇತ್ ।
ಸದೈವ ಪುರುಷವ್ಯಾಘ್ರ ಭೋಗಾನ್ಭುವಿ ಭುನಕ್ತ್ಯಸೌ ॥ ೧೩ ॥

---

ಮಾಸಸ್ತೇ ಕಲ್ಪತಾಂ, ಮಾಸಾಸ್ತೇ ಕಲ್ಪಂತಾಂ, ಋತವಸ್ತೇ ಕಲ್ಪಂತಾಂ, ಸಂವತ್ಸರಸ್ತೇ ಕಲ್ಪತಾಂ ಎಂದು ಪೂಜಿಸಿ ಆ ಸಂವತ್ಸರಪುರುಷನನ್ನು ವಸ್ತ್ರಗಳಿಂದಲಂಕರಿಸಿ ತಾತ್ಕಾಲಿಕಗಳಾದ ಮೂಲ ಮತ್ತು ಫಲ, ಮೋದಕ, ಇತ್ಯಾದಿ ನೈವೇದ್ಯಗಳನ್ನು ಸಮರ್ಪಿಸಬೇಕು.

೧೦-೧೧. ಆ ಮೇಲೆ ವ್ರತಿಯು ದೇವರ ಮುಂಭಾಗದಲ್ಲಿ ಅಂಜಲಿಬದ್ಧನಾಗಿ ನಿಂತು, "ಭಗವನ್! ನಿನ್ನ ಪ್ರಸಾದದಿಂದ ಈ ವರ್ಷವು ನನಗೆ ಶುಭಪ್ರದವಾಗಲಿ, ಎಂದು ಪ್ರಾರ್ಥಿಸಿ ಬ್ರಾಹ್ಮಣನಿಗೆ ಯಥಾಶಕ್ತಿ ದಕ್ಷಿಣೆ ಕೊಟ್ಟು ಲಲಾಟದಲ್ಲಿ ಚಂದನ ತಿಲಕವನ್ನು ಧರಿಸಬೇಕು.

೧೨. ಅಂದಿನಿಂದ ಒಂದು ವರ್ಷ ಪರ್ಯಂತವಾಗಿ ಆಕಾಶವು ಚಂದ್ರನಿಂದ ಅಲಂಕೃತವಾದಂತೆ ವ್ರತಿಯೂ ಸಹ ತನ್ನ ಮುಖವನ್ನು ತಿಲಕದಿಂದ ಅಲಂಕರಿಸಿಕೊಳ್ಳಬೇಕು.

೧೩-೧೪. ಎಲೈ ಯುಧಿಷ್ಠಿರನೇ! ಪುರುಷನಾಗಲಿ ಸ್ತ್ರೀಯಾಗಲಿ ಈ ರೀತಿ ವ್ರತವನ್ನಾಚರಿಸಿದರೆ ಇಹಲೋಕದಲ್ಲಿ ಸದಾ ಸಮಸ್ತ ಭೋಗಗಳನ್ನನುಭವಿಸುವುದಲ್ಲದೆ ಈ ತಿಲಕಸಂದರ್ಶನಮಾತ್ರದಿಂದ ಭೂತ, ಪ್ರೇತ, ಪಿಶಾಚ,

ಭೂತಾಃ ಪ್ರೇತಾಃ ಪಿಶಾಚಾಶ್ಚ ದುರ್ವಾರಾ ವೈರಿಣೋ ಗ್ರಹಾಃ ।
ನಿರರ್ಥಕಾ ಭವಂತ್ಯೇತೇ ತಿಲಕಂ ವೀಕ್ಷ್ಯ ತತ್ಕ್ಷಣಾತ್ ॥ ೧೪ ॥

ಪೂರ್ವಮಾಸೀನ್ಮಹೀಪಾಲೋ ನಾಮ್ನಾ ಶತ್ರುಂಜಯೋ ಜಯೀ ।
ಚಿತ್ರಲೇಖೇತಿ ತಸ್ಯಾಭೂದ್ಭಾರ್ಯಾ ಚಾರಿತ್ರಭೂಷಣಾ ॥ ೧೫ ॥

ತಯಾ ವ್ರತಮಿದಂ ಚೈತ್ರೇ ಗೃಹೀತಂ ದ್ವಿಜಸನ್ನಿಧೌ ।
ಸಂವತ್ಸರಂ ಪೂಜಯಿತ್ವಾ ಧೃತ್ವಾ ಹೃದಿ ಜನಾರ್ದನಂ ॥ ೧೬ ॥

ಅಸೂಯುಃ ಕ್ಷೇಪ್ತುಕಾಮೋ ವಾ ಸಮಾಗಚ್ಛತಿ ಯಃ ಪುರಃ ।
ಪ್ರಯಾತಿ ಪ್ರಿಯಕೃತ್ತಸ್ಯಾ ದೃಷ್ಟ್ವಾ ಮುಖಮಧೋಮುಖಃ ॥ ೧೭ ॥

ಸಪತ್ನೀದರ್ಪಾಪಹರಾ ವಶೀಕೃತಮಹೀತಲಾ ।
ಭರ್ತುರಿಷ್ಟಾ ಪ್ರಹೃಷ್ಟಾ ಚ ಸುಖಮಾಸ್ತೇ ನಿರಾಕುಲಾ ॥ ೧೮ ॥

---

ದುಷ್ಟಗ್ರಹ ಇವೇ ಮೊದಲಾದುವುಗಳು ಯಾವ ಉಪದ್ರವವನ್ನೂ ಮಾಡಲಾರವೆ ನಿರರ್ಥಕಗಳಾಗುವುವು.

೧೫. ಪೂರ್ವಕಾಲದಲ್ಲಿ ಜಯಶಾಲಿಯಾದ ಶತ್ರುಂಜಯನೆಂಬ ರಾಜನಿಗೆ ಸದಾಚಾರಸಂಪನ್ನಳಾದ ಚಿತ್ರಲೇಖೆ ಎಂಬವಳು ಭಾರ್ಯೆಯಾಗಿದ್ದಳು.

೧೬–೧೭. ಅವಳು ಚೈತ್ರಮಾಸ ಪ್ರತಿಪತ್ತಿನಲ್ಲಿ ಬ್ರಾಹ್ಮಣರ ಸನ್ನಿಧಿಯಲ್ಲಿ ಜನಾರ್ದನನ್ನು ಹೃದಯದಲ್ಲಿ ಧ್ಯಾನಿಸುತ್ತಾ ಈ ಸಂವತ್ಸರದೇವತೆಯನ್ನು ಪೂಜಿಸಿದ್ದರಿಂದ ಅಸೂಯೆಯಿಂದಾಗಲಿ ಅಧಿಕ್ಷೇಪೇಚ್ಛೆಯಿಂದಾಗಲಿ ಯಾವ ಪುರುಷನು ಅವಳ ಇದಿರಿಗೆ ಬಂದರೂ ಅವಳ ಮುಖದರ್ಶನವಾದೊಡನೆಯೇ ಅಧೋಮುಖನಾಗಿ ಅವಳಿಗೆ ಪ್ರಿಯವನ್ನೇ ಮಾಡಿ ಹೊರಟು ಹೋಗುತ್ತಿದ್ದನು.

೧೮. ಮತ್ತು ಈ ವ್ರತಮಾಹಾತ್ಮ್ಯೆಯಿಂದಲೇ ಸವತಿಯ ಅಹಂಕಾರವನ್ನು ಮುರಿದವಳಾಗಿಯೂ, ಮಹೀತಲವನ್ನು ವಶೀಕರಿಸಿದವಳಾಗಿಯೂ ಭರ್ತೃವಿನ ಪ್ರೇಮಕ್ಕೆ ಪಾತ್ರಳಾಗಿಯೂ ನಿರಾಕುಲಳಾಗಿಯೂ ಸಂತುಷ್ಟಳಾಗಿಯೂ ಸುಖವಾಗಿಯೂ ಇದ್ದಳು.

ತಾವತ್ಕರೇಣಾಭಿಭೂತೋ ಭರ್ತಾ ಪುತ್ರಃ ಸವೇದನಃ ।
ಶಿರೋಽರ್ತ್ಯಾ ನಾಶಂ ಪ್ರಯಾತಃ ಸುಹೃದಾಂ ದುಃಖದಾಯಕಃ ॥ ೧೯ ॥

ಧರ್ಮರಾಜಪುರಂ ಪ್ರಾಪ್ತುಂ ಸರ್ವಭೂತಾಪಹಾರಕಃ ।
ತಸ್ಮಿನ್ ಕ್ಷಣೇ ಮಹಾರಾಜ ಧರ್ಮರಾಜಸ್ಯ ಕಿಂಕರಾಃ ॥ ೨೦ ॥

ತಸ್ಯ ದ್ವಾರಮನುಪ್ರಾಪ್ತಾಃ ಪ್ರವೇಷ್ಟುಂ ಗೃಹಮಂಜಸಾ ।
ಶತ್ರುಂಜಯಂ ಸಮಾನೇತುಂ ಕಾಲಮೃತ್ಯುಪುರಃಸರಾಃ ॥ ೨೧ ॥

ಪಾರ್ಶ್ವಸ್ಥಿತಾಂ ಚಿತ್ರಲೇಖಾಂ ತಿಲಕಾಲಂಕೃತಾನನಾಂ ।
ದೃಷ್ಟ್ವಾ ಪ್ರಣಷ್ಟಸಂಕಲ್ಪಾಃ ಪರಾವೃತ್ಯ ಗತಾಃ ಪುನಃ ॥ ೨೨ ॥

ಗತೇಷು ತೇಷು ಸ ನೃಪಃ ಪುತ್ರೇಣ ಸಹ ಭಾರತ ।
ನೀರುಜೋ ಬುಭುಜೇ ಭೋಗಾನ್ಪೂರ್ವಕರ್ಮಾರ್ಜಿತಾಞ್ಛುಭಾನ್ ॥೨೩॥

---

೧೯-೨೦. ಅಷ್ಟರಲ್ಲಿ ಅವಳ ಪತಿಯಾದ ಶತ್ರುಂಜಯನು ಮಿತಿಮೀರಿದ ಕಂದಾಯದ ಆಶೆಯಿಂದ ತನ್ನ ಸುಹೃತ್ಸಮರಾದ ಪ್ರಜೆಗಳಿಗೆ ದುಃಖದಾಯಕನಾಗಿದ್ದು ಕದಾಚಿತ್ ಸಪುತ್ರನಾಗಿ ಶಿರೋವೇದನೆಯಿಂದ ಮುಮೂರ್ಷುವಾಗಿದ್ದನು.

೨೧. ಎಲೈ ಯುಧಿಷ್ಠಿರನೇ ! ಆ ಕ್ಷಣದಲ್ಲಿ ಕಾಲಮೃತ್ಯುವೇ ಮೊದಲಾದ ಯಮಕಿಂಕರರು ಅವನನ್ನು ಯಮಲೋಕಕ್ಕೆ ಒಯ್ಯುವುದಕ್ಕಾಗಿ ಶತ್ರುಂಜಯನ ಗ್ರಹಪ್ರವೇಶಮಾಡಲು ದ್ವಾರಸಮೀಪಕ್ಕೆ ಬಂದರು.

೨೨. ಅಲ್ಲಿ ರಾಜನ ಪಾರ್ಶ್ವಸ್ಥಿತಳಾಗಿ ತಿಲಕಾಲಂಕೃತಲಲಾಟವುಳ್ಳ ಚಿತ್ರಲೇಖೆಯನ್ನು ನೋಡಿ, ನಷ್ಟಸಂಕಲ್ಪರಾಗಿ ಹಿಂದಕ್ಕೆ ತೆರಳಿದರು.

೨೩. ಆ ಯಮಭಟರು ಹೊರಟುಹೋದ ಮೇಲೆ ಆ ರಾಜನು ಪುತ್ರಸಮೇತನಾಗಿ ಪುರಾಕೃತಸುಕೃತ ವಿಶೇಷದಿಂದ ಅನೇಕ ಶುಭ ಫಲಗಳನ್ನು ನೀರೋಗಿಯಾಗಿ ಅನುಭವಿಸಿದನು.

ಏತದ್ವ್ರತಂ ಮಹಾಭಾಗ ಕೀರ್ತಿತಂ ತೇ ಮಹೋದಯಂ ।
ಶಂಕರೇಣ ಸಮಾಖ್ಯಾತಂ ಮಮ ಪೂರ್ವಂ ಯುಧಿಷ್ಠಿರ ॥ ೨೪ ॥

ಏತತ್ತ್ರಿಲೋಕತಿಲಕಾಲಕಭೂಷಣಂ ತೇ
ಖ್ಯಾತಂ ವ್ರತಂ ಸಕಲದುಃಖಹರಂ ಪರಂ ಚ ।
ಇತ್ಥಂ ಸಮಾಚರತಿ ಯಃ ಸ ಸುಖಂ ವಿಹೃತ್ಯ
ಮರ್ತ್ಯಃ ಪ್ರಯಾತಿ ಪದಮಾಪದಿ ಪದ್ಮಯೋನೇಃ ॥ ೨೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ತಿಲಕವ್ರತಕಥನಂ
ನಾಮಾಷ್ಟಮೋಽಧ್ಯಾಯಃ.



೨೪–೨೫. ಎಲೈ ಯುಧಿಷ್ಠಿರನೇ ! ಪೂರ್ವದಲ್ಲಿ ಶಂಕರನು ನನಗೆ ಉಪದೇಶಮಾಡಿದ ಈ ಮಹಾಫಲದಾಯಕವಾದ ವ್ರತವನ್ನು ನಿನಗೆ ಹೇಳಿರುವೆನು. ತ್ರಿಲೋಕತಿಲಕಪ್ರಾಯವಾದ ಈ ವ್ರತವು ಸಕಲ ದುಃಖಹರವೂ ಅತ್ಯುತ್ತಮವೂ ಆಗಿ ಪ್ರಸಿದ್ಧವಾಗಿದೆ. ಈರೀತಿ ಈ ವ್ರತವನ್ನು ಯಾವನು ಆಚರಿಸುವನೋ ಅವನು ಇಹದಲ್ಲಿ ಸುಖವನ್ನನುಭವಿಸಿ ಉತ್ಕ್ರಾಂತ್ಯನಂತರದಲ್ಲಿ ಬ್ರಹ್ಮಲೋಕವನ್ನು ಪಡೆಯುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ತಿಲಕವ್ರತ
ಕಥನವೆಂಬ ಎಂಟನೇಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ನವಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಆಶ್ವಯುಚ್ಛುಕ್ಲಪಕ್ಷಸ್ಯ ಪ್ರಥಮೇಽಹ್ನಿ ದಿನೋದಯೇ ।
ಅಶೋಕಂ ಪೂಜಯೇದ್ವೃಕ್ಷಂ ಪ್ರರೂಢಶುಭಪಲ್ಲವಂ ॥ ೧ ॥

ವಿರೂಢೈಃ ಸಪ್ತಧಾನ್ಯೈಶ್ಚ ಗುಣಕೈರ್ಮೋದಕೈಃ ಶುಭೈಃ ।
ಫಲೈಃ ಕಾಲೋದ್ಭವೈರ್ದಿವ್ಯೈರ್ನಾರಿಕೇರೈಃ ಸದಾಡಿಮೈಃ ॥ ೨ ॥

ಪುಷ್ಪಧೂಪಾದಿನಾ ತದ್ವತ್ಪೂಜಯೇತ್ತದ್ದಿನೇಽನಘ ।
ಅಶೋಕಂ ಪಾಂಡವಶ್ರೇಷ್ಠ ಶೋಕಂ ನಾಪ್ನೋತಿ ಕುತ್ರಚಿತ್ ॥ ೩ ॥

---

### ಒಂಭತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಧರ್ಮರಾಜನೇ ! ಆಶ್ವಯುಜ ಶುಕ್ಲ ಪ್ರತಿಪತ್ತಿನಲ್ಲಿ ಸೂರ್ಯೋದಯವಾದ ಮೇಲೆ ಸೊಗಸಾದ ಚಿಗುರುಗಳಿಂದ ಅಲಂಕೃತವಾದ ಅಶೋಕವೃಕ್ಷವನ್ನು ಸಾರ್ದು,

೨-೩. ಸಪ್ತಧಾನ್ಯಗಳು, ಮೋದಕ, ಆ ಕಾಲದಲ್ಲಿ ದೊರೆಯುವ ಫಲಗಳು, ದಿವ್ಯವಾದ ನಾರಿಕೇಳ, ದಾಡಿಂಬ ಈ ಫಲಗಳು ಮತ್ತು ಪುಷ್ಪ, ಧೂಪ, ಮೊದಲಾದುವುಗಳನ್ನು ಸಮರ್ಪಿಸಿ ಪೂಜಿಸುವುದರಿಂದ ಪುರುಷನಿಗೆ ಯಾವ ವಿಷಯದಲ್ಲೂ ಶೋಕಪ್ರಾಪ್ತಿಯಾಗುವುದಿಲ್ಲ.

ಪಿತೃಭ್ರಾತೃಪತಿಶ್ವಶ್ರೂಶ್ವಶುರಾಣಾಂ ತಥೈವ ಚ ।
ಅಶೋಕ ಶೋಕಶಮನೋ ಭವ ಸರ್ವತ್ರ ನಃ ಕುಲೇ ॥ ೪ ॥

ಇತ್ಯುಚ್ಚಾರ್ಯ ತತೋ ದದ್ಯಾದರ್ಘ್ಯಂ ಶ್ರದ್ಧಾಸಮನ್ವಿತಂ ।
ಪತಾಕಾಭಿರಲಂಕೃತ್ಯ ಪ್ರಚ್ಛಾದ್ಯ ಶುಭವಾಸಸಾ ॥ ೫ ॥

ದಮಯಂತೀ ಯಥಾ ಸ್ವಾಹಾ ಯಥಾ ವೇದವತೀ ಸತೀ ।
ತಥಾಶೋಕವ್ರತಾದಸ್ಮಾಜ್ಜಾಯತೇ ಪತಿವಲ್ಲಭಾ ॥ ೬ ॥

ವನೇ ವ್ರಜಂತ್ಯಾ ಸದ್ಧರ್ಮಃ ಸೀತಯಾ ಸಂಪ್ರದರ್ಶಿತಃ ।
ದೃಷ್ಟ್ವಾಽಶೋಕಂ ವನೇ ಪಾರ್ಥ ಪಲ್ಲವಾಲಂಕೃತಾಂಬರಂ ॥ ೭ ॥

ಕೃತ್ವಾ ಸಮೀಪೇ ಭರ್ತಾರಂ ದೇವರಂ ಚ ತಿಲಾಕ್ಷತೈಃ ।
ದೀಪಾಲಂಕೃತನೈವೇದ್ಯಧೂಪಸೂತ್ರಫಲಾರ್ಚನೈಃ ॥ ೮ ॥

---

೪-೫. ಎಲೈ ಅಶೋಕವೇ ! ತಂದೆ, ಅಣ್ಣ, ಮಾವ, ಅತ್ತೆ ಇವರುಗಳಿಗೂ, ಮತ್ತು ನಮ್ಮ ಕುಲದವರಿಗೂ ದುಃಖದಮನ ಮಾಡು ಎಂಬ ಅರ್ಥವುಳ್ಳ “ಪಿತೃ ಭ್ರಾತೃ ಪತಿ ಶ್ವಶ್ರೂಶ್ವಶುರಾಣಾಂ ತಥೈವಚ । ಅಶೋಕ ಶೋಕಶ ಮನೋಭವ ಸರ್ವತ್ರನಃ ಕುಲೇ ॥” ಈ ಮಂತ್ರವನ್ನು ಹೇಳಿ ಶ್ರದ್ಧಾನ್ವಿತನಾಗಿ ಅರ್ಘ್ಯಪ್ರದಾನಮಾಡಿ ಪತಾಕೆಗಳಿಂದಲೂ ವಸ್ತ್ರಗಳಿಂದಲೂ ಆ ವೃಕ್ಷವನ್ನು ಅಲಂಕರಿಸಬೇಕು.

೬. ಈ ಅಶೋಕ ವ್ರತಾನುಷ್ಠಾನ ಮಾಡಿದ ಸ್ತ್ರೀಯು ದಮಯಂತಿ, ಸ್ವಾಹಾ ಮತ್ತು ವೇದವತಿ, ಇವರುಗಳಂತೆ ಪತಿಗೆ ಅತ್ಯಂತ ಪ್ರೀತ್ಯಾಸ್ಪದ ಳಾಗುವಳು.

೭. ಪೂರ್ವಕಾಲದಲ್ಲಿ ಸೀತಾದೇವಿಯು ಕಾಡಿನಲ್ಲಿ ಹೋಗುತ್ತಿರುವಾಗ ಪಲ್ಲವಾಲಂಕೃತವಾದ ಅಶೋಕವೃಕ್ಷವನ್ನು ನೋಡಿ ಅಲ್ಲೇ ಈ ವ್ರತವನ್ನಾಚರಿಸಿ ಈ ಸದ್ಧರ್ಮವನ್ನು ಪ್ರಸಿದ್ಧಿಗೆ ತಂದಳು.

೮. ಯುಧಿಷ್ಠಿರನೇ ! ಸೀತೆಯು ಮೈದುನನಾದ ಲಕ್ಷ್ಮಣನನ್ನೂ ಪತಿ ಯನ್ನೂ ಸಮೀಪದಲ್ಲಿರಿಸಿಕೊಂಡು ತಿಲಾಕ್ಷತ ಧೂಪದೀಪ ನೈವೇದ್ಯ ಶುಭ ಫಲಾದಿಗಳಿಂದ ಅಶೋಕವೃಕ್ಷವನ್ನು ಅರ್ಚಿಸಿದಳು.

ಅರ್ಚಯಿತ್ವಾ ಹ್ಯರ್ಥಿತೋಽಸೌ ರಕ್ತಾಶೋಕೋ ಯುಧಿಷ್ಠಿರ ।
ಮೈಥಿಲ್ಯಾ ಪ್ರಾಂಜಲಿರ್ಭೂತ್ವಾ ಶೃಣ್ವತೋ ರಾಘವಸ್ಯ ಚ ॥ ೯ ॥

ಚಿರಂ ಜೀವತು ಮೇ ವೃದ್ಧಃ ಶ್ವಶುರಃ ಕೋಸಲೇಶ್ವರಃ ।
ಭರ್ತಾ ಮೇ ದೇವರಾಶ್ಚೈವ ಜೀವಂತು ಭರತಾದಯಃ ।
ಕೌಶಲ್ಯಾಮಪಿ ಜೀವಂತೀಂ ಪಶ್ಯೇಯಮಿತಿ ಮೈಥಿಲೀ ॥ ೧೦ ॥

ಯಯಾಚೇ ತಂ ಮಹಾಭಾಗಾ ದ್ರುಮಂ ಸತ್ಯೋಪಯಾಚನಂ ।
ಪ್ರದಕ್ಷಿಣಮುಪಾವೃತ್ಯ ತತಸ್ತೇ ಪ್ರಯಯುಃ ಪುನಃ ॥ ೧೧ ॥

ಏವಮನ್ಯಾಪಿ ಯಾ ನಾರೀ ಪೂಜಯೇದ್ಭುವಿ ತಂ ನಗಂ ।
ತಿಲತಂಡುಲಸಂಮಿಶ್ರೈರ್ಯವಗೋಧೂಮಸರ್ಷಪೈಃ ॥ ೧೨ ॥

ಕ್ಷಮಾಪ್ಯ ವಂದಯೇನ್ಮೂಲಂ ಪಾದಪಂ ರಕ್ತಪಲ್ಲವಂ ।
ಮಂತ್ರೇಣಾನೇನ ಕೌಂತೇಯ ಪ್ರಣಮ್ಯ ಸ್ತ್ರೀ ಪತಿವ್ರತಾ ॥ ೧೩ ॥

---

೯-೧೦. ಮತ್ತು ಬದ್ಧಾಂಜಲಿಯಾಗಿ ನಿಂತು ಶ್ರೀರಾಮನು ಕೇಳುವ ಹಾಗೆ “ವೃದ್ಧನೂ ಕೋಸಲೇಶ್ವರನೂ ಆದ ನನ್ನ ಮಾವನು ಚಿರಂಜೀವಿಯಾಗಲಿ ಮತ್ತು ನನ್ನ ಜೀವಿತೇಶ್ವರನೂ ಭರತಾದಿ ಮೈದುನರೆಲ್ಲರೂ ಚಿರಂಜೀವಿಗಳಾಗಲಿ ಜೀವಸಹಿತಳಾದ ಕೌಸಲ್ಯೆಯನ್ನು ನೋಡುವ ಭಾಗ್ಯವನ್ನು ದಯಪಾಲಿಸು.”

೧೧. ಎಂದು ಪ್ರಾರ್ಥನೆಮಾಡಿ ಆ ರಕ್ತಾಶೋಕವನ್ನು ಪ್ರದಕ್ಷಿಣೆಮಾಡಿ ಬಂದು, ಪತಿ ಮೈದುನ ಇವರ ಸಮೇತಳಾಗಿ ಮುಂದಕ್ಕೆ ಪ್ರಯಾಣ ಮಾಡಿದಳು.

೧೨. ಪತಿವ್ರತೆಯಾದ ಸ್ತ್ರೀಯು ಈ ರೀತಿ ಭೂಲೋಕದಲ್ಲಿ ಈ ರಕ್ತಾಶೋಕವೃಕ್ಷವನ್ನು ತಿಲಮಿಶ್ರ ತಂಡುಲಗಳಿಂದಲೂ ಮತ್ತು ಯವ ಗೋಧುವೆ ಸಾಸುವೆ ಇವುಗಳಿಂದಲೂ ಪೂಜಿಸಿ.

೧೩-೧೪. ಕ್ಷಮಾ ಪ್ರಾರ್ಥನ ಪೂರ್ವಕವಾಗಿ ವೃಕ್ಷಮೂಲವನ್ನು ವಂದಿಸಿ “ದೊಡ್ಡ ಕೊಂಬೆಗಳುಳ್ಳ ಮಹಾವೃಕ್ಷವೇ! ಮನ್ಮಥನ ಆವಾಸವೇ! ಉದ್ಯಾನಕ್ಕೆ

**ಮಹಾವೃಕ್ಷ ಮಹಾಶಾಖ ಮಕರಧ್ವಜಮಂದಿರ ।**
**ಪ್ರಾರ್ಥಯೇ ತ್ವಾಂ ಮಹಾಭಾಗ ವನೋಪವನಭೂಷಣ ॥ ೧೪ ॥**

**ಏವಮಾಭಾಷ್ಯ ತಂ ವೃಕ್ಷಂ ದತ್ವಾ ವಿಪ್ರಾಯ ದಕ್ಷಿಣಾಂ ।**
**ಸಖೀಭಿಃ ಸಹಿತಾ ಸಾಧ್ವೀ ತತಃ ಸ್ವಭವನಂ ವ್ರಜೇತ್ ॥ ೧೫ ॥**

**ಯಾಃ ಶೋಕನಾಶನ ಮಶೋಕತರುಂ ತರುಣ್ಯಃ ।**
**ಸಂಪೂಜಯಂತಿ ಕುಸುಮಾಕ್ಷತಧೂಪದೀಪೈಃ ।**
**ತಾಃ ಪ್ರಾಪ್ಯ ಸೌಖ್ಯಮತುಲಂ ಭುವಿ ಭರ್ತೃಜಾತಂ ।**
**ಗೌರೀಪದಂ ಪ್ರಮುದಿತಾಃ ಪುನರಾಪ್ನುವಂತಿ ॥ ೧೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಅಶೋಕವ್ರತವರ್ಣನಂ ನಾಮ ನವಮೋಽಧ್ಯಾಯಃ.**

---

ಆಭರಣಪ್ರಾಯವಾಗಿದ್ದೀಯೆ; ನಿನ್ನನ್ನು ಪ್ರಾರ್ಥಿಸುತ್ತೇನೆ '' ಎಂಬ ಅರ್ಥವುಳ್ಳ

ಮಹಾವೃಕ್ಷ ಮಹಾಶಾಖ ಮಕರಧ್ವಜಮಂದಿರ ।
ಪ್ರಾಥಯೇ ತ್ವಾಂ ಮಹಾಭಾಗ ವನೋಪವನ ಭೂಷಣ ॥

ಈ ಮಂತ್ರವನ್ನು ಹೇಳಿ ಪ್ರಾರ್ಥನೆ ಮಾಡಬೇಕು.

೧೫. ಬಳಿಕ ಆ ಸಾಧ್ವಿಯು ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು ಸಖೀ ಸಮೇತಳಾಗಿ ಸ್ವಗೃಹಕ್ಕೆ ಹೋಗಬೇಕು.

೧೬. ತರುಣಿಯರಾದ ಯಾವ ನಾರಿಯರು ಶೋಕನಾಶಕವಾದ ಈ ಅಶೋಕವೃಕ್ಷವನ್ನು ಪುಷ್ಪಾಕ್ಷತೆ ಧೂಪದೀಪಗಳಿಂದ ಪೂಜಿಸುವರೋ ಅವರು ಇಹದಲ್ಲಿ ಸಮಸ್ತವಾದ ಪತಿಸೌಖ್ಯವನ್ನು ಹೊಂದಿ ಪರದಲ್ಲಿ ಗೌರೀಪದವನ್ನು ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಶೋಕವ್ರತ ವರ್ಣನೆಯೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದಶಮೋऽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪ್ರಥಮೇऽಹ್ನಿ ದಿನೋದಯೇ ।
ದೇವೋದ್ಯಾನಭವಂ ಹೃದ್ಯಂ ಕರವೀರಂ ಸಮರ್ಚಯೇತ್ ॥ ೧ ॥

ರಕ್ತತಂತುಪರೀಧಾನಂ ಗಂಧಧೂಪವಿಲೇಪನೈಃ ।
ವಿರೂಢೈಃ ಸಪ್ತಧಾನ್ಯೈಶ್ಚ ನಾರಂಗೈರ್ಬೀಜಪೂರಕೈಃ ॥ ೨ ॥

ಗುಣಕೈರ್ಘಟಕೈರ್ದಿವ್ಯೈರ್ನಾಲಿಕೇರೈಃ ಸುಶೋಭನೈಃ ।
ಅಭ್ಯುಕ್ಷ್ಯಾಕ್ಷತತೋಯೇನ ಮಂತ್ರೇಣೈವಂ ಕ್ಷಮಾಪಯೇತ್ ॥ ೩ ॥

---

### ಹತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಜ್ಯೇಷ್ಠಮಾಸದ ಶುಕ್ಲಪಕ್ಷದ ಪ್ರತಿಪತ್ತಿನ ದಿನ ದೇವೋದ್ಯಾನದಲ್ಲಿ ಉದ್ಭವಿಸಿದ ಹೃದ್ಯವಾದ ಕಣಗಿಲೆಯ ವೃಕ್ಷವನ್ನು ಪೂಜಿಸಬೇಕು.

೨. ಆ ವೃಕ್ಷವನ್ನು ರಕ್ತವಸ್ತ್ರದಿಂದಾಚ್ಛಾದಿಸಿ ಗಂಧಾದಿ ವಿಲೇಪನಗಳು ಧೂಪ, ದೀಪ ಸಪ್ತಧಾನ್ಯಾಂಕುರ ಮೊದಲಾದುವುಗಳಿಂದ ಪೂಜಿಸಬೇಕು.

೩. ಕಿತ್ತಳೆ, ಮಾದಳ, ನಿಂಬೆ ಮೊದಲಾದ ಫಲಗಳ ಸಮೇತ ದಿವ್ಯ ಘಟೋದಕಗಳಿಂದಲೂ, ನಾಳಿಕೇರೋದಕಗಳಿಂದಲೂ, ಅಕ್ಷತೋದಕಗಳಿಂದಲೂ ಅಭಿಷೇಕ ಮಾಡಬೇಕು.

ಕರವೀರ ವಿಷಾವಾಸ ನಮಸ್తే ಭಾನುವಲ್ಲಭ ।
ಮೌಲಿಮಂಡನಸದ್ರತ್ನ ನಮಸ್తే ಕೇಶವೇಶಯೋಃ ॥ ೪ ॥

ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।
ಹಿರಣ್ಮಯೇನ ಸವಿತಾ ರಥೇನಾದೇವೋ ಯಾತಿ ಭುವನಾನಿ ಪಶ್ಯನ್ ॥ ೫ ॥

ಏವಂ ಭಕ್ತ್ಯಾ ಸಮಭ್ಯರ್ಚ್ಯ ದತ್ವಾ ವಿಪ್ರಾಯ ದಕ್ಷಿಣಾಂ ।
ಪ್ರದಕ್ಷಿಣಾಮಥೋ ಕೃತ್ವಾ ತತಃ ಸ್ವಭವನಂ ವ್ರಜೇತ್ ॥ ೬ ॥

ಏತದ್ವ್ರತಂ ಮಹಾಭಾಗ ಸೂರ್ಯಾರಾಧನಕಾಮ್ಯಯಾ ।
ಅನಸೂಯಯಾ ಚ ಕ್ಷಮಯಾ ಸಾವಿತ್ರ್ಯಾ ಸತ್ಯಭಾಮಯಾ ॥ ೭ ॥

ದಮಯಂತ್ಯಾ ಸರಸ್ವತ್ಯಾ ಗಾಯತ್ರ್ಯಾ ಗಂಗಯಾ ತಥಾ ।
ಅನ್ಯಾಭಿರಪಿ ನಾರೀಭಿರ್ಮರ್ತ್ಯಲೋಕೇಽಪ್ಯನುಷ್ಠಿತಂ ।
ಕರವೀರವ್ರತಂ ಪಾರ್ಥ ಸರ್ವಸೌಖ್ಯಫಲಪ್ರದಂ ॥ ೮ ॥

---

೪. ಬಳಿಕ ಆ ಕರವೀರ ವೃಕ್ಷವನ್ನು ಪ್ರಾರ್ಥಿಸುವನಾಗಿ

ಕರವೀರ ವಿಷಾವಾಸ ನಮಸ್తే ಭಾನುವಲ್ಲಭ ।
ಮೌಲಿಮಂಡನಸದ್ರತ್ನ ನಮಸ್తే ಕೇಶವೇಶಯೋಃ ॥

ಈ ಮಂತ್ರ ಪೂರ್ವಕವಾಗಿ ಅಪರಾಧ ಕ್ಷಮೆಯನ್ನು ಬೇಡಬೇಕು.

೫-೬. ಮತ್ತು " ಆಕೃಷ್ಣೇನ ರಜಸಾವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಮಯೇನ ಸವಿತಾರಥೇನಾದೇವೋ ಯಾತಿ ಭುವನಾನಿ ಪಶ್ಯನ್ ॥ " ಎಂಬ ಮಂತ್ರ ಪೂರ್ವಕವಾಗಿ ಭಕ್ತಿವಿನಯಗಳಿಂದ ಪೂಜಿಸಬೇಕು. ಬಳಿಕ ವಿಪ್ರನಿಗೆ ದಕ್ಷಿಣೆಯನ್ನು ಕೊಟ್ಟು ಪ್ರದಕ್ಷಿಣೆ ನಮಸ್ಕಾರ ಮಾಡಿ ಸ್ವಗೃಹಕ್ಕೆ ಬರಬೇಕು.

೭-೮. ಅಯ್ಯಾ ಯುಧಿಷ್ಠಿರನೇ ! ಸೂರ್ಯಾರಾಧನಾಭಿಲಾಷೆಯಿಂದ ಈ ಕರವೀರ ವ್ರತವನ್ನು ಭೂಲೋಕದಲ್ಲಿ ಅನಸೂಯಾ, ಕ್ಷಮಾ, ಸಾವಿತ್ರೀ, ಸತ್ಯಭಾಮಾ, ದಮಯಂತೀ, ಸರಸ್ವತಿ, ಗಾಯತ್ರೀ, ಗಂಗಾ ಮೊದಲಾದ ಅನೇಕ ಸ್ತ್ರೀಯರು ಆಚರಿಸಿದ್ದಾರೆ.

**ಸಂಪೂಜ್ಯ ರತ್ನಕುಸುಮಾಂಚಿತಸರ್ವಶಾಖಂ**
**ನೀಲೈರ್ದಲೈಸ್ತತತನುಂ ಕರವೀರವೃಕ್ಷಂ ।**
**ಭುಕ್ತ್ವಾ ಮನೋsಭಿಲಷಿತಾನ್ಭುವಿ ಭವ್ಯಭೋಗಾ**
**ನಂತೇ ಪ್ರಯಾತಿ ಭವನಂ ಭರತಾಗ್ರ್ಯ ಭಾನೋಃ　　　　॥ ೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಕರವೀರವ್ರತ ವರ್ಣನಂ ನಾಮ ದಶಮೋsಧ್ಯಾಯಃ.**



---

೯. ಅಯ್ಯಾ ಧರ್ಮರಾಜನೇ ! ರತ್ನಮಯವಾದ ಕುಸುಮಗಳಿಂದ ಅಲಂಕೃತವಾದ ಶಾಖೆಗಳಿಂದಲೂ, ನೀಲವರ್ಣದ ದಳಗಳಿಂದಲೂ, ಕೂಡಿದ ವಿಸ್ತಾರವಾದ ಕರವೀರ ವೃಕ್ಷವನ್ನು ಪೂಜಿಸಿದ ಮಾನವನು ಇಹದಲ್ಲಿ ಇಷ್ಟವಾದ ಭೋಗಗಳನ್ನನುಭವಿಸಿ, ಕೊನೆಗೆ ಪರದಲ್ಲಿ ಸೂರ್ಯಲೋಕವನ್ನು ಪಡೆಯುತ್ತಾನೆ,

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಕರವೀರ ವ್ರತ ವರ್ಣನೆಯೆಂಬ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ನವಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಸ್ವಭರ್ತ್ರಾ ಸಹ ಸಂಬದ್ಧಮಹಾಸ್ನೇಹೋ ಯಥಾ ಭವೇತ್ ।
ಕುಲಸ್ತ್ರೀಣಾಂ ತದಾಚಕ್ಷ್ವ ವ್ರತಂ ಮಮ ಸುರೋತ್ತಮ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಯಮುನಾಯಾಸ್ತಟೇ ಪೂರ್ವಂ ಮಥುರಾಸ್ತೇ ಪುರೀ ಶುಭಾ ।
ತಸ್ಯಾಂ ಶತ್ರುಘ್ನನಾಮ್ನಾಭೂದ್ರಾಜಾ ರಾಮಪ್ರತಿಷ್ಠಿತಃ ॥ ೨ ॥

ತಸ್ಯ ಭಾರ್ಯಾ ಕೀರ್ತಿಮಾಲಾ ನಾಮ್ನಾ ಸೀತ್ಪ್ರಥಿತಾ ಭುವಿ ।
ತಯಾ ಪ್ರಣಮ್ಯ ಭಗವಾನ್ವಶಿಷ್ಠೋ ಮುನಿಪುಂಗವಃ ॥ ೩ ॥

---

### ಹನ್ನೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಸುರಶ್ರೇಷ್ಠನೇ ! ಕುಲಸ್ತ್ರೀಯರಿಗೆ ತಮ್ಮ ತಮ್ಮ ಪತಿಯೊಡನೆ ದೃಢವಾದ ಸ್ನೇಹ ಹುಟ್ಟುವುದಕ್ಕೆ ಸಾಧನವಾದ ಒಂದು ವ್ರತವನ್ನು ಹೇಳು ಎಂದು ಕೇಳಿದನು.

೨. ಪೂರ್ವಕಾಲದಲ್ಲಿ ಯಮುನಾನದೀ ತೀರದಲ್ಲಿರುವ ಮಥುರೆ ಎಂಬ ಶುಭಲಕ್ಷಣಗಳುಳ್ಳ ನಗರದಲ್ಲಿ ಶತ್ರುಘ್ನನೆಂಬ ರಾಜನು ಶ್ರೀರಾಮನಿಂದ ಪ್ರತಿಷ್ಠಿತನಾಗಿದ್ದನು.

೩. ಆ ರಾಜನಿಗೆ ಜಗದ್ವಿಖ್ಯಾತಳಾದ ಕೀರ್ತಿಮಾಲೆ ಎಂಬ ಭಾರ್ಯೆಯಿದ್ದಳು. ಅವಳು ಒಂದುದಿನ ಋಷಿಶ್ರೇಷ್ಠನಾದ ವಶಿಷ್ಠನ ಸನ್ನಿಧಿಗೆ ಬಂದು ಆತನಿಗೆ ನಮಸ್ಕರಿಸಿ,

ಪೃಷ್ಟಃ ಸುಖಂ ಮುನಿಶ್ರೇಷ್ಠ ಕಥಂ ಸಮುಪಜಾಯತೇ ।
ಬ್ರೂಹಿ ಮೇ ತಿಲಸಂಬಂಧಕಾರಣಂ ವ್ರತಮುತ್ತಮಂ ॥ ೪ ॥

ಏವಮುಕ್ತಸ್ತಯಾ ಜ್ಞಾನೀ ವಶಿಷ್ಠಃ ಕೀರ್ತಿಮಾಲಯಾ ।
ಧ್ಯಾತ್ವಾ ಮುಹೂರ್ತಮಾಚಖ್ಯೌ ಕೋಕಿಲಾವ್ರತಮುತ್ತಮಂ ॥ ೫ ॥

॥ ಶ್ರೀ ವಶಿಷ್ಠ ಉವಾಚ ॥

ಆಷಾಢಪೂರ್ಣಿಮಾಯಾಂ ತು ಸಂಧ್ಯಾಕಾಲೇ ಹ್ಯುಪಸ್ಥಿತೇ ।
ಸಂಕಲ್ಪಯೇನ್ಮಾಸಮೇಕಂ ಶ್ರಾವಣೇ ಶ್ವಃಪ್ರಭೃತ್ಯಹಂ ॥ ೬ ॥

ಸ್ನಾನಂ ಕರಿಷ್ಯೇ ನಿಯತಾ ಬ್ರಹ್ಮಚರ್ಯೆಸ್ಥಿತಾ ಸತೀ ।
ಭೋಕ್ಷ್ಯಾಮಿ ನಕ್ತಂ ಭೂಶಯ್ಯಾಂ ಕರಿಷ್ಯೇ ಪ್ರಾಣಿನಾಂ ದಯಾಂ ॥ ೭ ॥

---

೪. "ಸ್ವಾಮಿ ಮುನಿವರ್ಯರೇ ! ಯಾವ ವ್ರತಾಚರಣೆಯಿಂದ ಪತಿ ಸಂಬಂಧವಾದ ಅತಿಶಯ ಸುಖವು ಲಭಿಸುವುದು ಎಂಬುದನ್ನು ನನಗೆ ಉಪದೇಶ ಮಾಡಿ" ಎಂದು ಪ್ರಾರ್ಥಿಸಿದಳು.

೫. ಆಗ ಜ್ಞಾನಿಯಾದ ವಸಿಷ್ಠಮಹರ್ಷಿಯು ಒಂದು ಮುಹೂರ್ತಕಾಲ ಧ್ಯಾನಾಸಕ್ತನಾಗಿ ಈ ಉತ್ತಮವಾದ ಕೋಕಿಲಾವ್ರತವನ್ನು ಆಕೆಗೆ ಉಪ ದೇಶಿಸಿದನು.

೬. ಪುರುಷನಾಗಲಿ ಸ್ತ್ರೀಯಾಗಲಿ ಆಷಾಢಪೂರ್ಣಿಮೆಯ ಸಂಧ್ಯಾ ಕಾಲದಲ್ಲಿ ಈರೀತಿ ಸಂಕಲ್ಪಮಾಡಬೇಕು. ನಾನು ನಾಳೆಯಿಂದ ಮೊದಲ್ಗೊಂಡು ಶ್ರಾವಣಮಾಸದಲ್ಲಿ ಒಂದುತಿಂಗಳು ದಿನದಿನವೂ ನಿಯಮ ಪೂರ್ವಕವಾಗಿ ಸ್ನಾನಮಾಡುವೆನು.

೭. ದಿನದಿನವೂ ಬ್ರಹ್ಮಚರ್ಯವನ್ನು ಪಾಲನಮಾಡಿಕೊಂಡಿರುತ್ತೇನೆ' ನಕ್ತಭೋಜನ ಮಾಡುತ್ತೇನೆ, ಪ್ರಾಣಿಹಿಂಸಾವರ್ಜನೆಯನ್ನು ಮಾಡಿ ಕೇವಲ ನೆಲದಮೇಲೆ ಶಯನವನ್ನು ಮಾಡುವೆನು.

ಇತಿ ಸಂಕಲ್ಪ್ಯ ಪುರುಷೋ ನಾರೀ ವಾ ಬ್ರಾಹ್ಮಣಾಂತಿಕೇ ।
ಪ್ರಾಪ್ಯಾನುಜ್ಞಾಂ ತತಃ ಪ್ರಾತಃ ಸರ್ವಸಾಮಗ್ರಿಸಂಯುತಃ ॥ ೮ ॥

ಪುರುಷಃ ಪ್ರತಿಪತ್ಕಾಲಾದ್ದಂತಧಾವನಪೂರ್ವಕಂ ।
ನದ್ಯಾಂ ಗತ್ವಾ ತಥಾ ವಾಪ್ಯಾಂ ತಡಾಗೇ ಗಿರಿನಿರ್ಝರೇ ॥ ೯ ॥

ಸ್ನಾನಂ ಕುರ್ಯಾದ್ವ್ರತೀ ಪಾರ್ಥ ಸುಗಂಧಾಮಲಕೈಸ್ತಿಲೈಃ ।
ದಿನಾಷ್ಟಕಂ ತಥಾ ಪಶ್ಚಾತ್ಸರ್ವೌಷಧ್ಯಾ ಪುನಃ ಪೃಥಕ್ ॥ ೧೦ ॥

ವಚಯೂಷ್ಟಾ ಪುನಃ ಪಿಷ್ಟ್ವಾ ಶಿರೋರುಹವಿಮರ್ದನಂ ।
ಸ್ನಾತ್ವಾ ಧ್ಯಾತ್ವಾ ರವಿಂ ಚೈವ ವಂದಿತ್ವಾ ಚ ಪಿತೄನಥ ॥ ೧೧ ॥

ತರ್ಪಯಿತ್ವಾ ತಿಲಾಪಿಷ್ಟೈಃ ಕೋಕಿಲಾಂ ಪಕ್ಷಿರೂಪಿಣೀಂ ।
ಕಲಕಂಠೀಂ ಶುಭೈಃ ಪುಷ್ಪೈಃ ಪೂಜಯೇಚ್ಚಂಪಕೋದ್ಭವೈಃ ॥ ೧೨ ॥

---

೮. ಹೀಗೆಂದು ಬ್ರಾಹ್ಮಣ ಸಮ್ಮುಖದಲ್ಲಿ ಸಂಕಲ್ಪಮಾಡಿ ಅವರಿಂದ ಅನುಜ್ಞೆಯನ್ನು ಪಡೆದು, ಮರುದಿನ ಪ್ರಾತಃಕಾಲ ವ್ರತದ ಸರ್ವ ಸಾಮಗ್ರಿಗಳನ್ನು ಸಿದ್ಧಪಡಿಸಿ ಆ ಸಾಮಗ್ರಿ ಸಂಯುತನಾಗಿ,

೯. ಪ್ರತಿಪತ್ತಿನಿಂದ ಆರಂಭಿಸಿ ಎಂಟುದಿನ ನದಿ, ವಾಪೀ, ತಟಾಕ, ಅಥವಾ ಗಿರಿನಿರ್ಝರ ಇವುಗಳಿಗೆ ಹೋಗಿ ಅಲ್ಲಿ ದಂತಧಾವನ ಇತ್ಯಾದಿಗಳನ್ನು ನೆರವೇರಿಸಬೇಕು.

೧೦. ಬಳಿಕ ಸುಗಂಧಾಮಲಕತೈಲ ಹಚ್ಚಿಕೊಂಡು ಸ್ನಾನಮಾಡಬೇಕು, ಅನಂತರ ಹಿಂದಿನಂತೆಯೇ ಪೃಥಕ್ಕಾಗಿ ಸರ್ವೌಷಧಿರಸಗಳಿಂದಲೂ ಸ್ನಾನ ಮಾಡಬೇಕು.

೧೧. ಬಳಿಕ ಬಜೆಯ ಚೂರ್ಣವನ್ನು ಕೇಶಾದಿಳಿಗೆ ಲೇಪಿಸಿ ಸ್ನಾನ ಮಾಡಬೇಕು. ಬಳಿಕ ಶ್ರೀ ಸೂರ್ಯದೇವನನ್ನು ಧ್ಯಾನಿಸಿ ಪಿತೃಗಳಿಗೆ ವಂದನ ಮಾಡಬೇಕು.

೧೨. ಎಲೈ ಪಾಂಡುಪುತ್ರನೇ ! ಬಳಿಕ ಮನೋಹರಧ್ವನಿಯುಳ್ಳ ಕೋಗಿಲೆ ಪಕ್ಷಿರೂಪವನ್ನು ತಿಲಪಿಷ್ಟಗಳಿಂದ ರಚಿಸಿ, ಅದನ್ನು ಮನೋಹರವಾದ ಚಂಪಕ ಪುಷ್ಪಗಳಿಂದಲೂ,

ಪತ್ರೈರ್ವಾ ಧೂಪನೈವೇದ್ಯದೀಪಾಲಕ್ತಕಚಂದನೈಃ ।
ತಿಲತಂಡುಲದೂರ್ವಾಗ್ರೈಃ ಪೂಜಯಿತ್ವಾ ಕ್ಷಮಾಪಯೇತ್ ।
ನಿತ್ಯಂ ತಿಲವ್ರತೀ ಭಕ್ತ್ಯಾ ಮಂತ್ರೇಣಾನೇನ ಪಾಂಡವ　　॥ ೧೩ ॥

ತಿಲಸಹೇ ತಿಲಸೌಖ್ಯೇ ತಿಲವರ್ಣೇ ತಿಲಪ್ರಿಯೇ ।
ಸೌಭಾಗ್ಯಂ ದ್ರವ್ಯಪುತ್ರಾಂಶ್ಚ ದೇಹಿ ಮೇ ಕೋಕಿಲೇ ನಮಃ　　॥ ೧೪ ॥

ಇತ್ಯುಚ್ಚಾರ್ಯ ತತಃ ಪಶ್ಚಾದ್ಗೃಹಮಭ್ಯೇತ್ಯ ಸಂಯತಃ ।
ಕೃತ್ವಾಹಾರಂ ಸ್ವಪೇತ್ಪಾರ್ಥ ಯಾವನ್ಮಾಸಃ ಸಮಾಪ್ಯತೇ　　॥ ೧೫ ॥

ಮಾಸಾಂತೇ ತಾಮ್ರಪಾತ್ರ್ಯಾಂ ತು ಕೋಕಿಲಾಂ ತಿಲಪಿಷ್ಟಜಾಂ ।
ರತ್ನನೇತ್ರಾಂ ಸ್ವರ್ಣಪಕ್ಷಾಂ ಬ್ರಾಹ್ಮಣಾಯ ನಿವೇದಯೇತ್　　॥ ೧೬ ॥

---

೧೩. ಪರಿಮಳಪತ್ರ, ಚಂದನ, ಧೂಪ, ದೀಪ ನೈವೇದ್ಯ ಇವುಗಳಿಂದಲೂ ಮತ್ತು ತಿಲ, ತಂಡುಲ, ದೂರ್ವಾಗ್ರ ಇವುಗಳಿಂದಲೂ ಅರ್ಚಿಸಿ ನಿತ್ಯವೂ ತಿಲ ವ್ರತಿಯಾಗಿದ್ದು ಈರೀತಿ ಅಪರಾಧ ಕ್ಷಮಾಪಣೆ ಪ್ರಾರ್ಥನೆ ಮಾಡಬೇಕು.

೧೪. ಎಲೌ ತಿಲಸಹೆಯೇ ! ತಿಲಸೌಖ್ಯೆಯೇ ! ತಿಲಪ್ರಿಯೆಯೇ ! ತಿಲವರ್ಣೆಯೇ ! ನಿನಗೆ ನಮಿಸುವೆನು. ನನಗೆ ಪುತ್ರರು, ದ್ರವ್ಯ, ಸೌಖ್ಯ, ಸೌಭಾಗ್ಯ ಇವುಗಳನ್ನೆಲ್ಲಾ ಕೊಡು ಎಂಬ ಅರ್ಥವುಳ್ಳ " ತಿಲಸಹೇ ತಿಲಸೌಖ್ಯೇ ತಿಲವರ್ಣೇ ತಿಲಪ್ರಿಯೇ । ಸೌಭಾಗ್ಯ ದ್ರವ್ಯ ಪುತ್ರಾಂಶ್ಚ ದೇಹಿ ಮೇ ಕೋಕಿಲೇ ನಮಃ ॥ "

೧೫. ಈ ಮಂತ್ರವನ್ನುಚ್ಚರಿಸಿ ಅನಂತರ ಮನೆಗೆ ಬಂದು ಜಿತೇಂದ್ರಿಯತೆಯಿಂದ ಭೋನವನ್ನು ಮಾಡಿ ನಿದ್ರಿಸಬೇಕು.

೧೬. ಎಲೈ ಧರ್ಮರಾಜನೇ ! ತನಗೆ ಶುಭವಾಗಬೇಕೆಂದು ಅಪೇಕ್ಷಿಸುವವನು ಈರೀತಿ ಒಂದು ತಿಂಗಳು ಪೂರ್ತಿಯಾದಮೇಲೆ ಮಾಸಾಂತದಲ್ಲಿ ರತ್ನನೇತ್ರ, ಸುವರ್ಣಮಯವಾದ ಗರಿಗಳು, ಇವುಗಳಿಂದ ಸಮೇತವಾದ ಕೋಕಿಲೆಯನ್ನು ತಿಲಪಿಷ್ಟದಿಂದ ರಚಿಸಿ ತಾಮ್ರದ ಪಾತ್ರೆಯಲ್ಲಿಟ್ಟು,

ವಸ್ತ್ರೈರ್ಧನೈರ್ಗುಡೈರ್ಯುಕ್ತಾಂ ಶ್ರಾವಣ್ಯಾಂ ಕುಂಡಲೇsಥವಾ ।
ಶ್ವಶ್ರೂಶ್ವಶುರವರ್ಗೇ ವಾ ದೈವಜ್ಞೇ ವಾ ಪುರೋಹಿತೇ ।
ವ್ಯಾಸೇ ವಾ ಸಂಪ್ರದಾತವ್ಯಾ ವ್ರತಿಭಿಃ ಶುಭಕಾಮ್ಯಯಾ ॥ ೧೭ ॥

ಏವಂ ಯಾ ಕುರುತೇ ನಾರೀ ಕೋಕಿಲಾವ್ರತಮಾದರಾತ್ ।
ಸಪ್ತಜನ್ಮಾನಿ ಸೌಭಾಗ್ಯಂ ಸಾ ಪ್ರಾಪ್ನೋತಿ ಸುವಿಸ್ತರಂ ॥ ೧೮ ॥

ನಿಃಸಾಪತ್ನ್ಯಂ ಪತಿಂ ಭವ್ಯಂ ಸಸ್ನೇಹಂ ಪ್ರಾಪ್ಯ ಭೂತಲೇ ।
ಮೃತಾ ಗೌರೀಪುರಂ ಯಾತಿ ವಿಮಾನೇನಾರ್ಕವರ್ಚಸಾ ॥ ೧೯ ॥

ಏತದ್ವ್ರತಂ ವಶಿಷ್ಠೇನ ಮುನಿನಾ ಕಥಿತಂ ಪುರಾ ।
ತಥಾ ಚಾನುಷ್ಠಿತಂ ಪಾರ್ಥ ಸಮಸ್ತಂ ಕೀರ್ತಿಮಾಲಯಾ ॥ ೨೦ ॥

---

೧೭. ವಸ್ತ್ರ, ಧನ ಮತ್ತು ಗುಡ ಸಮೇತವಾಗಿ ಜ್ಯೋತಿಷ್ಠೋಮಯಾಗ ಮಾಡಿ ಕುಂಡಲಧಾರಿಯಾದ ಶ್ರೋತ್ರಿಯನಿಗಾಗಲಿ ಶ್ವಶ್ರೂಸಂಬಂಧಿ, ಶ್ವಶುರ ಸಂಬಂಧಿ, ಜ್ಯೋತಿಷ್ಕ, ಪುರೋಹಿತ, ಅಥವಾ ಶಾಸ್ತ್ರಾಧ್ಯಯನಮಾಡಿದ ವೈಯಾಸಿಕ ಎಂದರೆ ಪುರಾಣವಾಚಕನಾದ ಬ್ರಾಹ್ಮಣ ಇಂಥವರಿಗೆ ದಾನಮಾಬೇಕು.

೧೮. ಈ ಕೋಕಿಲಾವ್ರತವನ್ನು ಈ ರೀತಿಯಲ್ಲಿ ಅತ್ಯಾದರದಿಂದ ಯಾವ ನಾರಿಯು ಮಾಡುವಳೋ ಅವಳು ಈ ಲೋಕದಲ್ಲಿ ಏಳುಜನ್ಮಗಳಲ್ಲಿ ಸೌಭಾಗ್ಯವನ್ನು ಹೊಂದುವಳು.

೧೯. ಮತ್ತು ಸೌಂದರ್ಯವಂತನೂ ಮತ್ತು ಪ್ರೇಮಯುಕ್ತನೂ ಆದ ಪತಿಯನ್ನು ಪಡೆದು ಸವತಿಯರ ದುಃಖವಿಲ್ಲದೆ ಸುಖವಾಗಿದ್ದು ಮರಣಾನಂತರದಲ್ಲಿ ತೇಜೋಮಯವಾದ ವಿಮಾನದಮೂಲಕ ಗೌರಿಯ ಸನ್ನಿಧಿಯನ್ನು ಸೇರುವಳು.

೨೦. ಓ ರಾಜನೇ ! ಪೂರ್ವಕಾಲದಲ್ಲಿ ಕೀರ್ತಿಮಾಲೆಯು ಮಹರ್ಷಿ ವಸಿಷ್ಠನಿಂದ ಈ ವ್ರತವನ್ನು ಉಪದೇಶ ಪಡೆದು ಹಾಗೆಯೇ ಅನುಷ್ಠಾನ ಮಾಡಿದಳು.

ತಸ್ಯಾಶ್ಚ ಸರ್ವಂ ಸಂಪನ್ನಂ ವಶಿಷ್ಠವಚನಾದಿಹ ।
ಪುತ್ರಸೌಭಾಗ್ಯಸಂಮಾನಂ ಶತ್ರುಘ್ನಸ್ಯ ಪ್ರಸಾದಜಂ　　॥ ೨೦ ॥

ಏವಂ ಯಾನ್ಯಾಪಿ ಕೌಂತೇಯ ಕೋಕಿಲಾವ್ರತಮಾದರಾತ್ ।
ಕರಿಷ್ಯತಿ ಧ್ರುವಂ ತಸ್ಯಾಃ ಸೌಭಾಗ್ಯಂ ಚ ಭವಿಷ್ಯತಿ　　॥ ೨೧ ॥

ಯೇ ಕೋಕಿಲಾಂ ಕಲರವಾಂ ಕಲಕಂಠಪೀಠಾಂ ।
ಯಚ್ಛಂತಿ ಸಾಜ್ಯತಿಲಪಿಷ್ಟಮಯೀಂ ದ್ವಿಜೇಭ್ಯಃ ।
ತೇ ನಂದನಾದಿಷು ವನೇಷು ವಿಹೃತ್ಯ ಕಾಮಂ ।
ಮರ್ತ್ಯೇ ಸಮೇತ್ಯ ಮಧುರಧ್ವನಯೋ ಭವಂತಿ　　॥ ೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದೇ ಕೋಕಿಲಾವ್ರತಂ ನಾಮ ಏಕಾದಶೋಽಧ್ಯಾಯಃ.



---

೨೦. ಅವಳಿಗೆ ವಸಿಷ್ಠವಚನದ ಪ್ರಕಾರವಾಗಿ ಸರ್ವಸಂಪತ್ಸಮೃದ್ಧಿ ಯಾದುದಲ್ಲದೆ ಪತಿಯಾದ ಶತ್ರುಘ್ನನ ಪ್ರಸಾದದಿಂದ ಪುತ್ರಸೌಭಾಗ್ಯವೂ, ಸನ್ಮಾನವೂ ಲಭಿಸಿದುವು.

೨೧. ಅಯ್ಯಾ ಯುಧಿಷ್ಠಿರನೇ! ಈರೀತಿ ಯಾವ ನಾರಿಯು ಆದರದಿಂದ ಕೋಕಿಲಾವ್ರತವನ್ನಾಚರಿಸುವಳೋ ಅಂಥವಳಿಗೆ ನಿಶ್ಚಯವಾಗಿ ಸೌಭಾಗ್ಯ ಪ್ರಾಪ್ತಿಯಾಗುವುದು.

೨೨. ಯಾರು ಮಧುರಸ್ವರವುಳ್ಳ ಕೋಗಿಲೆಯ ಪ್ರತಿಮೆಯನ್ನು ಘೃತ ಮಿಶ್ರಿತ ತಿಲಪಿಷ್ಟಗಳಿಂದ ರಚಿಸಿ, ಬ್ರಾಹ್ಮಣರಿಗೆ ದಾನಮಾಡುವರೋ ಅಂಥವರು ಸ್ವರ್ಗದಲ್ಲಿ ನಂದನಾದಿ ಉದ್ಯಾನವನಗಳಲ್ಲಿ ಸುಖವಾಗಿ ವಿಹರಿಸುವರು. ಮರ್ತ್ಯ ಲೋಕದಲ್ಲಿ ಜನಿಸಿದಾಗ ಮಧುರಕಂಠವುಳ್ಳವರಾಗುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಕೋಕಿಲವ್ರತ ವರ್ಣನೆಯೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಾದಶೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅಥ ಪಾಪಾಪಹಂ ವಕ್ಷ್ಯೇ ಬೃಹದ್ವ್ರತಮನುತ್ತಮಂ ।
ಸುರಾಸುರಮುನೀನಾಂ ಚ ದುರ್ಲಭಂ ವಿಧಿನಾ ಶೃಣು ॥ ೧ ॥

ಪರ್ವಣ್ಯಾಶ್ವಯುಜಸ್ಯಾಂತೇ ಪಾಯಸಂ ಘೃತಸಂಯುತಂ ।
ನಕ್ತಂ ಭುಂಜೀತ ಶುದ್ಧಾತ್ಮಾ ಓದನಂ ವೈಕ್ಷವಾನ್ವಿತಂ ॥ ೨ ॥

ಆಚಮ್ಯಾಥ ಶುಚಿರ್ಭೂತ್ವಾ ಬಿಲ್ವಜಂ ದಂತಧಾವನಂ ।
ಭಕ್ಷಯಿತ್ವಾ ಮಹಾದೇವಂ ಪ್ರಣಮ್ಯೇದಮುದೀರಯೇತ್ ॥ ೩ ॥

---

### ಹನ್ನೆರಡನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಸರ್ವಪಾಪ ಪರಿಹಾರವಾದುದೂ, ಸುರಾಸುರ ಮುನಿಗಳಿಗೆ ದುರ್ಲಭವಾದುದೂ ಎನಿಸಿ, ಉತ್ತಮವೂ, ಶಾಸ್ತ್ರೋಕ್ತವೂ ಆದ ಬೃಹತ್ತಪೋವ್ರತವೆಂಬ ವ್ರತವನ್ನು ಹೇಳುವೆನು ಕೇಳು,

೨. ಆಶ್ವಯುಜಮಾಸದ ಕೊನೆಯ ಪರ್ವದ (ಅಮಾವಾಸ್ಯೆಯ) ಲ್ಲಿ ರಾತ್ರಿಯ ಸಮಯದಲ್ಲಿ ಶುದ್ಧಾತ್ಮನಾಗಿ ಘೃತ, ಗುಡ, ಮಿಶ್ರಿತವಾದ ಪರಮಾನ್ನವನ್ನು ಭುಂಜಿಸಬೇಕು,

೩. ಆ ಮೇಲೆ ಶುದ್ಧಾಚಮನಮಾಡಿ ಪ್ರಾತಃಕಾಲದಲ್ಲಿ ಬಿಲ್ವಕಾಷ್ಠದಿಂದ ದಂತಧಾವನಮಾಡಿ ಸ್ನಾನಾದಿಗಳಿಂದ ಶುಚಿಯಾಗಿ ಈಶ್ವರನನ್ನು ಪೂಜಿಸಿ ನೈವೇದ್ಯಸಮರ್ಪಣೆಮಾಡಿ ನಮಸ್ಕರಿಸಿ ಪ್ರಾರ್ಥಿಸುವುದಕ್ಕೆ ಕೈಮುಗಿದುಕೊಂಡು,

ಅಹಂ ದೇವವ್ರತಮಿದಂ ಕರ್ತುಮಿಚ್ಛಾಮಿ ಶಾಶ್ವತಂ ।
ತವಾಜ್ಞಯಾ ಮಹಾದೇವ ಯಥಾ ನಿರ್ವಹತೇ ಕುರು ॥ ೪ ॥

ಇತ್ಯೇವಂ ನಿಯಮಂ ಕೃತ್ವಾ ಯಾವದ್ವರ್ಷಾಣಿ ಷೋಡಶ ।
ತಿಥಯಃ ಪ್ರತಿಪತ್ಪೂರ್ವಾ ಭಜಿಷ್ಯಾಮೀತ್ಯನುಕ್ರಮಾತ್ ॥ ೫ ॥

ತತೋ ಮಾರ್ಗಶಿರೇ ಮಾಸಿ ಪ್ರತಿಪದ್ಯಪರೇ ಹನಿ ।
ಪೃಷ್ಟ್ವಾ ಗುರುಂ ಚೋಪವಾಸಂ ಮಹಾದೇವಂ ಸ್ಮರನ್ ಮುಹುಃ ॥ ೬ ॥

ಸ್ನಾತ್ವಾ ದೇವಂ ಸಮಭ್ಯರ್ಚ್ಯ ರಾತ್ರೌ ಪ್ರಜ್ವಾಲ್ಯ ದೀಪಕಾನ್ ।
ಯಮುನಾಂ ಚ ಮಹಾದೇವಂ ನತ್ವಾ ಪಶ್ಚಾನ್ನಿಮಂತ್ರಯೇತ್ ॥ ೭ ॥

ಮಹಾದೇವರತಾನ್ವಿಪ್ರಾನ್ಸಪತ್ನೀಕಾನ್ಯತವ್ರತಾನ್ ।
ಷೋಡಶಾಷ್ಟೌ ತದರ್ಧಂ ವಾ ಏಕಂ ವಾ ಶಕ್ತ್ಯಪೇಕ್ಷಯಾ ॥ ೮ ॥

---

೪. " ಎಲೈ ಪರಮೇಶ್ವರನೇ ! ನಾನು ನಿನ್ನ ಪ್ರೇರಣೆಯಿಂದ ಶಾಶ್ವತವಾದ ಈ ದೇವವ್ರತವನ್ನು ಆಚರಿಸಬೇಕೆಂದು ಸಂಕಲ್ಪಿಸಿದ್ದೇನೆ. ಅದು ಪೂರ್ತಿಯಾಗುವ ರೀತಿ ನಿರ್ವಿಘ್ನದಿಂದ ನಿರ್ವಾಹಮಾಡಿಸು ಎಂದು ಹೇಳಬೇಕು. "

೫. ಷೋಡಶವರ್ಷ ಪೂರ್ತಿಯಾಗುವವರೆಗೆ ಪ್ರತಿಮಾಸದ ಪ್ರತಿಪತ್ತಿನ ಮಾರನೆಯ ತಿಥಿಗಳಲ್ಲಿ ಕ್ರಮವಾಗಿ ನಿಯಮ ತಪ್ಪದೆ ಈರೀತಿ ನಡೆಸುತ್ತೇನೆ ಎಂದು ಹೇಳಬೇಕು.

೬. ಪ್ರಥಮತಃ ಮಾರ್ಗಶೀರ್ಷಮಾಸದ ಪ್ರತಿಪತ್ತಿಥಿಯಲ್ಲಿ ಈಶ್ವರಧ್ಯಾನ ನಿರತನಾಗಿ ತನ್ನ ಆಚಾರ್ಯನನ್ನೂ ಉಪವಾಸವ್ರತವನ್ನು ಕೈಕೊಳ್ಳಬೇಕೆಂದು ಪ್ರಾರ್ಥಿಸಿ,

೭. ಶಿವನನ್ನು ಪದೇ ಪದೇ ಸ್ಮರಿಸುತ್ತ ಸ್ನಾನಮಾಡಿ, ರಾತ್ರಿಯಲ್ಲಿ ಶಿವಾರ್ಚನೆಯನ್ನು ಮಾಡಿ ದೀಪಗಳನ್ನು ಹತ್ತಿಸಿಟ್ಟು ಯಮುನಾಪೂಜೆ ಮತ್ತು ಮಹಾದೇವನಪೂಜೆಯನ್ನು ಮಾಡಿ ನಮಸ್ಕರಿಸಬೇಕು.

೮. ಆ ಮೇಲೆ ಶಿವಭಕ್ತರಾಗಿಯೂ, ಸಪತ್ನೀಕರಾಗಿಯೂ ವ್ರತಪರರಾಗಿಯೂ ಇರುವ ಹದಿನಾರು ದಂಪತಿಗಳು ಅಥವಾ ಎಂಟು ದಂಪತಿಗಳು ಅಥವಾ ನಾಲ್ಕು ದಂಪತಿಗಳು ಅಥವಾ ಸ್ವಶಕ್ತ್ಯನುಸಾರವಾಗಿ ಒಂದೇ ಜತೆ.

ಆಮಂತ್ರ್ಯ ಸ್ವಗೃಹಂ ಗತ್ವಾ ಮಹಾದೇವಂ ಸ್ಮರನ್ ಕ್ಷಿತೌ ।
ಶುಚಿವಸ್ತ್ರಾಸ್ತೃತಾಯಾಂ ತು ನಿರಾಹಾರೋ ನಿಶಿ ಸ್ವಪೇತ್ ॥ ೯ ॥

ಭಾಸ್ಕರೋದಯಮಾಸಾದ್ಯ ಸ್ನಾತ್ವಾ ಚಾದಾಯ ದೀಪಕಾನ್ ।
ನೈವೇದ್ಯಂ ಸ್ನಪನಂ ಪುಷ್ಪಂ ಧೂಪಂ ಗಚ್ಛೇಚ್ಛಿವಾಲಯೇ ॥ ೧೦ ॥

ಅಭ್ಯಂಗಯಿತ್ವಾ ದೇವೇಶಂ ಕಷಾಯೈಶ್ಚ ಪರೂಕ್ಷಯೇತ್ ।
ಸ್ನಪಯೇತ್ಪಂಚಗವ್ಯೇನ ಪಯಸಾ ತದನಂತರಂ ॥ ೧೧ ॥

ಘೃತೇನ ಮಧುನಾ ದಧ್ನಾ ರಸೇನ ಪಯಸಾ ಪುನಃ ।
ತಿಲಾಂಬುನಾ ತತಃ ಸ್ನಾಪ್ಯ ಸ್ನಾಪಯೇದುಷ್ಣವಾರಿಣಾ ॥ ೧೨ ॥

ಲೇಪಯೇತ್ಸುಘನಂ ಪಶ್ಚಾತ್ಕರ್ಪೂರಾಗುರುಚಂದನೈಃ ।
ಪುಷ್ಪೈಃ ಸಂಪೂಜ್ಯ ದಾತವ್ಯಂ ಹೈಮಂ ಶಿರಸಿ ಪಂಕಜಂ ॥ ೧೩ ॥

---

೯. ಬ್ರಾಹ್ಮಣ ದಂಪತಿಯನ್ನು ಆಹ್ವಾನಿಸಿ ಸ್ವಗೃಹಕ್ಕೆ ಹೋಗಿ, ಮಹಾದೇವನನ್ನು ನೆನೆಯುತ್ತಾ ಶುಚಿವಸ್ತ್ರಾಸ್ತೃತವಾದ ಭೂಮಿಯಲ್ಲಿ ನಿರಾಹಾರನಾಗಿ ಮಲಗಬೇಕು.

೧೦. ಮರುದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಅಭಿಷೇಕಾರ್ಥವಾದ ಜಲ, ಪುಷ್ಪ, ಧೂಪ, ದೀಪ, ನೈವೇದ್ಯಾದಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಈಶ್ವರ ದೇವಾಲಯಕ್ಕೆ ಹೋಗಬೇಕು.

೧೧. ಅಲ್ಲಿ ಈಶ್ವರನಿಗೆ ಅಭ್ಯಂಗಸ್ನಾನಮಾಡಿಸಿ ಕಷಾದಯೋಕ ವಸ್ತುಗಳಿಂದ ಉಜ್ಜಿ ಕೊಳೆಯನ್ನು ಹೋಗಲಾಡಿಸಿ ಆ ಮೇಲೆ ಪಂಚಗವ್ಯದಿಂದಲೂ, ಕ್ಷೀರದಿಂದಲೂ ಅಭಿಷೇಕ ಮಾಡಬೇಕು.

೧೨. ಅನಂತರ ಘೃತ, ಮಧು, ದಧಿ, ಕ್ಷೀರ ಮತ್ತು ತಿಲೋದಕ ಇವನ್ನಭಿಷೇಕಮಾಡಿ ಉಷ್ಣೋದಕಾಭಿಷೇಕವನ್ನೂ ಮಾಡಬೇಕು.

೧೩. ಆ ಮೇಲೆ ಘನವಾದ ಕರ್ಪೂರಾಗುರುಚಂದನವನ್ನು ಲೇಪಿಸಿ ಪುಷ್ಪಗಳಿಂದ ಪೂಜಿಸಿ ಶಿರಸ್ಸಿನಲ್ಲಿ ಸ್ವರ್ಣಕಮಲವನ್ನು ಇಡಬೇಕು.

ವಸ್ತ್ರಯುಗ್ಮಂ ಪತಾಕಾಂ ಚ ಪಂಚವರ್ಣಂ ವಿತಾನಕಂ ।
ಧೂಪಂ ದೀಪಂ ಚ ಘಂಟಾಂ ಚ ದದ್ಯಾದ್ದೇವಸ್ಯ ಶಕ್ತಿತಃ ॥ ೧೪ ॥

ಪಶ್ಚಾನ್ನಿವೇದ್ಯ ನೈವೇದ್ಯಂ ಸ್ತುತ್ವಾ ಸ್ವಭವನಂ ವ್ರಜೇತ್ ।
ಸುಸಮಿದ್ಧಂ ತತಃ ಕೃತ್ವಾ ಪೂಜಯೇಜ್ಜಾತವೇದಸಂ ॥ ೧೫ ॥

ಪ್ರತಿನಕ್ತ ತಥಾಚಾರ್ಯಂ ಭೋಜಯೇನ್ಮಿಥುನಾನಿ ಚ ।
ಹೇಮವಸ್ತ್ರಾದಿದಾನೇನ ಯಥಾಶಕ್ತಿ ಕ್ಷಮಾಪಯೇತ್ ॥ ೧೬ ॥

ಏವಂ ವಿಸೃಜ್ಯ ತಾನ್ಸರ್ವಾನ್ಸಾರ್ಧಂ ಬಂಧುಜನೈಃ ಸ್ವಯಂ ।
ಆಶಯಿತ್ವಾ ಪಂಚಗವ್ಯಂ ಹೃಷ್ಟೋ ಭುಂಜೀತ ವಾಗ್ಯತಃ ॥ ೧೭ ॥

ಏವಮೇವ ವಿಧಿಂ ಕೃತ್ವಾ ಪ್ರಾರಭೇತಾಧನೋ ಧನೀ ।
ವಿತ್ತಸಾಮರ್ಥ್ಯತಶ್ಚೈವ ಪ್ರತಿಮಾಸಂ ಚ ಕೃತ್ಸ್ನಶಃ ॥ ೧೮ ॥

---

೧೪. ಮತ್ತು ಸ್ವಶಕ್ತ್ಯಾನುಸಾರವಾಗಿ ವಸ್ತ್ರಯುಗ್ಮ, ಪತಾಕಾ, ಪಂಚವರ್ಣದ ಮೇಲ್ಕಟ್ಟುಗಳಿಂದ ಶೃಂಗರಿಸಬೇಕು. ಧೂಪ ದೀಪಗಳನ್ನು ಸಮರ್ಪಿಸುತ್ತಾ ಘಂಟಾನಿನಾದವನ್ನು ಮಾಡಬೇಕು.

೧೫. ಆಮೇಲೆ ಈಶ್ವರನಿಗೆ ನೈವೇದ್ಯ ಸಮರ್ಪಣೆಮಾಡಿ ಸ್ತೋತ್ರ ಪಾಠವನ್ನು ಪಠಿಸಿ, ಸ್ವಗೃಹಕ್ಕೆ ಹೋಗಿ ಪ್ರಜ್ವಲಿತವಾದ ಅಗ್ನಿದೇವನನ್ನು ಅರ್ಚಿಸಬೇಕು.

೧೬. ಅನಂತರ ಪೂರ್ವದಿನವೇ ನಿಮಂತ್ರಿತರಾಗಿ ಉಪವಾಸ ನಿಯಮದಲ್ಲಿರುವ ಬ್ರಾಹ್ಮಣ ದಂಪತಿಗಳು ಮತ್ತು ಆಚಾರ್ಯ ಇವರಿಗೆ ಭೋಜನಮಾಡಿಸಿ ಯಥಾಶಕ್ತಿ ಸ್ವರ್ಣವಸ್ತ್ರಾದಿಗಳನ್ನು ಅವರಿಗೆ ದಾನಮಾಡಬೇಕು.

೧೭. ಮತ್ತು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ ಅವರನ್ನು ಕಳುಹಿಸಿ ಬಂಧುಜನರಿಂದೊಡಗೂಡಿ ಪಂಚಗವ್ಯ ಪ್ರಾಶನಮಾಡಿ ಮೌನವ್ರತದಿಂದ ಸಂತೋಷವಾಗಿ ಭೋಜನಮಾಡಬೇಕು.

೧೮. ಧನಿಕನಾಗಲಿ ಅಥವಾ ದರಿದ್ರನಾಗಿರಲಿ ಇದೇ ವಿಧಿಯನ್ನನುಸರಿಸಿ ನಿಯಮಪೂರ್ವಕವಾಗಿ ಸ್ವವಿತ್ತಾನುಸಾರವಾಗಿ ಪ್ರತಿ ತಿಂಗಳೂ ಆಚರಿಸಬೇಕು.

ವಿತ್ತಹೀನೋ ಯಥಾ ಕಶ್ಚಿಚ್ಛ್ರದ್ಧಯಾ ಚ ಪುನಃ ಪುನಃ ।
ಪುಷ್ಪಾರ್ಚನವಿಧಾನೇನ ಸರ್ವಮೇತತ್ಸಮಾಚರೇತ್ ॥ ೧೯ ॥

ಪ್ರತಿಮಾಸಮುಪೋಷ್ಯೈವಂ ಪ್ರತಿಪತ್ಕಾರ್ತಿಕಾವಧೌ ।
ಪಾರಯೇತ್ತಂ ಹುತಂ ಪಾರ್ಥ ಪ್ರಾರಂಭವಿಧಿನಾ ಸ್ಫುಟಂ ॥ ೨೦ ॥

ದ್ವಿತೀಯೇ ಯೇ ಪಂಚದಶ್ಯಾಂ ಕೃತ್ವಾ ನಕ್ತಂ ನರಾಧಿಪಃ ।
ಪ್ರತಿಪತ್ಸದ್ವಿತೀಯಾ ಚೇತ್ತಸ್ಯಾಮುಪವಸೇತ್ಸುಧೀಃ ॥ ೨೧ ॥

ದ್ವಿತೀಯೋಪವಸೇಚ್ಛುಕ್ಲಾ ತತಃ ಪ್ರಭೃತಿ ವತ್ಸರಂ ।
ಪ್ರಾರಂಭವಿಧಿನಾ ಚೈವಂ ದ್ವಿತೀಯಾಮಪಿ ಪಾರಯೇತ್ ॥ ೨೨ ॥

ಉಪವಾಸದ್ವಯಂ ಕೃತ್ವಾ ತೃತೀಯಾಂ ಪ್ರಾರಭೇತ್ತತಃ ।
ಅನೇನ ಕ್ರಮಯೋಗೇನ ಯಾವದ್ವರ್ಷಂ ಸಮಾಪ್ಯತೇ ॥ ೨೩ ॥

---

೧೯. ದರಿದ್ರನಾದವನು ಶ್ರದ್ಧಾಯುಕ್ತನಾಗಿ ಸಮಸ್ತಕ್ಕೂ ಪ್ರತಿನಿಧಿಯಾಗಿ ಪುಷ್ಪಾರ್ಚನ ವಿಧಾನದಿಂದಲೇ ಈ ವ್ರತವನ್ನು ಮಾಡಬಹುದು.

೨೦. ಮಾರ್ಗಶಿರದಲ್ಲಿ ಪ್ರಾರಂಭಿಸಿ ಕ್ರಮವನ್ನನುಸರಿಸಿ ಮುಂದಿನ ಕಾರ್ತೀಕ ಪ್ರತಿಪತ್ ಪರ್ಯಂತವಾಗಿ ಪ್ರತಿಮಾಸದ ಪ್ರತಿಪತ್ತಿನಲ್ಲಿಯೂ ಉಪೋಷ್ಯವನ್ನಾಚರಿಸಿ ಮರುದಿನ ಬ್ರಾಹ್ಮಣರಿಗೆ ಪಾರಣೆಮಾಡಿಸಿ ಅನಂತರ ತಾನು ಭುಂಜಿಸಬೇಕು.

೨೧. ದ್ವಿತೀಯ ವರ್ಷದಲ್ಲಿ ಪ್ರತಿಪತ್ತಿಗೆ ಉಪರಿಯಾಗಿ ದ್ವಿತೀಯಾತಿಥಿ ಇದ್ದರೆ ಪೂರ್ಣಿಮೆಯಲ್ಲೇ ನಕ್ತಭೋಜನಮಾಡಿ ದ್ವಿತೀಯಾ ತಿಥಿಯಲ್ಲಿ ಉಪವಾಸ ಮಾಡಬೇಕು.

೨೨. ಆ ಮೇಲೆ ಒಂದು ವರ್ಷದ ಪರ್ಯಂತ ಶುಕ್ಲಪಕ್ಷದ ದ್ವಿತೀಯಾದಲ್ಲೇ ಹಿಂದೆ ಮಾಡಿದ ಕ್ರಮದಲ್ಲಿಯೇ ಉಪವಾಸ ಮಾಡಬೇಕು.

೨೩. ಹೀಗೆ ಎರಡು ವರ್ಷ ಪರ್ಯಂತ ಉಪವಾಸವ್ರತವಾದ ಮೇಲೆ ಆ ಮುಂದಿನ ವರ್ಷ ತೃತೀಯಾ ತಿಥಿಯಲ್ಲಿ ವ್ರತ ಪ್ರಾರಂಭಿಸಬೇಕು.

**ಕೃತ್ವೈವಂ ಷೋಡಶೇ ವರ್ಷೇ ಪೂರ್ಣಮಾಸ್ಯಾಂ ಸಮುದ್ಯತಃ ।**
**ಪೂರ್ವವದ್ದೇವಮಭ್ಯರ್ಚ್ಯ ಕೃಶಾನುಂ ಚಾಭಿತರ್ಪ್ಯ ಚ ॥ ೨೪ ॥**

**ಹೇಮಶೃಂಗೀಂ ರೌಪ್ಯಖುರಾಂ ಸಘಂಟಾಂ ಕಾಂಸ್ಯದೋಹನಾಂ ।**
**ಮಹಾದೇವಾಯ ಗಾಂ ದದ್ಯಾದ್ದೀಕ್ಷಿತಾಯ ದ್ವಿಜಾಯ ವೈ ॥ ೨೫ ॥**

**ಶಿವಭಕ್ತಿರತಾನ್ವಿಪ್ರಾನ್ವಿಶುದ್ಧಾಂಶ್ಚೈವ ಷೋಡಶ ।**
**ವಸ್ತ್ರಾಭರಣದಾನೈಶ್ಚ ಶಕ್ತ್ಯಾ ಸಂಪೂಜಯೇದ್ವ್ರತೀ ॥ ೨೬ ॥**

**ಬ್ರಾಹ್ಮಣಾಂಶ್ಚ ಯಥಾಶಕ್ತ್ಯಾ ಭೋಜಯೇದಪರಾನಪಿ ।**
**ಅನ್ಯೇಷಾಂ ಚ ಕ್ಷುಧಾರ್ತಾನಾಂ ದದ್ಯಾದ್ದಾನಂ ಯಥೇಚ್ಛಯಾ ॥ ೨೭ ॥**

**ಬೃಹತ್ತಪೋವ್ರತಂ ಚೈವ ಬ್ರಹ್ಮಘಾದ್ಯಘಶೋಷಣಂ ।**
**ಭೂರ್ಭುವಾದಿಷು ಲೋಕೇಷು ಭೂರಿಭೋಗಪ್ರದಂ ನೃಣಾಂ ॥ ೨೮ ॥**

---

೨೪. ಈ ಕ್ರಮವಾಗಿ ಷೋಡಶ ವರ್ಷಗಳು ಪೂರ್ತಿಯಾದ ಮೇಲೆ ಪೂರ್ಣಿಮಾದಿನ ಮೊದಲು ಹೇಳಿದಂತೆ ಈಶ್ವರಾರ್ಚನೆಯನ್ನು ಮಾಡಿ ಬಳಿಕ ಅಗ್ನಿಯ ಆರಾಧನೆ ಹೋಮಾದಿಗಳನ್ನು ಮಾಡಿ ತೃಪ್ತಿಪಡಿಸಬೇಕು.

೨೫. ಆಗ ಈಶ್ವರ ಪ್ರೀತ್ಯರ್ಥವಾಗಿ ಸುವರ್ಣದ ಶೃಂಗಗಳಿಂದಲೂ ರಜತದ ಗೊರಸುಗಳಿಂದಲೂ ಘಂಟೆಯಿಂದಲೂ ಕೂಡಿ ಕಾಂಸ್ಯದೋಹನಪಾತ್ರೆಸಮೇತವಾದ ಗೋವನ್ನು ಶ್ರೌತಕರ್ಮಪರನಾದ ಬ್ರಾಹ್ಮಣನಿಗೆ ದಾನಮಾಡಬೇಕು.

೨೬. ಮತ್ತು ಶಿವಪೂಜಾಧುರಂಧರರೂ ಪರಿಶುದ್ಧರೂ ಆದ ಷೋಡಶ ಬ್ರಾಹ್ಮಣರಿಗೆ ಸ್ವಶಕ್ತ್ಯಾನುಸಾರವಾಗಿ ವಸ್ತ್ರಾಭರಣ ದಾನಾದಿಗಳನ್ನು ಮಾಡಿ ಪೂಜಿಸಬೇಕು.

೨೭. ಇತರ ಕ್ಷುಧಾರ್ತರಾದ ಬ್ರಾಹ್ಮಣರಿಗೂ ಭೋಜನಮಾಡಿಸಿ ಸ್ವಶಕ್ತ್ಯಾನುಸಾರವಾಗಿ ದಾನ, ದಕ್ಷಿಣೆಗಳನ್ನು ಕೊಡಬೇಕು.

೨೮. ಈ ಬೃಹತ್ತಪೋವ್ರತವು ಮಾನವನಿಗೆ ಬ್ರಹ್ಮಹತ್ಯಾದಿ ಮಹಾಪಾಪ ಶೋಧಕವಾದುದಲ್ಲದೆ ಭೂರ್ಭುವಾದಿ ಲೋಕಗಳಲ್ಲಿ ಬಹುಭೋಗ ಪ್ರದಾಯಕವಾಗಿದೆ.

ಚತುರ್ಣಾಮಪಿ ವರ್ಣಾನಾಂ ಸ್ವರ್ಗಸೋಪಾನವತ್ ಸ್ಥಿತಂ ।
ನ ಕುರ್ಯಾದ್ಯೋ ಧನಂ ಪ್ರಾಪ್ಯ ಸ ಮುಷ್ಟೋ ನಷ್ಟಚೇತನಃ ॥ ೨೯ ॥

ಧನ್ಯಮಾಯುಃಪ್ರದಂ ಪುಣ್ಯಂ ರೂಪಸೌಭಾಗ್ಯವರ್ಧನಂ ।
ಸ್ತ್ರೀಪುಂಸಯೋಶ್ಚ ನಿರ್ದಿಷ್ಟಂ ವ್ರತಮೇತತ್ಪುರಾತನಂ ॥ ೩೦ ॥

ವಿಧವಯಾಪಿ ಚ ಕರ್ತವ್ಯಂ ಭೂಯೋಽವೈಧವ್ಯಹೇತವೇ ।
ಸಧವಯಾಪಿ ಚ ಕರ್ತವ್ಯಮವಿಯೋಗಾಯ ಸದ್ವ್ರತಂ ॥ ೩೧ ॥

ಉಪೋಷ್ಯ ಪ್ರತಿಮಾಸಂ ತು ಭುಂಜೀತ ಬ್ರಾಹ್ಮಣೈಃ ಸಹ ।
ಏತದ್ದ್ವಿತ್ರಿ ಚತುರ್ಭಿರ್ವಾ ಸ್ವಶಕ್ತ್ಯಾ ಪಾಂಡುನಂದನ ॥ ೩೨ ॥

---

೨೯. ಇದು ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೂ ಸ್ವರ್ಗಸೋಪಾನದಂತಿದೆ. ಧನಿಕನಾಗಿದ್ದು ಯಾವಾತನು ಈ ವ್ರತವನ್ನಾಚರಿಸುವುದಿಲ್ಲವೋ ಅಂತಹವನು ತನ್ನ ಶ್ರೇಯಸ್ಸಂಪಾದನೆಗೆ ತಾನೇ ಮೋಸಹೋದ ಮೂಢನು ಎಂದು ಭಾವಿಸಬೇಕು.

೩೦. ಪ್ರಾಚೀನವಾದ ಈ ವ್ರತವು ಅನುಷ್ಠಾತೃವಿಗೆ ಕೃತಾರ್ಥತೆಯನ್ನುಂಟುಮಾಡಿ ಆಯುಸ್ಸನ್ನೂ ಧನ, ರೂಪ, ಪುಣ್ಯ ಸೌಭಾಗ್ಯಗಳನ್ನೂ ವೃದ್ಧಿಪಡಿಸುವುದು. ಇದನ್ನು ಸ್ತ್ರೀಯರಾಗಲಿ ಪುರುಷರಾಗಲಿ ಆಚರಿಸಬಹುದು.

೩೧. ಮುಂದಿನ ಜನ್ಮಾದಲ್ಲಿ ವೈಧವ್ಯ ನಿವಾರಣೆಯಾಗುವುದಕ್ಕೋಸ್ಕರ ವಿಧವೆಯೂ ಆಚರಿಸಬಹುದು ಪತಿವಿಯೋಗವಾಗದೇ ಸೌಮಂಗಲ್ಯ ಸ್ಥಿರವಾಗಿರಲೆಂಬ ಉದ್ದೇಶದಿಂದ ಸುಮಂಗಲಿಯರೂ ಮಾಡಬಹುದು.

೩೨. ಓ ಯುಧಿಷ್ಠಿರನೇ ! ಪ್ರತಿಮಾಸದಲ್ಲೂ ಈ ರೀತಿ ಉಪವಾಸಮಾಡಿ ಸ್ವಶಕ್ತ್ಯಾನುಸಾರವಾಗಿ ನಾಲ್ವರೋ, ಮೂವರೋ, ಇಬ್ಬರೋ ಅಥವಾ ಒಬ್ಬನೋ ಬ್ರಾಹ್ಮಣನ ಜೊತೆಯಲ್ಲಿ ಪಾರಣೆಮಾಡಬೇಕು.

ಅಂತೇ ಚಾಂತೇ ಸುವರ್ಣಾನಾಂ ಪ್ರಾರಂಭವಿಧಿನಾಚರೇತ್ ।
ಪುಣ್ಯಸಂಭಾರಮನ್ವಿಚ್ಛನ್ಗಮಯಿತ್ವಾ ಶಿವಾಲಯಂ ॥ ೩೩ ॥

ವ್ರತವಿಘ್ನೇ ಮಹಾರಾಜ ಜಾತೇ ದೈವಾತ್ಕಥಂಚನ ।
ತಾವತ್ಯಸ್ತಿಥಯಶ್ಚಾನ್ಯಾಃ ಸಮುಪೋಷ್ಯಾಃ ಸಮಾಪ್ತಯೇ ॥ ೩೪ ॥

ಅಥ ಶೀಘ್ರತರಂ ಕಶ್ಚಿದ್ವ್ರತಂ ಕರ್ತುಂ ಸಮುದ್ಯತಃ ।
ವಿಧಿನಾನೇನ ರಾಜೇಂದ್ರ ತೇನ ಗ್ರಾಹ್ಯಂ ತಿಥಿದ್ವಯಂ ॥ ೩೫ ॥

ಅಂತೇ ಚಾಂತೇ ಚ ವರ್ಷಾಣಾಂ ಪ್ರಾರಂಭ ವಿಧಿನಾಚರೇತ್ ।
ಅಥಾರಬ್ಧೇ ವ್ರತೇ ಕಶ್ಚಿದಸಮಾಪ್ತೇ ಮ್ರಿಯೇತ ಚೇತ್ ॥ ೩೬ ॥

ಸೋಽಪಿ ತತ್ಫಲಮಾಪ್ನೋತಿ ಸತ್ಯಾರಂಭಪ್ರಭಾವತಃ ।
ವಾಚಕಾಃ ಶ್ರಾವಕಾಶ್ಚೈವ ವ್ರತಸ್ಯಾಸ್ಯ ಯುಧಿಷ್ಠಿರ ।
ಭವಂತಿ ಪುತ್ರಸಂಶ್ಲಿಷ್ಟಾಃ ಶಿವಧ್ಯಾನಾನುಭಾವತಃ ॥ ೩೭ ॥

---

೩೩. ಪ್ರಾರಂಭ ಕ್ರಮವನ್ನನುಸರಿಸಿ ಕೊನೆಯವರೆಗೂ ಪೂಜಾ ಸಂಭಾರಗಳನ್ನು ಸಂಗ್ರಹಿಸಿ ಶಿವಾಲಯಕ್ಕೆ ಹೋಗಿಯೇ ಶಿವಪೂಜೆಯನ್ನು ಮಾಡಬೇಕು.

೩೪. ಎಲೈ ಮಹಾರಾಜನೇ! ದೈವಾತ್ ಮಧ್ಯೆ ವ್ರತವಿಘ್ನವಾಗಿ ನಿಂತರೆ ವ್ರತಸಮಾಪ್ತಿಗೆ ಎಷ್ಟುದಿನ ಕಮ್ಮಿಯಾಗಿದೆಯೋ ಅಷ್ಟುದಿನ ಹೆಚ್ಚಾಗಿ ಉಪವಾಸವನ್ನಾಚರಿಸಬೇಕು.

೩೫. ಯಾವನಾದರೂ ಈ ವ್ರತವನ್ನು ಷೋಡಶ ವರ್ಷದ ಒಳಗೇ ಶೀಘ್ರವಲ್ಲಾಚರಿಸಬೇಕೆಂದಿದ್ದರೆ, ಅವನು ಪೂರ್ವೋಕ್ತ ಪ್ರಕಾರವಾಗಿಯೇ ಎರಡೆರಡು ತಿಥಿ ಹೆಚ್ಚಾಗಿ ಉಪವಾಸಮಾಡಿ ಪೂರೈಸಬಹುದು.

೩೬. ಯಾವನಾದರೂ ಈ ವ್ರತವನ್ನಾರಂಭಿಸಿ ಸಮಾಪ್ತಿ ಹೊಂದುವುದರೊಳಗಾಗಿ ಮಧ್ಯೆ ಮೃತನಾದರೆ ಅವನೂ ಈ ವ್ರತ ಪ್ರಾರಂಭ ಮಹಾತ್ಮೆಯಿಂದಲೇ ವ್ರತದ ಸಂಪೂರ್ಣ ಫಲವನ್ನು ಹೊಂದುವನು,

೩೭. ಎಲೈ ಯುಧಿಷ್ಠಿರನೇ ! ಈ ವ್ರತಪ್ರತಿಪಾದಕ ಗ್ರಂಥವನ್ನು ಪಠನ ಮಾಡುವವರೂ, ಇತರರಿಗೆ ಪಠಣಮಾಡಿಸುವವರೂ, ಶಿವಮಹಾತ್ಮ್ಯೆಯಿಂದ ಸತ್ಪುತ್ರವಂತರಾಗುವರು.

ಪುಣ್ಯಂ ಬೃಹತ್ತಪ ಇದಂ ವ್ರತಮಾದರಾದ್ಯೇ
ಕುರ್ವಂತಿ ಷೋಡಶಸಮಾ ನಿರತಾಃ ಸ್ವಧರ್ಮೇ ।
ತೇ ಭಾನುಮಂಡಲಮಭೇದ್ಯಮಚಿಂತ್ಯಮಾದ್ಯಂ
ಭಿತ್ವಾ ಪ್ರಯಾಂತಿ ಶಶಿಶೇಖರಪಾದಮೂಲಂ ॥ ೩೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಬೃಹತ್ತಪೋ ವ್ರತವರ್ಣನಂ
ನಾಮ ದ್ವಾದಶೋಽಧ್ಯಾಯಃ.



---

೩೮. ಪುಣ್ಯಪ್ರದವಾದ ಈ ಬೃಹತ್ತಪೋವ್ರತವನ್ನು ಷೋಡಶವರ್ಷ ಪರ್ಯಂತ ಸ್ವಧರ್ಮನಿರತರಾಗಿ ಯಾರು ಅತ್ಯಾದರದಿಂದ ಆಚರಿಸುವರೋ ಅಂಥವರು ಅಚಿಂತ್ಯಾಭೇದ್ಯವಾದ ಸೂರ್ಯಮಂಡಲವನ್ನು ಭೇದಿಸಿ ಶ್ರೀ ಚಂದ್ರಮೌಳಿಯ ಪಾದಮೂಲವನ್ನು ಹೊಂದುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಬೃಹತ್ತಪೋವ್ರತ
ವರ್ಣನೆಯೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
# ತ್ರಯೋದಶೋಽಧ್ಯಾಯ

॥ ಯುಧಿಷ್ಠಿರ ಉವಾಚ ॥

ಜಾತಿಸ್ಮರತ್ವಂ ದೇವೇಶ ದುಷ್ಪ್ರಾಪ್ಯಮಿತಿ ಮೇ ಮತಿಃ ।
ತದಹಂ ಜ್ಞಾತುಮಿಚ್ಛಾಮಿ ಪ್ರಾಪ್ಯತೆ ಕೇನ ಕರ್ಮಣಾ ॥ ೧ ॥

ವರ ಪ್ರದಾನಾದ್ದೇವಾನಾಮ್ಮೃಷೀಣಾಂ ಸೇವನೇನ ವಾ ।
ತೀರ್ಥಸ್ನಾನೇನ ವಾ ದೇವ ತಪೋಹೋಮವ್ರತೇನ ವಾ ॥ ೨ ॥

॥ ಶ್ರೀ ಕೃಷ್ಣ ಉವಾಚ ॥

ಚತ್ವಾರಿ ರಾಜನ್ ಭದ್ರಾಣಿ ಸಮುಪೋಷ್ಯಾಣಿ ಯತ್ನತಃ ।
ತತ್ಪ್ರಭಾವಾದ್ಭವೇನ್ನೂನಂ ರಾಜನ್ ಜಾತಿಸ್ಮರೋ ನರಃ ॥ ೩ ॥

---

### ಹದಿಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—" ಎಲೈ ದೇವನೇ ! ಜಾತಿಸ್ಮರತ್ವವು ದುಷ್ಪ್ರಾಪ್ಯವೆಂದು ತಿಳಿದಿದ್ದೇನೆ. ಅಂಥ ಪೂರ್ವಜನ್ಮ ವೃತ್ತಾಂತ ಸ್ಮರಣೆಯು ಪುರುಷನಿಗೆ ಕರ್ಮಾಚರಣೆಯಿಂದ ಲಭಿಸುವುದೇ ?

೨. ದೇವತೆಗಳ ವರಪ್ರದಾನದಿಂದಲೋ, ಮಹರ್ಷಿ ಸೇವೆಯಿಂದಲೋ, ತೀರ್ಥಸ್ನಾನದಿಂದಲೋ, ತಪೋಹೋಮ ವ್ರತಾನುಷ್ಠಾನದಿಂದಲೋ, ಯಾವುದರಿಂದ ಬರುವುದು ಎಂಬುದನ್ನು ಹೇಳು '' ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—" ಎಲೈ ರಾಜನೇ ! ನಾಲ್ಕು ಭದ್ರ ತಿಥಿಗಳಲ್ಲಿಯೂ ಪ್ರಯತ್ನಪೂರ್ವಕವಾಗಿ ಉಪವಾಸವಿದ್ದು ಭದ್ರೋಪವಾಸ ವ್ರತವನ್ನಾಚರಿಸಿದರೆ ಅದರ ಮಹಾತ್ಮ್ಯೆಯಿಂದ ಪುರುಷನು ನಿಯತವಾಗಿ ಜಾತಿಸ್ಮರನಾಗುವನು. ''

ಶುಭೋದಯಃ ಪುರಾ ವೈಶ್ಯೋ ಬಭೂವ ಯಮುನಾ ತಟೇ ।
ತೇನ ವ್ರತಮಿದಂ ಚೀರ್ಣಂ ಮೃತಃ ಕಾಲಕ್ರಮಾದಸೌ ॥ ೪ ॥

ಸಂಜಯಸ್ಯ ಸುತೋ ಜಾತಃ ಸ್ವರ್ಣಷ್ಠೀವೀತಿ ವಿಶ್ರುತಃ ।
ವ್ರತಪ್ರಭಾವಾಜ್ಜಾತಿಜ್ಞಃ ಸ ಚ ಚೋರೈರ್ನಿಪಾತಿತಃ ॥ ೫ ॥

ನಾರದಸ್ಯ ಪ್ರಭಾವೇಣ ಪುನರುಜ್ಜೀವ್ಯತೇಽಪ್ಯಸೌ ।
ಸಸ್ಮಾರ ಪೂರ್ವವೃತ್ತಾಂತಂ ಸಕಲಂ ವ್ರತಧರ್ಮತಃ ॥ ೬ ॥

॥ ಯುಧಿಷ್ಠಿರ ಉವಾಚ ॥

ಸಂಜಯಸ್ಯ ಕಥಂ ಪುತ್ರಃ ಸ್ವರ್ಣಷ್ಠೀವೀತಿ ವಾ ಕಥಂ ।
ದಸ್ಯುಭಿಶ್ಚ ಕಥಂ ನೀತೋ ಮೃತ್ಯುಂ ವೈ ಜೀವಿತಃ ಕಥಂ ॥ ೭ ॥

---

೪. "ಪೂರ್ವದಲ್ಲಿ ಯಮುನಾ ತೀರದಲ್ಲಿ ಸುಕೃತಿಯಾದ ಸಂಜಯನೆಂಬ ವೈಶ್ಯನಿದ್ದನು. ಅವನು ಭದ್ರೋಪವಾಸ ವ್ರತವನ್ನಾಚರಿಸಿ ಕಾಲಕ್ರಮದಲ್ಲಿ ಮೃತನಾದನು.

೫. "ಈ ವ್ರತಪ್ರಭಾವದಿಂದ ಆ ಸಂಜಯ ವೈಶ್ಯನಿಗೆ ಸ್ವರ್ಣಷ್ಠೀವಿಯಾದ ವಿಖ್ಯಾತ ಪುತ್ರನು ಜನಿಸಿದನು. ಆ ಮಗನು ಈ ವ್ರತಪ್ರಭಾವದಿಂದಲೇ ಜಾತಿಸ್ಮರನಾಗಿದ್ದನು."

೬. "ಕದಾಚಿತ್ ಚೋರರು ಅವನನ್ನು ಕೊಲೆಮಾಡಿದರು. ಆ ಮೇಲೆ ನಾರದಮಹರ್ಷಿಯ ಪ್ರಭಾವದಿಂದ ತಿರುಗಿ ಬದುಕಿಸಲ್ಪಟ್ಟನು. ಈ ಭದ್ರೋಪವಾಸ ವ್ರತಾನುಷ್ಠಾನದಿಂದಲೇ ಪುನಃ ಮೊದಲಿನಂತೆ ಪೂರ್ವ ಜನ್ಮ ವೃತ್ತಾಂತವನ್ನು ಸ್ಮರಿಸಿಕೊಳ್ಳುವವನಾಗಿದ್ದನು" ಎಂದನು.

೭- ಯುಧಿಷ್ಠಿರನು ಕೇಳುತ್ತಾನೆ—ಎಲೈ ಶ್ರೀ ಕೃಷ್ಣನೇ ! ಸಂಜಯನಿಗೆ ಹೇಗೆ ಅಂಥ ಪುತ್ರಜನನವಾಯಿತು ? ಆ ಪುತ್ರನು ಸುವರ್ಣೋತ್ಪಾದಕನಾಗಲು ಕಾರಣವೇನು ? ಅವನು ಚೋರರಿಂದ ಹೇಗೆ ಸಂಹೃತನಾದನು ? ಹೇಗೆ ಮತ್ತೆ ಬದುಕಿ ಬಂದನು ? ಎಂಬುದನ್ನು ವಿವರಿಸಿ ಹೇಳು ಎಂದನು.

॥ ಶ್ರೀ ಕೃಷ್ಣ ಉವಾಚ ॥

ಸಂಜಯೋ ನಾಮ ರಾಜಾಸೀತ್ಕುಶಾವತ್ಯಾಂ ನರಾಧಿಪ ।
ದೇವರ್ಷೀ ತಸ್ಯ ಮಿತ್ರೇ ಚ ಸದಾ ನಾರದಪರ್ವತೌ ॥ ೮ ॥

ಏಕದಾ ಸಂಜಯಗೃಹಂ ಸಂಪ್ರಾಪ್ತೌ ತೌ ಯದೃಚ್ಛಯಾ ।
ಸ್ವಾಗತಾಸನದಾನಾದ್ಯೈರುಪಚಾರೈರಪೂಜಯತ್ ॥ ೯ ॥

ತೇಷಾಮಥೋಪವಿಷ್ಟಾನಾಂ ಪೂರ್ವವೃತ್ತಾಂತ ಭಾಷಿಣೌ ।
ಸಂಜಯಸ್ಯ ಸುತಾ ಪ್ರಾಪ್ತಾ ತರುಣೀ ಪಿತುರಂತಿಕಂ ॥ ೧೦ ॥

ಪರ್ವತಃ ಪ್ರಾಹ ರಾಜಾನಂ ಕನ್ಯೇಯಂ ವರವರ್ಣಿನೀ ।
ಗುಪ್ತಗುಲ್ಫಾ ಸಂಹತೋರೂಃ ಪೀನಶ್ರೋಣಿಪಯೋಧರಾ ॥ ೧೧ ॥

---

೮. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಕುಶಾವತೀ ಪಟ್ಟಣದಲ್ಲಿ ಸಂಜಯನೆಂಬ ರಾಜನಿದ್ದನು. ಅವನಿಗೆ ದೇವರ್ಷಿಗಳಾದ ನಾರದ ಮತ್ತು ಪರ್ವತ ಎಂಬವರು ಮಿತ್ರರಾಗಿದ್ದರು.

೯. ಒಂದು ಸಮಯದಲ್ಲಿ ಆ ನಾರದ ಪರ್ವತರು ಯದೃಚ್ಛಯಾ ಸಂಜಯನ ಅರಮನೆಗೆ ಬಂದರು. ಆಗ ಸಂಜಯನು ಅವರನ್ನು ಸ್ವಾಗತವಚನ ಆಸನಾದ್ಯುಪಚಾರಗಳಿಂದ ಗೌರವಿಸಿದನು.

೧೦. ಅನಂತರ ಅವರೆಲ್ಲರೂ ಆಸನವನ್ನಲಂಕರಿಸಿದ ಮೇಲೆ ಪೂರ್ವಜನ್ಮ ವೃತ್ತಾಂತವನ್ನು ಹೇಳುವವಳೂ ಯುವತಿಯೂ ಆಗಿದ್ದ ಸಂಜಯನ ಮಗಳು ತಂದೆಯ ಹತ್ತಿರಕ್ಕೆ ಬಂದಳು.

೧೧. ಆಗ ಪರ್ವತನು ಅವಳನ್ನು ನೋಡಿ ಎಲೈ ರಾಜನೇ ! ಈ ಕನ್ನಿಕೆಯು ಅತಿ ಸುಂದರಿಯಾಗಿದ್ದಾಳೆ. ಗುಪ್ತವಾದ ಹರಡುಳ್ಳವಳಾಗಿಯೂ, ವಿಸ್ತಾರವಾದ ತೊಡೆಯುಳ್ಳವಳಾಗಿಯೂ, ದಪ್ಪವಾದ ಶ್ರೋಣಿ ಮತ್ತು ಕುಚಗಳಿಂದ ಕೂಡಿದವಳಾಗಿಯೂ ಇದ್ದಾಳೆ.

ಪದ್ಮಪತ್ರೇಕ್ಷಣನಖಾ ಪದ್ಮಕಿಂಜಲ್ಕಸಪ್ರಭಾ ।
ಆಕುಂಚಿತಮೃದುಸ್ನಿಗ್ಧೈಃ ಕೇಶೈರವಿತತೈರ್ಘನೈಃ ॥ ೧೨ ॥

ಸವಿಲಾಸಾ ಗಜಗತಿಃ ಸುನಾಸಾ ಕೋಕಿಲಸ್ವರಾ ।
ಅಹೋ ರೂಪಮಹೋ ಧೈರ್ಯಮಹೋ ಲಾವಣ್ಯಮುತ್ತಮಂ ॥ ೧೩ ॥

ತಿಲಪುಷ್ಪಸ್ಫುಟಾ ನಾಸಾ ರೂಪಂ ಸಂಪರಿಲಕ್ಷ್ಯತೇ ।
ಕಸ್ಯೇಯಂ ಭದ್ರಿಕಾ ಭದ್ರಾ ಮಮಾತಿಹೃದಯಂಗಮಾಃ ॥ ೧೪ ॥

ಏವಂ ಬ್ರುವಾಣಂ ತಂ ವಿಪ್ರಂ ವಿಸ್ಮಯೋತ್ಫುಲ್ಲಲೋಚನಂ ।
ಸ ರಾಜಾ ಪ್ರಾಹ ಕನ್ಯೇಯಂ ದುಹಿತಾ ಮಮ ಪರ್ವತ ॥ ೧೫ ॥

---

೧೨. ಪದ್ಮಪತ್ರಸಮಾನವಾದ ನೇತ್ರವೂ ಮತ್ತು ನಖವೂ ಉಳ್ಳವಳಾಗಿಯೂ, ಪದ್ಮಕೇಸರಕ್ಕೆ ಸದೃಶವಾದ ಪ್ರಭೆಯುಳ್ಳವಳಾಗಿಯೂ, ಮೃದುವಾಗಿಯೂ, ಗುಂಗುರುಗುಂಗುರಾಗಿ ಮಿಂಚುತ್ತಲೂ ಇರುವ ಘನಕೇಶಗಳುಳ್ಳವಳಾಗಿಯೂ ಇದ್ದಾಳೆ.

೧೩. ಮತ್ತು ವಿಲಾಸವತಿಯೂ, ಗಜಗಮನೆಯೂ, ಸುಂದರವಾದ ನಾಸಿಕವುಳ್ಳವಳೂ, ಕೋಕಿಲ ಸ್ವರವುಳ್ಳವಳೂ ಆಗಿರುವಳು. ಆಹಾ ! ಏನಾಶ್ಚರ್ಯಕರವಾದ ರೂಪ ! ಏನು ಧೈರ್ಯ ! ಮತ್ತು ಎಂಥ ಅಪ್ರತಿಮ ಲಾವಣ್ಯ !

೧೪. ತಿಲಪುಷ್ಪ ಸದೃಶವಾದ ನಾಸಿಕೆ, ಇತ್ಯಾದಿಗಳಿಂದ ಕೂಡಿದವಳಾಗಿ ನನ್ನ ಮನಸ್ಸನ್ನು ಆಕರ್ಷಿಸಿರುವ ಈ ಕನ್ನಿಕೆಯು ಯಾರ ಮಗಳು" ಎಂದು ಪ್ರಶ್ನಿಸಿದನು.

೧೫. ವಿಸ್ಮಯೋತ್ಫುಲ್ಲಲೋಚನನಾಗಿ ಈ ರೀತಿ ಕೇಳುತ್ತಿರುವ ಆ ಬ್ರಾಹ್ಮಣನನ್ನು ಕುರಿತು ಆ ರಾಜನು "ಓ ಪರ್ವತನೇ ! ಇವಳು ನನ್ನ ಮಗಳು" ಎಂದು ಉತ್ತರಕೊಟ್ಟನು.

ಅಥೋವಾಚ ನೃಪಂ ಧೀಮಾನ್ನಾರದಃ ಕ್ಷುಭಿತೇಂದ್ರಿಯಃ ।
ರಾಜನ್ನಿವೇಷ್ಟುಕಾಮೋಽಹಂ ಕನ್ಯೇಯಂ ಮಮ ದೀಯತಾಂ ॥ ೧೬ ॥

ಈಪ್ಸಿತಂ ತವ ದಾಸ್ಯಾಮಿ ವರಂ ಮರ್ತ್ಯೇಷು ದುರ್ಲಭಂ ।
ಏವಮುಕ್ತೋ ನಾರದೇನ ಪ್ರೀತಾತ್ಮಾ ಸಂಜಯಸ್ತಥಾ ॥ ೧೭ ॥

ಕೃತಾಂಜಲಿರುವಾಚೇದಂ ಪ್ರಹರ್ಷೋತ್ಫುಲ್ಲಲೋಚನಃ ।
ಪುತ್ರೋ ಮೇ ದೀಯತಾಂ ಕ್ಷಿಪ್ರಮಕ್ಷೀಣಕನಕಾಕರಃ ॥ ೧೮ ॥

ಯಸ್ಯ ಮೂತ್ರಂ ಪುರೀಷಂ ವಾ ಶ್ಲೇಷ್ಮಾಣಂ ಕ್ಷಿಪತಿ ಕ್ಷಿತೌ ।
ಜಾತರೂಪಂ ಹಿ ತತ್ಸರ್ವಂ ಸುವರ್ಣಂ ಭವತು ಸ್ಥಿರಂ ॥ ೧೯ ॥

ಏವಮಸ್ತ್ವಿತಿ ತಂ ರಾಜನ್ನಾರದಃ ಪ್ರತ್ಯಭಾಷತ ।
ಸುವರ್ಣಷ್ಠೀವಿನಂ ಪುತ್ರಂ ದದಾಮಿ ತವ ಸುವ್ರತ ॥ ೨೦ ॥

---

೧೬. ಆ ವೇಳೆಗೆ ಬುದ್ಧಿಶಾಲಿಯಾದ ನಾರದನು ಇಂದ್ರಿಯ ಚಾಪಲ್ಯ ಯುಕ್ತನಾಗಿ " ಓ ರಾಜನೇ ! ನಾನು ಗೃಹಸ್ಥನಾಗಬೇಕೆಂದಿದ್ದೇನೆ. ಅದಕ್ಕಾಗಿ ಈ ಕನ್ನಿಕೆಯನ್ನು ಸತ್ಪಾತ್ರನಾದ ನನಗೆ ದಾನಮಾಡು.

೧೭. ನಿನಗೆ ಅದಕ್ಕೆ ಪ್ರತಿಯಾಗಿ ಮಾನವರಿಗೆ ದುರ್ಲಭವಾದ ಈಪ್ಸಿತ ವರ ಪ್ರದಾನ ಮಾಡುವೆನು '' ಎಂದು ಹೇಳಿದನು. ಆಗ ಸಂಜಯನು ಸಂತುಷ್ಟನಾಗಿ,

೧೮. ಹಾಗೆಯೇ ಆಗಲೆಂದು ಒಪ್ಪಿ ಹರ್ಷೋತ್ಫುಲ್ಲನೇತ್ರವುಳ್ಳವನಾಗಿ ಕೈಜೋಡಿಸಿ " ನನಗೆ ಅನಶ್ವರ ಸುವರ್ಣಕ್ಕೆ ಆಕರದಂತಿರುವ ಪುತ್ರರೂಪವಾದ ವರವನ್ನು ಕ್ಷಿಪ್ರವಾಗಿ ದಯಪಾಲಿಸು '' ಎಂದು ಬೇಡಿದನು.

೧೯. " ಮತ್ತು ಯಾವ ಪುತ್ರನ ಮೂತ್ರ, ಪುರೀಷ ಮತ್ತು ಶ್ಲೇಷ್ಮಗಳು ಭೂಪತನವಾದೊಡನೆಯೇ ಅವೆಲ್ಲವೂ ಶಾಶ್ವತ ಸುವರ್ಣವಾಗಿ ಪರಿಣಮಿಸ ಬಹುದೋ ಅಂಥಾ ಪುತ್ರನನ್ನೇ ವರವಾಗಿ ಕೇಳುವೆನು '' ಎಂದು ಹೇಳಿದನು.

೨೦. ಆಗ ನಾರದನು " ಅಯ್ಯಾ ರಾಜನೇ ! ಹಾಗೆಯೇ ಆಗಲಿ ನಿನಗೆ ಸ್ವರ್ಣಷ್ಠೀವಿಯಾದ ಪುತ್ರನನ್ನು ಕೊಡುವೆನು '' ಎಂದೊಪ್ಪಿ ಭಾಷೆ ಕೊಟ್ಟನು.

ಏವಮುಕ್ತ್ವಾ ಸ ತಾಂ ಕನ್ಯಾಂ ಸಾಲಂಕಾರಾಂ ಸುಮಧ್ಯಮಾಂ ।
ವಿವಾಹಯಾಮಾಸ ತಯಾ ನಾರದೋ ಹೃಷ್ಟಮಾನಸಃ ॥ ೨೧ ॥

ತತ್ತಸ್ಯ ಚೇಷ್ಟಿತಂ ದೃಷ್ಟ್ವಾ ಪರ್ವತಃ ಕ್ರೋಧಮೂರ್ಛಿತಃ ।
ಉವಾಚ ನಾರದಂ ರೋಷಾದ್ದೀಪ್ತಾಕ್ಷಃ ಸ್ಫುರಿತಾಧರಃ ॥ ೨೨ ॥

ಮಯೇಯಂ ಪ್ರಾರ್ಥಿತಾ ಪೂರ್ವಂ ತ್ವಯಾ ಯಸ್ಮಾದ್ವಿವಾಹಿತಾ ।
ತಸ್ಮಾನ್ಮಯಾ ಸಮಂ ಸ್ವರ್ಗಂ ನ ಗಂತಾಸಿ ಕಥಂಚನ ॥ ೨೩ ॥

ದತ್ತಸ್ತ್ವಯಾಸ್ಯ ಯಃ ಪುತ್ರೋ ವರದಾನೇನ ನಾರದ ।
ಸೋಽಪಿ ಚೋರೈರಭಿಹತಃ ಪಂಚತ್ವಮುಪಯಾಸ್ಯತಿ ॥ ೨೪ ॥

---

೨೧. ಬಳಿಕ ನಾರದನು ಕೃಶೋದರಿಯಾಗಿಯೂ, ಅಲಂಕೃತಳಾಗಿಯೂ ಇರುವ ಆ ಕನ್ನಿಕೆಯನ್ನು ತಾನು ವಿವಾಹಮಾಡಿಕೊಂಡು ಅವಳ ಪ್ರಾಪ್ತಿಯಿಂದ ಸಂತುಷ್ಟಚಿತ್ತನಾದನು.

೨೨. ನಾರದನ ಈ ಕುಚೇಷ್ಟೆಯನ್ನು ನೋಡಿ ಪರ್ವತನು ಕ್ರೋಧಾನ್ವಿತನಾಗಿ ದೇಹದ ಮೇಲೆ ಅರಿವಿಲ್ಲದವನಾಗಿ ರೋಷದಿಂದ ಕೆಂಪೇರಿದ ಕಣ್ಣುಳ್ಳವನೂ ನಡುಗುವ ಅಧರವುಳ್ಳವನೂ ಆಗಿ ಹೇಳುತ್ತಾನೆ.

೨೩. "ಎಲವೋ ನಾರದ! ಈ ಕನ್ನಿಕೆಯನ್ನು ನಾನು ಮೊದಲು ಪ್ರಾರ್ಥಿಸಿದವನು. ಅಂಥವಳನ್ನು ನೀನು ವಿವಾಹ ಮಾಡಿಕೊಂಡುದರಿಂದ ನನ್ನ ಜತೆಯಲ್ಲಿ ನಿನಗೆ ಸ್ವರ್ಗಗಮನವಿಲ್ಲದೆ ಹೋಗಲಿ" ಎಂದು ನಾರದನನ್ನು ಶಪಿಸಿದನು.

೨೪. "ಅಲ್ಲದೆ ನೀನು ಈ ರಾಜನಿಗೆ ಯಾವ ಪುತ್ರನನ್ನು ವರರೂಪವಾಗಿ ದಾನಮಾಡಿರುವೆಯೋ ಅವನೂ ಚೋರರಿಂದ ಹೊಡೆಯಲ್ಪಟ್ಟು ಮರಣ ಹೊಂದುವನು" ಎಂದು ಶಪಿಸಿದನು.

ಏವಮುಕ್ತಃ ಪರ್ವತೇನ ನಾರದಃ ಪ್ರಾಹ ದುರ್ಮನಾಃ ।
ನ ತ್ವಂ ಧರ್ಮಂ ವಿಜಾನಾಸಿ ಕಿಂಚಿನ್ಮೂಢೋಽಸಿ ದುರ್ಮತೇ ॥ ೨೫ ॥

ಸಾಮಾನ್ಯಂ ಸರ್ವಭೂತಾನಾಂ ಕನ್ಯಾ ಭವತಿ ಸುವ್ರತ ।
ನ ತಸ್ಯಾ ವರಣೇ ದುಃಖಂ ಪಶ್ಯಂತೀಹ ಬಹುಶ್ರುತಾಃ ॥ ೨೬ ॥

ನ ಸೇವಿತಾಸ್ತ್ವಯಾ ವೃದ್ಧಾಸ್ತೇನ ಮಾಂ ಶಪಸೇ ರುಷಾ ।
ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ಸಪ್ತಮೇ ಪದೇ ॥ ೨೭ ॥

ಯಸ್ಮಾದೇತದವಿಜ್ಞಾಯ ಶಪಸೇ ಮಾಮನಾಗಸಂ ।
ತಸ್ಮಾತ್ತ್ವಮಪ್ಯಹೋ ಸ್ವರ್ಗಂ ನ ಗಂತಾಸಿ ಮಯಾ ವಿನಾ ॥ ೨೮ ॥

ಸಂಜಯಸ್ಯ ಸುತಃ ಶಾಪಾದ್ಯದಿ ಪಂಚತ್ವಮೇಷ್ಯತಿ ।
ಆನಯಿಷ್ಯೇ ತಥಾಪ್ಯೇನಂ ಯಮಲೋಕಾನ್ನ ಸಂಶಯಃ ॥ ೨೯ ॥

---

೨೫. ಪರ್ವತನಿಂದ ಈ ರೀತಿ ಶಪಿಸಲ್ಪಟ್ಟ ನಾರದನು ದುಮ್ಮಾನ ಹೊಂದಿ "ಎಲಾ ದುರ್ಮತಿಯಾದ ಪರ್ವತನೇ! ನೀನು ಸ್ವಲ್ಪವೂ ಧರ್ಮವನ್ನರಿತಿಲ್ಲ. ಮತ್ತು ಅತಿಮೂಢನಾಗಿರುವೆ".

೨೬. ಅಯ್ಯಾ ಸುವ್ರತನೇ! ಕನ್ನಿಕೆಯು ಸರ್ವಜನ ಸಾಧಾರಣಳು. ಆದುದರಿಂದ ತಿಳಿದವರು ಅಂಥ ಕನ್ಯಾವರಣ ವಿಷಯದಲ್ಲಿ ಯಾವ ದೋಷವನ್ನೂ ಗ್ರಹಿಸುವುದಿಲ್ಲ.

೨೭. ನೀನು ಪ್ರಾಜ್ಞರ ಮತ್ತು ವೃದ್ಧರ ಸೇವೆಯನ್ನು ಮಾಡಿದವನಲ್ಲ. ಆದುದರಿಂದಲೇ ಕೇವಲ ಕೋಪದಿಂದ ನನ್ನನ್ನು ಶಪಿಸಿರುವೆ. ಯಾವಾಗಲೂ ವಿವಾಹ ಕಾರ್ಯಗಳು ಸಪ್ತಪದೀಕರಣದಿಂದ ಸ್ಥಿರವಾಗುತ್ತವೆ.

೨೮. ಆದುದರಿಂದ ಸಪ್ತಪದೀಕರಣಾತ್ಪೂರ್ವದಲ್ಲಿ ಭಾರ್ಯಾತ್ವವು ಸಿದ್ಧಿಸುವುದಿಲ್ಲ. ಈ ಧರ್ಮವನ್ನರಿಯದೆ ನಿರಪರಾಧಿಯಾದ ನನ್ನನ್ನು ನೀನು ಶಪಿಸಿದುದರಿಂದ ನಿನಗೂ ನನ್ನ ವಿನಾ ಏಕಾಕಿಯಾಗಿ ಸ್ವರ್ಗಗಮನವಿಲ್ಲದಂತಾಗಲಿ.

೨೯. ಮತ್ತು ನಿನ್ನ ಶಾಪಬಲದಿಂದ ಆ ಸಂಜಯನ ಪುತ್ರನು ಮೃತಿ ಹೊಂದಿದರೆ ನಾನು ಅವನನ್ನು ನಿಶ್ಚಯವಾಗಿಯೂ ಯಮಲೋಕದಿಂದ ಪುನಃ ಕರೆತರುವೆನು" ಎಂದು ಪ್ರತಿ ಶಾಪವನ್ನು ಕೊಟ್ಟನು.

ಏವಂ ಶಪ್ತ್ವಾ ತದಾನ್ಯೋನ್ಯಂ ದೇವರ್ಷೀ ತಾವುಭೌ ಪುನಃ ।
ಪೂಜಿತೌ ಸಂಜಯೇನಾಥ ಜಗ್ಮತುಃ ಸ್ವಾಶ್ರಮಂ ಪ್ರತಿ ॥ ೩೦ ॥

ಅಥಾಸ್ಯ ಸಪ್ತಮೇ ಮಾಸಿ ಜಾತಃ ಪುತ್ರೋ ನೃಪಸ್ಯ ಸಃ ।
ಸ್ವರ್ಣಷ್ಠೀವೀತಿ ನಾಮಾಸ್ಯ ಯಥಾರ್ಥಮಕರೋತ್ಪಿತಾ ॥ ೩೧ ॥

ಜಾತಿಸ್ಮರಃ ಸ್ಮರವಪುಃ ಸುವರ್ಣೋತ್ಪತ್ತಿಕಾರಣಂ ।
ಸರ್ವಭೂತರುತಜ್ಞೋಽಭೂದ್ಭದ್ರವ್ರತ ಫಲಾದಿಹ ॥ ೩೨ ॥

ಮೂತ್ರಶ್ಲೇಷ್ಮಪುರೀಷಾದಿ ಯತ್ಕಿಂಚಿತ್ಕ್ಷಿಪತಿ ಕ್ಷಿತೌ ।
ಜಾಯತೇ ಕನಕಂ ಸರ್ವಂ ಪ್ರಸಾದಾನ್ನಾರದಸ್ಯ ಚ ॥ ೩೩ ॥

ತೇನಾಸೌ ಯಜತೇ ರಾಜಾ ವಿಧಿವದ್ಭೂರಿದಕ್ಷಿಣೈಃ ।
ರಾಜಸೂಯಾದಿಭಿರ್ಯಜ್ಞೈರ್ವಿವಿಧೈರ್ಬ್ರಾಹ್ಮಣೈರ್ವೃತಃ ॥ ೩೪ ॥

---

೩೦. ಆ ಮೇಲೆ ಆ ದೇವರ್ಷಿಗಳಾದ ಪರ್ವತ ನಾರದರಿಬ್ಬರೂ ಸಂಜಯ ರಾಜನಿಂದ ಪೂಜಿತರಾಗಿ ತಮ್ಮ ತಮ್ಮ ಆಶ್ರಮವನ್ನು ಕುರಿತು ಹೋದರು.

೩೧. ಆ ಮೇಲೆ ಏಳನೆಯ ತಿಂಗಳಲ್ಲಿ ಸಂಜಯರಾಜನಿಗೆ ಪುತ್ರಜನನ ವಾಯಿತು. ಆಗ ತಂದೆಯು ಆ ಪುತ್ರನಿಗೆ ಸ್ವರ್ಣಷ್ಠೀವೀ ಎಂದು ಅನ್ವರ್ಥ ವಾಗಿ ನಾಮಕರಣಮಾಡಿದನು.

೩೨. ಮತ್ತು ಸುವರ್ಣೋತ್ಪತ್ತಿ ಹೇತುವಾದ ಆ ಪುತ್ರನು ಭದ್ರೋಪ ವಾಸ ವ್ರತ ಮಹಾತ್ಮ್ಯೆಯಿಂದ ಜಾತಿಸ್ಮರನಾಗಿಯೂ ಮನ್ಮಥ ಸದೃಶವಾದ ಸೌಂದರ್ಯವುಳ್ಳವನಾಗಿಯೂ ಸರ್ವಪ್ರಾಣಿಭಾಷಾವೇತ್ತನೂ ಆಗಿದ್ದನು.

೩೩. ಮತ್ತು ನಾರದರ ವರಪ್ರಸಾದದಿಂದ ಆ ಪುತ್ರನ ಮೂತ್ರ ಶ್ಲೇಷ್ಮ ಪುರೀಷಾದಿಗಳು ಭೂಸ್ಪರ್ಶವಾದೊಡನೆಯೇ ಸುವರ್ಣವಾಗಿ ಪರಿಣಮಿಸು ತ್ತಿದ್ದುವು.

೩೪. ಅದರಿಂದ ಆ ರಾಜನು ಸದಾ ಬ್ರಾಹ್ಮಣಪರಿವೃತನಾಗಿ ಶಾಸ್ತ್ರೋಕ್ತ ರೀತಿಯಲ್ಲಿ ಭೂರಿದಕ್ಷಿಣಾದಿ ಯುಕ್ತವಾದ ರಾಜಸೂಯಾದಿ ವಿವಿಧ ಯಾಗ ಗಳನ್ನು ಮಾಡುತ್ತಿದ್ದನು.

ಬಭಾರ ಭೃತ್ಯಾನನಿಶಂ ಪುಪೋಷ ಸ್ವಜನಾತಿಥೀನ್ ।
ಚಕಾರ ದೇವತಾಗಾರಂ ಸರಶ್ಚಾರಾಮವಾಟಿಕಾಃ ॥ ೩೫ ॥

ಜಾತಸ್ನೇಹಂ ತಥಾ ಪುತ್ರಂ ರರಕ್ಷ ರಕ್ಷಿಭಿರ್ವೃತಃ ।
ರಾಶಯಃ ಕನಕಸ್ಯಾಸ್ಯ ಬಭೂವುರ್ನೃಪತೇಃ ಸುತಾತ್ ॥ ೩೬ ॥

ಅಥಾಸ್ಯ ದಸ್ಯವಃ ಕೇಚಿಚ್ಛ್ರುತ್ವಾ ತಂ ಕನಕಾಕರಂ ।
ಧನಲೋಲುಪಯಾ ಜಘ್ನುರ್ದಾಕ್ಷಿಣಾತ್ಯಾ ಮದೋದ್ಧತಾಃ ॥ ೩೭ ॥

ತಸ್ಮಿನ್ವಿನಷ್ಟೇ ತಸ್ಯ ಷ್ಟಂ ವರದಾನಸಮುದ್ಭವಂ ।
ಕನಕಂ ತದಪಶ್ಯಂತೋ ಜಗ್ಮುರನ್ಯೋನ್ಯತಃ ಕ್ಷಯಂ ॥ ೩೮ ॥

ಪಾತಿತಂ ದಸ್ಯುಭಿಃ ಪುತ್ರಂ ದೃಷ್ಟ್ವಾ ರಾಜಾ ಸುದುಃಖಿತಃ ।
ವಿಲಲಾಪಾಕುಲಮತಿಃ ಸ ಮುಮೋಹ ಪಪಾತ ಚ ॥ ೩೯ ॥

---

೩೫. ಮತ್ತು ಯಾವಾಗಲೂ ಅನೇಕ ಭೃತ್ಯರನ್ನು ಪರಿಗ್ರಹಿಸಿ ಪೋಷಿಸುತ್ತಲೂ, ಸ್ವಜನರನ್ನೂ ಅತಿಥಿಗಳನ್ನೂ ಪೋಷಿಸುತ್ತಲೂ ಇರುವುವಲ್ಲದೆ, ದೇವತಾಯತನ, ತಟಾಕ, ಪುಷ್ಪೋದ್ಯಾನಾದಿಗಳನ್ನೂ ಮಾಡಿಸಿದನು.

೩೬. ಮತ್ತು ತನಗೆ ಅಧಿಕ ಪ್ರೀತಿಪಾತ್ರನಾದ ಆ ಮಗನಿಗೆ ಅಂಗರಕ್ಷಕರನ್ನಿಟ್ಟು ಬಹಳ ಪ್ರೇಮದಿಂದ ಸಾಕುತ್ತಿದ್ದನು. ಆ ಪುತ್ರನಿಂದ ರಾಜನಿಗೆ ಸುವರ್ಣದ ರಾಶಿಗಳೇ ಕೈಸೇರಿದುವು.

೩೭. ಅನಂತರ ಮದೋನ್ಮತ್ತರಾದ ಕೆಲವು ದಾಕ್ಷಿಣಾತ್ಯ ಚೋರರು ಈ ರಾಜನ ಪುತ್ರನು ಕನಕಾಕರನೆಂಬುದನ್ನು ಕೇಳಿ ಹಣದಾಸೆಯಿಂದ ಅವನನ್ನು ಹೊಡೆದು ಕೊಂದರು.

೩೮. ಹೀಗೆ ಸುತನು ನಾಶಹೊಂದಿದ ಕೂಡಲೆ ವರದ ಮಹಿಮೆಯಿಂದ ಕೂಡಿ ಇದ್ದ ಆ ಕನಕವೆಲ್ಲಾ ನಾಶನಾಯಿತು. ಅದನ್ನು ನೋಡದೆಯೇ ಆ ಚೋರರು ಪರಸ್ಪರ ಹೊಡೆದಾಡಿ ಮೃತರಾದರು.

೩೯. ಅನಂತರ ರಾಜನು ಚೋರರಿಂದ ಹತರಾಗಿ ಬಿದ್ದಿರುವ ಮಗನನ್ನು ನೋಡಿ ದುಃಖದಿಂದ ಗೋಳಾಡುತ್ತಾ ವ್ಯಾಕುಲಚಿತ್ತನಾಗಿ ಸ್ಮೃತಿ ತಪ್ಪಿ ಬಿದ್ದನು.

ವಿಲಪಂತಂ ತು ತಂ ದೃಷ್ಟ್ವಾ ನಾರದಃ ಪ್ರಾಹ ಸಂಜಯಂ ।
ರಾಜನ್ನಿಷಾದಂ ಮಾಕಾರ್ಷೀಃ ಶೃಣ್ವಿಮಾಂ ಭಾರತೀಂ ಮಮ ॥ ೪೦ ॥

ಇತ್ಯುಕ್ತ್ವಾ ಸ ಸಮಾಚಖ್ಯೌ ಚರಿತಾನಿ ಮಹೌಜಸಾಂ ।
ವಿಶಿಷ್ಟಾನಾಂ ನರೇಂದ್ರಾಣಾಂ ಯತೀನಾಂ ದಕ್ಷಿಣಾವತಾಂ ॥ ೪೧ ॥

ಶ್ರುತ್ವಾ ರಾಜಾ ನರೇಂದ್ರಾಣಾಂ ಚರಿತಾನಿ ಮಹಾತ್ಮನಾಂ ।
ವಿನಷ್ಟಶೋಕಃ ಸಹಸಾ ಪ್ರಕೃತಿಸ್ಥೋ ಬಭೂವ ಸಃ ॥ ೪೨ ॥

ನಾರದೋಽಪಿ ನರೇಂದ್ರಸ್ಯ ಮೃತಂ ಪುತ್ರಂ ಯಮಾಲಯಾತ್ ।
ಆನಯಾಮಾಸ ತರಸಾ ತಥಾರೂಪಂ ಯಥಾ ಹತಂ ॥ ೪೩ ॥

ದೃಷ್ಟ್ವಾ ಸ್ಪೃಷ್ಟ್ವಾ ಸ ಪುತ್ರಂ ತಂ ಪರಿತುಷ್ಟೇನ ಚೇತಸಾ ।
ವ್ರೀಡಿತೋ ವಿಸ್ಮಿತಶ್ಚೈವ ಕೃತಾಂಜಲಿರಥಾಬ್ರವೀತ್ ॥ ೪೪ ॥

---

೪೦. ಆ ಮೇಲೆ ಎಚ್ಚತ್ತು ಪುನಃ ವಿಲಪಿಸುತ್ತಿರುವ ಆ ಸಂಜಯ ರಾಜನ ಹತ್ತಿರಕ್ಕೆ ನಾರದ ಮಹರ್ಷಿಯು ಬಂದು " ರಾಜನೇ ! ದುಃಖಪಡಬೇಡ; ನನ್ನ ಮಾತನ್ನು ಕೇಳು ".

೪೧. ಎಂದು ಹೇಳಿ ಆ ನಾರದನು ಮಹಾಪ್ರಭಾವಶಾಲಿಗಳೂ ಗುಣ ವಿಶಿಷ್ಟರೂ ಆಗಿರುವ ರಾಜರ ಮತ್ತು ಮಹಾತಪೋದಕ್ಷರಾದ ಪ್ರಾಚೀನ ಯತಿಗಳ ಚರಿತ್ರೆಗಳನ್ನು ಅವನಿಗೆ ಹೇಳಿದನು.

೪೨. ಆಗ ರಾಜನ ನರೇಂದ್ರರ ಮತ್ತು ಮಹಾತ್ಮರು ಚರಿತ್ರೆಗಳನ್ನು ಕೇಳಿ ನಷ್ಟಶೋಕನಾಗಿ ತತ್‌ಕ್ಷಣದಲ್ಲೇ ಸ್ವಸ್ಥಚಿತ್ತನಾದನು.

೪೩. ನಾರನನೂ ಕೂಡ ರಾಜನ ಮೃತಪುತ್ರನನ್ನು ಯಮಾಲಯದಿಂದ ಹಿಂದಕ್ಕೆ ಕರೆತಂದನು.

೪೪–೪೫. ರಾಜನು ಆ ಮಗನನ್ನು ನೋಡಿ ಸಂತೋಷದಿಂದ ಸ್ಪರ್ಶ ಮಾಡಿ; ನಾಚಿಕೆ, ಆಶ್ಚರ್ಯ ಇವುಗಳಿಂದ ಭರಿತನೂ, ಬದ್ಧಾಂಜಲಿಯೂ ಆಗಿ ಎಲೈ ನಾರದ ಮಹರ್ಷಿಯೇ ! ನೀನು ನನ್ನಲ್ಲಿ ಪ್ರಸನ್ನನಾಗಿ ಚೋರರಿಂದ

ಕಿಮಾಶ್ಚರ್ಯಂ ಪ್ರಸನ್ನೇನ ಭವತಾ ಮಮ ನಾರದ ।
ದತ್ತಃ ಪುತ್ರಸ್ತಥಾಭೂತೋ ದಸ್ಯುಭಿರ್ಘಾತಿತೋ ಯಥಾ ॥ ೪೫ ॥

ಷಣ್ಮಾಸಾಂತೇ ಪುನರಸೌ ಜೀವಿತಂ ಸರ್ವಮೇವ ತತ್ ।
ಸಸ್ಮಾರ ಪೂರ್ವಂ ವೃತ್ತಾಂತಂ ಭದ್ರಾಣಾಂ ಪಾರಣಾತ್ಕಿಲ ॥ ೪೬ ॥

ಏತತ್ತೇ ಸರ್ವಮಾಖ್ಯಾತಂ ಜಾತಿಸ್ಮರಣಕಾರಕಂ ।
ವ್ರತಂ ವ್ರತಾಧಿಕಂ ಶ್ರೇಷ್ಠಂ ಕಿಮನ್ಯತ್ಕಥಯಾಮಿ ತೇ ॥ ೪೭ ॥

॥ ಶ್ರೀ ಕೃಷ್ಣ ಉವಾಚ ॥

ಬ್ರಾಹ್ಮಣಾಶ್ಚೈವ ಶೂದ್ರಾಶ್ಚ ಕುಲೇ ಮಹತಿ ಜನ್ಮ ಚ ।
ದಾತಾ ಕ್ಷಮೀ ಧನೀ ವಾಗ್ಮೀ ರೂಪೀ ಸ್ವೈರ್ಭದ್ರಕೈರ್ಭವೇತ್ ॥ ೪೮ ॥

ಚತ್ವಾರಿ ರಾಜನ್ಭದ್ರಾಣಿ ಚತುಷ್ಪಾದಾನಿ ತಾನಿ ವೈ ।
ತಾನ್ಯೇವ ಬಹುವಿಘ್ನಾನಿ ದುಷ್ಪ್ರಾಪ್ಯಾನ್ಯಕೃತಾತ್ಮಭಿಃ ॥ ೪೯ ॥

---

ಹತನಾಗಿ ಯಮಾಲಯಕ್ಕೆ ಹೋದ ಪುತ್ರನನ್ನು ಪುನಃ ಹಾಗೆಯೇ ತಂದು ಕೊಟ್ಟಿರುವೆ; ಇದೇನಾಶ್ಚರ್ಯ!'' ಎಂದು ನುಡಿದನು.

೪೬. ಆ ಮೇಲೆ ಭದ್ರೋಪವಾಸ ವ್ರತಾನುಷ್ಠಾನಮಾಡಿ ಪಾರಣೆಮಾಡಿದುದರಿಂದ ಷಣ್ಮಾಸಾನಂತರದಲ್ಲಿ ಆ ಪುತ್ರನಿಗೆ ತಿರುಗಿ ಜೀವ ಬಂದು ಮೊದಲಿನಂತೆಯೇ ಪೂರ್ವವೃತ್ತಾಂತಸ್ಮರಣ ಶಕ್ತಿಯೂ ಬಂದಿತು.

೪೭. ಅಯ್ಯಾ ರಾಜನೇ! ಜಾತಿಸ್ಮರಣಕರವೂ ಸರ್ವವ್ರತೋತ್ತಮವೂ ಆದ ಈ ವ್ರತವನ್ನು ನಿನಗೆ ನಾನು ಹೇಳಿದೆ. ಇನ್ನೇನು ಹೇಳಲಿ? ಎಂದನು.

೪೮. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ! ಈ ಭದ್ರೋಪವಾಸ ವ್ರತಾಚರಣೆಮಾಡಿದ ಬ್ರಾಹ್ಮಣರಾಗಲಿ, ಶೂದ್ರರಾಗಲಿ ಮಹಾಕುಲ ಪ್ರಸೂತರೂ ದಾತೃಗಳೂ ಕ್ಷಮೆಯುಳ್ಳವರೂ ಧನಿಕರೂ ವಾಗ್ಮಿಗಳೂ ಸುರೂಪಿಗಳೂ ಆಗುತ್ತಾರೆ.

೪೯. ಎಲೈ ಯುಧಿಷ್ಠಿರನೇ! ಭದ್ರಗಳು ನಾಲ್ಕು. ಅವುಗಳಿಗೆ ನಾಲ್ಕು ಪಾದಗಳಿವೆ. ಅವುಗಳನ್ನಾಚರಿಸಲು ವಿಘ್ನಗಳು ಬಹಳ. ಆದುದರಿಂದ ಪುಣ್ಯವಿಹೀನರಿಗೆ ಅವುಗಳು ದುಷ್ಪ್ರಾಪ್ಯಗಳು.

ಮಾರ್ಗಶೀರ್ಷೇ ತು ಪ್ರಥಮಂ ದ್ವಿತೀಯಂ ಫಾಲ್ಗುನೇ ತಥಾ ।
ಜ್ಯೇಷ್ಠೇ ತೃತೀಯಂ ರಾಜೇಂದ್ರ ಖ್ಯಾತಂ ಭಾದ್ರಪದೇ ಪರಂ ॥ ೫೦ ॥

ಫಾಲ್ಗುನಾಮಲಪಕ್ಷಾದೌ ತ್ರೀನ್‌ಮಾಸಾಂಸ್ತು ನರಾಧಿಪ ।
ತತ್ರಿಪುಷ್ಪಮಿತಿ ಖ್ಯಾತಂ ತಪಸ್ಯಾಕರಣಂ ಪರಂ ॥ ೫೧ ॥

ಜ್ಯೇಷ್ಠಸ್ಯ ಶುಕ್ಲಪಕ್ಷಾದೌ ತ್ರೀನ್ ವೈ ಮಾಸಾನ್ಯುಧಿಷ್ಠಿರ ।
ತತ್ರಿರಾಮಮಿತಿ ಖ್ಯಾತಂ ಸತ್ಯಶೌರ್ಯಪ್ರದಾಯಕಂ ॥ ೫೨ ॥

ಶುಕ್ಲೇ ಭಾದ್ರಪದಸ್ಯಾದೌ ತ್ರೀನ್ಮಾಸಾನ್ಪಾಂಡುನಂದನ ।
ತತ್ರಿರಂಗಮಿತಿ ಖ್ಯಾತಂ ಬಹುವಿದ್ಯಾಪ್ರದಾಯಕಂ ॥ ೫೩ ॥

ಶುಕ್ಲಮಾರ್ಗಶಿರಸ್ಯಾದೌ ತ್ರೀನ್ಮಾಸಾಂಸ್ತು ನರಾಧಿಪ ।
ತದ್ವಿಷ್ಣುಪದಮಿತ್ಯುಕ್ತಂ ಸರ್ವಧರ್ಮಪ್ರದಾಯಕಂ ॥ ೫೪ ॥

---

೫೦. ಮಾರ್ಗಶೀರ್ಷದಲ್ಲಿ ಪ್ರಥಮ ಭದ್ರತಿಥಿಯೂ, ಫಾಲ್ಗುಣದಲ್ಲಿ ದ್ವಿತೀಯ ಭದ್ರತಿಥಿಯೂ, ಜ್ಯೇಷ್ಠದಲ್ಲಿ ತೃತೀಯಭದ್ರತಿಥಿಯೂ, ಭಾದ್ರಪದದಲ್ಲಿ ಚತುರ್ಥಭದ್ರತಿಥಿಯೂ ಬರುವುವು.

೫೧. ಫಾಲ್ಗುಣ ಶುಕ್ಲಪಕ್ಷಾದಿಯಾಗಿ ಮೂರು ತಿಂಗಳು ತ್ರಿಪುಷ್ಪವೆಂಬು ಪ್ರಖ್ಯಾತವಾಗಿದೆ. ಅದು ತಪಸ್ಸಿದ್ಧಿಗೆ ಶ್ರೇಷ್ಠವು.

೫೨. ಎಲೈ ಯುಧಿಷ್ಠಿರ ! ಜ್ಯೇಷ್ಠ ಶುಕ್ಲಪಕ್ಷದಿಂದ ಮೂರು ಮಾಸಗಳು ತ್ರಿರಾಮವೆಂದು ಪ್ರಖ್ಯಾತವಾಗಿದೆ. ಅದು ಸತ್ಯ, ಶೌರ್ಯಾದಿ ಪ್ರದಾಯಕವಾದುದು.

೫೩. ಓ ಪಾಂಡುನಂದನನೇ ! ಭಾದ್ರಪದ ಶುಕ್ಲಪಕ್ಷ ಮೊದಲ್ಗೊಂಡು ಮೂರು ಮಾಸಗಳು ತ್ರಿರಂಗವೆಂದು ಖ್ಯಾತವಾಗಿದೆ. ಅದು ಬಹು ವಿದ್ಯಾಪ್ರದಾಯಕವಾದುದು.

೫೪. ಮಾರ್ಗಶೀರ್ಷ ಶುಕ್ಲಪಕ್ಷ ಮೊದಲ್ಗೊಂಡು ಮೂರು ಮಾಸಗಳು ವಿಷ್ಣುಪದವೆಂದು ಹೇಳಲ್ಪಟ್ಟಿವೆ. ಅದು ಸರ್ವಧರ್ಮ ಪ್ರದಾಯಕವಾದುದು.

ಸಮಾಸೇನೈವ ಚೋಕ್ತಾನಿ ಭದ್ರಾಣ್ಯೇತಾನಿ ಭಾರತ ।
ಕರ್ತವ್ಯಾನಿ ನರೈಃ ಸ್ತ್ರೀಭಿರ್ಬ್ರಾಹ್ಮಣಾನುಮತೇನ ವಾ ॥ ೫೫ ॥

॥ ಯುಧಿಷ್ಠಿರ ಉವಾಚ ॥

ವಿಸ್ತರೇಣೈವ ಮೇ ಬ್ರೂಹಿ ದೇವದೇವ ಜಗತ್ಪತೇ ।
ಭದ್ರಾಣಾಂ ನಿಯಮಾಧಾನಂ ಪ್ರಧಾನನಿಯಮಾಂಸ್ತಥಾ ॥ ೫೬ ॥

॥ ಶ್ರೀ ಭಗವಾನುವಾಚ ॥

ಶೃಣು ರಾಜನ್ನವಹಿತೋ ಭದ್ರಾಣಾಂ ವಿಸ್ತರಂ ಪರಂ ।
ಕಥಯಿಷ್ಯೇ ನ ಕಥಿತಂ ಕಸ್ಯಚಿದ್ಯನ್ಮಯಾ ಪುರಾ ॥ ೫೭ ॥

ಶುಕ್ಲೇ ಮಾರ್ಗಶಿರಸ್ಯಾದೌ ಚತ್ವಾರಸ್ತಿಥಯೋ ವರಾಃ ।
ದ್ವಿತೀಯಾ ಚ ತೃತೀಯಾ ಚ ಚತುರ್ಥೀ ಪಂಚಮೀ ತಥಾ ॥ ೫೮ ॥

ಏಕಭುಕ್ತಾಸನಸ್ತಿಷ್ಠೇತ್ಪ್ರತಿಪದ್ಯಾಂ ಜಿತೇಂದ್ರಿಯಃ ।
ಪ್ರಭಾತೇ ತು ದ್ವಿತೀಯಾಯಾಂ ಕೃತ್ವಾ ಯತ್ಕರಣೀಯಕಂ ॥ ೫೯ ॥

---

೫೫. ಎಲೈ ಧರ್ಮರಾಜನೇ ! ಈ ಭದ್ರಗಳನ್ನು ಸಂಕ್ಷೇಪವಾಗಿ ನಿನಗೆ ನಾನು ಹೇಳಿದೆನು. ಪುರುಷರಾಗಲಿ ಅಥವಾ ಸ್ತ್ರೀಯರಾಗಲಿ ಬ್ರಾಹ್ಮಣಾನುಜ್ಞೆಯನ್ನು ಪಡೆದು ಈ ಭದ್ರೋಪವಾಸ ವ್ರತವನ್ನಾಚರಿಸಬೇಕು ” ಎಂದನು.

೫೬. ಯುಧಿಷ್ಠಿರನು ಹೇಳುತ್ತಾನೆ—“ಓ ಜಗತ್ಪತಿಯಾದ ಶ್ರೀ ಕೃಷ್ಣನೇ! ಈ ವ್ರತಾಂಗನಿಯಮವನ್ನೂ ಪ್ರಧಾನ ನಿಯಮವನ್ನೂ ಸವಿಸ್ತಾರವಾಗಿ ನನಗೆ ಹೇಳು ” ಎಂದನು.

೫೭. ಜಗತ್ಪತಿಯಾದ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಈ ಭದ್ರಗಳ ವಿಸ್ತೃತ ವಿಚಾರವನ್ನು ಹೇಳುವೆನು ; ಏಕಾಗ್ರತೆಯಿಂದ ಕೇಳು. ನಾನು ಈ ರಹಸ್ಯ ವಿಷಯವನ್ನು ಈವರೆಗೂ ಯಾರಿಗೂ ಹೇಳಿಲ್ಲ.

೫೮. ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ದ್ವಿತೀಯಾ, ತೃತೀಯಾ, ಚತುರ್ಥೀ, ಮತ್ತು ಪಂಚಮೀ ಎಂಬ ಈ ನಾಲ್ಕು ತಿಥಿಗಳು ಉತ್ತಮವಾದುವು.

೫೯–೬೦. ಈ ಮಾಸದ ಶುಕ್ಲಪಕ್ಷ ಪ್ರತಿಸತ್ತಿನಲ್ಲಿ ಏಕಭುಕ್ತ ಏಕಾಸನ ನಿಯಮವುಳ್ಳವನಾಗಿ ಜಿತೇಂದ್ರಿಯನಾಗಿದ್ದು ಮರುದಿನ ಎಂದರೆ ದ್ವಿತೀಯಾ

ಪ್ರಹರತ್ರಯೇ ಸಮಧಿಕೇ ಗತೇ ಸ್ನಾನಂ ಸಮಾಚರೇತ್ ।
ಮೃದ್ಗೋಮಯಂ ಚ ಸಂಗೃಹ್ಯ ಮಂತ್ರೈರೇಭಿರ್ವಿಚಕ್ಷಣಃ ॥ ೬೦ ॥

ಅಹಂ ತೇ ತು ಪ್ರದಿಶ್ಯಾಮಿ ಮಂತ್ರಾಣಾಂ ವಿಧಿಮುತ್ತಮಂ ।
ಯೇಷಾಂ ದೇಯೋ ನ ದೇಯೋ ವಾ ತಾಞ್ಛೃಣುಷ್ವ ವದಾಮಿ ತೇ॥೬೧॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಯೇ ಶುಚಯೋಽಮಲಾಃ ।
ತೇಷಾಂ ಮಂತ್ರಾಃ ಪ್ರದೇಯಾ ವೈ ನ ತು ಸಂಕೀರ್ಣಧರ್ಮಿಣಾಂ ॥ ೬೨ ॥

ಯಾ ಸ್ತ್ರೀ ಭರ್ತ್ರಾ ವಿಯುಕ್ತಾಪಿ ಸ್ವಾಚಾರೈಃ ಸಂಯುತಾ ಶುಭಾ ।
ಸಾ ಚ ಮಂತ್ರಾನ್ಪ್ರಗೃಹ್ಣಾತು ಸಭರ್ತ್ರೀ ತದನುಜ್ಞಯಾ ॥ ೬೩ ॥

ಸ್ನಾನಂ ನದ್ಯಾಂ ತಡಾಗೇ ವಾ ವಾಪ್ಯಾಂ ಕೂಪೇ ಗೃಹೇಽಪಿ ವಾ ।
ದಶೋತ್ತರಂ ಫಲಂ ಜ್ಞೇಯಮಧಿಕಂ ಹಿ ಸಮಂತ್ರಕಂ ॥ ೬೪ ॥

ದಿವಸ ಪ್ರಾತಃಕಾಲದಲ್ಲಿ ಅವಶ್ಯಕರ್ತವ್ಯಗಳಾದ ನಿತ್ಯಕರ್ಮಗಳನ್ನಾಚರಿಸಿ ಮೂರು ಪ್ರಹರ ಸಮಯ ಕಳೆದಮೇಲೆ ಮೃತ್ತಿಕಾ ಮತ್ತು ಗೋಮಯವನ್ನು ಸಂಗ್ರಹಿಸಿ ಮಂತ್ರಪೂರ್ವಕವಾಗಿ ಸ್ನಾನಮಾಡಬೇಕು.

೬೧. ಈ ಮುಂದೆ ಹೇಳುವ ಉತ್ತಮವಾದ ಸ್ನಾನಮಂತ್ರೋಪದೇಶವನ್ನು ಯಾರಿಗೆ ಮಾಡಬೇಕು, ಯಾರಿಗೆ ಮಾಡಬಾರದು ಎಂಬುದನ್ನು ನಿನಗೆ ಹೇಳುವೆನು.

೬೨. ಶುಚಿರ್ಭೂತರೂ ನಿಷ್ಕಲ್ಮಷರೂ ಆದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗೆ ಮುಂದೆ ಹೇಳುವಷ್ಟು ಮಂತ್ರವನ್ನುಪದೇಶಮಾಡಬಹುದು. ಅನುಲೋಮ ವಿಲೋಮ ಜಾತಿಗಳಿಗೆ ಉಪದೇಶ ಮಾಡಬಾರದು.

೬೩. ವಿಧವೆಯು ಸದಾಚಾರ ಸಂಪನ್ನಳಾಗಿದ್ದರೆ ಈ ಮಂತ್ರೋಪದೇಶ ಪಡೆಯಲು ಅರ್ಹಳಾಗುವಳು. ಸುಮಂಗಲಿಯು ಪತಿಯಿಂದ ಅನುಜ್ಞೆ ಪಡೆದವಳಾಗಿ ಈ ಮಂತ್ರೋಪದೇಶವನ್ನು ಪಡೆಯಬೇಕು.

೬೪. ನದೀ, ತಟಾಕ, ವಾಪೀ ಇವುಗಳಲ್ಲಾಗಲಿ ಅಥವಾ ಮನೆಯಲ್ಲಿಯೇ ಇರುವ ಕೂಪದಲ್ಲಾಗಲಿ ಸ್ನಾನಮಾಡಬೇಕು. ಅದರಲ್ಲೂ ಸಮಂತ್ರಕವಾಗಿ ಸ್ನಾನಮಾಡಿದರೆ ದಶೋತ್ತರಾಧಿಕ ಫಲವು ಬರುವುದು.

ಮೃದಂ ಮಂತ್ರೇಣ ಸಂಗೃಹ್ಯ ಸರ್ವಾಂಗೇಷು ಪ್ರಲೇಪಯೇತ್ ।
ತ್ವಂ ಮೃತ್ತಿಕೇ ವಂದಿತಾ ದೇವೈಃ ಸಮಸ್ತೈರ್ದೈತ್ಯಘಾತಿಭಿಃ ॥ ೬೫ ॥

ಮಯಾಪಿ ವಂದಿತಾ ಭಕ್ತ್ಯಾ ಮಾಮತೋ ವಿಮಲಂ ಕುರು ॥ ೬೬ ॥

॥ ಇತಿ ಮೃನ್ಮಂತ್ರಃ ॥

ಏವಂ ಜಪನ್ಮೃದಂ ದತ್ವಾ ಸ್ವಹಸ್ತಾಗ್ರೇ ಸಮಂತ್ರಕಂ ।
ಜಲಾವಗಾಹನಂ ಕುರ್ಯಾತ್ಕುಂಡಮಾಲಿಖ್ಯ ಧರ್ಮವಿತ್ ।
ಸಿದ್ಧಾರ್ಥಕೈಃ ಕೃಷ್ಣತಿಲೈರ್ವಚಾಸರ್ವೌಷಧೀಃ ಕ್ರಮಾತ್ ॥ ೬೭ ॥

ತ್ವಮಾದಿಃ ಸರ್ವದೇವಾನಾಂ ಜಗತಾಂ ಚ ಜಗನ್ಮಯೇ ।
ಭೂತಾನಾಂ ವೀರುಧಾಂ ಚೈವ ರಸಾನಾಂ ಪತಯೇ ನಮಃ ॥ ೬೮ ॥

---

೬೫-೬೬. ತ್ವಂ ಮೃತ್ತಿಕೇ ವಂದಿತಾ ದೇವೈರಮಸ್ತೈರ್ದೈತ್ಯಘಾತಿಭಿಃ । ಮಯಾಪಿ ವಂದಿತಾ ಭಕ್ತ್ಯಾ ಮಾಮತೋ ವಿಮಲಂ ಕುರು ॥ ಎಲೈ ಮೃತ್ತಿಕೆಯೇ ! ನೀನು ದೈತ್ಯರನ್ನು ಧ್ವಂಸಮಾಡಿ ಸಮಸ್ತ ದೇವತೆಗಳಿಂದಲೂ ನಮಸ್ಕರಿಸಿಕೊಳ್ಳುವೆ ನಾನು ಭಕ್ತಿಯಿಂದ ವಂದಿಸುತ್ತೇನೆ. ನನ್ನನ್ನೂ ಪರಿಶುದ್ಧನನ್ನಾಗಿ ಮಾಡಿಕೊಡು ಎಂಬ ಅರ್ಥವುಳ್ಳ ಮೇಲೆ ಹೇಳಿದ ಮಂತ್ರವನ್ನು ಜಪಿಸುತ್ತಾ ಮೃತ್ತಿಕೆಯನ್ನು ಹಸ್ತಾಗ್ರದಿಂದ ತೆಗೆದುಕೊಂಡು ಸರ್ವಾಂಗಗಳಲ್ಲಿಯೂ ಮಂತ್ರವತ್ತಾಗಿ ಲೇಪನಮಾಡಿಕೊಳ್ಳಬೇಕು.

೬೭. ಬಳಿಕ ಧರ್ಮಜ್ಞನಾದವನು ಜಲವಲ್ಲಿಳಿದು ನಿಂತು ಜಲದಲ್ಲಿ ವರ್ತುಲಾ (ಕುಂಡಾ) ಕಾರವಾಗಿ ಕೈಯಿಂದ ನೀರನ್ನು ಲೇಖನಮಾಡಿ ಸಾಸುವೆ, ಕರಿಯ ಎಳ್ಳು, ಬಜೆ ಮತ್ತು ಸರ್ವೌಷಧಗಳು ಇವುಗಳನ್ನು ಜಲದಲ್ಲಿ ಲೇಖನ ಮಾಡಿದ ಬಳಿ. ಹಿಡಿದುಕೊಂಡು ಆ ನೀರಿಗೆ ಹಾಕಬೇಕು.

೬೮. ಮೃಜ್ಜಲ ಮತ್ತು ಗೋಮಯ ಜಲಗಳಿಂದ ಶರೀರೋದ್ವರ್ತನವನ್ನು ಮೊದಲು ಮಾಡಿಕೊಳ್ಳುತ್ತಾ “ತ್ವಮಾದಿಃ ಸರ್ವದೇವಾನಾಂ ಜಗತಾಂಚ ಜಗನ್ಮಯೇ । ಭೂತಾನಾಂ ವೀರುಧಾಂಚೈವ ರಸಾನಾಂ ಪತಯೇ ನಮಃ ” ಹೇ ಜಗನ್ಮಯಳೇ ! ನೀನು ಜಗತ್ತಿಗೇ ಆದಿ, ಸರ್ವದೇವರುಗಳಿಗೂ ಆದಿಯಲ್ಲಿ ಜನಿಸಿದವಳು. ರಸಾಧಿಪಳೂ, ಭೂತಗಳಿಗೆ ವೀರುಧೆಯೂ ಆದ ಆದ ನಿನಗೆ ನಮಸ್ಕಾರ ಎಂಬರ್ಥವುಳ್ಳ ಈ ಶ್ಲೋಕವನ್ನು ಹೇಳಬೇಕು.

**ಗಂಗಾಸಾಗರಜಂ ತೋಯಂ ಪೌಷ್ಕರಂ ನಾರ್ಮದಂ ತಥಾ ।**
**ಯಾಮುನಂ ಸಾಂನಿಹತ್ಯಂ ಚ ಸನ್ನಿಧಾನಮಿಹಾಸ್ತು ಮೇ ॥ ೬೯ ॥**

**॥ ಇತಿ ಸ್ನಾನಮಂತ್ರಃ ॥**

**ಶರೀರಾಲಂಬನಂ ಪೂರ್ವಂ ಕೃತ್ವಾ ಮೃದ್ಗೋಮಯಾಂಬುಭಿಃ ।**
**ಏವಂ ಸ್ನಾತ್ವಾ ಸಮಾಪ್ಲುತ್ಯ ಆಚಮ್ಯ ತಟಮಾಸ್ಥಿತಃ ॥ ೭೦ ॥**

**ನಿವಸ್ಯ ವಾಸಸೀ ಶುಭ್ರೇ ಶುಚಿಃ ಪ್ರಯತಮಾನಸಃ ।**
**ದೇವಾನ್ ಪಿತೄನ್ ಮನುಷ್ಯಾಂಶ್ಚ ತರ್ಪಯೇತ್ಸುಸಮಾಧಿನಾ ॥ ೭೧ ॥**

**ಏವಂ ಗೃಹೀತನಿಯಮೋ ಗೃಹಂ ಗಚ್ಛೇಚ್ಛುಚಿವ್ರತಃ ।**
**ಉಪವಿಶ್ಯ ನ ಸಂಜಲ್ಪೇದ್ಯಾವಚ್ಚಂದ್ರಸ್ಯ ದರ್ಶನಂ ॥ ೭೨ ॥**

**ಸ್ನಾತ್ವಾ ಚೈವ ತತೋ ನಾಮ ತೃತೀಯಾದಿಚತುರ್ದಿನೇ ।**
**ನಮಃ ಕೃಷ್ಣಾಚ್ಯುತಾನಂತ ಹೃಷೀಕೇಶೇತಿ ಚ ಕ್ರಮಾತ್ ॥ ೭೩ ॥**

---

೬೯-೭೦. "ಗಂಗಾ ಸಾಗರಜಂತೋಯಂ ಪೌಷ್ಕರಂ ನಾರ್ಮದಂ ತಥಾ ಯಾಮುನಂ ಸಾಂನಿಹತ್ಯಂಚ ಸನ್ನಿಧಾನಮಿಹಾಸ್ತು ಮೇ " ಗಂಗಾಸಾಗರ, ಪುಷ್ಕರತೀರ್ಥ, ನರ್ಮದಾ, ಯಮುನಾ ಮತ್ತು ಪುಣ್ಯನದಿಗಳು, ಇವುಗಳ ಸಾನ್ನಿಧ್ಯವನ್ನೀಗ ಇಲ್ಲಿ ಉಂಟುಮಾಡಲಿ ಎಂಬರ್ಥವುಳ್ಳ ಸ್ನಾನಮಂತ್ರೋಚ್ಚಾರಣಪೂರ್ವಕವಾಗಿ ಸ್ನಾನಮಾಡಿ ಶುದ್ಧಾಚಮನವನ್ನು ಮಾಡಬೇಕು.

೭೧. ಆ ಮೇಲೆ ತೀರಕ್ಕೆ ಬಂದು ಶುಚಿಯಾಗಿಯೂ ಶುಭ್ರವಾಗಿಯೂ ಇರುವ ಬಟ್ಟೆಗಳನ್ನು ಧರಿಸಿ ಶುದ್ಧಮನಸ್ಕನಾಗಿ ಏಕಾಗ್ರತೆಯಿಂದ ದೇವ, ಋಷಿ, ಪಿತೃ ತರ್ಪಣವನ್ನು ಮಾಡಬೇಕು.

೭೨. ನಿಯಮಪರಿಗ್ರಹಮಾಡಿ ಮನೆಗೆ ಹೋಗಿ ಶುಚಿಯಾಗಿ ಆಸನ ಪರಿಗ್ರಹಮಾಡಿ ಚಂದ್ರದರ್ಶನವಾಗುವವರೆಗೆ ಮೌನದಿಂದಿರಬೇಕು.

೭೩-೭೪. ಚಂದ್ರದರ್ಶನವಾದ ಮೇಲೆ ಪುನಃ ಸ್ನಾನಮಾಡಿ ದ್ವಿತೀಯಾದಿಯಾದ ನಾಲ್ಕು ತಿಥಿಗಳಲ್ಲಿ ಕ್ರಮವಾಗಿ ಕೃಷ್ಣಾಯನಮಃ, ಅಚ್ಯುತಾಯ ನಮಃ ಅನಂತಾಯನಮಃ, ಹೃಷೀಕೇಶಾಯನಮಃ ಎಂದು ನಾಮೋಚ್ಚಾರಣ

**ಚತುರ್ದಿನೇ ದ್ವಿತೀಯಾದೌ ದೇವಮಭ್ಯರ್ಚಯೇಚ್ಯುತಂ ।**
**ಪ್ರಥಮೇಹ್ನಿ ಸ್ಮೃತಾ ಪೂಜಾ ಪಾದಯೋಶ್ಚಕ್ರಪಾಣಿನಃ ॥ ೭೪ ॥**

**ನಾಭಿಪೂಜಾ ದ್ವಿತೀಯೇಹ್ನಿ ಕರ್ತವ್ಯಾ ವಿಧಿವನ್ನರೈಃ ।**
**ಮುರದ್ವಿಷಸ್ತ್ರಿತೀಯೇಹ್ನಿ ಪೂಜಾಂ ವಕ್ಷಸಿ ವಿನ್ಯಸೇತ್ ॥ ೭೫ ॥**

**ಚತುರ್ಥೇಹ್ನಿ ಜಗದ್ಧಾತುಃ ಪೂಜಾಂ ಶಿರಸಿ ಕಲ್ಪಯೇತ್ ।**
**ಪುಷ್ಪೈರ್ವಿಲೇಪನೈರ್ಧೂಪೈರರ್ಘ್ಯಂ ದದ್ಯುರ್ವಿಭೂಷಣೈಃ ॥ ೭೬ ॥**

**ಧೀವರ್ಯೈರ್ಹರಿನ್ನೈವೇದ್ಯೈರ್ದೀಪದಾನೈಶ್ಚ ಭಕ್ತಿತಃ ।**
**ಪೂಜಯಿತ್ವಾ ವಿಧಾನೇನ ವಿಷ್ಣುಂ ವಿಶ್ವೇಶ್ವರಂ ವ್ರತೀ ॥ ೭೭ ॥**

**ತತೋ ದಿನಾವಸಾನೇ ತು ಮುಹೂರ್ತೇ ನಿರ್ಗತೇ ಸತಿ ।**
**ಅರ್ಘ್ಯಂ ಪ್ರದದ್ಯಾತ್ತೋಮಾಯ ಭಕ್ತ್ಯಾತ್ಸದ್ಭಾವಭಾವಿತಃ ॥ ೭೮ ॥**

---

ಪೂರ್ವಕವಾಗಿ ಶ್ರೀ ಕೃಷ್ಣನನ್ನು ಪೂಜಿಸಬೇಕು. ಪ್ರಥಮ ದಿನದಲ್ಲಿ ಚಕ್ರಪಾಣಿ ಯಾವ ದೇವನ ಪಾದವನ್ನು ಪೂಜೆಮಾಡಬೇಕು.

೭೫–೭೬. ಎರಡನೆಯದಿನ ವಿಧಿ ವಿಧಾನವಂತೆ ನಾಭಿಯನ್ನು ಪೂಜೆ ಮಾಡಬೇಕು. ಮೂರನೆಯ ದಿನ ಮುರಾರಿಯ ವಕ್ಷಸ್ಥಳವನ್ನು ಪೂಜಿಸಬೇಕು. ನಾಲ್ಕನೆಯದಿನ ಜಗದ್ರಕ್ಷಕನಾದ ಆ ದೇವನ ಶಿರಸ್ಸಿನಲ್ಲಿ ಪೂಜಿಸಬೇಕು. ಶ್ರೀ ಹರಿಗೆ ಭಕ್ತಿಪೂರ್ವಕವಾಗಿ ಗಂಧ, ಪುಷ್ಪ, ಅರ್ಘ್ಯ, ಭೂಷಣ ಇವುಗಳನ್ನು ಸಮರ್ಪಿಸಬೇಕು.

೭೭. ವ್ರತಿಯಾದವನು ಧೂಪ, ದೀಪ, ಹೃದ್ಯವಾದ ನೈವೇದ್ಯ ಇವುಗಳ ಸಮರ್ಪಣದಿಂದ ಶಾಸ್ತ್ರಪ್ರಕಾರವಾಗಿ ಲೋಕೇಶ್ವರನಾದ ಮಹಾವಿಷ್ಣುವನ್ನು ಪೂಜೆಮಾಡಬೇಕು.

೭೮. ಅನಂತರ ರಾತ್ರಿಯ ಪ್ರಥಮ ಮುಹೂರ್ತ ಕಳೆದಮೇಲೆ ಮನಸ್ಸಿನಲ್ಲಿ ತದ್ಭಾವನೆಯನ್ನು ಇಟ್ಟು ಚಂದ್ರನಿಗೆ ಭಕ್ತಿಪೂರ್ವಕವಾಗಿ ಅರ್ಘ್ಯಪ್ರದಾನ ಮಾಡಬೇಕು.

ಶಶಿಚಂದ್ರ ಶಶಾಂಕೇಂದು ನಾಮಾನಿ ಕ್ರಮಶೋ ನರಃ ।
ತೃತೀಯಾದಿಷು ಚಂದ್ರಸ್ಯ ಸಂಕೀರ್ತ್ಯಾರ್ಘ್ಯಂ ನಿವೇದಯೇತ್ ॥ ೭೯ ॥

ಸ ಚಾರ್ಘ್ಯೋ ಯಾದೃಶೋ ದೇಯು ಋದ್ಧಿಮದ್ಭಿರಥೇತರೈಃ ।
ತತ್ತೇ ಸಮ್ಯಕ್ಪ್ರವಕ್ಷ್ಯಾಮಿ ಯುಧಿಷ್ಠಿರ ನಿಬೋಧ ಮೇ ॥ ೮೦ ॥

ಚಂದನಾಗುರು ಕರ್ಪೂರದಧಿದೂರ್ವಾಕ್ಷತಾದಿಭಿಃ ।
ರತ್ನೈಃ ಸಮುದ್ರಜೈಶ್ಚಾನ್ಯೈರ್ವಜ್ರ ವೈಡೂರ್ಯಮೌಕ್ತಿಕೈಃ ॥ ೮೧ ॥

ಪುಷ್ಪೈಃ ಫಲೈಃ ಸ್ವಕಾಲೋತ್ಥೈಃ ಖರ್ಜೂರೈರ್ನಾಲಿಕೇರಕೈಃ ।
ವಸ್ತ್ರಾಚ್ಛಾದನಗೋವಾಜಿ ಭೂಮಿಹೇಮಗಜಾನ್ವಿತೈಃ ॥ ೮೨ ॥

---

೭೯. ದ್ವಿತೀಯಾದಿ ತಿಥಿಗಳಲ್ಲಿ ಕ್ರಮವಾಗಿ ಶಶಿ, ಚಂದ್ರ, ಶಶಾಂಕ, ಇಂದು ಎಂಬ ಚಂದ್ರನ ನಾಮಗಳನ್ನುಚ್ಚರಿಸಿ ಭಕ್ತಿಪೂರ್ವಕವಾಗಿ ಚಂದ್ರನಿಗೆ ಅರ್ಘ್ಯಪ್ರದಾನಮಾಡಬೇಕು.

೮೦. ಎಲೈ ಯುಧಿಷ್ಠಿರನೇ ! ಧನಿಕರು, ದರಿದ್ರರೆಂಬ ಅಧಿಕಾರ ಭೇದದಿಂದ ಚಂದ್ರಾರ್ಘ್ಯವನ್ನು ಹೇಗೆ ಕೊಡಬೇಕು ಎಂಬ ಕ್ರಮವನ್ನು ಚೆನ್ನಾಗಿ ಹೇಳುತ್ತೇನೆ ಕೇಳು.

೮೧. ಎಲೈ ರಾಜನೇ ! ಸತ್ವಯುಕ್ತರೂ, ಶ್ರೀಮಂತರೂ ಧನಿಕರೂ, ಚಂದನ, ಅಗರು, ಕರ್ಪೂರ, ದಧಿ, ದೂರ್ವಾ ಮತ್ತು ಅಕ್ಷತಾದಿಗಳಿಂದಲೂ ಮತ್ತು ಸಮುದ್ರೋತ್ಪನ್ನಗಳಾದ ಮುತ್ತು ರತ್ನಗಳು, ವಜ್ರ ವೈಡೂರ್ಯಗಳು ಇವುಗಳ ಸಮೇತವಾಗಿಯೂ,

೮೨. ಪುಷ್ಪಗಳು, ತತ್ಕಾಲದಲ್ಲಿ ಸಿಕ್ಕುವ ಫಲಗಳು, ಖರ್ಜೂರ, ನಾರಿಕೇಳ, ಮುಂತಾದ ಫಲಸಮೇತವಾಗಿಯೂ ಅರ್ಘ್ಯಕೊಡಬೇಕು. ಮತ್ತು ವಸ್ತ್ರ, ಗೋವು, ಅಶ್ವ, ಸ್ವರ್ಣ, ಭೂಮಿ ಗಜ ಇವುಗಳ ದಾನಾದಿಗಳನ್ನು ಮಾಡಿ ವಿಧಿಯುಕ್ತವಾಗಿ ಅರ್ಘ್ಯಪ್ರದಾನಮಾಡಬೇಕು.

ಸತ್ವಯುಕ್ತಸ್ಯ ಋದ್ಧಸ್ಯ ರಾಜನ್ನೇಷ ವಿಧಿಃ ಸ್ಮೃತಃ ।
ಇತರಸ್ಯ ಯಥಾಶಕ್ತಿ ಫಲಪುಷ್ಪಾಕ್ಷತೋದಕೈಃ ॥ ೮೩ ॥

ಲವಣಂ ಗುಡಂ ಘೃತಂ ತೈಲಂ ಪಯಃ ಕುಂಭಾಸ್ತಿಲೈಃ ಸಹ ।
ಅರ್ಘ್ಯೇಷ್ವೇತಾನಿ ಶಸ್ತಾನಿ ಶಶಿವೃದ್ಧ್ಯಾ ವಿವರ್ಧಯೇತ್ ॥ ೮೪ ॥

ಪ್ರತ್ಯಹಂ ವರ್ಧಯೇದರ್ಘ್ಯಂ ಶಶಿವೃದ್ಧ್ಯಾ ನರೋತ್ತಮ ।
ಏವಮರ್ಘಃ ಪ್ರದಾತವ್ಯಃ ಶೃಣು ಮಂತ್ರವಿಧಿಕ್ರಮಂ ॥ ೮೫ ॥

ನವೋನವೋಽಸಿ ಮಾಸಾಂತೇ ಜಾಯಮಾನಃ ಪುನಃ ಪುನಃ ।
ತ್ರಿರಗ್ನಿಸಮವೇತೋ ವೈ ದೇವಾನಾಪ್ಯಾಯಸೇ ಹವಿಃ ॥ ೮೬ ॥

---

೮೩. ದರಿದ್ರರು ಸ್ವಶಕ್ತ್ಯಾನುಸಾರವಾಗಿ ಫಲ, ಪುಷ್ಪ, ಅಕ್ಷತೋದಕ ಗಳಿಂದ ಅರ್ಘ್ಯಪ್ರದಾನ ಮಾಡಬಹುದು.

೮೪. ಸಾಧ್ಯವಿದ್ದರೆ ಲವಣ, ಗುಡ, ಘೃತ, ತೈಲ ತಿಲಸಹಿತವಾದ ಕುಂಭೋದಕಗಳಿಂದ ಅರ್ಘ್ಯಪ್ರದಾನ ಮಾಡಬೇಕು. ಈ ಮೇಲೆ ಹೇಳಿದ ದ್ರವ್ಯಗಳು ಅರ್ಘ್ಯಪ್ರದಾನಕ್ಕೆ ಪ್ರಶಸ್ತಗಳು.

೮೫. ಓ ನರೋತ್ತಮನೇ ! ಚಂದ್ರವೃದ್ಧಿ ಕ್ರಮವನ್ನನುಸರಿ ಪ್ರತಿದಿನವೂ ಅರ್ಘ್ಯ ಸಂಖ್ಯೆಯನ್ನು ಹೆಚ್ಚಿಸಬೇಕು, ಅದರ ಮಂತ್ರ ವಿಧಿಯನ್ನು ಹೇಳು ತ್ತೇನೆ ಕೇಳು.

೮೬. ಅರ್ಘ್ಯಪ್ರದಾನ ಮಾಡುವಾಗ "ನವೋ ನವೋಽಸಿ ಮಾಸಾಂತೇ ಜಾಯಮಾನಃ ಪುನಃ ಪುನಃ । ತ್ರಿರಗ್ನಿ ಸಮವೇತೋ ವೈಃ ದೇವಾನಾಪ್ಯಾಯ ಸೇ ಹವಿಃ ॥" ಪ್ರತಿಮಾಸದ ಕೊನೆಯಲ್ಲಿ ಅದೃಶ್ಯನಾಗಿ ನೀನು ಮತ್ತೆ ಹೊಸ ದಾಗಿ ಹುಟ್ಟುತ್ತೀಯೆ ; ತ್ರೇತಾಗ್ನಿಗಳಂತೆ ದೇವತೆಗಳಿಗೆ ಅಮೃತದ ಹವಿಸ್ಸನ್ನು ಕೊಟ್ಟು ಆನಂದಪಡಿಸುವೆ ಎಂಬರ್ಥವುಳ್ಳ ಮೇಲೆ ಹೇಳಿದ ಮಂತ್ರೋಚ್ಚಾರಣೆ ಮಾಡಬೇಕು.

ಗಗನಾಂಗಣಸದ್ದೀಪ ದುಗ್ಧಾಬ್ಧಿಮಥನೋದ್ಭವ ।
ಭಾಭಾಸಿತದಿಗಾಭೋಗ ರಮಾನುಜ ನಮೋಽಸ್ತು ತೇ ॥ ೮೭ ॥

ದತ್ವಾರ್ಘ್ಯಂ ದ್ವಿಜರಾಜಾಯ ತದ್ವಿಪ್ರಾಯ ನಿವೇದಯೇತ್ ।
ನಿರ್ವರ್ತ್ಯಾರ್ಘ್ಯಕ್ರಮಮಿಮಂ ತತೋ ಭುಂಜೀತ ವಾಗ್ಯತಃ ॥ ೮೮ ॥

ಭೂಮಿಂ ತು ಭಾಜನಂ ಕೃತ್ವಾ ಪದ್ಮಪತ್ರಸಮಾಸ್ತೃತಾಂ ।
ಪಾಲಾಶೈರ್ಮಧುಪತ್ರೈರ್ವಾ ಸುರೂಪೈರ್ವಾ ಶಿಲಾತಲೇ ॥ ೮೯ ॥

ಸಮಾಲಭ್ಯ ಧರಾಂ ದೇವೀಂ ಮಂತ್ರೇಣಾನೇನ ಮಂತ್ರವಿತ್ ।
ತ್ವತ್ತಲೇ ಭೋಕ್ತುಕಾಮೋಽಹಂ ದೇವಿ ಸರ್ವರಸೋದ್ಭವೇ ॥ ೯೦ ॥

---

೮೭. "ಗಗನಾಂಗಣ ಸದ್ದೀಪದುಗ್ಧಾಬ್ಧಿ ಮಥನೋದ್ಭವ । ಭಾಭಾಸಿತ ದಿಗಾಭೋಗ ರಮಾನುಜ ನಮೋಸ್ತುತೇ" ಆಕಾಶವೆಂಬ ಅಂಗಳಕ್ಕೆ ದೀಪ ಪ್ರಾಯನೂ, ಕ್ಷೀರಸಮುದ್ರದಿಂದ ಉತ್ಪನ್ನನೂ, ಲಕ್ಷ್ಮೀಸಹೋದರನೂ, ದಿಕ್ಕು ಗಳನ್ನು ತೇಜೋಮಯವಾಗಿ ಮಾಡುವನೂ ಆದ ನಿನಗೆ ನಮಸ್ಕಾರಗಳು" ಎಂಬರ್ಥವುಳ್ಳ ಮಂತ್ರವನ್ನು ಹೇಳಿ ಅರ್ಘ್ಯವನ್ನು ಕೊಡಬೇಕು.

೮೮. ಅರ್ಘ್ಯೋಪಯುಕ್ತವಾಗಿದ್ದ ರತ್ನಾದಿ ಸಮಸ್ತ ದ್ರವ್ಯವನ್ನೂ ಬ್ರಾಹ್ಮಣರಿಗೆ ಅರ್ಪಿಸಬೇಕು. ಈ ರೀತಿ ಅರ್ಘ್ಯಪ್ರದಾನಮಾಡಿ ಅನಂತರ ಮೌನದಿಂದ ಭುಂಜಿಸಬೇಕು.

೮೯. ಭೋಜನ ಸ್ಥಳದಲ್ಲಿ ಕಮಲಪತ್ರ ಮುತ್ತುಗದಎಲೆ ಅಥವಾ ಮಧು ಪತ್ರೆ ಇವುಗಳನ್ನು ಹಾಕಿಕೊಂಡು ಅವರು ಭೋಜನಮಾಡಬೇಕು. ಅಥವಾ ಸುಂದರವಾದ ಶಿಲಾತಲದಲ್ಲಾದರೂ ಭುಂಜಿಸಬಹುದು.

೯೦-೯೧. ಮಂತ್ರಜ್ಞನಾದವನು ಆ ಕಾಲದಲ್ಲಿ ಭೂದೇವಿಯನ್ನು ಹಸ್ತ ದಿಂದ ಸ್ಪರ್ಶನ ಮಾಡಿಕೊಂಡು, "ತ್ವತ್ತಲೇ ಭೋಕ್ತುಕಾಮೋಹಂ ದೇವಿ ಸರ್ವರಸೋದ್ಭವೇ। ಮದನುಗ್ರಹಾಯಸುಸ್ವಾದಂ ಕುರ್ವನ್ನಮಮೃತೋಪಮಂ" ಸರ್ವರಸಗಳನ್ನುಂಟುಮಾಡತಕ್ಕ ದೇವಿಯೇ ! ಈ ಭೂತಲದಲ್ಲಿಟ್ಟುಕೊಂಡು ಆಹಾರವನ್ನು ಸೇವಿಸುತ್ತೇನೆ. ನನ್ನಲ್ಲಿ ಅನುಗ್ರಹವಿಟ್ಟು ಈ ಆಹಾರವನ್ನು ಅಮೃತ ದಂತೆ ರುಚಿಕರವಾಗಿ ಮಾಡು" ಎಂಬರ್ಥವುಳ್ಳ ಮಂತ್ರವನ್ನು ಈ ಜಪಿಸಿ ಉತ್ತಮ

ಮದನುಗ್ರಹಾಯ ಸುಸ್ವಾದಂ ಕುರ್ವನ್ನಮುಪ್ಯಶೋಪಮಂ ।
ಏವಂ ಜಪ್ತ್ವಾ ಚ ಭುಕ್ತ್ವಾ ಚ ಶಾಕಂ ಪಾಕಂ ಗುಣೋತ್ತರಂ ॥ ೯೧ ॥

ಆಚಮ್ಯ ಖಾನ್ಯುಪಾಲಭ್ಯ ಸ್ಮೃತ್ವಾ ಸೋಮಂ ಸ್ವಪೇದ್ಭುವಿ ।
ಭೋಕ್ತವ್ಯಂ ತು ದ್ವಿತೀಯಾಯಾಮಕ್ಷಾರಲವಣಂ ಹವಿಃ ॥ ೯೨ ॥

ಮುನ್ಯನ್ನಂ ತು ತೃತೀಯಾಯಾಂ ಚತುರ್ಥ್ಯಾಂ ಗೋರಸೋತ್ತರಂ ।
ಘೃತಶಾಕಾಃ ಸಗುಡಾಃ ಶಸ್ತಾಃ ಪಂಚಮ್ಯಾಂ ಕೃಶರಾಸ್ಸದಾ ॥ ೯೩ ॥

ಶಸ್ತಾ ಭದ್ರೇಷು ಸರ್ವೇಷು ಸದಾ ಶ್ಯಾಮಾಕತಂಡುಲಾ ।
ಪ್ರಸಾಧಿಕಾ ಘೃತಂ ಗವ್ಯಂ ವನ್ಯಂ ಫಲಮಯಾಚಿತಂ ॥ ೯೪ ॥

ಪ್ರಾತಃ ಸ್ನಾನಂ ತತಃ ಕೃತ್ವಾ ಸಂತರ್ಪ್ಯ ಪಿತೃದೇವತಾಃ ।
ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ದತ್ತದಾನಾನ್ವಿಸರ್ಜಯೇತ್ ॥ ೯೫ ॥

---

ಗುಣವುಳ್ಳ ತರಕಾರಿಗಳಿಂದ ಸಿದ್ಧವಾದ ಪಾಕವನ್ನು ಸಾವಧಾನವಾಗಿ ಭುಂಜಿಸಬೇಕು.

೯೨. ಭೋಜನಾನಂತರ ಶುದ್ಧಾಚಮನಮಾಡಿ ಆಚಮನಾಂಗವಾಗಿ ತತ್ತದಿಂದ್ರಿಯದ ಸ್ಪರ್ಶನಮಾಡಿ ಚಂದ್ರನನ್ನು ಸ್ಮರಿಸುತ್ತಾ ಭೂಶಯನಮಾಡಬೇಕು. ದ್ವಿತೀಯಾ ತಿಥಿಯಲ್ಲಿ ಲವಣರಹಿತವಾಗಿ ಹವಿಷ್ಯಾನ್ನವನ್ನು ಹೋಲುವ ಅನ್ನವನ್ನು ಭೋಜನ ಮಾಡಬೇಕು.

೯೩. ತೃತೀಯೆಯಲ್ಲಿ ಮುನಿಗಳ ಆಹಾರವಾದ ಕಂದ ಮೂಲಗಳನ್ನೂ, ಚತುರ್ಥಿಯಲ್ಲಿ ಶ್ರೇಷ್ಠವೂ ಕ್ಷೀರಸಹಿತವೂ, ಪ್ರಶಸ್ತವೂ ಆದ ಅನ್ನವನ್ನೂ, ಪಂಚಮಿಯಲ್ಲಿ ಘೃತ ಗುಡ ಮಿಶ್ರಿತವಾದ ಕೃಶರಾನ್ನವನ್ನೂ ಭುಂಜಿಸಬೇಕು.

೯೪. ಮತ್ತು ಸರ್ವಭದ್ರಗಳಲ್ಲೂ ಉಪಯೋಗಿಸಲು ಶ್ಯಾಮಾಕ, ತಂಡುಲ ಗೋಘೃತ ಅಯಾಚಿತವನ್ಯ ಫಲಗಳು ಇವುಗಳು ಅತಿಪ್ರಶಸ್ತಗಳು.

೯೫. ಷಷ್ಠಿಯದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಪಿತೃತರ್ಪಣವನ್ನಾಚರಿಸಿ ಭಕ್ತಿಪೂರ್ವಕವಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಿ ಅವರಿಗೆ ಶಕ್ತ್ಯನುಸಾರ ದಾನಮಾಡಿ ಕಳುಹಿಸಬೇಕು.

ಭೃತ್ಯಬಂಧುಜನೈಃ ಸಾರ್ಧಂ ಪಶ್ಚಾದ್ಭುಂಜೀತ ಕಾಮತಃ ।
ಏವಂ ಭದ್ರೇಷು ಸರ್ವೇಷು ತ್ರಿಮಾಸೇಷು ಗತೇಷು ಯಃ ॥ ೯೬ ॥

ಕರೋತ್ಯೇತನ್ನರೋ ಭಕ್ತ್ಯಾ ವರ್ಷಮೇಕಮಮತ್ಸರೀ ।
ತಸ್ಯ ಶ್ರೀರ್ವಿಜಯಶ್ಚೈವ ನಿತ್ಯಂ ಸೋಮಃ ಪ್ರಸೀದತಿ ॥ ೯೭ ॥

ಏತತ್ಕರೋತಿ ಯಾ ಕನ್ಯಾ ಶುಭಂ ಪ್ರಾಪ್ನೋತಿ ಸಾ ಪತಿಂ ।
ದುರ್ಭಗಾ ಸುಭಗಾ ಸಾಧ್ವೀ ಭವತ್ಯವಿಧವಾ ಸದಾ ॥ ೯೮ ॥

ರಾಜ್ಯಾರ್ಥೀ ಲಭತೇ ರಾಜ್ಯಂ ಧನಾರ್ಥೀ ಲಭತೇ ಧನಂ ।
ಪುತ್ರಾರ್ಥೀ ಲಭತೇ ಪುತ್ರಾನಿತಿ ಪ್ರಾಹ ಪ್ರಭಾಕರಃ ॥ ೯೯ ॥

ಯೋಷಿತ್ಸ್ಕುಲಾಕುಲವಿವಾಹಮನೋರಮಾಣಿ ।
ಶಯ್ಯಾನ್ನಯಾನಶಯನಾಸನಶೋಭಿತಾನಿ ।

---

೯೬-೯೭. ಅನಂತರ ಭೃತ್ಯರ ಭೋಜನಕ್ಕೆ ಏರ್ಪಡಿಸಿ ಬಂಧುಗಳ ಸಮೇತ ತಾನೂ ಭುಂಜಿಸಬೇಕು. ಈ ಪ್ರಥಮ ಭದ್ರದಲ್ಲಾಚರಿಸಿದಂತೆಯೇ ಉಳಿದ ಮೂರು ತಿಂಗಳುಗಳ (ಸರ್ವ) ಭದ್ರಗಳಲ್ಲೂ ಯಾವನು ಅನುಸ್ಯೂತವಾಗಿ ಒಂದು ವರ್ಷ ಪರ್ಯಂತ ಭಕ್ತಿಯಿಂದಾಚರಿಸುವನೋ ಅಂಥವನಿಗೆ ಯಾವಾಗಲೂ ಸಂಪತ್ತೂ ಸೌಭಾಗ್ಯವೂ ಮತ್ತು ಜಯವೂ ಲಭಿಸುವುದಲ್ಲದೆ ಚಂದ್ರಪ್ರಸಾದವೂ ಪರಿಪೂರ್ಣವಾಗಿರುವುದು.

೯೮-೯೯. ಈ ವ್ರತವನ್ನು ಕನ್ನಿಕೆಯು ಆಚರಿಸಿದರೆ ಅವಳಿಗೆ ಯೋಗ್ಯನಾದ ಪತಿಯು ಲಾಭವಾಗುವುದು. ದೌರ್ಭಾಗ್ಯವತಿಯಾದವಳು ಈ ವ್ರತಾಚರಣೆಯಿಂದ ಸೌಭಾಗ್ಯವತಿಯೂ ನಿತ್ಯಸೌಮಂಗಲ್ಯವುಳ್ಳವಳೂ ಆಗುವಳು. ರಾಜ್ಯಾರ್ಥಿಯಾದ ಪುರುಷನು ರಾಜ್ಯವನ್ನು ಪಡೆಯುವನು. ಧನಾರ್ಥಿಗೆ ಧನ ಪ್ರಾಪ್ತಿಯಾಗುವುದು. ಪುತ್ರಾರ್ಥಿಯು ಸುಪುತ್ರನನ್ನು ಪಡೆಯುತ್ತಾನೆ ಎಂದು ಸಾಕ್ಷಾತ್ ಸೂರ್ಯದೇವನು ಈ ವ್ರತಾನುಷ್ಠಾನದ ಫಲವನ್ನು ಹೇಳಿರುತ್ತಾನೆ.

೧೦೦. ಅಯ್ಯಾ ಧರ್ಮರಾಜನೇ! ಸ್ತ್ರೀಯು ಈ ವ್ರತಾನುಷ್ಠಾನ ಮಾಡಿದರು ಸತ್ಕುಲ ಪ್ರಸೂತನಾದ ವರನಿಗೆ ವಿವಾಹಿತಳಾಗಿ ಶಯ್ಯಾ ಅನ್ನ ಶಯನ

**ಭದ್ರಾಣ್ಯವಾಪ್ಯ ಧನಪುತ್ರಕಲತ್ರಜಾನಿ ।**
**ಜಾತಿಸ್ಮರೋ ಭವತಿ ಭಾರತ ಭದ್ರಕರ್ತಾ                    ॥ ೧೦೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರ ಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಭದ್ರೋಪವಾಸವ್ರತನಿರೂಪಣಂ ನಾಮ ತ್ರಯೋದಶೋಽಧ್ಯಾಯಃ.**



ಆಸನ ಇತ್ಯಾದಿಗಳಿಂದ ಕೂಡಿ ಸಮೃದ್ಧ ಭೋಗವನ್ನನುಭವಿಸುವಳು. ಪುರುಷನು ಇದರ ಅನುಷ್ಠಾನದಿಂದ ಧನ ಪುತ್ರ ಕಲತ್ರ ಮುಂತಾದ ಸುಖವನ್ನನುಭವಿಸುವುದಲ್ಲದೆ ಜಾತಿಸ್ಮರನೂ ಆಗುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಭದ್ರೋಪವಾಸ ವ್ರತ ವರ್ಣನೆಯೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುರ್ದಶೋಽಧ್ಯಾಯ

॥ ಶ್ರೀ ಕೃಷ್ಣ ಉವಾಚ ॥

ಸಂತ್ಯನ್ಯಾಸ್ತಿಥಯಃ ಪಾರ್ಥ ದ್ವಿತೀಯಾದ್ಯಾಃ ಪರಿಶ್ರುತಾಃ ।
ಮಾಸೈಶ್ಚತುರ್ಭಿಶ್ಚತ್ವಾರಃ ಪ್ರಾವೃಟ್ ಛುಕ್ಲಾಃ ಕ್ಲಮಾಪಹಾಃ ॥ ೧ ॥

ಗೋಪಿತಾಶ್ಚ ಸದಾ ಲೋಕೇ ನ ಪ್ರೋಕ್ತಾಶ್ಚ ಮಯಾ ಕ್ವಚಿತ್ ।
ಪ್ರಕಾಶಯಾಮಿ ತಾಃ ಪಾರ್ಥ ಶೃಣು ಸರ್ವಾ ಮಯಾ ಹಿತಾಃ ॥ ೨ ॥

ಏಕಾ ತು ಶ್ರಾವಣೇ ಮಾಸಿ ಅನ್ಯಾ ಭಾದ್ರಪದೇ ತಥಾ ।
ಆಪರಾಶ್ವಯುಜೇ ಮಾಸಿ ಚತುರ್ಥೀ ಕಾರ್ತಿಕೇ ಭವೇತ್ ॥ ೩ ॥

---

## ಹದಿನ್ನಾಲನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಕುಂತೀಪುತ್ರನೇ! ಅನೇಕ ದ್ವಿತೀಯಾದಿ ತಿಥಿಗಳು ಪ್ರಸಿದ್ಧವಾಗಿವೆ. ಅವುಗಳಲ್ಲಿ ವರ್ಷಋತು ಪ್ರಾರಂಭದ ಶ್ರಾವಣಾದಿ ನಾಲ್ಕು ಮಾಸಗಳಲ್ಲಿ ಶುಕ್ಲಪಕ್ಷದ ನಾಲ್ಕು ತಿಥಿಗಳು ಸರ್ವಕಷ್ಟ ನಿವಾರಕಗಳೆನಿಸಿವೆ.

೨. ಇದುವರೆಗೆ ನಾನು ಅವುಗಳನ್ನು ಲೋಕದಲ್ಲಿ ಪ್ರಕಟಿಸದೆ ರಹಸ್ಯವಾಗಿಟ್ಟುಕೊಂಡಿದ್ದೆನು. ಅಂಥ ಅಭ್ಯುದಯಾರ್ಥಗಳಾದ ತಿಥಿಗಳನ್ನು ಈಗ ನಿನಗೆ ಉಪದೇಶಿಸುತ್ತೇನೆ ಕೇಳು.

೩. ಅವುಗಳಲ್ಲಿ ಮೊದಲನೆಯದು ಶ್ರಾವಣದಲ್ಲೂ, ಎರಡನೆಯದು ಭಾದ್ರಪದದಲ್ಲೂ, ಮೂರನೆಯದು ಆಶ್ವಯುಜದಲ್ಲೂ ನಾಲ್ಕನೆಯದು ಕಾರ್ತೀಕ ಮಾಸದಲ್ಲೂ ಬರುವುದು.

ಶ್ರಾವಣೇ ಕಲುಷಾ ನಾಮ ಪ್ರೋಕ್ತ್ಯಾ ಪಾದೇ ಚ ಗೀರ್ಮಲಾ ।
ಆಶ್ವಿನೇ ಪ್ರೇತಸಂಚಾರಾ ಕಾರ್ತಿಕೇ ಚ ಯಮಾ ಸ್ಮೃತಾ ॥ ೪ ॥

॥ ಯುಧಿಷ್ಠಿರ ಉವಾಚ ॥

ಕಸ್ಮಾತ್ಸಾ ಕಲುಷಾ ಪ್ರೋಕ್ತಾ ಕಸ್ಮಾತ್ಸಾ ಗೀರ್ಮಲಾ ಮತಾ ।
ಕಸ್ಮಾತ್ಸಾ ಪ್ರೇತಸಂಚಾರಾ ಕಸ್ಮಾದ್ಯಾಮ್ಯಾ ಪ್ರಕೀರ್ತಿತಾ ॥ ೫ ॥

॥ ಶ್ರೀ ಕೃಷ್ಣ ಉವಾಚ ॥

ಪುರಾ ವೃತ್ರವಧೇವೃತ್ತೇ ಪ್ರಾಪ್ತರಾಜ್ಯೇ ಪುರಂದರೇ ।
ಬ್ರಹ್ಮಹತ್ಯಾಪನೋದಾರ್ಥಮಶ್ವಮೇಧೇ ಪ್ರವರ್ತಿತೇ ॥ ೬ ॥

ಕ್ರೋಧಾದಿಂದ್ರೇಣ ವಜ್ರೇಣ ಬ್ರಹ್ಮಹತ್ಯಾ ನಿಷೂದಿತಾ ।
ಷಟ್ಖಂಡಾ ಚ ಕೃತಾ ಕ್ಷಿಪ್ತಾ ವೃಕ್ಷೇ ತೋಯೇ ಮಹೀತಲೇ ॥ ೭ ॥

---

೪. ಈ ಶ್ರಾವಣಾದಿ ನಾಲ್ಕು ತಿಂಗಳಿನ ನಾಲ್ಕು ದ್ವಿತೀಯಾ ತಿಥಿಗಳಿಗೆ ಕ್ರಮವಾಗಿ ಕಲುಷಾ, ಗೀರ್ಮಲಾ, ಪ್ರೇತಸಂಚಾರಾ, ಯಮಾ ಎಂಬ ನಾಮ ಧೇಯಗಳಿವೆ ಎಂದನು.

೫. ಯುಧಿಷ್ಠಿರನು ಕೇಳುತ್ತಾನೆ—ಪೂಜ್ಯನಾದ ಕೃಷ್ಣನೇ ! ಆ ನಾಲ್ಕು ದ್ವಿತೀಯಾ ತಿಥಿಗಳಿಗೆ ಕಲುಷಾ, ಗೀರ್ಮಲಾ, ಪ್ರೇತಸಂಚಾರಾ, ಯಮಾ ಎಂಬ ನಾಮಧೇಯಗಳು ಬರಲು ಕಾರಣವೇನು ? ಎಂದನು.

೬-೭. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಧರ್ಮರಾಜನೇ! ಪೂರ್ವದಲ್ಲಿ ಇಂದ್ರನು ವೃತ್ರಾಸುರನ ವಧೆಗೈದು ಸ್ವರ್ಗರಾಜ್ಯವನ್ನು ಪಡೆದಮೇಲೆ ಬ್ರಹ್ಮ ಹತ್ಯಾ ಪಾಪನಿವೃತ್ತಿಗಾಗಿ ಅಶ್ವಮೇಧ ಯಜ್ಞವನ್ನು ಪ್ರಾರಂಭಿಸಿದನು. ಆಗ ಇಂದ್ರನು ಕ್ರೋಧಯುಕ್ತನಾಗಿ ಆ ಬ್ರಹ್ಮಹತ್ಯೆಯನ್ನು ವಜ್ರಾಯುಧದಿಂದ ಹೊಡೆದು ಆರು ಭಾಗಗಳನ್ನಾಗಿಮಾಡಿ ಆ ಭಾಗಗಳನ್ನು ವೃಕ್ಷ, ತೋಯ, ಭೂಮಿ, ಸ್ತ್ರೀ, ಬ್ರಹ್ಮಘಾತಿ, ಮತ್ತು ಅಗ್ನಿ ಈ ಆರು ಪದಾರ್ಥಗಳ ಲ್ಲಿಟ್ಟನು.

ನಾರ್ಯಾಂ ಬ್ರಹ್ಮಹನೇ ವಹ್ನೌ ಸಂವಿಭಜ್ಯ ಯಥಾಕ್ರಮಂ ।
ತತ್ಪಾಪಂ ಶ್ರಾವಣೇ ವ್ಯೂಢಂ ದ್ವಿತೀಯಾಯಾಂ ದಿನೋದಯೇ ॥ ೮ ॥

ನಾರೀವೃಕ್ಷನದೀಭೂಮಿವಹ್ನಿ ಬ್ರಹ್ಮಹನೇಷ್ವಥ ।
ನಿರ್ಮಲೀಕರಣಂ ಜಾತಮತೋರ್ಥಂ ಕಲುಷಾ ಸ್ಮೃತಾ ॥ ೯ ॥

ಮಧುಕೈಟಭಯೋ ರಕ್ತೇ ಪುರಾ ಮಗ್ನೇತಿ ಮೇದಿನೀ ।
ಅಷ್ಟಾಂಗುಲಾ ಪವಿತ್ರಾ ಸಾ ನಾರೀಣಾಂ ತು ರಜೋಮಲಂ ॥ ೧೦ ॥

ನದ್ಯಃ ಪೂರಮಲಾಃ ಸರ್ವಾ ವಹ್ನೇರ್ಧೂಮಶಿಖಾಮಲಃ ।
ಕಲುಷಾಣಿ ಚರಂತ್ಯಸ್ಯಾಂ ತೇನೈಷಾ ಕಲುಷಾ ಮತಾ ॥ ೧೧ ॥

---

೮. ವೃಕ್ಷಾದಿಗಳಿಗೆ ಇದ್ದ ಬ್ರಹ್ಮಹತ್ಯಾ ಕಾಲುಷ್ಯವು ಶ್ರಾವಣ ಶುಕ್ಲ ದ್ವಿತೀಯಾ ಪ್ರಾತಃಕಾಲ ಪರಿಹಾರವಾಯಿತು. ಆದ್ದರಿಂದ ಆ ತಿಥಿಯು ಕಲುಷಾ ಎಂಬ ನಾಮಧೇಯವನ್ನು ಪಡೆಯಿತು.

೯. ನಾರೀ, ವೃಕ್ಷ, ನದೀ, ಭೂಮಿ, ವಹ್ನಿ, ಬ್ರಹ್ಮಘ್ನ ಈ ಪದಾರ್ಥಗಳು ಈರೀತಿ ಬ್ರಹ್ಮಹತ್ಯಾದೋಷ ದುಷ್ಟವಾದ ಮೇಲೆ ಅವುಗಳಿಗೆ ಈ ತಿಥಿಯಲ್ಲಿ ನೈರ್ಮಲ್ಯವು ಬಂದಿತು.

೧೦. ಆ ಮಲವು ಯಾವುದೆಂದರೆ ಪೂರ್ವದಲ್ಲಿ ಮಧುಕೈಟಭರೆಂಬ ರಾಕ್ಷಸರ ಸಂಹಾರವಾದಾಗ ಅವರ ಭೂಮಿಯು ರಕ್ತದಿಂದ ಅಷ್ಟಾಂಗುಲಪರ್ಯಂತ ವದ್ದೆಯಾದ್ದರಿಂದ ಅದೇ ಭೂಮಿಗೆ ಮಲಪ್ರಾಪ್ತಿಯಾಗಿದೆ. ನಾರಿಯರಿಗೆ ಬಹಿಷ್ಠೆಯರಾಗುವುದೇ ಮಲವು.

೧೧. ನದಿಗಳಿಗೆ ಪ್ರವಾಹವೇ ಮಲಸ್ವರೂಪವು, ಅಗ್ನಿಗೆ ಧೂಮಶಿಖೆಯು ಮಲರೂಪವು, ಹಾಗೂ ಆ ದ್ವಿತೀಯಾ ತಿಥಿಯಲ್ಲಿ ಈ ಉಕ್ತಪದಾರ್ಥಗಳಲ್ಲಿ ಕಾಲುಷ್ಯ ಪರಿಹಾರವಾದ್ದರಿಂದ ಕಲುಷಾ ಎಂಬ ನಾಮಧೇಯವು ಬಂದಿತು.

ಗೀರ್ಗಿರಾ ಭಾರತೀ ವಾಣೀ ವಾಚಾ ಮೇಧಾ ಸರಸ್ವತೀ ।
ಗೀರ್ಮಲಂ ವಹತೇ ಯಸ್ಮಾದ್ದ್ವಿತೀಯಾ ಗೀರ್ಮಲಾ ಮತಾ ॥ ೧೨ ॥

ದೇವರ್ಷಿಪಿತೃಧರ್ಮಾಣಾಂ ನಿಂದಕಾ ನಾಸ್ತಿಕಾಃ ಶಠಾಃ ।
ತೇಷಾಂ ಸಾ ವಾಙ್ಮಲವ್ಯೂಢಾ ದ್ವಿತೀಯಾ ತೇನ ಗೀರ್ಮಲಾ ॥ ೧೩ ॥

ಅನಧ್ಯಾಯೇಷು ಶಾಸ್ತ್ರಾಣಿ ಪಾಠಯಂತಿ ಪಠಂತಿ ಚ ।
ಶಾಬ್ದಿಕಾಸ್ತಾರ್ಕಿಕಾಃ ಶ್ರೌತಾಸ್ತೇಷಾಂ ಶಬ್ದಾಪಶಬ್ದಜಾಃ ॥ ೧೪ ॥

ಮಲಾ ವ್ಯೂಢಾ ದ್ವಿತೀಯಾಯಾಮತೋರ್ಥಂ ಗೀರ್ಮಲಾ ಚ ಸಾ ।
ಪ್ರೇತಾಸ್ತು ಪಿತರಃ ಪ್ರೋಕ್ತಾಸ್ತೇಷಾಂ ತಸ್ಯಾಂ ತು ಸಂಚರಃ ॥ ೧೫ ॥

ದ್ವಿತೀಯಾಯಾಂ ಚ ಲೋಕೇಷು ತೇನ ಸಾ ಪ್ರೇತಸಂಚರಾ ।
ಅಗ್ನಿಷ್ವಾತ್ತಾ ಬರ್ಹಿಷದ ಆಜ್ಯಪಾಃ ಸೋಮಪಾಸ್ತಥಾ ॥ ೧೬ ॥

---

೧೨. ಗೀಃ, ಭಾರತಿ, ವಾಣಿ, ವಾಕ್, ಮೇಧೆ, ಸರಸ್ವತಿ ಇತ್ಯಾದಿ ನಾಮಗಳುಳ್ಳ ವಾಕ್ಕಿಗೆ ಅಪಶಬ್ದದೋಷ ಪ್ರಾಪ್ತವಾದ್ದರಿಂದ ಭಾದ್ರಪದ ಶುಕ್ಲ ದ್ವಿತೀಯಾ ತಿಥಿಗೆ ಗೀರ್ಮಲಾ ಎಂಬ ನಾಮಧೇಯವು ಬಂದಿದೆ.

೧೩. ಮತ್ತು ದೇವ, ಋಷಿ, ಪಿತ್ರಾಚಾರಗಳನ್ನು ನಿಂದಿಸುವ ನಾಸ್ತಿಕರ ಮತ್ತು ದುರ್ಜನರ ವಾಕ್ಕು ಮಲರೂಪವು. ಆ ಉಕ್ತತಿಥಿಯು ಈ ಮಲ ಸಂಬಂಧವನ್ನು ಹೊಂದಿ ಗೀರ್ಮಲಾ ಎನ್ನಿಸಿಕೊಂಡಿತು.

೧೪. ಶಾಬ್ದಿಕರೂ, ತಾರ್ಕಿಕರೂ ಮತ್ತು ಪೂರ್ವೋತ್ತರ ಮೀಮಾಂಸಕರೂ ಅನಧ್ಯಯನದಿನಗಳಲ್ಲಿ ಶಾಸ್ತ್ರಾಧ್ಯಯನ ಮತ್ತು ಅಧ್ಯಾಪನಮಾಡುವುದರಿಂದ ಯಾವ ಶಬ್ದೋಪಶಬ್ದ ದೋಷಗಳಿವೆಯೋ ಆ ದೋಷಗಳು ಉಕ್ತತಿಥಿಯಲ್ಲಿ ನಿರ್ವ್ಯೂಢವಾದುದರಿಂದ ಆ ತಿಥಿಗೆ ಗೀರ್ಮಲಾ ಎಂದು ಹೆಸರು ಬಂದಿದೆ.

೧೫-೧೬. ಆಶ್ವಯುಜ ಶುಕ್ಲ ದ್ವಿತೀಯೆಯಲ್ಲಿ ಪ್ರೇತಶಬ್ದ ಸ್ವಪಪಾತ್ರಭಾಗಿಗಳಾದ ಪಿತೃಗಳು ಲೋಕಗಳಲ್ಲಿ ಸಂಚಾರಕ್ಕೆ ತೊಡಗಿದ್ದುದರಿಂದ ಆ ತಿಥಿಗೆ ಪ್ರೇತಸಂಚಾರ ಎಂಬ ಹೆಸರು ಬಂದಿರುತ್ತದೆ.

ಪಿತೃಪಿತಾಮಹಪ್ರೇತಾಃ ಸಂಚರಾತ್ಪ್ರೇತಸಂಚರಾ ।
ಪುತ್ರೈಃ ಪೌತ್ರೈಶ್ಚ ದೌಹಿತ್ರೈಃ ಸ್ವಧಾಮಂತ್ರೈಃ ಸುಪೂಜಿತಾಃ ॥ ೧೩ ॥

ಶ್ರಾದ್ಧದಾನಮಖೈಸ್ತೃಪ್ತಾ ಯಾತ್ಯತಃ ಪ್ರೇತಸಂಚರಾಃ ।
ಕಾರ್ತಿಕೇ ಶುಕ್ಲಪಕ್ಷಸ್ಯ ದ್ವಿತೀಯಾಯಾಂ ಯುಧಿಷ್ಠಿರ ॥ ೧೮ ॥

ಯಮೋ ಯಮುನಯಾ ಪೂರ್ವಂ ಭೋಜಿತಃ ಸ್ವಗೃಹೇ ತದಾ ।
ದ್ವಿತೀಯಾಯಾಂ ಮಹೋತ್ಸಗೇ ನಾರಕೀಯಾಶ್ಚ ತರ್ಪಿತಾಃ ॥ ೧೯ ॥

ಪಾಪೇಭ್ಯೋ ವಿಪ್ರಮುಕ್ತಾಸ್ತೇ ಮುಕ್ತಾಃ ಸರ್ವೇ ವಿಬಂಧನಾಃ ।
ಭ್ರಾಮಿತಾ ನರ್ತಿತಾಸ್ತುಷ್ಟಾಃ ಸ್ಥಿತಾಃ ಸರ್ವೇ ಯದೃಚ್ಛಯಾ ॥ ೧೯ ॥

ತೇಷಾಂ ಮಹೋತ್ಸವೋ ವೃತ್ತಃ ಯಮರಾಷ್ಟ್ರೇ ಸುಖಾವಹಃ ।
ತತೋ ಯಮದ್ವಿತೀಯಾ ಸಾ ಪ್ರೋಕ್ತಾ ಲೋಕೇ ಯುಧಿಷ್ಠಿರ ॥ ೨೦ ॥

---

೧೭. ಮತ್ತು ಅಗ್ನಿಷ್ವಾತ್ತಾ, ಆಜ್ಯಪಾ, ಸೋಮಪಾ ಎಂಬ ಪಿತೃಪಿತಾಮಹಾದಿಗಳ ಸಂಚಾರವುಳ್ಳದ್ದರಿಂದ ಆ ತಿಥಿಯು ಪ್ರೇತಸಂಚಾರ ಎನಿಸಿದೆ. ಈ ಪಿತೃಗಳು ಪುತ್ರ ಪೌತ್ರ ದೌಹಿತ್ರರಿಂದ ಸ್ವಧಾ .ಮಂತ್ರಗಳಿಂ ಪೂಜಿಸಲ್ಪಟ್ಟು ಶ್ರಾದ್ಧ ದಾನ ಯಾಗಾದಿಗಳಿಂದ ತೃಪ್ತರಾಗಿ ಸ್ವಸ್ಥಾನಕ್ಕೆ ಹೋಗುವರು.

೧೮. ಓ ಯುಧಿಷ್ಠರನೇ ! ಪೂರ್ವದಲ್ಲಿ ಯಮುನೆಯು ಕಾರ್ತೀಕ ಶುಕ್ಲ ಪಕ್ಷದ ದ್ವಿತೀಯಾದಿನ ಯಮಧರ್ಮರಾಜನಿಗೆ ತನ್ನ ಗೃಹದಲ್ಲಿ ಭೋಜನ ಮಾಡಿಸಿದಳು.

೧೯. ಮತ್ತು ಸೃಷ್ಟ್ಯಾದಿಯಲ್ಲಿ ಈ ದ್ವಿತೀಯಾ ತಿಥಿಯಲ್ಲೇ ನರಕವಾಸಿಗಳಾದ ಸರ್ವಪ್ರಾಣಿಗಳೂ ತೃಪ್ತಿಪಡಿಸಲ್ಪಟ್ಟುವಲ್ಲದೆ ಪಾಪ ವಿಮುಕ್ತರಾದ್ದರಿಂದ ಸರ್ವರೂ ನರಕಬಂಧನದಿಂದ ಬಿಡಲ್ಪಟ್ಟರು. ಸ್ವೇಚ್ಛೆಯಾಗಿ ಬಂಧ ವಿಮೋಚನೆ ಹೊಂದಿದುರಿಂದ ಸಂತೋಷದಿಂದ ಸಕಲರೂ ಕುಣಿದಾಡುತ್ತಿದ್ದರು.

೨೦. ಅವರಿಗೆ ಸುಖಜನಕವಾದ ಮಹೋತ್ಸವವು ಯಮಪುರದಲ್ಲಾಯಿತು. ಎಲೈ ಯುಧಿಷ್ಠಿರನೇ ! ಆದುದರಿಂದ ಈ ದ್ವಿತೀಯಾ ತಿಥಿಗೆ ಯಮ ದ್ವಿತೀಯೆ ಎಂಬ ಹೆಸರು ಬಂದಿದೆ.

ತೇಷಾಂ ನಿಜಗೃಹೇ ಪಾರ್ಥ ನ ಭೋಕ್ತವ್ಯಮತೋ ಬುಧೈಃ ।
ಸ್ನೇಹೇನ ಭಗಿನೀಹಸ್ತಾದ್ಭೋಕ್ತವ್ಯಂ ಪುಷ್ಟಿವರ್ಧನಂ ॥ ೨೧ ॥

ದಾನಾನಿ ಚ ಪ್ರದೇಯಾನಿ ಭಗಿನೀಭ್ಯೋ ವಿಧಾನತಃ ।
ಸ್ವರ್ಣಾಲಂಕಾರವಸ್ತ್ರಾದ್ಯೈಃ ಪೂಜಾಸತ್ಕಾರಭೋಜನೈಃ ॥ ೨೨ ॥

ಸರ್ವಾ ಭಗಿನ್ಯಃ ಸಂಪೂಜ್ಯಾ ಅಭಾವೇ ಪ್ರತಿಪತ್ತಿಗಾಃ ।
ಪಿತೃವ್ಯಭಗಿನೀ ಹಸ್ತಾತ್ಪ್ರಥಮಾಯಾಂ ಯುಧಿಷ್ಠಿರ ॥ ೨೩ ॥

ಮಾತುಲಸ್ಯ ಸುತಾಹಸ್ತಾದ್ದ್ವಿತೀಯಾಯಾಂ ಪುನರ್ನೃಪ ।
ಪಿತೃಮಾತೃ ಸ್ವಸಾರೋ ಯೇ ತೃತೀಯಾಯಾಂ ತಯೋಃ ಕರಾತ್ ॥೨೪॥

ಭೋಕ್ತವ್ಯಂ ಸಹಜಾಯಾಶ್ಚ ಭಗಿನ್ಯಾ ಹಸ್ತತಃ ಪರಂ ।
ಸರ್ವಾಸು ಭಗಿನೀಹಸ್ತಾದ್ಭೋಕ್ತವ್ಯಂ ಬಲವರ್ಧನಂ ॥ ೨೫ ॥

---

೨೧. ಎಲೈ ಪಾರ್ಥಸಹೋದರನೇ ! ಆದುದರಿಂದ ತಿಳಿದವರು ಈ ತಿಥಿಯಲ್ಲಿ ನಿಜಗೃಹದಲ್ಲಿ ಭೋಜನಮಾಡಬಾರದು. ಸ್ನೇಹಪೂರ್ವಕವಾಗಿ ಭಗಿನೀ ಹಸ್ತದಿಂದ ಪರಿವೇಷಿತವಾದ ಪುಷ್ಟಿದಾಯಕ ಅನ್ನವನ್ನೇ ಭುಂಜಿಸಬೇಕು.

೨೨. ಮತ್ತು ಭಗಿನಿಯರೆಲ್ಲರಿಗೂ ಸ್ವರ್ಣಾಲಂಕಾರ, ವಸ್ತ್ರಾಲಂಕಾರಾದಿ ದಾನಗಳನ್ನು ಮಾಡಿ ಸತ್ಕಾರಮಾಡಬೇಕು. ಸಾಕ್ಷಾತ್ ಭಗಿನಿಗೆ ಅಭಾವವಿದ್ದರೆ ಗೌಣವಾಗಿ ಭಗಿನೀ ಭಾವನೆಗೆ ಯಾರು ಯೋಗ್ಯರೋ ಅಂಥವರುಗಳ ಸ್ವಗೃಹದಲ್ಲಿ ಈ ಹಿಂದೆ ಹೇಳಿದ ಭೋಜನಮಾಡಿ ಅವರಿಗೆ ದಾನಕೊಡಬೇಕು.

೨೩. ಮತ್ತು ಹಿಂದೆ ಹೇಳಿದ ನಾಲ್ಕು ದ್ವಿತೀಯೆಗಳಲ್ಲಿ ಮೊದಲನೆಯ ದ್ವಿತೀಯೆಯಲ್ಲಿ ಪಿತೃವ್ಯ ಭಗಿನೀ ಹಸ್ತದಿಂದ ಬಡಿಸಲ್ಪಟ್ಟ ಅನ್ನವನ್ನು ಭೋಜನ ಮಾಡಬೇಕು.

೨೪. ಎರಡನೆಯ ದ್ವಿತೀಯೆಯಲ್ಲಿ ಮಾತುಲಪುತ್ರಿಯ ಹಸ್ತದಿಂದ ಬಡಿಸಲ್ಪಟ್ಟ ಅನ್ನವನ್ನು ಮೂರನೆಯ ದ್ವಿತೀಯೆಯಲ್ಲಿ ಪಿತೃಭಗಿನೀ ಅಥವಾ ಮಾತೃ ಭಗಿನಿಯ ಹಸ್ತದಿಂದ ಇಡಲ್ಪಟ್ಟ ಅನ್ನವನ್ನೂ ಭುಂಜಿಸಬೇಕು.

೨೫. ನಾಲ್ಕನೆಯದಾದ ಈ ಯಮದ್ವಿತೀಯೆಯಲ್ಲಿ ತನ್ನ ಸಹೋದರಿಯ ಹಸ್ತದಿಂದ ಬಡಿಸಲ್ಪಟ್ಟ ಅನ್ನವನ್ನು ಭುಂಜಿಸಬೇಕು. ಹೀಗೆ ಈ ನಾಲ್ಕು ದ್ವಿತೀಯೆಗಳಲ್ಲಿಯೂ ಭಗಿನೀಹಸ್ತ ಭೋಜನವು ಬಲವರ್ಧಕವಾದುದರಿಂದ ಪ್ರಶಸ್ತವು.

ಧನ್ಯಂ ಯಶಸ್ಯಮಾಯುಷ್ಯಂ ಧರ್ಮಕಾಮಾರ್ಥವರ್ಧನಂ ।
ವ್ಯಾಖ್ಯಾತಂ ಸಕಲಂ ಸ್ನೇಹಾತ್ ಸರಹಸ್ಯಂ ಮಯಾ ತವ ॥ ೨೬ ॥

ಯಸ್ಯಾಂ ತಿಥೌ ಯಮುನಯಾ ಯಮರಾಜದೇವಃ ।
ಸಂಭೋಜಿತೋ ಜಗತಿ ಸತ್ವರಸೌಹೃದೇನ ।
ತಸ್ಯಾಂ ಸ್ವಸುಃ ಕರತಲಾದಿಹ ಯೋ ಭುನಕ್ತಿ ।
ಪ್ರಾಪ್ನೋತಿ ವಿತ್ತಮಥ ಭೋಜ್ಯಮನುತ್ತಮಂ ಸಃ ॥ ೨೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಯಮದ್ವಿತೀಯಾ ವ್ರತಮಾಹಾತ್ಮ್ಯಂ ನಾಮ ಚತುರ್ದಶೋಽಧ್ಯಾಯಃ.



---

೨೬. ಅಯ್ಯಾ ಧರ್ಮಸೂನುವೇ ! ಈ ಯಮದ್ವಿತೀಯಾ ವ್ರತಾನುಷ್ಠಾನವು ಮಾನವನಿಗೆ ಕೃತಕೃತ್ಯತೆಯನ್ನು ಸಂಪಾದಿಸಿಕೊಡುವುದೂ ಯಶೋದಾಯಕವೂ ಆಗಿರುವುದು. ಆಯುಷ್ಯಾಭಿವೃದ್ಧಿಕರವೆನಿಸುವುದು. ಧರ್ಮಕಾಮಾರ್ಥರೂಪ ತ್ರಿವರ್ಗಕ್ಕೆ ಸಾಧನಹೇತುವೂ ಆಗುವುದು. ಸರಹಸ್ಯವಾದ ಅಂಥಾದ್ದನ್ನು ನಾನು ನಿನಗೆ ಸ್ನೇಹದಿಂದ ವಿವರಿಸಿ ಅರುಹಿದೆನು.

೨೭. ಯಾವ ತಿಥಿಯಲ್ಲಿ ಯಮಭಗಿನಿಯಾದ ಯಮುನೆಯು ಸೌಹಾರ್ದದಿಂದ ಯಮಧರ್ಮರಾಜನಿಗೆ ಭೋಜನಮಾಡಿಸಿದಳೋ ಅಂಥಾ ಯಮ ದ್ವಿತೀಯೆಯಲ್ಲಿ ಭಗಿನೀಗೃಹದಲ್ಲಿ ಭಗಿನೀ ಹಸ್ತದಿಂದ ಪರಿವೇಷಿತವಾದುದನ್ನು ಭುಂಜಿಸುವವನು ಪ್ರಭೂತ ಧನವನ್ನು ಹೊಂದುವುದಲ್ಲದೆ ಶ್ರೇಷ್ಠವಾದ ಭೋಜ್ಯವನ್ನೂ ಪಡೆಯುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಯಮದ್ವಿತೀಯಾ ವ್ರತಮಹಾತ್ಮ್ಯೆ ಎಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚದಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಭಗವನ್ಭವತಾ ಪ್ರೋಕ್ತಂ ಧರ್ಮಾರ್ಥಾದೇಃ ಸುಸಾಧನಂ ।
ಗಾರ್ಹಸ್ಥ್ಯಂ ತಚ್ಚ ಭವತಿ ದಂಪತ್ಯೋಃ ಪ್ರೀಯಮಾಣಯೋಃ ॥ ೧ ॥

ಪತ್ನೀಹೀನಃ ಪುಮಾನ್ ಪತ್ನೀ ಭರ್ತ್ರಾ ವಿರಹಿತಾ ತಥಾ ।
ಧರ್ಮಕಾಮಾರ್ಥಸಂಸಿದ್ಧೀ ನ ಸ್ಯಾತಾಂ ಮಧುಸೂದನ ॥ ೨ ॥

ತದ್ಬ್ರೂಹಿ ದೇವದೇವೇಶ ವಿಧವಾ ಸ್ತ್ರೀ ನ ಜಾಯತೇ ।
ವ್ರತೇನ ಯೇನ ಗೋವಿಂದ ಪತ್ನ್ಯಾ ವಿರಹಿತೋ ನರಃ ॥ ೩ ॥

---

### ಹದಿನೈದನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ–ಸೌಮ್ಯನಾದ ಭಗವಂತನೇ ! ಪರಸ್ಪರ ಪ್ರೀತಿಯುತರಾದ ದಂಪತಿಗಳ ಗಾರ್ಹಸ್ಥ್ಯಕ್ಕೆ ಸಹಕಾರಿಯಾದ ಮತ್ತು ಧರ್ಮ ಅರ್ಥವೆಂಬ ಪುರುಷಾರ್ಥಗಳಿಗೆ ಸಾಧನವಾದ ವ್ರತಗಳನ್ನು ಇದುವರೆಗೂ ಹೇಳಿರುವೆ.

೨. ಅಯ್ಯಾ ಮಧುಸೂದನನೇ! ಪುರುಷನು ಪತ್ನೀ ವಿಯುಕ್ತನಾದರೂ, ಪತ್ನಿಯು ಪತಿರಹಿತಳಾದರೂ, ಧರ್ಮ ಅರ್ಥ ಮತ್ತು ಕಾಮಗಳೆಂಬ ತ್ರಿವರ್ಗಗಳು ಸಿದ್ಧಿಸಲಾರದಲ್ಲವೇ ?

೩. ಆದುದರಿಂದ ಸ್ವಾಮಿ ಗೋವಿಂದನೇ ! ಯಾವ ವ್ರತಾಚರಣೆಯಿಂದ ನಾರಿಯು ವಿಧವೆಯಾಗುವುದಿಲ್ಲವೋ ಹಾಗೆಯೇ ಪುರುಷನು ಅಪತ್ನೀಕನಾಗುವುದಿಲ್ಲವೋ ಅಂಥಾ ವ್ರತವನ್ನು ಪದೇಶಿಸು ಎಂದನು.

॥ ಶ್ರೀ ಕೃಷ್ಣ ಉವಾಚ ॥

ಅಶೂನ್ಯಶಯನೀಂ ನಾಮ ದ್ವಿತೀಯಾಂ ಶೃಣು ತಾಂ ಮಮ ।
ಯಾಮುಪೋಷ್ಯ ನ ವೈಧವ್ಯಂ ಪ್ರಾಪ್ನೋತಿ ಸ್ತ್ರೀ ಯುಧಿಷ್ಠಿರ ॥ ೪ ॥

ಪತ್ನೀವಿಮುಕ್ತಶ್ಚ ನರೋ ನ ಕದಾಚಿತ್ಪ್ರಜಾಯತೇ ।
ಶೇತೇ ಜಗತ್ಪತಿರ್ವಿಷ್ಣುಃ ಶ್ರಿಯಾ ಸಾರ್ಧಂ ಯದಾ ಕಿಲ ॥ ೫ ॥

ಅಶೂನ್ಯಶಯನಂ ನಾಮ ತದಾ ಗ್ರಾಹ್ಯಾ ಚ ಸಾ ತಿಥಿಃ ।
ಉಪವಾಸೇನ ನಕ್ತೇನ ತಥೈವಾಯಾಚಿತೇನ ಚ ॥ ೬ ॥

ಕೃಷ್ಣಪಕ್ಷೇ ದ್ವಿತೀಯಾಯಾಂ ಶ್ರಾವಣೇ ನೃಪಸತ್ತಮ ।
ಸ್ನಾನಂ ನದ್ಯಾಂ ತಡಾಗೇ ವಾ ಗೃಹೇ ವಾ ನಿಯತಾತ್ಮವಾನ್ ॥ ೭ ॥

ಕೃತ್ವಾ ಪಿತೄನ್ ಮನುಷ್ಯಾಂಶ್ಚ ದೇವಾನ್ಸಂತರ್ಪ್ಯ ಭಕ್ತಿಮಾನ್ ।
ಸ್ಥಂಡಿಲಂ ಚತುರಸ್ರಂ ತು ಮೃನ್ಮಯಂ ಕಾರಯೇತ್ತತಃ ॥ ೮ ॥

---

೪. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರನೇ ! ಅಶೂನ್ಯ ಶಯನೀ ಎಂಬ ದ್ವಿತೀಯಾ ತಿಥಿಯಲ್ಲಿ ನಾರಿಯು ಉಪವಾಸ ವ್ರತವನ್ನಾಚರಿಸುವುದರಿಂದ ವೈಧವ್ಯವನ್ನು ಪಡೆಯುವುದಿಲ್ಲ.

೫. ಮತ್ತು ಈ ತಿಥಿಯಲ್ಲಿ ಪುರುಷನು ಉಪವಾಸಪೂರ್ವಕವಾಗಿ ವ್ರತವನ್ನಾಚರಿಸಿದರೆ ಪತ್ನೀ ವಿಯೋಗವನ್ನು ಹೊಂದುವುದಿಲ್ಲ.

೬. ಜಗತ್ಪತಿಯಾದ ಶ್ರೀ ಮಹಾವಿಷ್ಣುವು ಸ್ತ್ರೀ ಸಮೇತನಾಗಿ ಯಾವ ತಿಥಿಯಲ್ಲಿ ಶಯನಮಾಡಿದನೋ ಆ ತಿಥಿಗೆ ಅಶೂನ್ಯಶಯನ ಎಂದು ನಾಮಧೇಯವು. ಆ ತಿಥಿಯಲ್ಲಿ ಉಪವಾಸ ಪೂರ್ವಕವಾಗಿ ವ್ರತಾಚರಣೆಯನ್ನು ಮಾಡಬೇಕು.

೭. ಎಲೈ ರಾಜನೇ ! ಶ್ರಾವಣಮಾಸದ ಕೃಷ್ಣಪಕ್ಷದ ದ್ವಿತೀಯಾ ದಿನದಲ್ಲಿ ನದೀ, ತಟಾಕ, ಅಥವಾ ಗೃಹದಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿರಬೇಕು.

೮. ಭಕ್ತಿಪೂರ್ವಕವಾಗಿ ದೇವರ್ಷಿ ಪಿತೃಗಳಿಗೆ ತರ್ಪಣವನ್ನಾಚರಿಸಿ ಮಣ್ಣಿನಿಂದ ಚತುರಸ್ರವಾದ ಸ್ಥಂಡಿಲವನ್ನು ತಯಾರಿಸಬೇಕು.

ತತ್ರಸ್ಥಂ ಶ್ರೀಧರಂ ಶ್ರೀಶಂ ಭಕ್ತ್ಯಾಭ್ಯರ್ಚ್ಯ ಶ್ರಿಯಾ ಸಹ ।
ನೈವೇದ್ಯಪುಷ್ಪಧೂಪಾದ್ಯೈಃ ಫಲೈಃ ಕಾಲೋದ್ಭವೈಃ ಶುಭೈ ॥ ೯ ॥

ಇಮಮುಚ್ಚಾರಯೇನ್ಮಂತ್ರಂ ಪ್ರಣಮ್ಯ ಜಗತಃ ಪತಿಂ ।
ಶ್ರೀವತ್ಸಧಾರಿನ್ ಶ್ರೀಕಾಂತ ಶ್ರೀಧಾಮನ್ ಶ್ರೀಪತೇವ್ಯಯ ॥ ೧೦ ॥

ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ।
ಅಗ್ನಯೋ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ದೇವತಾಃ ।
ಪಿತರೋ ಮಾ ಪ್ರಣಶ್ಯಂತು ಮತ್ತೋ ದಾಂಪತ್ಯಭೇದತಃ ॥ ೧೧ ॥

ಲಕ್ಷ್ಮ್ಯಾ ವಿಯುಜ್ಯತೇ ಕೃಷ್ಣ ನ ಕದಾಚಿದ್ಯಥಾ ಭವಾನ್ ।
ತಥಾ ಕಲತ್ರಸಂಬಂಧೋ ದೇವ ಮಾ ಮೇ ಪ್ರಣಶ್ಯತು ॥ ೧೨ ॥

---

೯. ಆ ಸ್ಥಂಡಿಲದಲ್ಲಿ ಲಕ್ಷ್ಮೀಸಹಿತವಾದ ಶ್ರೀಮನ್ನಾರಾಯಣನ ಪ್ರತಿಮೆಯನ್ನಿಟ್ಟು ಭಕ್ತಿಯಿಂದ ಆ ಕಾಲದಲ್ಲಿ ಸಿಕ್ಕುವ ಫಲ, ಪುಷ್ಪ, ಧೂಪ, ದೀಪ ನೈವೇದ್ಯಾದಿ ಸಮರ್ಪಣಾಪೂರ್ವಕವಾಗಿ ಅರ್ಚಿಸಬೇಕು.

೧೦. ಬಳಿಕ ಶ್ರೀ ಜಗತ್ಪತಿಗೆ ಪ್ರಣಾಮಮಾಡಿ "ಶ್ರೀವತ್ಸ ಧಾರಿನ್ ಶ್ರೀಕಾಂತ ಶ್ರೀಧಾಮನ್ ಶ್ರೀಪತೇವ್ಯಯ । ಗಾರ್ಹಸ್ಥ್ಯಂ ಮಾಪ್ರಣಾಶಂ ಮೇ ಯಾತುಧರ್ಮಾರ್ಥಕಾಮದಂ" ಎಲೈ ಶ್ರೀವತ್ಸವನ್ನು ಧರಿಸಿದವನೇ! ಶ್ರೀಕಾಂತನೇ! ಲಕ್ಷ್ಮಿಗೆ ಆಶ್ರಯವಾತನೇ! ನಾಶರಹಿತನೇ! ನನಗೆ ಧರ್ಮಾರ್ಥಕಾಮಪ್ರದವಾದ ಗೃಹಸ್ಥತೆಯು ನಾಶವಾಗದೇ ಇರಲಿ" ಎಂಬರ್ಥವುಳ್ಳ ಮಂತ್ರವನ್ನು ಹೇಳಬೇಕು- ಮತ್ತು

೧೧. "ಅಗ್ನಯೋಃ ಮಾ ಪ್ರಣಶ್ಯಂತು ಮಾಪ್ರಣಶ್ಯಂತು ದೇವತಾಃ । ಪಿತರೋ(ಮಾಪ್ರಣಶ್ಯಂತು ಮತ್ತೋ ದಾಂಪತ್ಯ ಭೇವತಃ ॥" ನಮ್ಮ ಆದರ್ಶ ದಾಂಪತ್ಯವನ್ನು ಅಗ್ನಿಗಳಾಗಲೀ ದೇವತೆಗಳಾಗಲೀ ಪಿತೃಗಳಾಗಲೀ ಭಂಗ ಪಡಿಸದೇ ಇರಲಿ ಎಂಬರ್ಥವುಳ್ಳ ಈ ಮಂತ್ರವನ್ನೂ ಹೇಳಬೇಕು.

೧೨. "ಲಕ್ಷ್ಮ್ಯಾವಿಯುಜ್ಯತೇ ಕೃಷ್ಣ ನ ಕದಾಚಿತ್ ಯಥಾಭವನ್ । ತಥಾ ಕಲತ್ರ ಸಂಬಂಧೋ ದೇವಮಾಮೇ ಪ್ರಣಶ್ಯತು ॥" ಎಲೈ ಶ್ರೀಮನ್ನಾರಾಯಣನೇ! ಯಾವಾಗಲೂ ಲಕ್ಷ್ಮೀದೇವಿಯನ್ನು ಹೇಗೆ ನೀನು ಅಗಲುವುದಿ

**ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ ।**
**ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ಜನ್ಮನಿಜನ್ಮನಿ ॥ ೧೩ ॥**

**ಏವಂ ಪ್ರಸಾದ್ಯ ಪೂಜಾಂ ಚ ಕೃತ್ವಾ ಲಕ್ಷ್ಮ್ಯಾ ಹರೇಸ್ತಥಾ ।**
**ಚಂದ್ರೋದಯೇ ಸ್ನಾನಪೂರ್ವಂ ಪಂಚಗವ್ಯೇನ ಸಂಯುತಂ ।**
**ವಿಪ್ರಾಯ ದಕ್ಷಿಣಾಂ ದದ್ಯಾತ್ಸ್ವಶಕ್ತ್ಯಾ ಫಲಸಂಯುತಾಂ ॥ ೧೪ ॥**

**ಅನೇನ ವಿಧಿನಾ ರಾಜನ್ ಯಾವನ್ಮಾಸ ಚತುಷ್ಟಯಂ ।**
**ಕೃಷ್ಣಪಕ್ಷೇ ದ್ವಿತೀಯಾಯಾಂ ಪ್ರಾಗುಕ್ತವಿಧಿಮಾಚರೇತ್ ॥ ೧೫ ॥**

**ಕಾರ್ತಿಕೇ ಚಾಥ ಸಂಪ್ರಾಪ್ತೇ ಶಯ್ಯಾಂ ಶ್ರೀಕಾಂತಸಂಯುತಾಂ ।**
**ಸೋಪಸ್ಕರಾಂ ಸೋದಕುಂಭಾಂ ಸಾನ್ನಾಂ ದದ್ಯಾದ್ವಿಜಾತಯೇ ॥ ೧೬ ॥**

---

ಲ್ಲವೋ ಹಾಗೆಯೇ ನನಗೂ ಕಳತ್ರಸಂಬಂಧವು ತಪ್ಪದೆ ಕೂಡಿರಲಿ ಎಂಬರ್ಥವುಳ್ಳ ಮಂತ್ರವನ್ನೂ ಮತ್ತು

೧೩. “ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ । ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ಜನ್ಮನಿ ಜನ್ಮನಿ ॥” ಅಯ್ಯಾ ವರದಾಯಕನೇ! ನಿನ್ನ ಹಾಸಿಗೆಯು ಹೇಗೆ ಲಕ್ಷ್ಮೀರಹಿತರಾಗಿರುವುದಿಲ್ಲವೋ ಹಾಗೆಯೇ ನನ್ನ ಶಯನವೂ ಜನ್ಮಜನ್ಮದಲ್ಲೂ ಪತ್ನೀ ಶೂನ್ಯವಾಗದೆ ಇರಲಿ. ಈ ಅರ್ಥವುಳ್ಳ ಮಂತ್ರಗಳನ್ನು ಉಚ್ಚರಿಸಿ ಪ್ರಾರ್ಥನೆಮಾಡಬೇಕು.

೧೪. ಶ್ರೀ ಲಕ್ಷ್ಮೀನಾರಾಯಣ ಪೂಜಾನಂತರದಲ್ಲಿ ಚಂದ್ರೋದಯ ಸಮಯದಲ್ಲಿ ಪಂಚಗವ್ಯಪೂರ್ವಕವಾಗಿ ಸ್ನಾನಮಾಡಿ ಸ್ವಶಕ್ತ್ಯಾನುಸಾರವಾಗಿ ಬ್ರಾಹ್ಮಣನಿಗೆ ಫಲಯುಕ್ತವಾಗಿ ದಕ್ಷಿಣೆಯನ್ನು ಕೊಡಬೇಕು.

೧೫. ಓ ರಾಜನೇ! ಶ್ರಾವಣಮಾಸದ ಕೃಷ್ಣಪಕ್ಷದ ದ್ವಿತೀಯೆಯಿಂದ ಪ್ರಾರಂಭಿಸಿ ನಾಲ್ಕುಮಾಸಗಳಲ್ಲೂ ಕೃಷ್ಣಪಕ್ಷ ದ್ವಿತೀಯಾ ತಿಥಿಯಲ್ಲಿ ಪೂರ್ವೋಕ್ತಪ್ರಕಾರ ಸ್ನಾನ ಪೂಜಾವಿಧಿಗಳನ್ನಾಚರಿಸಬೇಕು.

೧೬. ಅನಂತರ ಕಾರ್ತಿಕಮಾಸದಲ್ಲಿ ಬ್ರಾಹ್ಮಣನಿಗೆ ಉಪಧಾನಾದ್ಯುಪಸ್ಕರಗಳು, ಉದಕುಂಭ, ಅನ್ನ, ಶ್ರೀ ಲಕ್ಷ್ಮೀನಾರಾಯಣ ಪ್ರತಿಮೆ ಇವುಗಳೊಡನೆ ಉತ್ತಮವಾದ ಶಯ್ಯೆಯನ್ನು ದಾನಮಾಡಬೇಕು.

ಪ್ರತಿಮಾಸಂ ಚ ಸೋಮಾಯ ಅರ್ಘ್ಯಂ ದದ್ಯಾತ್ಸಮಂತ್ರಕಂ ।
ದಧ್ಯಕ್ಷತೈರ್ಮೂಲಫಲೈ ರತ್ನೈಃ ಸೌವರ್ಣಭಾಜನೈಃ ॥ ೧೭ ॥

ಗಗನಾಂಗಣಸದ್ದೀಪ ದುಗ್ಧಾಬ್ಧಿಮಥನೋದ್ಭವ ।
ಭಾಭಾಸಿತದಿಗಾಭೋಗ ರಮಾನುಜ ನಮೋಽಸ್ತು ತೇ ॥ ೧೮ ॥

ಏವಂ ಕರೋತಿ ಯಃ ಸಮ್ಯಙ್ನರೋ ಮಾಸಚತುಷ್ಟಯಂ ।
ತಸ್ಯ ಜನ್ಮತ್ರಯಂ ಯಾವದ್ಗೃಹಭಂಗೋ ನ ಜಾಯತೇ ॥ ೧೯ ॥

ಅಶೂನ್ಯಶಯನಶ್ಚೈವ ಧರ್ಮಕಾಮಾರ್ಥಸಾಧಕಃ ।
ಭವತ್ಯವ್ಯಾಹತೈಶ್ವರ್ಯಃ ಪುರುಷೋ ನಾತ್ರಸಂಶಯಃ ॥ ೨೦ ॥

ನಾರೀ ಚ ಪಾರ್ಥ ಧರ್ಮಜ್ಞಾ ವ್ರತಮೇತದ್ಯಥಾವಿಧಿ ।
ಯಾ ಕರೋತಿ ನ ಸಾ ಶೋಚ್ಯಾ ಬಂಧುವರ್ಗಸ್ಯ ಜಾಯತೇ ॥ ೨೧ ॥

---

೧೭. ಪ್ರತಿಮಾಸದಲ್ಲಿಯೂ ಚಂದ್ರನಿಗೆ ದಧಿ, ಅಕ್ಷತೆ, ಕಂದ, ಮೂಲ, ಫಲ, ರತ್ನ, ಸ್ವರ್ಣಭಾಜನ ಇವುಗಳ ಸಹಿತವಾಗಿ ಸಮಂತ್ರಕವಾಗಿ ಅರ್ಘ್ಯ ಪ್ರದಾನ ಮಾಡಬೇಕು.

೧೮. " ಗಗನಾಂಗಣ ಸದ್ದೀಪ ದುಗ್ಧಾಬ್ಧಿಮಥನೋದ್ಭವ । ಭಾಭಾಸಿತ ದಿಗಾಭೋಗ ರಮಾನುಜ ನಮೋಽಸ್ತುತೇ ॥ " ಎಂಬದಾಗಿ ಮಂತ್ರೋಚ್ಚಾರಣೆ ಮಾಡುತ್ತಾ ಅರ್ಘ್ಯಪ್ರದಾನಮಾಡಬೇಕು.

೧೯. ಈ ಪ್ರಕಾರ ಯಾವ ಪುರುಷನು ವಿಧಿವತ್ತಾಗಿ ನಾಲ್ಕುತಿಂಗಳು ಆಚರಿಸುವನೋ ಅವನಿಗೆ ಮುಂದಿನ ಮೂರು ಜನ್ಮದಲ್ಲೂ ಗಾರ್ಹಸ್ಥ್ಯ ಭಂಗ ವಾಗುವುದಿಲ್ಲ.

೨೦. ಮತ್ತು ಅಶೂನ್ಯಶಯನೀ ವ್ರತಾಚರಣೆಯಿಂದ ಪುರುಷನು ಧರ್ಮ ಕಾಮಾರ್ಥಗಳೆಂಬ ತ್ರಿವರ್ಗಗಳನ್ನು ಪಡೆಯುವನು. ಅಲ್ಲದೆ ನಿಶ್ಚಯವಾಗಿಯೂ ಅಖಂಡೈಶ್ವರ್ಯಾಧಿಪತಿಯಾಗುವನು.

೨೧. ಎಲೈ ಧರ್ಮರಾಜನೇ ! ನಾರಿಯು ಯಥಾವಿಧಿಯಾಗಿ ಈ ವ್ರತಾ ಚರಣೆ ಮಾಡಿದರೆ ವೈಧವ್ಯ ಪ್ರಾಪ್ತಿಯಿಂದ ಬಂಧುವರ್ಗಕ್ಕೆ ಶೋಚನೀಯಳಾಗು ವುದಿಲ್ಲ.

ವೈಧವ್ಯಂ ದುರ್ಭಗತ್ವಂ ಚ ಭರ್ತೃತ್ಯಾಗಂ ಚ ಸತ್ತಮ ।
ಪ್ರಾಪ್ನೋತಿ ಜನ್ಮತ್ರಿತಯಂ ನ ಸಾ ಪಾಂಡುಕುಲೋದ್ವಹಃ ॥ ೨೨ ॥

ಏಷಾಹ್ಯಶೂನ್ಯಶಯನಾ ನೃಪತೇ ದ್ವಿತೀಯಾ ।
ಖ್ಯಾತಾ ಸಮಸ್ತಕಲುಷಾಪಹರಾದ್ವಿತೀಯಾ ।
ಏತಾಂ ಸಮಾಚರತಿ ಯಃ ಪುರುಷೋಽಥ ಯೋಷಿತ್ ।
ಪ್ರಾಪ್ನೋತ್ಯಸೌ ಶಯನಮಗ್ರ್ಯಮಹಾರ್ಘಭೋಗ್ಯಂ ॥ ೨೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಅಶೂನ್ಯಶಯನ ವ್ರತಮಾಹಾತ್ಮ್ಯಂ
ನಾಮ ಪಂಚದಶೋಽಧ್ಯಾಯಃ.



---

೨೨. ಮತ್ತು ಆಕೆಯ ದೌರ್ಭಾಗ್ಯವೂ ಸಹ ನಿವೃತ್ತಿಯಾಗುವುದು. ಮುಂದಿನ ಮೂರು ಜನ್ಮಗಳಲ್ಲೂ ಪತಿಪರಿತ್ಯಾಗವು ಸಂಭವಿಸಲಾರದು.

೨೩. ಎಲೈ ರಾಜನೇ ! ಸಮಸ್ತ ಪಾಪನಿವಾರಕವಾದ ಈ ದ್ವಿತೀಯಾ ತಿಥಿಯು "ಅಶೂನ್ಯಶಯನಾ" ಎಂಬ ನಾಮಧೇಯದಿಂದ ಜಗದ್ವಿಖ್ಯಾತವಾಗಿದೆ. ಈ ತಿಥಿಯಲ್ಲಿ ಉಕ್ತವ್ರತವನ್ನಾಚರಿಸುವ ಗಂಡಸು ಅಥವಾ ಹೆಂಗಸು ಉತ್ತಮವೂ ಬಹು ಬೆಲೆಯುಳ್ಳದೂ ಆದ ಶಯ್ಯಾಭೋಗವನ್ನು ಪಡೆಯುವರು ಅಲ್ಲದೆ ಎಂದಿಗೂ ವಿಯೋಗದುಃಖವನ್ನು ಹೊಂದುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಶೂನ್ಯಶ
ವ್ರತಮಹಾತ್ಮ್ಯೆ ವರ್ಣನೆ ಎಂಬ ಹದಿನೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷೋಡಶೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಫಾಲ್ಗುನೇಽಪ್ಯಸಿತೇ ಪಕ್ಷೇ ತೃತೀಯಾಯಾಮುಪೋಷಿತಾ ।
ಪ್ರಾತಃ ಸ್ಥಿತ್ವಾ ಬ್ರಹ್ಮಚರ್ಯೇ ಜಟಾಮುಕುಟಶೋಭಿತಾ ॥ ೧ ॥

ಗೋಧಾರಥಗತಾಂ ದೇವೀಂ ರುದ್ರಧ್ಯಾನಪರಾಯಣಾಂ ।
ಪೂಜಯೇದ್ಗಂಧಕುಸುಮೈರ್ದೀಪಾಲಕ್ತಕ ಚಂದನೈಃ ।
ಕೇಸರೈರ್ಮಧುರೈರ್ದ್ರವ್ಯೈಃ ಸ್ವರ್ಣಮಾಣಿಕ್ಯ ಪೂಜಯಾ ॥ ೨ ॥

---

### ಹದಿನಾರನೆಯ ಅಧ್ಯಾಯ

೧-೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಯಾವ ನಾರಿಯು ಫಾಲ್ಗುಣಮಾಸದ ಕೃಷ್ಣಪಕ್ಷದ ತೃತೀಯಾ ತಿಥಿಯಲ್ಲಿ ಉಪವಾಸ ವನ್ನಾಚರಿಸಿ ಜಿತೇಂದ್ರಿಯತೆಯಿಂದ ಇದ್ದು, ಜಟಾ ಮುಕುಟ ಶೋಭಿತಳೂ, ಉಡುವನ್ನು ಕಟ್ಟಿದ ರಥದಲ್ಲಿ ಕುಳಿತವಳೂ, ರುದ್ರಧ್ಯಾನಪರಳೂ ಆಗಿರುವ ಶ್ರೀ ಗೌರಿಯನ್ನು ಒಂದು ದೊಡ್ಡ ಮಧೂಕ (ಹಿಪ್ಪೆ) ವೃಕ್ಷದ ಬಳಿ ಗಂಧ, ಕುಸುಮ, ಧೂಪ, ದೀಪ, ಅಲಕ್ತಕ, ಚಂದನ, ಕೇಸರಿ, ಮಧುರ ದ್ರವ್ಯಗಳು ಮತ್ತು ಸ್ವರ್ಣ ಮಾಣಿಕ್ಯ ಇವುಗಳಿಂದ ಪೂಜಿಸಬೇಕು.

ಓಂ ಭೂಷಿಕಾ ದೇವಭೂಷಾ ಚ ಭೂಷಿಕಾ ಲಲಿತಾ ಉಮಾ ।
ತಪೋವನರತಾ ಗೌರೀ ಸೌಭಾಗ್ಯಂ ಮೇಪ್ರಯಚ್ಛತು ॥ ೩ ॥

ದೌರ್ಭಾಗ್ಯಂ ಮೇ ಶಮಯತು ಸುಪ್ರಸನ್ನಮನಾಃ ಸದಾ ।
ಅವೈಧವ್ಯಂ ಕುಲೇ ಜನ್ಮ ದದಾತ್ವಪರಜನ್ಮನಿ ॥ ೪ ॥

ಅಂಗೇಂಗೇ ಚ ಮನೋಪಾಂಗೇ ಪರ್ವೇಪರ್ವೇ ಸ್ಥಿತಾಮೃತಂ ।
ಸುಖದೃಷ್ಟಿಸ್ಪರ್ಶರಸಂ ಗೌರೀ ಸೌಭಾಗ್ಯಂ ಯಚ್ಛತು ॥ ೫ ॥

ಏವಮುಚ್ಚಾರ್ಯ ಮಂತ್ರಾಂಶ್ಚ ನಾರೀಜ್ಞಾನವತೀ ಸತೀ ।
ಪೂಜಯೇದ್ಬ್ರಾಹ್ಮಣೋಕ್ತೈಸ್ತು ಮಂತ್ರೈರ್ಮುಖಸುವಾಸಿನೀ ॥ ೬ ॥

---

೩. "ಭೂಷಿಕಾ ದೇವಭೂಷಾಚ ಭೂಷಿಕಾ ಲಲಿತಾ ಉಮಾ। ತಪೋವನ ಗತಾ ಗೌರೀ ಸೌಭಾಗ್ಯಂ ಮೇ ಪ್ರಯಚ್ಛತು ॥" ದೇವಭೂಷಣ ಭೂಷಿತೆಯೂ ತಪೋವನ ಸ್ಥಿತೆಯೂ ಆದ ಲಲಿತೆಯು ನನಗೆ ಸೌಮಂಗಲ್ಯ ವನ್ನು ಕರುಣಿಸಲಿ ಎಂಬರ್ಥದ ಮಂತ್ರವನ್ನು ಜಪಿಸಬೇಕು.

೪. "ದೌರ್ಭಾಗ್ಯಂ ಮೇ ಶಮಯತು ಸುಪ್ರಸನ್ನಂ ಮನಾಃ ಸದಾ । ಅವೈಧವ್ಯಂ ಕುಲೇ ಜನ್ಮ ದದಾತ್ವಪರಜನ್ಮನಿ ॥" ನೀನು ಸದಾ ಸುಪ್ರಸನ್ನೆ ಯಾಗಿ ನನ್ನ ದೌರ್ಭಾಗ್ಯವನ್ನು ಹೋಗಲಾಡಿಸಿ ಎಲ್ಲಾ ಜನ್ಮಗಳಲ್ಲೂ ವೈಧವ್ಯ ರಹಿತಳನ್ನಾಗಿ ಮಾಡು ಎಂಬರ್ಥದ ಮಂತ್ರವನ್ನು ಜಪಿಸಿ ಪೂಜಿಸಬೇಕು.

೫. "ಅಂಗೇಂಗೇ ಚ ಮನೋಪಾಂಗೇ ಪರ್ವೇಪರ್ವೇ ಸ್ಥಿತಾಮೃತಂ। ಸುಖದೃಷ್ಟಿ ಸ್ಪರ್ಶರಸಂ ಗೌರೀಭಾಗ್ಯಂ ಪ್ರಯಚ್ಛತು॥" ಮಹಾದೇವಿಯು ನನ್ನ ಅಂಗೋಪಾಂಗಗಳಿಂದಲೂ ಅಮೃತ ಸ್ಯಂದಿಯಾಗುವಂತೆ ಸುಖದೃಷ್ಟಿ ಸುಖ ಸ್ಪರ್ಶ ಮೊದಲಾದ ಸೌಭಾಗ್ಯವನ್ನು ಕೊಡಲಿ ಎಂಬರ್ಥವುಳ್ಳ ಮಂತ್ರದಿಂದ

೬. ಸುಜ್ಞಾನಿಯಾದ ನಾರಿಯು ಆ ಗೌರಿಯನ್ನು ತೃಪ್ತಿಪಡಿಸಿ ಬ್ರಾಹ್ಮ ಣೋಕ್ತವಾದ ಇತರ ಮಂತ್ರಗಳಿಂದಲೂ ಪೂಜಿಸಬೇಕು.

ಜೀರಕೈಃ ಕಟುಹುಂಡ್ಯೈಶ್ಚ ಲವಣೈರ್ಗುಡಸರ್ಪಿಷಾ ।
ಹೃದ್ಯೈರಾರ್ದ್ರೈಃ ಫಲೈಃ ಸ್ವರ್ಣೈರ್ಮನೋಜ್ಞೈಃ ಪುಷ್ಪಬಂಧನೈಃ ॥ ೭ ॥

ಕುಸುಮ್ಭೈಃ ಕುಂಕುಮೈರ್ಗಂಧೈಃ ಕಾಲೇಯಾಗುರುಚಂದನೈಃ ।
ಸಿಂಧೂರೇಣಾತಿರಕ್ತೇನ ವಸ್ತ್ರೈರ್ನಾನಾವಿಧೈಃ ಶುಭೈಃ ॥ ೮ ॥

ನೇತ್ರೈರನೇಕದೇಶೋತ್ಥೈಃ ಪೂಪಕೈಸ್ತಿಲತಂಡುಲೈಃ ।
ಅಶೋಕೈಶ್ಚ ವಿಗುಣಕೈರ್ಘೃತಪೂರ್ಣೈಸ್ತು ಮೋದಕೈಃ ॥ ೯ ॥

ಇತ್ಯೇವಮಾದಿನೈವೇದ್ಯೈಃ ಪೂಜಯಿತ್ವಾ ಮಹಾದ್ರುಮಂ ।
ಪ್ರದಕ್ಷಿಣಂ ತತಃ ಕೃತ್ವಾ ದತ್ವಾ ವಿಪ್ರಾಯ ದಕ್ಷಿಣಾಂ ॥ ೧೦ ॥

ಏತತ್ಕರೋತಿ ಯಾ ಪುತ್ರೀ ತೃತೀಯಾವ್ರತಮುತ್ತಮಂ ।
ತತಃ ಪ್ರಾಪ್ಸ್ಯತಿ ದುಷ್ಪ್ರಾಪಂ ತ್ರೈಲೋಕ್ಯೇ ಶ್ರೀಧರಂ ಪ್ರತಿ ॥ ೧೧ ॥

---

೭. ಮತ್ತು ಮುಖಕ್ಕೆ ಸುವಾಸನಾಪ್ರದವಾಗುವಂತೆ ಜೀರಿಗೆ, ಉಪ್ಪು, ಗುಡ, ಘೃತ ಮನೋಹರವಾದ ಆರ್ದ್ರಫಲ ಮತ್ತು ಮನೋರಂಜಕವಾದ ಸುವರ್ಣ, ಪುಷ್ಪಮಾಲೆ ಮತ್ತು

೮-೯. ಕುಂಕುಮ, ಶ್ರೀಗಂಧ, ರಕ್ತಸಿಂಧೂರ, ಕಾಲಾಗುರು ನಾನಾ ವಿಧದ ಅನೇಕ ದೇಶಗಳಲ್ಲಿ ತಯಾರಾದ ಶುಭವಸ್ತ್ರಗಳು, ಇವುಗಳನ್ನು ಸಮರ್ಪಿಸಿ ಅಪೂಪ, ತಿಲಾಕ್ಷತೆ ಮತ್ತು ವಿಶಿಷ್ಟ ಗುಣವುಳ್ಳ ಅಶೋಕಪುಷ್ಪ ಇತ್ಯಾದಿ ಗಳಿಂದ ಪೂಜಿಸಿ,

೧೦. ಘೃತಪಕ್ವವಾದ ಮೋದಕಾದಿ ನೈವೇದ್ಯಗಳನ್ನೂ ಸಮರ್ಪಿಸಿ ಆ ಮಧೂಕ ವೃಕ್ಷಕ್ಕೆ ಪ್ರದಕ್ಷಿಣೆ ಮಾಡಿ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡ ಬೇಕು.

೧೧. ಈ ಮಧೂಕತೃತೀಯಾ ವ್ರತವನ್ನು ಯಾವಳು ಆಚರಿಸುವಳೋ ಅವಳು ತ್ರೈಲೋಕ್ಯದಲ್ಲೂ ದುಷ್ಪ್ರಾಪ್ಯನಾದವನನ್ನು ಸೇರುವಳು.

ಏತದ್ವ್ರತಂ ಮಯಾಖ್ಯಾತಂ ಯಾಸ್ಯಂತಿ ಶಾಶ್ವತೀಃ ಸಮಾಃ ।
ವ್ಯಾಖ್ಯಾತಂ ಕಶ್ಯಪೇನಾದೌ ರುಕ್ಮಿಣ್ಯಾವ್ರತಮುತ್ತಮಂ ॥ ೧೨ ॥

ಯಾಶ್ಚರಿಷ್ಯಂತಿ ತಾಃ ಸರ್ವಾ ಭವಿಷ್ಯಂತಿ ನಿರಾಮಯಾಃ ।
ಅಂಗಪ್ರತ್ಯಂಗಸುಭಗಾ ಲೋಕದೃಷ್ಟಿಮನೋಹರಾಃ ॥ ೧೩ ॥

ಸ್ಥಿತ್ವಾ ವರ್ಷಶತಂ ಚಾಂತೇ ತತೋ ರುದ್ರಪುರಂ ಶುಭಂ ।
ಯಾಸ್ಯಂತಿ ಹಂಸಯಾನೇನ ಕಿಂಕಿಣೀಶಬ್ದನಾದಿನಾ ॥ ೧೪ ॥

ತತ್ರ ತ್ವಾರಮಯಿಷ್ಯಂತಿ ಸ್ವಭರ್ತ್ಯನ್ಸ್ವತ್ಸರಾನ್ಬಹೂನ್ ।
ದಿವ್ಯಭೋಗಭುಜೋ ಹೃಷ್ಟಾಃ ಸಿದ್ಧ್ಯಷ್ಟಕಸಮನ್ವಿತಾಃ ॥ ೧೫ ॥

ಅರ್ಘ್ಯಂ ಮಹಾರ್ಘಮಣಿ ಕುಂಕುಮಕೇಸರಾಢ್ಯಂ
ಸ್ರಗ್ಗಂಧಮುಗ್ಧಮುಖರಾಲಿ ಕುಲೋಪಗೀತಂ ।

---

೧೨. ಓ ರಾಜನೇ ! ನಾನು ನಿನಗೆ ಹೇಳಿದ ಈ ವ್ರತವನ್ನು ಪೂರ್ವದಲ್ಲಿ ಕಶ್ಯಪನು ರುಕ್ಮಿಣಿದೇವಿಗೆ ಉಪದೇಶಮಾಡಿದ್ದನು.

೧೩. ಈ ವ್ರತವನ್ನು ಯಾವ ಸ್ತ್ರೀಯರು ಆಚರಿಸುವರೋ ಅಂಥವರು ನೀರೋಗಿಗಳೂ ಅಂಗ ಪ್ರತ್ಯಂಗಗಳಲ್ಲಿ ಬಹು ಸೌಂದರ್ಯಯುಕ್ತರೂ ಜನರ ದೃಷ್ಟಿಗೆ ಮನೋಹರರೂ ಆಗಿ,

೧೪. ನೂರುವರ್ಷ ಬದುಕಿದ್ದು ಕೊನೆಗೆ ಕಿಂಕಿಣಿ ಶಬ್ದಸಹಿತವಾದ ಹಂಸಯುಕ್ತವಾದ ವಿಮಾನದಲ್ಲಿ ಕುಳಿತು ರುದ್ರಲೋಕಕ್ಕೆ ಹೋಗುವರು.

೧೫. ಅಲ್ಲಿ ತಮ್ಮ ಪತಿಯರೊಂದಿಗೆ ಅನೇಕ ದಿವ್ಯಭೋಗಗಳನ್ನನುಭವಿಸುವುದಲ್ಲದೇ ಅಣಿಮಾದ್ಯಷ್ಟ ಸಿದ್ಧಿಗಳಿಂದ ಕೂಡಿದವರೂ ಆಗಿ ಲೋಲುಪ್ತಿಯಿಂದ ಇರುತ್ತಾರೆ.

೧೬. ನಾರಿಯು ಮಧೂಕವೃಕ್ಷವನ್ನು ಮಹಾಬೆಲೆಯುಳ್ಳ ಮಣಿ, ಕುಂಕುಮಕೇಸರಿ, ಪುಷ್ಪಮಾಲ್ಯ, ಗಂಧ, ಇತ್ಯಾದಿಗಳಿಂದ ಪೂಜಿಸಿ ಫಲಾದಿ ಸಮರ್ಪಣೆ

**ದತ್ವಾ ಫಲಾಕ್ಷತಯುತಂ ಮಧೂಪಾದಪಸ್ಯ**
**ಗೌರೀವ ಲೋಕಮಹಿತಾ ಭವತೀಹ ನಾರೀ** ॥ ೧೬ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಧೂಕ ತೃತೀಯಾವ್ರತ ವರ್ಣನಂ ನಾಮ ಷೋಡಶೋಽಧ್ಯಾಯಃ**



ಯನ್ನು ಮಾಡುವುದರಿಂದ ಸ್ತ್ರೀ ಸಾಕ್ಷಾತ್ ಗೌರಿಯಂತೆ ಪೂಜ್ಯಳಾಗುವಳು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಮಧೂಕ ತೃತೀಯಾ ವ್ರತವರ್ಣನೆಯೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತದಶೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಮೋಘಪಾಲೀವ್ರತಂ ಕೃಷ್ಣ ಕದಾಚಿತ್ಕ್ರಿಯತೇ ನೃಭಿಃ ।
ಕಿಂ ಪುಣ್ಯಂ ಕಿಮನುಷ್ಠಾನಂ ಕೀದೃಗ್ವಲ್ಲೀ ಸ್ಮೃತಾ ತು ಸಾ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಆಶ್ವಯುಕ್ಕೃಷ್ಣಪಕ್ಷೇ ತು ತೃತೀಯಾಯಾಂ ಯುಧಿಷ್ಠಿರ ।
ಮೋಘಪಾಲ್ಯೈ ಪ್ರದಾತವ್ಯೋ ಭಕ್ತ್ಯಾ ಸ್ತ್ರೀಭಿರ್ನೃಭಿಸ್ತಥಾ ॥ ೨ ॥

---

## ಹದಿನೇಳನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—"ಎಲೈ ಕೃಷ್ಣನೇ ! ಮನುಷ್ಯರು ಕದಾಚಿತ್ ಮೋಘಪಾಲೀ ವ್ರತವನ್ನಾಚರಿಸುವುದುಂಟಷ್ಟೆ. ಆ ವ್ರತಾಚರಣೆಯಿಂದ ಯಾವ ಫಲವು ಬರುವುದು. ಅದರ ಅನುಷ್ಠಾನ ಕ್ರಮವೇನು ? ಮೋಘಪಾಲೀ ಲತೆಯು ಹೇಗಿರುವುದು? ಎಂಬುದನ್ನು ನನಗೆ ವಿವರಿಸಿ ಹೇಳು" ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಧರ್ಮರಾಜನೇ ! ಆಶ್ವಯುಜಮಾಸದ ಕೃಷ್ಣಪಕ್ಷ ತೃತೀಯೆಯಲ್ಲಿ ಧರ್ಮಾಭಿಲಾಷಿಯಾದ ಸ್ತ್ರೀಯಾಗಲಿ ಅಥವಾ ಪುರುಷನಾಗಲಿ ಭಕ್ತಿಪೂರ್ವಕವಾಗಿ ಮೋಘಪಾಲೀನಾಮಕ ಲತೆಗೆ ಅರ್ಘ್ಯ ಪ್ರದಾನ ಮಾಡಬೇಕು.

ಅಘೋರ್ ವಿರೂಢೈರ್ಗೋಧೂಮ್ಯೈಃ ಸಪ್ತಧಾನ್ಯಸಮನ್ವಿತೈಃ ।
ತಿಲತಂಡುಲಪಿಂಡೈರ್ವಾ ದಾತವ್ಯೋ ಧರ್ಮಲಿಪ್ಸುಭಿಃ ॥ ૩ ॥

ತಾಂಬೂಲಸದೃಶೈಃ ಪರ್ಣೈ ರಕ್ತಾ ವಲ್ಲೀ ಸಮಂಜರೀ ।
ವಾಟೀಷು ಗ್ರಾಮಮಾರ್ಗೇಷು ಪ್ರೋತ್ಥಿತಾ ಪರ್ವತೇಽಪಿ ಚ ॥ ೪ ॥

ಮೇಘಪಾಲ್ಯಾಂ ಧಾನ್ಯತೈಲಗುಡಕುಂಕುಮಹೈಮನಾನ್ ।
ಪದಾನಪಿ ಚ ಕುರ್ವಂತಿ ಜನಾ ವಾಣಿಜ್ಯಜೀವನಾಃ ॥ ೫ ॥

ಪಾಪಂ ಸತ್ಯಾನೃತಂ ಕೃತ್ವಾ ದ್ರವ್ಯಲುಬ್ಧಾಃ ಫಲಾನ್ವಿತಾಃ ।
ಅರ್ಘ್ಯಂ ದತ್ವಾ ಮೇಘಪಾಲ್ಯೈ ನಾಶಯಂತಿ ಕ್ಷಣಾದಿಹ ॥ ೬ ॥

ಮಾನೋನ್ಮಾನೈರ್ಜನ್ಮಮಧ್ಯೇ ಯತ್ಪಾಪಂ ಕುತ್ರಚಿತ್ಕೃತಂ ।
ತತ್ಸರ್ವಂ ನಾಶಮಾಯಾತಿ ವ್ರತೇನಾನೇನ ಪಾಂಡವ ॥ ೭ ॥

---

೩. ಹೀಗೆ ಅರ್ಘ್ಯ ಕೊಡುವವರು ಧರ್ಮಲಾಭಾಪೇಕ್ಷೆಯುಳ್ಳವರಾದರೆ ಸಪ್ತಧಾನ್ಯಯುತವಾಗಿಯೋ ಗೋಧೂಮಾಂಕುರಗಳಿಂದಲೋ ತಿಲತಂಡುಲ ಪಿಷ್ಟಗಳಿಂದಲೋ ಪೂಜೆಮಾಡಬೇಕು.

೪. ಪುಷ್ಪೋದ್ಯಾನ, ಗ್ರಾಮಮಾರ್ಗ ಅಥವಾ ಪರ್ವತಗಳಲ್ಲಿ ಉದ್ಭವಿಸಿ ವೀಳೆಯದೆಲೆ ಬಳ್ಳಿಗೆ ಇರುವ ಹಾಗೆ ಗಿಣ್ಣುಗಳಿಂದ ಕೂಡಿದುದೂ, ಮಂಜರೀ ಯುತವೂ ಆದ ರಕ್ತವರ್ಣದ ಲತೆಗೆ ಮೇಘಪಾಲೀ ಎಂದು ಹೆಸರು.

೫-೬. ವ್ಯಾಪಾರದಿಂದ ಜೀವಿಸುವ ಜನರು ಮೇಘಪಾಲೀ ಲತೆಯಲ್ಲಿ ಧಾನ್ಯೋದ್ಭವ ತೈಲ, ಗುಡ, ಕುಂಕುಮಾದಿಗಳಿಂದ ಚಿಹ್ನೆಗಳನ್ನು ಮಾಡುವರು. ಆ ಜನರು ಮೇಘಪಾಲಿಗೆ ಫಲಸಹಿತವಾಗಿ ಅರ್ಘ್ಯಪ್ರದಾನ ಮಾಡುವುದರಿಂದ ಹಣದಾಸೆಯಿಂದ ಸತ್ಯವನ್ನು ಮರೆಮಾಚಿ ಅನೃತಭಾಷಣದಿಂದ ಗಳಿಸಿದ ಪಾಪ ವನ್ನು ಕ್ಷಣಮಾತ್ರದಲ್ಲಿ ನಾಶಮಾಡಿಕೊಳ್ಳುವರು.

೭. ಅಯ್ಯಾ ಪಾಂಡುಪುತ್ರನೇ ! ಕ್ರಯ ವಿಕ್ರಯ ಸಂಬಂಧಮಾಡುವಾಗ ಜನ್ಮಮಧ್ಯೆ ಎಲ್ಲಾದರೂ ಪಾಪ ಸಂಭವಿಸಿದ್ದರೆ ಈ ವ್ರತಾಚರಣೆಯಿಂದ ಆ ಪಾಪವು ನಾಶವಾಗುವುದು.

ಮೇಘಪಾಲೀ ಶುಭೇ ಸ್ಥಾನೇ ಶುಭೇ ದೇಶೇ ಸಮುತ್ಥಿತಾ ।
ಪೂಜನೀಯಾ ವರಸ್ತ್ರೀಭಿಃ ಫಲೈಃ ಪುಷ್ಪೈಸ್ತಥಾಕ್ಷತೈಃ ॥ ೮ ॥

ಖರ್ಜೂರೈರ್ನಾರಿಕೇರೈಶ್ಚ ದಾಡಿಮ್ಬೈಃ ಕರವೀರಕೈಃ ।
ಗಂಧಧೂಪೈರ್ದಧಿದೀಪೈರ್ವಿರೂಢೈರ್ಧಾನ್ಯಸಂಚಯೈಃ ॥ ೯ ॥

ರಕ್ತವಸ್ತ್ರೈಃ ಸಮಾಚ್ಛಾದ್ಯ ಪಿಷ್ಟಾತಕವಿಭೂಷಿತಾಂ ।
ಕೃತ್ವಾರ್ಘ್ಯಃ ಸಂಪ್ರದಾತವ್ಯೋ ಮಂತ್ರೇಣಾನೇನ ಭಾರತ ॥ ೧೦ ॥

ವೇದೋಕ್ತೇನ ದ್ವಿಜೋ ವಿದ್ವಾಂಸ್ತಚ್ಚ ತಸ್ಮೈ ನಿವೇದಯೇತ್ ।
ಇತ್ಯೇವಂ ಪೂಜಯಿತ್ವಾ ತಾಂ ಮೇಘಪಾಲೀಂ ಪುಮಾಂಸ್ತತಃ ॥ ೧೧ ॥

ನಾರೀ ವಾ ಪುರುಷವ್ಯಾಘ್ರ ಪ್ರಾಪ್ನೋತಿ ಪರಮಾಂ ಶ್ರಿಯಂ ।
ಸ್ಥಿತ್ವಾ ವರ್ಷಶತಂ ಮರ್ತ್ಯೇ ಸುಖಸೌಭಾಗ್ಯಗರ್ವಿತೇ ॥ ೧೨ ॥

---

೮. ಶುಭದೇಶ ಮತ್ತು ಶುಭಸ್ಥಾನಗಳಲ್ಲಿ ಹುಟ್ಟಿರುವ ಮೇಘಪಾಲಿಯನ್ನು ಉತ್ತಮಸ್ತ್ರೀಯರು ಫಲ, ಪುಷ್ಪ, ಅಕ್ಷತೆ ಇವುಗಳಿಂದಲೂ,

೯. ಮತ್ತು ಖರ್ಜೂರ, ನಾರಿಕೇಳ, ದಾಡಿಂಬ, ಕರವೀರ, ಗಂಧ, ಧೂಪ, ದಧಿ, ದೀಪ, ಸಪ್ತಧಾನ್ಯಗಳು ಮತ್ತು ಮೊಳಕೆಯಾದ ಧಾನ್ಯಸಮೂಹ ಇವುಗಳಿಂದಲೂ ಪೂಜಿಸಿ,

೧೦. ರಕ್ತವಸ್ತ್ರದಿಂದ ಲತೆಯನ್ನು ಆಚ್ಛಾದಿಸಿ, ವೇದೋಕ್ತವಾದ ಈ ಮಂತ್ರಗಳಿಂದ ಮೇಘಪಾಲಿಗೆ ಅರ್ಘ್ಯವನ್ನು ಕೊಡಬೇಕು.

೧೧. ಬಳಿಕ ಅರ್ಘ್ಯ ದ್ರವ್ಯಗಳನ್ನು ಬ್ರಾಹ್ಮಣನಿಗೆ ಸಮರ್ಪಣ ಮಾಡಬೇಕು. ಈ ರೀತಿ ಮೇಘಪಾಲಿಗೆ ಸ್ತ್ರೀಯು ಅಥವಾ ಪುರುಷನು ಪೂಜೆಮಾಡಿದರೆ ಆ ವ್ಯಕ್ತಿಗೆ ಅತುಲಸಂಪತ್ತು ಲಭಿಸುವುದು.

೧೨. ಅಲ್ಲದೆ ಸುಖಸೌಭಾಗ್ಯಸಮನ್ವಿತರಾಗಿ ಭೂಲೋಕದಲ್ಲಿ ಸಹಸ್ರ ವರ್ಷ ಪರ್ಯಂತ ಮೆರೆಯುವರು.

ವಿಷ್ಣುಲೋಕಮವಾಪ್ನೋತಿ ದೇಹಾಂತೇ ಯಾನಸಂಸ್ಥಿತಃ ।
ಕುಲಾನಿ ಸಪ್ತ ನಯತಿ ಸ್ವರ್ಗಂ ಸ್ವಾನಿ ರಸಾತಲಾತ್ ।
ಉದ್ಧೃತ್ಯ ನಾತ್ರ ಸಂದೇಹಸ್ತ್ವಯಾ ಕಾರ್ಯೋ ಯುಧಿಷ್ಠಿರ ॥ ೧೩ ॥

ಯೋಮಾನವೋ ನರಕಭೀರುತಯಾ ದದಾತಿ
ಯೋಽರ್ಘ್ಯಂಫಲಾದ್ಯನುಯುತಂ ನನು ಮೇಘಪಾಲೇಃ ।
ಉನ್ಮಾನಕೂಟಕಪಟಾನಿ ಕೃತಾನಿ ಯಾನಿ
ಪಾಪಾನಿ ಹಂತಿ ಸವಿತೇವ ತಮಃ ಪ್ರರೋಹಾನ್ ॥ ೧೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮೇಘಪಾಲೀ ತೃತೀಯಾವ್ರತವರ್ಣನಂ ನಾಮ ಸಪ್ತದಶೋಽಧ್ಯಾಯಃ.



---

೧೩. ದೇಹಾಂತದಲ್ಲಿ ವಿಮಾನಸ್ಥರಾಗಿ ವಿಷ್ಣುಲೋಕಕ್ಕೆ ಹೋಗುತ್ತಾರೆ. ಓ ಯುಧಿಷ್ಠಿರನೇ ! ಈ ವ್ರತವನ್ನಾಚರಿಸಿದವನ ಸಪ್ತಕುಲಗಳು ರಸಾತಳದಿಂದ ಉದ್ಧೃತವಾಗಿ ಸ್ವರ್ಗವನ್ನು ಪಡೆಯುವುವು. ಈ ವಿಷಯದಲ್ಲಿ ಕಿಂಚಿತ್ತೂ ಸಂದೇಹವಿಲ್ಲ.

೧೪. ಯಾವ ಪುರುಷನು ನರಕಭೀರುವಾಗಿ ಭಕ್ತಿವಿನಯದಿಂದ ಮೇಘಪಾಲಿಗೆ ಫಲಸಮೇತ ಅರ್ಘ್ಯಪ್ರದಾನಮಾಡುವವನೋ ಅಂಥವನು ವಾಣಿಜ್ಯ ವ್ಯಾಪಾರದಲ್ಲಿ ತೂಕದ ಮೋಸ, ಮತ್ತು ಮೋಸದಲೆಕ್ಕ ಇತ್ಯಾದಿಗಳಿಂದ ಸಂಪಾದಿಸಿದ ಪಾಪವನ್ನು, ಸೂರ್ಯನು ಅನುದಿನವೂ ಅಂಧಕಾರವನ್ನು ನಾಶಪಡಿಸುವಂತೆಯೇ ಆ ನಾಶರಹಿತನಾದ ಪರಮಾತ್ಮನು ನಾಶಪಡಿಸುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಣದ ಉತ್ತರಪರ್ವದಲ್ಲಿ ಮೇಘಪಾಲೀ ತೃತೀಯಾ ವ್ರತವರ್ಣನೆಯೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಾದಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಸ್ತ್ರೀಣಾಂ ಸಂಪದ್ಯತೇ ಯೇನ ಮರ್ತ್ಯಲೋಕೇ ಗೃಹಂ ಶುಭಂ ।
ಪತಿಪ್ರೇಮ ತಥಾತ್ಯಂತಂ ತನ್ಮೇ ಬ್ರೂಹಿ ವ್ರತಂ ಶುಭಂ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಏಕದಾ ಪಾರ್ವತೀಶಂಭೂ ಸ್ಥಿತೌ ಮುನಿಸುರಾವೃತೌ ।
ಕೈಲಾಸಶಿಖರೇ ರಮ್ಯೇ ನಾನಾಧಾತುವಿಚಿತ್ರಿತೇ ॥ ೨ ॥

---

### ಹದಿನೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಅಯ್ಯಾ ಕೃಷ್ಣನೇ ! ಸ್ತ್ರೀಯರಿಗೆ ಮನುಷ್ಯಲೋಕದಲ್ಲಿ ಉತ್ತಮಗೃಹಪ್ರಾಪ್ತಿಯೂ, ಅತಿಶಯಿತ ಪತಿಪ್ರೇಮವೂ ಯಾವ ವ್ರತಾಚರಣೆಯಿಂದ ಲಭಿಸುವುದೋ ಅಂಥ ವ್ರತಾನುಷ್ಠಾನ ಕ್ರಮವನ್ನು ದಯೆಯಿಟ್ಟು ಹೇಳು ಎಂದನು.

೨-೩. ಶ್ರೀ ಕೃಷ್ಣನು ಹೇಳುತ್ತಾನೆ—ಒಂದು ಸಮಯದಲ್ಲಿ ಮುನಿಗಳೂ ಸುರರೂ ತಮ್ಮ ಸುತ್ತಲೂ ಸೇರಿರಲಾಗಿ ಗೌರೀಶಂಕರರು ಕೈಲಾಸಶಿಖರದಲ್ಲಿ ಕುಳಿತಿದ್ದರು. ಆ ಪರ್ವತವು ನಾನಾ ಗೈರಿಕಾದಿ ಧಾತುಗಳಿಂದ ವಿಚಿತ್ರ ಬಣ್ಣವುಳ್ಳುದಾಗಿ ಇದ್ದಿತು. ನಾನಾ ದ್ರುಮಲತೆಗಳಿಂದ ವ್ಯಾಪ್ತವಾಗಿಯೂ, ನಾನಾ ವಿಧವಾದ ಪುಷ್ಪಗಳಿಂದ ಶೋಭಾಯಮಾನವಾಗಿಯೂ, ಗಾನ ಮತ್ತು ನೃತ್ಯ

ನಾನಾದ್ರುಮಲತಾಕೀರ್ಣೇ ನಾನಾಪುಷ್ಪೋಪಶೋಭಿತೇ ।
ಮುನಿಕಿಂನ್ನರಸಂಘುಷ್ಟೇ ಗೇಯನೃತ್ಯ ಸಮಾಕುಲೇ ॥ ೩ ॥

ಶಂಕರಃ ಪಾರ್ವತೀಂ ಪ್ರಾಹ ಕಿಂ ತ್ವಯಾ ಸದ್ವ್ರತಂ ಕೃತಂ ।
ಮಾಮಾರೂಪೇಣ ಮೇತ್ಯಂತಂ ಪ್ರಿಯಾಸಿ ವರವರ್ಣಿನಿ ॥ ೪ ॥

ಆಗಚ್ಛ ಜಾನುದೇಶಂ ತು ಸುಪ್ರಸನ್ನಾ ತಥಾ ಪ್ರಿಯೇ ।
ಬ್ರೂಹಿ ಚಾವಿತಥಂ ಸರ್ವಂ ತ್ವಯಾ ಪಾರ್ವತಿ ಯತ್ಕೃತಂ ॥ ೫ ॥

ಇತ್ಯುಕ್ತ್ವಾ ಪ್ರಣತಾ ಭೂತ್ವಾ ಗೌರೀ ಪ್ರಾಹ ಶಿವಂ ಶುಭಾ ।
ತೃತೀಯಾಯಾಂ ಮಯಾ ಚೀರ್ಣಂ ಪುರಾ ರಂಭಾವ್ರತಂ ಶುಭಂ ॥ ೬ ॥

ತೇನ ಮೇ ತ್ವಂ ಮನೋಹಾರೀ ಭರ್ತಾ ಲಬ್ಧೋಸಿ ಶಂಕರ ।
ಈಶ್ವರೀ ಚಾಪ್ಯಹಂ ಸ್ತ್ರೀಣಾಂ ತವ ದೇಹಾರ್ಧಹಾರಿಣೀ ॥ ೭ ॥

---

ಗಳಿಂದ ಕೂಡಿದುದಾಗಿಯೂ ಇದ್ದಿತು. ಈ ಪ್ರಕಾರ ಇರುವ ಸುಂದರವಾದ ಕೈಲಾಸ ಪರ್ವತದ ಶಿಖರದಲ್ಲಿ ಮಹಾಶಿವನು ವಾಸಿಸುತ್ತಿದ್ದನು.

೪. ಆಗ ಶ್ರೀ ಶಂಕರನು ಪಾರ್ವತಿಯನ್ನು ಕುರಿತು “ಓ ಸುಂದರೀ! ನೀನು ಯಾವ ಸದ್ವ್ರತವನ್ನು ಆಚರಿಸಿರುವೆ. ಬಹು ಸುಂದರವಾದ ರೂಪ ದಿಂದ ನನಗೆ ಅತ್ಯಂತ ಪ್ರೀತಿಪಾತ್ರಳಾಗಿರುವೆ.

೫. ಎಲೌ ಪಾರ್ವತೀ! ಪ್ರಸನ್ನಳಾಗಿ ನನ್ನ ಈ ಮೇಲೆ ತೊಡೆಯ ಕುಳಿತುಕೋ. ಓ ಪ್ರಿಯಳೇ! ನೀನು ಯಾವ ವ್ರತವನ್ನಾಚರಿಸಿದೆ ಎಂಬುದನ್ನು ಸತ್ಯವಾಗಿ ಹೇಳು” ಎಂದು ಪ್ರಶ್ನಿಸಿದನು.

೬. ಈ ರೀತಿ ಪ್ರಶ್ನಿಸಲಾಗಿ ಪಾರ್ವತಿಯು ಪತಿಗೆ ನಮಸ್ಕಾರಮಾಡಿ ಶಿವನನ್ನು ಕುರಿತು “ಶಂಕರನೇ! ಪೂರ್ವಕಾಲದಲ್ಲಿ ತೃತೀಯೆಯದಿವಸ ನಾನು ರಂಭಾವ್ರತವೆಂಬ ಶುಭಕರ್ಮವನ್ನಾಚರಿಸಿದೆನು.

೭. ಆದರಿಂದ ಶ್ರೇಷ್ಠನಾದ ನೀನು ನನಗೆ ಪತಿಯಾಗಿ ಲಭಿಸಿದೆಯಲ್ಲದೆ ನಾನು ನಿನ್ನ ದೇಹಾರ್ಧಹಾರಿಣಿಯಾಗಿ ಸ್ತ್ರೀಜಾತಿಗೇ ಈಶ್ವರಿಯಾದೆನು” ಎಂದಳು.

॥ ಈಶ್ವರ ಉವಾಚ ॥
ಕೀದೃಶಂ ತದ್ವ್ರತಂ ಭದ್ರೇ ಸರ್ವಸೌಖ್ಯ ಪ್ರದಾಯಕಂ ।
ಬ್ರೂಹಿ ಪಾರ್ವತಿ ಯತ್ನೇನ ಯಚ್ಚೀರ್ಣಂ ಪಿತುರಂತಿಕೇ ॥ ೮ ॥

॥ ಗೌರ್ಯುವಾಚ ॥
ಪುರಾಹಂ ದೇವ ತಿಷ್ಠಾಮಿ ಕುಮಾರೀ ಭವನೇ ಪಿತುಃ ।
ಹಿಮವದ್ಗಹ್ವರೇ ರಮ್ಯೇ ಸಖೀಗಣಸಮಾವೃತಾ ॥ ೯ ॥

ತತೋಽಹಂ ಮೇನಯಾ ಪ್ರೋಕ್ತಾ ಸ್ವಪಿತ್ರಾ ಚ ಹಿಮಾದ್ರಿಣಾ ।
ಪುತ್ರಿ ರಂಭಾವ್ರತಂ ಚಾರ್ಯಂ ವರಸೌಭಾಗ್ಯವರ್ಧನಂ ॥ ೧೦ ॥

ಯೇನ ಪ್ರಾರಬ್ಧಮಾತ್ರೇಣ ಸರ್ವಂ ಸಂಪತ್ಸ್ಯತೇ ತವ ।
ಸೌಭಾಗ್ಯಂ ಸ್ತ್ರೀಗಣೈಶ್ವರ್ಯಂ ಮಹಾದೇವೀಪದಂ ತಥಾ ॥ ೧೧ ॥

ಏವಂ ಕರೋಮಿ ವೈ ಮಾತರ್ಯನು ಚೋಕ್ತಂ ಪುರಸ್ತ್ವಯಾ ।
ಮನೋಭಿಲಷಿತಂ ಯೇನ ಯೇನ ಪ್ರಾಪ್ನೋಮಿ ಶಂಕರಂ ॥ ೧೨ ॥

---

೮. ಆಗ ಈಶ್ವರನು ಹೇಳುತ್ತಾನೆ—" ಓ ಪಾರ್ವತಿ ! ನೀನು ಪಿತೃಗೃಹದಲ್ಲಿರುವಾಗ ಪ್ರಯತ್ನಪೂರ್ವಕವಾಗಿ ಆಚರಿಸಿದ ಸರ್ವಸೌಖ್ಯಪ್ರದಾಯಕವಾದ ಆ ವ್ರತದ ಸ್ವರೂಪವೇನು ಎಂಬುದನ್ನು ನನಗೆ ಹೇಳು " ಎಂದನು.

೯. ಆಗ ಗೌರಿಯು ಹೇಳುತ್ತಾಳೆ—" ಓ ದೇವನೇ ! ಪೂರ್ವದಲ್ಲಿ ಕೌಮಾರಿಕಾವಸ್ಥೆಯಲ್ಲಿ ನಾನು ತಂದೆಯ ಮನೆಯಲ್ಲಿ ಸುಂದರವಾದ ಹಿಮವತ್ಪರ್ವತ ಗುಹೆಯಲ್ಲಿ ಸಖೀಸಮೂಹಪರಿವೃತೆಯಾಗಿದ್ದೆನು.

೧೦-೧೧. ನನ್ನ ತಾಯಿಯಾದ ಮೇನೆಯೂ, ತಂದೆಯಾದ ಹಿಮವಂತನೂ " ಎಲೌ ಮಗಳೇ ! ನೀನು ಸರ್ವಸೌಭಾಗ್ಯವರ್ಧಕವಾದ ರಂಭಾವ್ರತವನ್ನಾಚರಿಸು. ಈ ವ್ರತಪ್ರಾರಂಭ ಮಾತ್ರದಿಂದಲೇ ನಿನಗೆ ಸರ್ವಸೌಭಾಗ್ಯವೂ ಸ್ತ್ರೀಗಣಾಧಿಪತ್ಯವೂ ಮತ್ತು ಮಹಾದೇವೀಪದವೂ ಲಭಿಸುವುವು " ಎಂದು ಹೇಳಿದರು.

೧೨. ಆಗ ನಾನು " ತಾಯೀ ! ಹಾಗೆಯೇ ಆಗಲಿ. ಈಗ ನೀನು ನನಗೆ ಉಪದೇಶಿಸಿದ ವ್ರತವನ್ನಾಚರಿಸಿ ಮನೋಭಿಲಷಿತನಾದ ಶ್ರೀ ಶಂಕರನನ್ನೇ ಪತಿಯಾಗಿ ಹೊಂದುವೆನು " ಎಂದಳು.

॥ ಮೇನೋವಾಚ ॥

ಆದ್ಯ ಶುಕ್ಲತೃತೀಯಾಯಾಂ ಸ್ನಾತ್ವಾ ನಿಯಮತತ್ಪರಾ ।
ಕುರು ಪಾರ್ಶ್ವೇಷು ಪಂಚಾಗ್ನೀನ್ ಜ್ವಾಲಮಾನಾನ್ಹುತಾಶನಾನ್ ॥ ೧೩ ॥

ಗಾರ್ಹಪತ್ಯಂ ದಕ್ಷಿಣಾಗ್ನಿಮನ್ಯಂ ಚಾಹವನೀಯಕಂ ।
ಪಂಚಮಂ ಭಾಸ್ಕರಂ ತೇಜ ಇತ್ಯೇತೇ ಪಂಚ ವಹ್ನಯಃ ॥ ೧೪ ॥

ಏತೇಷಾಂ ಮಧ್ಯಗೋ ಭೂತ್ವಾ ತಿಷ್ಠ ಪೂರ್ವಮುಖಾ ಚಿರಂ ।
ಚತುರ್ಭುಜಾಂ ಧ್ಯಾನಪರಾಂ ಪದ್ದ್ವಯೋಪರಿ ಸಂಸ್ಥಿತಾಂ ॥ ೧೫ ॥

ಮೃಗಾಜಿನಚ್ಛನ್ನಕುಚಾಂ ಜಟಾವಲ್ಕಲಧಾರಿಣೀಂ ।
ಸರ್ವಾಭರಣಸಂಯುಕ್ತಾಂ ದೇವೀಮಭಿಮುಖೀಂ ಕುರು ॥ ೧೬ ॥

ಮಹಾಲಕ್ಷ್ಮೀರ್ಮಹಾಕಾಲೀ ಮಹಾಮಾಯಾ ಮಹಾಮತಿಃ ।
ಗಂಗಾ ಚ ಯಮುನಾ ಸಿಂಧುಃ ಶತದ್ರುರ್ನರ್ಮದಾ ಮಹೀ ॥ ೧೭ ॥

---

೧೩. ಬಳಿಕ ಮೇನೆಯು ಹೇಳುತ್ತಾಳೆ—" ಓ ಪಾರ್ವತೀ ! ಈ ಶುಕ್ಲ ಪಕ್ಷದ ತೃತೀಯೆಯಲ್ಲಿ ಸ್ನಾನಮಾಡಿ ನಿಯಮತತ್ಪರಳಾಗಿ ಪಾರ್ಶ್ವಗಳಲ್ಲಿ ಪಂಚಾಗ್ನಿಗಳನ್ನು ಪ್ರಜ್ವಲಿಸುವಂತೆ ಮಾಡಬೇಕು.

೧೪. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಔಪವಸಥ್ಯಗಳೆಂಬ ನಾಲ್ಕು ಅಗ್ನಿಗಳನ್ನು ನಾಲ್ಕು ದಿಕ್ಕುಗಳಲ್ಲಿ ಪ್ರತಿಷ್ಠೆಮಾಡಿಕೊಂಡು ಭಾಸ್ಕರ ನನ್ನು ಐದನೆಯ ಅಗ್ನಿಯನ್ನಾಗಿ ಭಾವಿಸಿಕೊಳ್ಳಬೇಕು.

೧೫–೧೬. ಈ ಪಂಚಾಗ್ನಿಗಳ ಮಧ್ಯದಲ್ಲಿ ಪೂರ್ವಾಭಿಮುಖವಾಗಿ ಕುಳಿತು ಚತುರ್ಭುಜವುಳ್ಳವಳೂ, ಪಾದದ್ವಯಯುಕ್ತಳೂ, ಮೃಗಾಜಿನದಿಂದ ಆವೃತವಾದ ಕುಚದ್ವಯಯುಕ್ತಳೂ, ಜಟಾವಲ್ಕಲಧಾರಿಣಿಯೂ, ಸರ್ವಾಭರಣಸಂಯುತೆಯೂ ಮತ್ತು ಧ್ಯಾನಪರಳೂ ಆಗಿರುವ ದೇವೀಪ್ರತಿಮೆಯನ್ನು ನಿನ್ನ ಅಭಿಮುಖವಾಗಿ ಇರಿಸಿಕೊ.

೧೭-೧೮. ಮಹಾಲಕ್ಷ್ಮೀ, ಮಹಾಕಾಳೀ, ಮಹಾಮಾಯಾ, ಮಹಾಮತೀ, ಗಂಗಾ, ಯಮುನಾ, ಸಿಂಧು, ಶತದ್ರು, ನರ್ಮದಾ, ಮಹೀ, ಸರಸ್ವತೀ ವೈತರಣೀ, ಇವರೆಲ್ಲರೂ ಆ ಮಹಾದೇವೀ ಸ್ವರೂಪರೇ ಆಗಿರುವರು. ಅಂಥ

ಸರಸ್ವತೀ ವೈತರಿಣೀ ಸೈವ ಪ್ರೋಕ್ತಾ ಮಹಾಸತೀ ।
ತಸ್ಯಾಶ್ಚ ಪ್ರೇಕ್ಷಣಪರಾ ಭವ ತದ್ಭಾವಭಾಸಿತಾ ॥ ೧೮ ॥

ಹೋಮಂ ಕುರ್ಯುರ್ಯತಾತ್ಮಾನೋ ಬ್ರಾಹ್ಮಣಾಃ ಸರ್ವತೋ ದಿಶಂ ।
ದೇವ್ಯಾಃ ಪೂಜಾ ಪ್ರಕರ್ತವ್ಯಾ ಪುಷ್ಪಧೂಪಾದಿನಾ ತತಃ ॥ ೧೯ ॥

ಬಹುಪ್ರಕಾರನೈವೇದ್ಯಂ ನೈವೇದ್ಯಂ ಘೃತಪಾಚಿತಂ ।
ಸ್ಥಾಪಯೇತ್ಪುರತೋ ದೇವ್ಯಾಃ ಪೃಥಕ್ ಸೌಭಾಗ್ಯಮೇವ ಚ ॥ ೨೦ ॥

ಜೀರಕಂ ಕಡುಹುಂಡಶ್ಚಾಪ್ಯಪೂಪಾನ್ಕುಸುಮಂ ತಥಾ ।
ನಿಷ್ಪಾಚಾಂ ಪಾವನತರಾಂ ಲವಣಂ ಶರ್ಕರಾಂ ಗುಡಂ ॥ ೨೧ ॥

ಪುಷ್ಪಮಂಡಪಿಕಾ ಕಾರ್ಯಾ ಗಂಧಪುಷ್ಪಾಧಿವಾಸಿತಾ ।
ಪದ್ಮಾಸನೇನ ಸಂತಿಷ್ಠೇದ್ಯಾವತ್ಪರಿಣತೋ ರವಿಃ ।
ತತಃ ಪ್ರಣಮ್ಯ ರುದ್ರಾಣೀಂ ಮಂತ್ರಮೇತಮುದೀರಯೇತ್ ॥ ೨೨ ॥

---

ದೇವಿಧ್ಯಾನನಿರತಳಾಗಿ ಆ ದೇವೀಮೂರ್ತಿಯನ್ನು ಸದಾ ವೀಕ್ಷಣ ಮಾಡುತ್ತಿರಬೇಕು.

೧೯. ಆ ದೇವಿಯ ಸರ್ವದಿಕ್ಕಿನಲ್ಲೂ ಬ್ರಾಹ್ಮಣಶ್ರೇಷ್ಠರು ಸಮಾಹಿತ ಮನಸ್ಕರಾಗಿ ಕುಳಿತು, ದೇವ್ಯುದ್ದೇಶ್ಯಕವಾದ ಹೋಮವನ್ನು ಮಾಡಬೇಕು. ಅನಂತರ ಪುಷ್ಪಧೂಪಾದಿಗಳಿಂದ ದೇವೀಪೂಜೆಯನ್ನಾಚರಿಸಬೇಕು.

೨೦–೨೧. ಆ ದೇವಿಯ ಸಮ್ಮುಖವಲ್ಲಿ ಜೀರಕ, ಅಪೂಪ, ಕುಸುಮ, ಲವಣ, ಶರ್ಕರ, ಗುಡ ಇತ್ಯಾದಿಗಳನ್ನೂ ಘೃತಪಕ್ವವಾದ ಬಹುವಿಧ ನೈವೇದ್ಯವನ್ನೂ ಇರಿಸಬೇಕು.

೨೨. ಮತ್ತು ಗಂಧಪುಷ್ಪಾದಿಗಳಿಂದ ಅಧಿವಾಸಿತವಾದ ಪುಷ್ಪಮಂಟಪವನ್ನು ರಚಿಸಬೇಕು. ಸೂರ್ಯನು ಅಸ್ತಮಿತನಾಗುವವರೆಗೆ ಪದ್ಮಾಸನಾಸೀನಳಾಗಿ ಕುಳಿತಿರಬೇಕು.

ವೇದೇಷು ಸರ್ವಶಾಸ್ತ್ರೇಷು ದಿವಿ ಭೂಮೌ ಧರಾತಲೇ ।
ದೃಷ್ಟಃ ಶ್ರುತಶ್ಚ ಬಹುಶಃ ಶಂಕಾವಿರಹಿತಃ ಸ್ತವಃ ॥ ೨೩ ॥

ತ್ವಂ ಶಕ್ತಿಸ್ತ್ವಂ ಸ್ವಧಾ ಸ್ವಾಹಾ ತ್ವಂ ಸಾವಿತ್ರೀ ಸರಸ್ವತೀ ।
ಪತಿಂ ದೇಹಿ ಗೃಹಂ ದೇಹಿ ವಸು ದೇಹಿ ನಮೋಽಸ್ತು ತೇ ॥ ೨೪ ॥

ಏವಂ ಸಂಕ್ಷಮಯೇದ್ದೇವೀಂ ಪ್ರಣಿಪತ್ಯ ಪುನಃ ಪುನಃ ।
ದೇಹಿ ಭಕ್ತ್ಯಾ ಗೃಹಂ ರಮ್ಯಂ ವಿಚಿತ್ರಂ ಬಹುಭೂಮಿಕಂ ।
ಆಚ್ಛಾದ್ಯ ದ್ವಾರಕೇದಾರಕಪೋತಾದಿವಿಭೂಷಿತಂ ॥ ೨೫ ॥

ಕುಡ್ಯಸ್ತಂಭಗವಾಕ್ಷಾಢ್ಯಂ ಮಣಿಮಂಡಿತತೋರಣಂ ।
ಪದ್ಮರಾಗಮಹಾನೀಲವಜ್ರವೈಡೂರ್ಯಭೂಷಿತಂ ॥ ೨೬ ॥

---

೨೩. ಆಮೇಲೆ ಆ ರುದ್ರಾಣಿಗೆ ನಮಸ್ಕರಿಸಿ ಈ ಮಂತ್ರವನ್ನು ಹೇಳಬೇಕು; ವೇದೇಷು ಸರ್ವಶಾಸ್ತ್ರೇಷು ದಿವಿಭೂಮೌ ಧರಾತಲೇ । ದೃಷ್ಟಃ ಶ್ರುತಶ್ಚ ಬಹುಶಃ ಶಂಕಾವಿರಹಿತಃಸ್ತವಃ ॥

೨೪. ತ್ವಂಶಕ್ತಿಃ ತ್ವಂ ಸ್ವಧಾ ಸ್ವಾಹಾ ತ್ವಂ ಸಾವಿತ್ರೀ ಸರಸ್ವತೀ । ಪತಿಂದೇಹಿ, ಗೃಹಂದೇಹಿ, ವಸುಂ ದೇಹಿ ನಮೋಽಸ್ತುತೇ ॥ (ಇದರರ್ಥವು ಈ ರೀತಿ ಇದೆ.) ನೀನೇ ಶಕ್ತಿ ಸ್ವಧೆಯೂ ಸ್ವಾಹಾದೇವಿಯೂ, ಸಾವಿತ್ರೀ ಸರಸ್ವತೀ ಎಲ್ಲರೂ ನೀನೇ. ನನಗೆ ಪತಿಯನ್ನೂ ಗೃಹವನ್ನೂ ದ್ರವ್ಯವನ್ನೂ ಕರುಣಿಸು. ನಿನಗೆ ನಮಸ್ಕಾರಗಳು.

೨೫. ಈ ಮಂತ್ರವನ್ನು ಹೇಳಿ ದೇವಿಯ ಕ್ಷಮೆಯನ್ನು ಬೇಡಿ ಪುನಃ ಪುನಃ ನಮಸ್ಕರಿಸಬೇಕು.

೨೬. ಅನೇಕ ಅಂತಸ್ತುಗಳಿಂದಕೂಡಿ ವಿಚಿತ್ರವಾಗಿಯೂ, ವಸ್ತ್ರಾಚ್ಛಾದಿತ ದ್ವಾರ, ಹೊರಬಯಲು ಲೋವೆಗಳಿಂದ ಅಲಂಕೃತವಾಗಿಯೂ, ಮಣಿಮಯವಾದ ಗೋಡೆ, ಕಂಭ, ಕಿಟಕಿ, ತೋರಣಗಳಿಂದ ಕೂಡಿದುದಾಗಿಯೂ, ಪದ್ಮರಾಗ, ನೀಲ, ಮಹಾಶಿಲೆಗಳು ವಜ್ರವೈಡೂರ್ಯಾದಿಗಳು ಇವುಗಳಿಂದ ಭೂಷಿತವಾಗಿಯೂ, ಸರ್ವವಿಧವಾದ ಗ್ರಹೋಪಕರಣಗಳಿಂದ ಸಹಿತವಾಗಿಯೂ ಇರುವಂತಹ,

ಗೃಹದಾನವಿಧಾನೇನ ಬ್ರಾಹ್ಮಣಾಯ ಯಶಸ್ವಿನೇ ।
ಸಪತ್ನೀಕಾಯ ಸಂಪೂಜ್ಯ ಸರ್ವೋಪಸ್ಕರಸಂಯುತಂ ॥ ೨೭ ॥

ಸುವಾಸಿನೀಭ್ಯಸ್ತದ್ದೇಯಂ ನೈವೇದ್ಯಂ ಸೂರ್ಯಸಂಸ್ಥಿತಂ ।
ನಿರ್ವರ್ತ್ಯ ವಿಧಿನಾನೇನ ತತ್ಪಶ್ಚಾತ್ ಕ್ಷಮಯೇದಘಂ ॥ ೨೮ ॥

ದಾಂಪತ್ಯಾನಿ ಚ ಭೋಜ್ಯಾನಿ ಚತುರ್ಥ್ಯಾಂ ಮಧುರೈ ರಸೈಃ ।
ಇತ್ಯುಕ್ತಮುಮಯಾಚೀರ್ಣಂ ಹರ ರಂಭಾವ್ರತಂ ಪರಂ ॥ ೨೯ ॥

ವ್ರತಾಂತೇಗಸ್ತ್ಯಮುನಯೇ ದತ್ತಂ ಗೃಹವರಂ ಶುಭಂ ।
ಲೋಪಾಮುದ್ರಾ ಪ್ರಿಯಾ ಪತ್ನೀ ತಸ್ಯ ವೇಶ್ಮನಿ ಪೂಜಿತಾ ॥ ೩೦ ॥

ತೇನ ಧರ್ಮೇಣ ದೇವ ತ್ವಂ ಭರ್ತಾ ಲಬ್ಧೋಽಸಿ ಶಂಕರಃ ।
ಅರ್ಧಾಂಗೇಽಪಿ ಸ್ಥಿತಾ ತೇನ ಯಾಶ್ಚರಿಷ್ಯಂತಿ ಯೋಷಿತಃ ॥ ೩೧ ॥

---

೨೭. ರಮ್ಯಗೃಹವನ್ನು ಸಿದ್ಧಪಡಿಸಿ ವಿದ್ಯಾದಿಗಳಿಂದ ಯಶಸ್ವಿಯೂ ಸಪತ್ನೀಕನೂ ಆದ ಬ್ರಾಹ್ಮಣನನ್ನು ಕರೆದು ಪೂಜಿಸಿ ವಿಧಿವಿಧಾನದಿಂದ ಭಕ್ತಿ ಪೂರ್ವಕವಾಗಿ ಗೃಹದಾನ ಮಾಡಬೇಕು.

೨೮. ದೇವಿಗೆ ನಿವೇದನವಾದ ಆ ನೈವೇದ್ಯದ್ರವ್ಯಗಳನ್ನು ಸುವಾಸಿನಿಯರಿಗೆ ದಾನಮಾಡಬೇಕು. ಈ ಪ್ರಕಾರ ಆಚರಿಸಿ ಅಪರಾಧ ಕ್ಷಮೆಯನ್ನು ಬೇಡಬೇಕು.

೨೯. ಮತ್ತೆ ಚತುರ್ಥೀದಿನ ಮಧುರವೂ ರಸವತ್ತೂ ಆದ ಭೋಜ್ಯಗಳನ್ನು ಮಾಡಿ ದಂಪತಿಗಳಿಗೆ ಭೋಜನಮಾಡಿಸಬೇಕು ಎಂದು ನಿರೂಪಿಸಿದ್ದಳು ಎಂದೂ ಪಾರ್ವತಿಯು ಶಂಕರನಿಗೆ ಹೇಳಿರುವಳಲ್ಲದೆ,

೩೦. " ಓ ಶಂಕರನೇ ! ನಾನು ಈ ರಂಭಾವ್ರತವನ್ನು ಅನುಷ್ಠಾನಮಾಡಿ ವ್ರತಾಂತ್ಯದಲ್ಲಿ ಉತ್ತಮಗೃಹವನ್ನು ಅಗಸ್ತ್ಯಮಹರ್ಷಿಗೆ ದಾನಮಾಡಿ ಆ ಗೃಹದಲ್ಲಿ ಅವನ ಪ್ರಿಯಪತ್ನಿಯಾದ ಲೋಪಾಮುದ್ರೆಯನ್ನು ಪೂಜಿಸಿರುವೆನು.

೩೧. ಪೂಜ್ಯನೇ! ಈ ವ್ರತಾಚರಣ ಮಾಡಿದುದರಿಂದ ಅದರ ಪುಣ್ಯದಿಂದ ನೀವೇ ನನಗೆ ಪತಿಯಾಗಿ ಲಭಿಸಿದಿರಿ. ಅಲ್ಲದೆ ನಿನ್ನ ಅರ್ಧಶರೀರದಲ್ಲಿ ಪ್ರತಿಷ್ಠಿತಳಾದೆನು " ಎಂದು ಹೇಳಿದಳು.

**ಕೌಂತೇಯ ಪುರುಷೋ ವಾಪಿ ಖ್ಯಾತಂ ರಂಭಾವ್ರತಂ ಭುವಿ ।**
**ತಾಸಾಂ ಪುತ್ರಾ ಗೃಹಂ ಭೋಗಾಃ ಕುಲವೃದ್ಧಿರ್ಭವಿಷ್ಯತಿ ॥ ೩೨ ॥**

**ಸ್ತ್ರೀಣಾಂ ಚಾತುರ್ಯಸೌಭಾಗ್ಯಂ ಗಾರ್ಹಸ್ಥ್ಯಂ ಸರ್ವಕಾಮಿಕಂ ।**
**ಬಾಲಾವೃದ್ಧಾಸುಮಧ್ಯಾನಾಂ ರೂಪಲಾವಣ್ಯಬೃಂಹಣಂ ।**
**ಸಪತ್ನೀದರ್ಪದಲನಂ ವಶೀಕರಣಮುತ್ತಮಂ ॥ ೩೩ ॥**

**ಹಿಮವದ್ವಿಂಧ್ಯಯೋರ್ಮಧ್ಯೇ ಆರ್ಯಾವರ್ತೇ ಮನೋಹರೇ ।**
**ಉತ್ಪತ್ಯ ಶೋಭನೇ ವಾಸೇ ಪೂರ್ವೋತ್ಪನ್ನಧನೇ ಕುಲೇ ॥ ೩೪ ॥**

**ಮೃತಃ ಶಕ್ರಪುರಂ ಯಾತಿ ತತೋ ವಿಷ್ಣುಪುರಂ ವ್ರಜೇತ್ ।**
**ತತಃ ಶಿವಪುರಂ ಯಾತಿ ವ್ಯಾಸಸ್ಯ ವಚನಂ ಯಥಾ ॥ ೩೫ ॥**

---

೩೨. ಅಯ್ಯಾ ಧರ್ಮಸೂನುವೇ । ಪ್ರಸಿದ್ಧವಾದ ಈ ರಂಭಾವ್ರತವನ್ನು ಭೂಲೋಕದಲ್ಲಿ ಸ್ತ್ರೀಯರಾಗಲಿ ಪುರುಷರಾಗಲಿ ಆಚರಿಸಿದರೆ ಅಂಥವರಿಗೆ ಪುತ್ರರು, ಗೃಹ, ಸರ್ವಭೋಗ ಮತ್ತು ಕುಲ ಇವೆಲ್ಲ ವೃದ್ಧಿಯಾಗುವವು.

೩೩. ಸ್ತ್ರೀಯರಿಗೆ ಚಾತುರ್ಯವೂ ಸೌಭಾಗ್ಯವೂ ಸರ್ವಕಾಮಪ್ರದವಾದ ಗಾರ್ಹಸ್ಥ್ಯವೂ ಲಭಿಸುವುದಲ್ಲದೆ ಬಾಲರು, ವೃದ್ಧರು ಮತ್ತು ಮಧ್ಯಮ ವಯಸ್ಕರು ಇವರಿಗೆಲ್ಲಾ ರೂಪಲಾವಣ್ಯವೃದ್ಧಿಯೂ ಸವತಿಗರ್ವಭಂಗವೂ ಪತಿವಶೀಕರಣವೂ ಬರುವುದು.

೩೪. ಮತ್ತು ಈ ರಂಭಾವ್ರತಾಚರಣೆಯಿಂದ ಹಿಮವತ್ ವಿಂಧ್ಯಪರ್ವತಗಳ ಮಧ್ಯೆಇರುವ ಸುಂದರವಾದ ಆರ್ಯಾವರ್ತಕ್ಷೇತ್ರದಲ್ಲಿ ಸತ್ಕುಲದಲ್ಲಿ ಆಗರ್ಭಶ್ರೀಮಂತರಾಗಿ ಜನ್ಮವೆತ್ತುವರು.

೩೫. ತಮ್ಮ ಜೀವಮಾನ ಕಾಲವೆಲ್ಲಾ ಸುಖಗೃಹದಲ್ಲಿ ವಾಸಿಸಿ, ಮರಣಾನಂತರದಲ್ಲಿ ಸ್ವರ್ಗದಲ್ಲಿ ಸುಖವನ್ನನುಭವಿಸಿ ಅನಂತರ ವೈಕುಂಠಕ್ಕೋ ಕೈಲಾಸಕ್ಕೋ ಹೋಗುವರು ಎಂದು ಸಾಕ್ಷಾದ್ವ್ಯಾಸರು ಹೇಳಿರುತ್ತಾರೆ.

ಯದ್ರಂಭಯಾ ಕಿಲ ಭಯಾಪಹರಂ ತತಶ್ಚ
ಗೌರ್ಯಾ ಹಿಮಾದ್ರಿಭವನಸ್ಥಿತಯಾಪಿ ಚೀರ್ಣಂ ।
ತಸ್ಯಾ ವ್ರತಂ ಸುವಿಕರೋತಿ ರತಾ ಚ ಧರ್ಮೇ
ಬ್ರಹ್ಮೇಶಕೇಶವಪತಿಂ ಸುಖದಂ ಲಭೇತ ॥ ೩೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಪಂಚಾಗ್ನಿಸಾಧನಾಖ್ಯಂ ರಂಭಾ
ತೃತೀಯಾವ್ರತಂ ನಾಮ ಅಷ್ಟಾದಶೋಽಧ್ಯಾಯಃ.



---

೩೬. ಸರ್ವಭಯನಿವಾರಕವಾದ ಈ ರಂಭಾವ್ರತವನ್ನು ಮೊದಲು ರಂಭೆಯೂ, ಹಿಮವಂತನ ಗೃಹದಲ್ಲಿ ವಾಸಿಸುತ್ತಿರುವಾಗ ಪಾರ್ವತಿಯೂ, ಆಚರಿಸಿರುವರು. ಈ ವ್ರತವನ್ನು ಧರ್ಮತತ್ಪರರಾಗಿ ಯಾರು ಆಚರಿಸುವರೋ ಅವರು ಸುಖದಾಯಕರಾದ ಬ್ರಹ್ಮ, ವಿಷ್ಣು, ಮಹೇಶ್ವರ ಇವರುಗಳಲ್ಲಿ ತಮಗೆ ಬೇಕಾದವರನ್ನು ಪತಿಯನ್ನಾಗಿ ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ರಂಭಾತೃತೀಯಾವ್ರತ ವರ್ಣನೆಯೆಂಬ ಹದಿನೆಂಟನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕೋನವಿಂಶೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಪಾರ್ಥ ಭಾದ್ರಪದೇ ಮಾಸಿ ಶುಕ್ಲಪಕ್ಷೇ ದಿನೋದಯೇ ।
ತೃತೀಯಾಯಾಂ ಚತುರ್ಥ್ಯಾಂ ಚ ಶುದ್ಧಾಯಾಂ ಪ್ರತಿವತ್ಸರಂ ॥ ೧ ॥

ಉಪವಾಸೇನ ಗೃಹ್ಣೀಯಾದ್ವ್ರತಂ ನಾಮ್ನಾ ತು ಗೋಪದಂ ।
ಸ್ನಾತ್ವಾ ನರೋ ವಾ ನಾರೀ ವಾ ಪುಷ್ಪಧೂಪವಿಲೇಪನೈಃ ॥ ೨ ॥

ದಧ್ಯಕ್ಷತೈಶ್ಚಮಾಲಾಭಿಃ ಪಿಷ್ಟಕೈರ್ವನಮಾಲಯಾ ।
ಅಭ್ಯಂಜಯೇದ್ಗವಾಂ ಶೃಂಗಂ ಖುರಂ ಪುಚ್ಛಾಂತಮೇವ ಚ ॥ ೩ ॥

---

### ಹತ್ತೊಂಭತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರ! ಪ್ರತಿವರ್ಷವೂ ಭಾದ್ರಪದಮಾಸದ ಶುಕ್ಲಪಕ್ಷದ ತೃತೀಯಾ ಮತ್ತು ಚತುರ್ಥೀ ದಿನಗಳಲ್ಲಿ ಉಪವಾಸವನ್ನಾಚರಿಸಿ ಗೋಪದನಾಮಕವಾದ ವ್ರತಗ್ರಹಣ ಮಾಡಬೇಕು.

೨-೩. ಪುರುಷನಾಗಲೀ ಸ್ತ್ರೀಯಾಗಲೀ ಸ್ನಾನಮಾಡಿ, ಗೋವುಗಳಿಗೆ ಸರ್ವಾಂಗಾಭ್ಯಂಜನಮಾಡಿಸಿ ಗೋವುಗಳ ಕೊಂಬು, ಗೊರಸು, ಮತ್ತು ಪುಚ್ಛಾಂತವಾಗಿ ಶರೀರವನ್ನು ಪುಷ್ಪ, ಧೂಪ, ವಿಲೇಪನ, ದಧಿ, ಅಕ್ಷತೆ, ಮಾಲಿಕೆ, ಮತ್ತು ಸುವಾಸನಾ ದ್ರವ್ಯಗಳು, ವನಮಾಲೆ ಮುಂತಾದುವುಗಳಿಂದ ಅಲಂಕರಿಸಬೇಕು.

ದದ್ಯಾದ್ಗವಾಹ್ನಿಕಂ ಭಕ್ತ್ಯಾ ತಾಸಾಂ ಪೂರ್ವಾಪರಾಹ್ಣಯೋಃ ।
ಅನಗ್ನಿಪಾಕಂ ಭುಂಜೀತ ತೈಲಕ್ಷಾರವಿವರ್ಜಿತಂ ॥ ೪ ॥

ವ್ರಜಂತೀನಾಂ ಗವಾಂ ನಿತ್ಯಮಾಯಾಂತೀನಾಂ ಚ ಭಾರತ ।
ಪುರದ್ವಾರೇಥ ವಾ ಗೋಷ್ಠೇ ಮಂತ್ರೇಣಾನೇನ ಮಂತ್ರವಿತ್ ।
ಅರ್ಘ್ಯಂ ಪ್ರದದ್ಯಾದ್ಗೃಷ್ಟ್ಯಾಂ ವಾ ಗವಾಂ ಪಾದೇಷು ಪಾಂಡವ ॥ ೫ ॥

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮಮೃತಸ್ಯನಾಭಿಃ।
ಪ್ರನುವೋಚಂ ಚಿಕಿತುಷೇ ಜನಾಯ ಮಾ ಗಾಮನಾಗಾಮದಿತಿಂ ವಧಿಷ್ಟ ॥

॥ ಇತಿ ಗವಾಂ ಮಂತ್ರಃ ॥

ಗಾವೋ ಮೇ ಅಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂಮಧ್ಯೇ ವಸಾಮ್ಯಹಮ್ ॥ ೭ ॥

---

೪. ಮತ್ತು ಗೋವುಗಳಿಗೆ ಪೂರ್ವಾಹ್ನ ಮತ್ತು ಅಪರಾಹ್ನಗಳಲ್ಲಿ ಒಂದೊಂದು ಹೊತ್ತಿನ ಆಹಾರವನ್ನು ಭಕ್ತಿಪೂರ್ವಕವಾಗಿ ಕೊಡಬೇಕು. ವ್ರತಿಯು ತೈಲ ಮತ್ತು ಲವಣವರ್ಜಿತವಾಗಿ ಅಗ್ನಿಪಕ್ವ ಮಾಡದೇ ಇರುವ ಭೋಜ್ಯವಸ್ತುಗಳನ್ನು ತಿನ್ನಬೇಕು.

೫. ಅಪ್ಪಾ ರಾಜನೇ ! ಗೋವುಗಳು ಗೃಹದಿಂದ ಹೊರಗೆ ಹೋಗುವ ಸಮಯಕ್ಕೂ, ಮನೆಗೆ ಬರುವ ಸಮಯದಲ್ಲೂ, ಪುರದ್ವಾರ ಅಥವಾ ಗೋಷ್ಠದಲ್ಲಿ ಆ ಗೋವುಗಳ ಪಾದದಲ್ಲಿಯಾಗಲಿ ಅಥವಾ ಒಂದೇ ಕರುಹಾಕಿ "ಗೃಷ್ಟಿ" ಎಂದು ವ್ಯವಹರಿಸಲ್ಪಡುವ ಹಸುಗಳ ಪಾದಗಳಲ್ಲಿಯಾಗಲಿ ಅರ್ಘ್ಯಪ್ರದಾನ ಮಾಡಬೇಕು.

೬. ಹೀಗೆ ಅರ್ಘ್ಯಪ್ರದಾನ ಮಾಡುವಾಗ "ಮಾತಾ ರುದ್ರಾಣಾಂ ದುಹಿತಾವಸೂನಾಂ ಸ್ವಸಾದಿತ್ಯಾನಾಮಮೃತಸ್ಯನಾಭಿಃ । ಪ್ರಸುವೋಚಂ ಚಿಕಿತುಷೇ ಜನಾಯ ಮಾಗಾಮನಾಗಾಮದಿತಿಂ ವಧಿಷ್ಟ" ಎಂಬ ಮಂತ್ರೋಚ್ಚಾರಣ ಪೂರ್ವಕವಾಗಿ ಅರ್ಘ್ಯವನ್ನು ಕೊಡಬೇಕು.

೭. ಬಳಿಕ "ಗಾವೋಮೇ ಅಗ್ರತಃಸಂತು ಗಾವೋಮೇ ಸಂತುಪೃಷ್ಠತಃ। ಗಾವೋಮೇ ಹೃದಯೇಸಂತು ಗವಾಂಮಧ್ಯೇ ವಸಾಮ್ಯಹಂ" ನನ್ನ ಹಿಂಭಾಗ

ಇತ್ಥಂ ಸಂಪೂಜ್ಯ ದತ್ವಾರ್ಘ್ಯಂ ತತೋ ಗಚ್ಛೇದ್ಗೃಹಾಶ್ರಮಂ ।
ಪಂಚಮ್ಯಾಂ ಕ್ರೋಧರಹಿತೋ ಭುಂಜೀತ ಗೋರಸಂ ದಧಿ ॥ ೮ ॥

ಶಾಲಿಪಿಷ್ಟಂ ಫಲಂ ಶಾಕಂ ತಿಲಮನ್ನಂ ಚ ಶೋಭನಂ ।
ಭುಕ್ತ್ವಾವಸಾನೇ ರಾಜೇಂದ್ರ ಸಂಯತಸ್ತಾಂ ನಿಶಾಂ ಸ್ವಪೇತ್ ॥ ೯ ॥

ಪ್ರಭಾತೇ ಗೋಪದಂ ದತ್ವಾ ಬ್ರಾಹ್ಮಣಾಯ ಹಿರಣ್ಮಯಂ ।
ಕ್ಷಮಯೇಚ್ಚ ಗವಾಂ ನಾಥಂ ಗೋವಿಂದಂ ಗರುಡಧ್ವಜಂ ॥ ೧೦ ॥

ಅರ್ಚ್ಯಂತೇಽತ್ರ ಯಥಾ ಗಾವಾಸ್ತಥಾ ಗೋವರ್ಧನೋ ಗಿರಿಃ ।
ಪ್ರಣಮ್ಯಾಚ್ಯುತಮುದ್ದಿಶ್ಯ ಶೃಣು ಯತ್ಫಲಮಾಪ್ನುಯಾತ್ ॥ ೧೧ ॥

---

ಮುಂಭಾಗವಲ್ಲೆಲ್ಲಾ ಗೋವುಗಳಿರಲಿ. ನನ್ನ ಹೃದಯದಲ್ಲಿ ಸಹ ಗೋವೇ ನೆಲಸಲಿ. ನಾನೇ ಗೋವುಗಳ ಮಧ್ಯೆ ವಾಸಮಾಡುತ್ತೇನೆ. ಎಂಬರ್ಥವುಳ್ಳ ಈ ಮಂತ್ರದಿಂದ ಗೋಪ್ರಾರ್ಥನೆಯನ್ನು ಮಾಡಬೇಕು.

೮-೯. ಆಮೇಲೆ ಗೃಹವನ್ನೋ ಅಥವಾ ಆಶ್ರಮವನ್ನೋ ಪ್ರವೇಶಮಾಡಿ ಪಂಚಮೀದಿನ ಕ್ರೋಧರಹಿತನಾಗಿ ಗೋದಧಿ, ಶಾಲಿಪಿಷ್ಟ, ಶಾಖಫಲ, ತಿಲ ಉತ್ತಮಾನ್ನ, ಮುಂತಾದುವುಗಳನ್ನು ಭುಂಜಿಸಿ ಅನಂತರ ಜಿತೇಂದ್ರಿಯನಾಗಿ ಆ ರಾತ್ರಿ ಶಯನಮಾಡಬೇಕು.

೧೦. ಮರುದಿನ ಪ್ರಾತಃಕಾಲದಲ್ಲಿ ಸುವರ್ಣರಚಿತವಾದ ಗೋಪಾದವನ್ನು ಬ್ರಾಹ್ಮಣನಿಗೆ ದಾನಮಾಡಿ ಗರುಡಧ್ವಜನಾಗಿಯೂ, ಗೋಪಾಲಕನಾಗಿಯೂ, ಇರುವ ಶ್ರೀ ಗೋವಿಂದನಲ್ಲಿ ಅಪರಾಧ ಕ್ಷಮಾಪಣೆಯನ್ನು ಬೇಡಬೇಕು.

೧೧. ಮತ್ತು ಈ ವ್ರತದಲ್ಲಿ ಗೋವುಗಳನ್ನರ್ಚಿಸಿದ ಹಾಗೆಯೇ ಗೋವರ್ಧನ ಗಿರಿಯನ್ನೂ ಅರ್ಚಿಸಿ ಶ್ರೀ ಕೃಷ್ಣನನ್ನು ನಮಸ್ಕರಿಸಬೇಕು. ಈ ವ್ರತಾಚರಣೆಯಿಂದ ಬರುವ ಫಲವನ್ನು ಹೇಳುವೆನು ಕೇಳು.

ಗೋಭಕ್ತೋ ಗೋವ್ರತಂ ಕೃತ್ವಾ ಭಕ್ತ್ಯಾಶಕ್ತ್ಯಾ ಚ ಗೋಷ್ಪದಂ ।
ಸೌಭಾಗ್ಯಂ ರೂಪಲಾವಣ್ಯಂ ಪ್ರಾಪ್ನೋತಿ ಪೃಥಿವೀತಲೇ ॥ ೧೨ ॥

ಗೋತರ್ಣಕಾಕುಲಂ ಗೇಹಂ ಗೋಕುಲಂ ಚ ಸಮಾಸತಃ ।
ಧನಧಾನ್ಯಸಮೋಪೇತಶಾಲೀಕ್ಷುರಸಮೃದ್ಧಿಮಾನ್ ॥ ೧೩ ॥

ಸಂತಾನಂ ಪೂಜಿತಂ ಲಬ್ಧ್ವಾ ತತಃ ಸ್ವರ್ಗೇಽಮರೋ ಭವೇತ್ ।
ದಿವ್ಯರೂಪಧರಃ ಸ್ರಗ್ವೀ ದಿವ್ಯಾಲಂಕಾರಭೂಷಿತಃ ॥ ೧೪ ॥

ಗಂಧರ್ವೈರ್ಗೀತವಾದ್ಯೇನ ಸೇವ್ಯಮಾನೋಽಪ್ಸರೋಗಣೈಃ ।
ದಿವ್ಯಂ ಯುಗಶತಂ ಸ್ಥಿತ್ವಾ ತತೋವಿಷ್ಣುಪುರಂ ವ್ರಜೇತ್ ॥ ೧೫ ॥

---

೧೨. ಭಕ್ತಿಯಿಂದ ಗೋವ್ರತವನ್ನಾಚರಿಸಿ ಸ್ವಶಕ್ತ್ಯನುಸಾರವಾಗಿ ಗೋಪದ ದಾನಮಾಡಿರುವ ಗೋಭಕ್ತನು ಈ ಲೋಕದಲ್ಲಿ ಸೌಭಾಗ್ಯ ಸೌಂದರ್ಯ ಲಾವಣ್ಯ ಇವುಗಳಿಂದ ಯುತನಾಗುವನು.

೧೩. ಅಲ್ಲದೆ ಆಗತಾನೆ ಹುಟ್ಟಿದ ಕರುಗಳಿಂದ ಕೂಡಿದ ಗೋವೃಂದ ವುಳ್ಳ ಗೃಹ, ಧನ, ಧಾನ್ಯ, ಶಾಲಿ, ಇಕ್ಷುರಸ, ಮುಂತಾದ್ದರ ಸಮೃದ್ಧಿ, ಸತ್ಸಂತಾನ ಇವುಗಳನ್ನು ಪಡೆಯುವನು.

೧೪. ಅಲ್ಲದೆ ಕಾಲಾನಂತರ ಸ್ವರ್ಗದಲ್ಲಿ ದಿವ್ಯರೂಪಧರನೂ, ದಿವ್ಯಾಲಂಕಾರ ಭೂಷಿತನೂ, ಹೂಮಾಲೆಧರಿಸಿದವನೂ ಆಗಿ, ಗಂಧರ್ವರು ಮತ್ತು ಅಪ್ಸರ ಸ್ತ್ರೀಯರುಗಳ ವೃಂದಗಳಿಂದ ಗೀತವಾದ್ಯಾದಿಗಳ ಮೂಲಕ ಸೇವಿಸಲ್ಪ ಡುವನು.

೧೫. ದೇವತಾಸ್ವರೂಪವನ್ನು ಪಡೆದ ಅವನು ಆ ಸ್ವರ್ಗದಲ್ಲಿ ನೂರುದಿವ್ಯ ಯುಗ ಪರ್ಯಂತ ಇದ್ದು, ಅನಂತರ ವೈಕುಂಠಕ್ಕೆ ತೆರಳುವನು.

ಯೋ ಗೋಪದವ್ರತಮಿದಂ ಕುರುತೇ ತ್ರಿರಾತ್ರಂ ।
ಗಾ ವೈ ಪ್ರಪೂಜಯತಿ ಗೋರಸಪೂಜನಾಚ್ಚ ।
ಗೋವಿಂದಮಾದಿಪುರುಷಂ ಪ್ರಣತಃ ಸವಿತ್ರಾಂ ।
ಆಲೋಕಮುತ್ತಮಮುಪೈತಿ ಗವಾಂ ಪವಿತ್ರಂ ॥ ೧೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ತೃತೀಯಾವ್ರತೇ ಗೋಷ್ಪದ ತೃತೀಯಾವ್ರತಂ ನಾಮ್ಯೈಕೋನವಿಂಶೋಽಧ್ಯಾಯಃ



---

೧೬. ಯಾವ ಪುರುಷನು ಮೂರು ದಿನಗಳು ಈ ಗೋಪದವ್ರತವನ್ನಾಚರಿಸಿ ಗೋ ಮತ್ತು ಗೋರಸವನ್ನು ಪೂಜಿಸಿ ಆದಿಜಗನ್ನಾಥನಾದ ಗೋವಿಂದನನ್ನು ನಮಸ್ಕರಿಸುವನೋ ಅಂಥವನು ತೇಜಸ್ವಿಯಾಗಿಯೂ ಪವಿತ್ರವಾಗಿಯೂ ಇರುವ ಉತ್ತಮ ಗೋಕುಲವನ್ನೇ ಸೇರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಗೋಷ್ಪದ ತೃತೀಯಾ ವ್ರತ ಮಹಾತ್ಮ್ಯೆಯೆಂಬ ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ವಿಂಶೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಶುಕ್ಲೇ ಭಾದ್ರಪದಸ್ಯೈವ ತೃತೀಯಾಯಾಂ ಸಮರ್ಚಯೇತ್ ।
ಸರ್ವಧಾನ್ಯೈಸ್ತಾಂ ವಿರೂಢಾಂ ಭೂತಾಂ ಹರಿತಶಾಡ್ವಲಾಂ ।
ಹರಕಾಲೀಂ ದೇವದೇವೀಂ ಗೌರೀಂ ಶಂಕರವಲ್ಲಭಾಂ ॥ ೧ ॥

ಗಂಧೈಃ ಪುಷ್ಪೈಃ ಫಲೈರ್ಧೂಪೈರ್ನೈವೇದ್ಯೈರ್ಮೋದಕಾದಿಭಿಃ ।
ಪ್ರೀಣಯಿತ್ವಾ ಸಮಾಚ್ಛಾದ್ಯ ಪದ್ಮರಾಗೇನ ಭಾಸ್ವತಾ ॥ ೨ ॥

---

## ಇಪ್ಪತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಭಾದ್ರಪದಮಾಸದ ಶುಕ್ಲಪಕ್ಷದ ತೃತೀಯಾ ತಿಥಿಯಲ್ಲಿ ಸರ್ವಧಾನ್ಯಗಳೂ ಅಂಕುರಿಸಿ ಪಚ್ಚೆಯಬಣ್ಣದ ಬಾಲತೃಣಾವಸ್ಥೆಯನ್ನು ಹೊಂದಿರುವಾಗ ತದ್ರೂಪಳೂ ಶ್ರೀ ಶಂಕರಪ್ರಿಯಳೂ ಆದ ಶ್ರೀ ಗೌರಿಯನ್ನು ಹರಕಾಲೀ ಎಂಬ ನಾಮಧೇಯದಿಂದರ್ಚಿಸಬೇಕು.

೨. ಅಯ್ಯಾ ಧರ್ಮಜ! ಆ ಹರಕಾಲಿಯನ್ನು ಗಂಧ, ಪುಷ್ಪ, ಫಲ, ಧೂಪ ಇವುಗಳಿಂದ ಪೂಜಿಸಿ, ಮೋದಕಾದಿ ನೈವೇದ್ಯಗಳಿಂದ ಸುಪ್ರೀತಳನ್ನಾಗಿ ಮಾಡಿ, ಪ್ರಕಾಶಯುತವಾದ ಪದ್ಮರಾಗಮಣಿಯಿಂದಲಂಕರಿಸಬೇಕು.

ಘಂಟಾವಾದ್ಯಾಧಿಭಿರ್ಗೀತೈಃ ಶುಭೈರ್ದಿವ್ಯಕಥಾನುಗೈಃ ।
ಕೃತ್ವಾ ಜಾಗರಣಂ ರಾತ್ರೌ ಪ್ರಭಾತೇಽಭ್ಯುದ್ಗತೇ ರವೌ ॥ ೩ ॥

ಸುವಾಸಿನೀಭಿಃ ಸಾ ನೇಯಾ ಮಧ್ಯೇ ಪುಣ್ಯಜಲಾಶಯೇ ।
ತಸ್ಮಿನ್ವಿಸರ್ಜಯೇತ್ಪಾರ್ಥ ಹರಕಾಲೀಂ ಹರಪ್ರಿಯಾಂ ॥ ೪ ॥

॥ ಯುಧಿಷ್ಠಿರ ಉವಾಚ ॥

ಭಗವನ್ ಹರಕಾಲೀತಿ ಕಾ ದೇವೀ ಪ್ರೋಚ್ಯತೇ ಭುವಿ ।
ಆರ್ದ್ರಧಾನ್ಯೈಃ ಸ್ಥಿತಾ ಕಸ್ಮಾತ್ಪೂಜ್ಯತೇ ಸ್ತ್ರೀಜನೇನ ಸಾ ।
ಪೂಜಿತಾ ಕಿಂ ದದಾತೀಹ ಸರ್ವಂ ಮೇ ಬ್ರೂಹಿ ಕೇಶವ ॥ ೫ ॥

॥ ಶ್ರೀ ಕೃಷ್ಣ ಉವಾಚ ॥

ಸರ್ವಪಾಪಹರಾಂ ದಿವ್ಯಾಂ ಮತ್ತಃ ಶೃಣು ಕಥಾಮಿಮಾಂ ।
ಆಸೀದ್ದಕ್ಷಸ್ಯ ದುಹಿತಾ ಕಾಲೀನಾಮ್ನೀ ತು ಕನ್ಯಕಾ ॥ ೬ ॥

---

೩. ಬಳಿಕ ಘಂಟಾನಾದ, ವಾದ್ಯ, ಶುಭಗಾನ, ದಿವ್ಯಕಥಾ ಶ್ರವಣಾದಿಗಳಿಂದ ರಾತ್ರಿಯೆಲ್ಲಾ ಜಾಗರಣೆಯನ್ನು ಮಾಡಬೇಕು. ಪ್ರಾತಃಕಾಲದಲ್ಲಿ ಸೂರ್ಯೋದಯವಾದ ಮೇಲೆ ಸುವಾಸಿನಿಯರಿಂದೊಡಗೂಡಿ,

೪. ಹರಪ್ರಿಯಳಾದ ಆ ಹರಕಾಲಿಯನ್ನು ಪವಿತ್ರ ಜಲಾಶಯದ ಸಮೀಪಕ್ಕೆ ತೆಗೆದುಕೊಂಡುಹೋಗಿ ಆ ಪುಣ್ಯಜಲಾಶಯದ ಮಧ್ಯದಲ್ಲಿ ವಿಸರ್ಜನೆ ಮಾಡಬೇಕು.

೫. ಯುಧಿಷ್ಠಿರನು ಕೇಳುತ್ತಾನೆ— " ಸ್ವಾಮಿ ಕೇಶವನೇ ! ಆ ಹರಕಾಲೀ ದೇವಿಯೆಂದರೆ ಯಾವಳು ? ಸ್ತ್ರೀಯರು ಆರ್ದ್ರಬಾಲತೃಣರೂಪವಾಗಿ ಇರುವ ಆ ದೇವಿಯನ್ನು ಏತಕ್ಕೆ ಪೂಜಿಸುವರು ? ಅವಳ ಅರ್ಚನೆಯಿಂದ ಬರುವ ಫಲವೇನು ? ಇತ್ಯಾದಿ ವಿಷಯವನ್ನು ಸಂಪೂರ್ಣವಾಗಿ ನನಗೆ ಹೇಳು " ಎಂದನು.

೬. ಶ್ರೀ ಕೃಷ್ಣನು ಹೇಳುತ್ತಾನೆ—' ಎಲೈ ಯುಧಿಷ್ಠಿರನೇ ! ಸರ್ವಪಾಪನಾಶಕವಾದ ಈ ದಿವ್ಯಕಥೆಯನ್ನು ಹೇಳುತ್ತೇನೆ ಕೇಳು. ಪೂರ್ವದಲ್ಲಿ ದಕ್ಷಪ್ರಜಾಪತಿಗೆ ಕಾಲೀ ಎಂಬ ನಾಮಧೇಯದ ಮಗಳಿದ್ದಳು.

ವರ್ಣೇನಾಪಿ ಚ ಸಾ ಕೃಷ್ಣಾ ನವನೀಲೋತ್ಪಲಪ್ರಭಾ ।
ಸಾ ಚ ದತ್ತಾ ತ್ರ್ಯಂಬಕಾಯ ಮಹಾದೇವಾಯ ಶೂಲಿನೇ ॥ ೭ ॥

ವಿವಾಹಿತಾ ವಿಧಾನೇನ ಶಂಖತೂರ್ಯಾನುನಾದಿನಾ ।
ಯತ್ಕಾರ್ಯಾದಾಗತೈರ್ದೇವೈರ್ಬ್ರಾಹ್ಮಣಾನಾಂ ಚ ನಿಸ್ವನೈಃ ॥ ೮ ॥

ನಿವರ್ತಿತೇ ವಿವಾಹೇ ತು ತಯಾ ಸಾರ್ಧಂ ತ್ರಿಲೋಚನಃ ।
ಕ್ರೀಡತೇ ವಿವಿಧೈರ್ಭೋಗೈರ್ಮನಸಃ ಪ್ರೀತಿವರ್ಧನೈಃ ॥ ೯ ॥

ಅಥ ದೇವಸಮಾನಸ್ತು ಕದಾಚಿತ್ಸ ವೃಷಧ್ವಜಃ ।
ಆಸ್ಥಾನಮಂಡಪೇ ರಮ್ಯೇ ಆಸ್ತೇ ವಿಷ್ಣುಸಹಾಯವಾನ್ ॥ ೧೦ ॥

ತತ್ರಸ್ಥಶ್ಚಾಹ್ವಯಾಮಾಸ ನರ್ಮಣಾ ತ್ರಿಪುರಾಂತಕಃ ।
ಕಾಲೀಂ ನೀಲೋತ್ಪಲಶ್ಯಾಮಾಂ ಗಣಮಾತೃಗಣಾವೃತಾಂ ॥ ೧೧ ॥

---

೭. ಆ ಮಗಳು ಬಣ್ಣದಲ್ಲಿ ನವನೀಲೋತ್ಪಲದಂತೆ ಕಪ್ಪಾಗಿದ್ದಳು. ದಕ್ಷನು ಈ ಕನ್ನಿಕೆಯನ್ನು ತ್ರಿನೇತ್ರನೂ, ಶೂಲಪಾಣಿಯೂ ಆದ ಶ್ರೀ ಮಹಾದೇವನಿಗೆ ದಾನಮಾಡಿದನು.

೮. ದಕ್ಷನು ಶಂಖತೂರಾದಿ ಅನುರಣನಸಹಿತವಾಗಿಯೂ ವಿವಾಹಾರ್ಥವಾಗಿ ಆಗಮಿಸಿದ ದೇವಬ್ರಾಹ್ಮಣರ ವೇದಘೋಷಸಹಿತವಾಗಿಯೂ ಈ ವಿವಾಹವನ್ನು ಶಾಸ್ತ್ರೀಯರೀತಿಯಲ್ಲಿ ನೆರವೇರಿಸಿದನು.

೯. ವಿವಾಹನಂತರದಲ್ಲಿ ಶ್ರೀ ಪರಮೇಶ್ವರನು ಆ ಕಾಲಿಯ ಜೊತೆಯಲ್ಲಿ ವಿವಿಧ ಭೋಗಸಾಧನ ವಿಷಯಗಳಿಂದ ಮನಸ್ಸಿಗೆ ಆನಂದಜನಕವಾದ ಕ್ರೀಡೆಗಳನ್ನು ನಡೆಸುತ್ತಿದ್ದನು.

೧೦. ಅನಂತರ ಒಂದಾನೊಂದು ಸಮಯವಲ್ಲಿ ಆ ವೃಷಧ್ವಜನು ಶ್ರೀ ಮಹಾವಿಷ್ಣುವಿನಿಂದೊಡಗೂಡಿ ರಮ್ಯವಾದ ಆಸ್ಥಾನಮಂಟಪವಲ್ಲಿ ಕುಳಿತ್ತಿದ್ದನು.

೧೧-೧೨. ಆಗ ತ್ರಿಪುರಾಂತಕನಾದ ಶ್ರೀ ಪರಮೇಶ್ವರನು ನೀಲೋತ್ಪಲವಂತೆ ಕಪ್ಪಾಗಿಯೂ ಪ್ರಮಥಗಣ ಮತ್ತು ಸಪ್ತಮಾತೃಗಣಗಳಿಂದ ಪರಿವೃತ

ಏಹ್ಯೇಹಿ ತ್ವಮಿತಃ ಕ್ವಾಸಿ ಕೃಷ್ಣಾಂಜನಸಮನ್ವಿತೇ ।
ಕಾಲಸುಂದರಿ ಮತ್ಪಾರ್ಶ್ವೇ ಧವಲೇ ತ್ವಮುಪಾವಿಶ ॥ ೧೨ ॥

ಏವಮುಕ್ತಿಕ್ಷಿಪ್ತಮನಸಾ ದೇವೀ ಸಂಕ್ರುದ್ಧಮಾನಸಾ ।
ಶ್ವಾಸಯಾಮಾಸ ತಾಮ್ರಾಕ್ಷೀ ಬಾಷ್ಪಗದ್ಗದಯಾ ಗಿರಾ ॥ ೧೩ ॥

ರುರೋದ ಸಸ್ವರಂ ಬಾಲಾ ತತ್ರಸ್ಥಾ ಸ್ಫುರಿತಾಧರಾ ।
ಕಿಂ ದೈವಯೋಗಾತ್ತ್ವಾಮ್ರಾ ಗೌರ್ಗೌರೀ ಚೇತ್ಯಭಿಧೀಯತೇ ॥ ೧೪ ॥

ಯಸ್ಮಾನ್ಮನ್ಮೋಪಮಾ ದತ್ತಾ ಕೃಷ್ಣವರ್ಣೇನ ಶಂಕರ ।
ಹರಕಾಲೀತಿ ವಾಹೂತಾ ದೇವರ್ಷಿಗಣಸೇವಿತಾ ॥ ೧೫ ॥

---

ಳಾಗಿಯೂ ಇರುವ ಕಾಲಿಯನ್ನು " ಓ ಕೃಷ್ಣಾಂಜನಸಮಪ್ರಭಳೇ ! ಕಾಲ ಸುಂದರಿ! ಎಲ್ಲಿರುವೆ ಈಕಡೆ ಬಾ! ಶುಭ್ರವರ್ಣನಾದ ನನ್ನ ಪಕ್ಕದಲ್ಲಿ ಸುಖಾಸೀನ ಳಾಗು " ಎಂದು ಪರಿಹಾಸಪೂರ್ವಕವಾಗಿ ಆಹ್ವಾನಿಸಿದನು.

೧೩. ಈ ರೀತಿಯಾದ ಪರಿಹಾಸವಚನದಿಂದ ಆ ಕಾಲಿಕಾದೇವಿಯು ಕ್ಷೋಭವನ್ನೂ ಕ್ರೋಧವನ್ನೂ ಹೊಂದಿದ ಮನವುಳ್ಳವಳಾಗಿ ನಿಟ್ಟುಸಿರನ್ನು ಬಿಡುತ್ತಾ, ಕಣ್ಣನ್ನು ಕೆಂಪಗೆ ಮಾಡಿಕೊಂಡು, ಭಾಷ್ಪಪೂರಿತನಯನೆಯೂ ಗದ್ಗದಕಂಠವುಳ್ಳವಳೂ ಆದಳು.

೧೪. ಮತ್ತು ಅಲ್ಲಿ ಸಸ್ವರವಾಗಿ ರೋದಿಸುತ್ತಾ ಕೋಪದಿಂದ ಚಲಿಸುವ ಅಧರವುಳ್ಳವಳಾಗಿ " ಓ ಶಂಕರನೇ ! ದೈವೇಚ್ಛೆಯಿಂದ ರಕ್ತವರ್ಣವಾಗಿರುವ ಹಸುವನ್ನು ಎಲ್ಲೈ ಬಿಳೀಹಸುವೇ ! ಎಂದು ಅಪಹಾಸ್ಯಮಾಡಿ ಎಲ್ಲಾದರೂ ಕರೆಯುವುದುಂಟೇ.

೧೫. ದೇವರ್ಷಿಗಣಗಳಿಂದ ಸೇವಿತಳಾದ ನನ್ನನ್ನು ನೀನು ಕೃಷ್ಣವರ್ಣದ ಕಾಳಿಯೆಂದು ವ್ಯವಹರಿಸಿದ್ದರಿಂದಲೂ ಪರಿಹಾಸಪೂರ್ವಕವಾಗಿ ಹರಕಾಲೀ ಎಂದು ಆಹ್ವಾನಿಸಿದ್ದರಿಂದಲೂ,

ತಸ್ಮಾದ್ದೇಹಮಿಮಂ ಕೃಷ್ಣಂ ಜುಹೋಮಿ ಜ್ವಲಿತೇऽನಲೇ ।
ಇತ್ಯುಕ್ತ್ವಾ ವಾರ್ಯಮಾಣಾ ತು ಹರಕಾಲೀ ರುಷಾನ್ವಿತಾ ॥ ೧೬ ॥

ಮುಮೋಚ ಹರಿತಚ್ಛಾಯಾಕಾಂತಿಂ ಹರಿತಶಾದ್ವಲೇ ।
ಚಿಕ್ಷೇಪ ದೋಷಂ ರಾಗೇಣ ಜ್ವಲಿತೇ ಹವ್ಯವಾಹನೇ ॥ ೧೭ ॥

ಪುನಃ ಪರ್ವತರಾಜಸ್ಯ ಗೃಹೇ ಗೌರೀ ಬಭೂವ ಸಾ ।
ಮಹಾದೇವಸ್ಯ ದೇಹಾರ್ಧೇ ಸ್ಥಿತಾ ಸಂಪೂಜ್ಯತೇ ಸುರೈಃ ॥ ೧೮ ॥

ಏವಂ ಸಾ ಹರಕಾಲೀತಿ ಗೌರೀಶಸ್ಯ ವ್ಯವಸ್ಥಿತಾ ।
ಪೂಜನೀಯಾ ಮಹಾದೇವೀ ಮಂತ್ರೇಣಾನೇನ ಪಾಂಡವ ॥ ೧೯ ॥

ಹರಕರ್ಮಸಮುತ್ಪನ್ನೇ ಹರಕಾಯೇ ಹರಪ್ರಿಯೇ ।
ಮಾಂ ತ್ರಾಹೀಶಸ್ಯ ಮೂರ್ತಿಸ್ಥೇ ಪ್ರಣತಾಸ್ತು ನಮೋನಮಃ ॥ ೨೦ ॥

---

೧೬. ನಾನು ಕಪ್ಪುಬಣ್ಣದ ಈ ನನ್ನ ಶರೀರವನ್ನು ಪ್ರಜ್ವಲಿಸುವ ಈ ಅಗ್ನಿಯಲ್ಲಿ-ಹೋಮಮಾಡುವೆನು '' ಎಂದು ಹೇಳಿ ಎಷ್ಟು ತಡೆದರೂ ಕೇಳದೆ ಕ್ರೋಧಾನ್ವಿತಳಾಗಿ,

೧೭. ತನ್ನ ಶರೀರದ ಹರಿತಛಾಯೆಯನ್ನು ಹರಿತವರ್ಣವುಳ್ಳ ಬಾಲತೃಣಗಳಲ್ಲಿಯೂ ಉಳಿದ ರಾಗದೋಷವನ್ನು ಪ್ರಜ್ವಲಿಸುವ ಅಗ್ನಿಯಲ್ಲಿಯೂ ಇಟ್ಟು ಆ ಅಗ್ನಿಯಲ್ಲೇಬಿದ್ದು ಶರೀರತ್ಯಾಗ ಮಾಡಿದಳು.

೧೮. ಅವಳೇ ಪುನಃ ಪರ್ವತರಾಜನಾದ ಹಿಮವಂತನ ಗೃಹದಲ್ಲಿ ಗೌರೀ ಎಂಬ ನಾಮಧೇಯದಿಂದ ಜನಿಸಿ, ಶ್ರೀ ಮಹಾದೇವನ ದೇಹಾರ್ಧದಲ್ಲಿ ನೆಲಸಿ ದೇವತೆಗಳಿಂದ ಪೂಜಿಸಲ್ಪಡುತ್ತಿದ್ದಾಳೆ.

೧೯. ಅಯ್ಯಾ ಪಾಂಡುಪುತ್ರನೇ ! ಈ ಪ್ರಕಾರವಾಗಿ ಶ್ರೀ ಮಹಾದೇವಿಗೆ ಹರಕಾಲೀ ಎಂಬ ನಾಮಧೇಯವು ಗೌರೀಪತಿಯಿಂದಲೇ ಇಡಲ್ಪಟ್ಟು ವ್ಯವಸ್ಥಿತವಾಯಿತು.

೨೦. ಈ ದೇವಿಯನ್ನು “ಹರಕರ್ಮಸಮುತ್ಪನ್ನೇ ಹರಕಾಯೇ ಹರಪ್ರಿಯೇ । ಮಾಂ ತ್ರಾಹೀಶಸ್ಯ ಮೂರ್ತಿಸ್ಥೇ ಪ್ರಣತಾಸ್ತು ನಮೋನಮಃ'' ಎಂಬ ಮಂತ್ರವನ್ನು ಹೇಳಿ ಪೂಜಿಸಬೇಕು.

ಇತ್ಥಂ ಸಂಪೂಜ್ಯ ನೈವೇದ್ಯಂ ದದ್ಯಾದ್ವಿಪ್ರಾಯ ಪಾಂಡವ ।
ತಾಂ ಚ ಪ್ರಾತರ್ಜಲೇ ರಮ್ಯೇ ಮಂತ್ರೇಣೈವ ವಿಸರ್ಜಯೇತ್ ॥ ೨೦ ॥

ಅರ್ಚಿತಾಸಿ ಮಯಾ ಭಕ್ತ್ಯಾ ಗಚ್ಛ ದೇವಿ ಸುರಾಲಯಂ ।
ಹರಕಾಲೇ ಶಿವೇ ಗೌರಿ ಪುನರಾಗಮನಾಯ ಚ ॥ ೨೨ ॥

ಏವಂ ಯಃ ಪಾಂಡವಶ್ರೇಷ್ಠ ಹರಕಾಲೀವ್ರತಂ ಚರೇತ್ ।
ವರ್ಷೇ ವರ್ಷೇ ವಿಧಾನೇನ ನಾರೀ ನರಪತೇ ಶುಭಾ ॥ ೨೩ ॥

ಸಾ ಯತ್ಫಲಮವಾಪ್ನೋತಿ ಚ್ಛೃಣುಷ್ವ ನರಾಧಿಪ ।
ಮರ್ತ್ಯಲೋಕೇ ಚಿರಂ ತಿಷ್ಠೇತ್ಸರ್ವರೋಗ ವಿವರ್ಜಿತಾ ॥ ೨೪ ॥

ಸರ್ವಭೋಗಸಮಾಯುಕ್ತಾ ಸೌಭಾಗ್ಯಬಲಗರ್ವಿತಾ ।
ಪುತ್ರಪೌತ್ರಸುಹೃನ್ಮಿತ್ರನಪ್ತೃದೌಹಿತ್ರ ಸಂಕುಲಾ ॥ ೨೫ ॥

---

೨೧. ಮತ್ತು ನೈವೇದ್ಯಮಾಡಿದ ವಸ್ತುವನ್ನು ಬ್ರಾಹ್ಮಣನಿಗೆ ದಾನಮಾಡಿ ಪ್ರಾತಃಕಾಲದಲ್ಲಿ ಆ ಹರಕಾಲಿಯನ್ನು "ಅರ್ಚಿತಾಸಿ ಮಯಾಭಕ್ತ್ಯಾ ಗಚ್ಛದೇವಿ ಸುರಾಲಯಂ । ಹರಕಾಲೇ ಶಿವೇಗೌರೀ ಪುನರಾಗಮನಾಯಚ "

೨೨. ಎಂಬ ಮಂತ್ರವನ್ನು ಹೇಳಿ ಶುದ್ಧವಾದ ಜಲಕ್ಷೇತ್ರದಲ್ಲಿ ಆ ಕಲಶ ವಿಸರ್ಜನೆ ಮಾಡಬೇಕು.

೨೩. ಅಯ್ಯಾ ನರೇಂದ್ರನೇ ! ವ್ರತಿಯಾದ ಸ್ತ್ರೀಯು ಪ್ರತಿವರ್ಷದಲ್ಲೂ ಈ ನಿಯಮ ಪ್ರಕಾರ ವ್ರತವನ್ನಾಚರಿಸಬೇಕು.

೨೪–೨೫. ಅಯ್ಯಾ ನರಾಧಿಪನೇ ! ಈ ವ್ರತವನ್ನಾಚರಿಸಿದ ಸ್ತ್ರೀಯು ಮನುಷ್ಯಲೋಕದಲ್ಲಿ ಸರ್ವರೋಗಗಳಿಂದ ವರ್ಜಿತಳಾಗಿಯೂ ಸರ್ವಭೋಗ ಸಂಪತ್ತುಗಳಿಂದ ಕೂಡಿದವಳಾಗಿಯೂ, ಸೌಭಾಗ್ಯ ಮತ್ತು ದೇಹಬಲಸಂಪನ್ನ ಳಾಗಿಯೂ ಇರುವಳು.

ಸಾಗ್ರಂ ವರ್ಷಶತಂ ಯಾವದ್ಭೋಗಾನ್ಭುಕ್ತ್ವಾ ಮಹೀತಲೇ ।
ತತೋಽವಸಾನೇ ದೇಹಸ್ಯ ಶಿವಜ್ಞಾನಾ ಮಹಾಮುನೇ ॥ ೨೬ ॥

ಚಿರಭದ್ರಾ ಮಹಾಕಾಲನಂದೀಶ್ವರವಿನಾಯಕಾಃ ।
ತದಾಜ್ಞಾಕಿಂಕರಾಃ ಸರ್ವೇ ಮಹಾದೇವಪ್ರಸಾದತಃ ॥ ೨೭ ॥

ಸಂಪೂರ್ಣ ಸೂರ್ಯಗಣ ಸಪ್ತವಿರೂಢಶಸ್ಯಾಂ ।
ತಾಂ ವೈ ಹಿಮಾದ್ರಿತನಯಾಂ ಹರಕಾಲಿಕಾಖ್ಯಾಂ ।
ಸಂಪೂಜ್ಯ ಜಾಗರಮನುದ್ಧತಗೀತವಾದ್ಯೈಃ ।
ಯಚ್ಛಂತಿ ಯಾ ಇಹ ಭವಂತಿ ಪತಿಪ್ರಿಯಾಸ್ತಾಃ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ಹರಕಾಲೀ ತೃತೀಯಾವ್ರತಂ
ನಾಮ ವಿಂಶೋಽಧ್ಯಾಯಃ

---

೨೬-೨೭. ಮತ್ತು ಪುತ್ರ ಪೌತ್ರ ದೌಹಿತ್ರ ಮಿತ್ರಾದಿಗಳಿಂದ ಸಮನ್ವಿತಳಾಗಿಯೂ ನೂರುವರ್ಷಗಳ ಪರ್ಯಂತ ಸಮಸ್ತ ಭೋಗಗಳನ್ನೂ ಅನುಭವಿಸಿ ದೇಹತ್ಯಾಗಾನಂತರದಲ್ಲಿ ಶ್ರೀ ಮಹಾದೇವನ ವರಪ್ರಸಾದಬಲದಿಂದ ಶಿವಜ್ಞಾನಯುತಳಾಗಿ ಶಿವಲೋಕವನ್ನು ಸೇರುವಳು. ಅಲ್ಲಿ ವೀರಭದ್ರ, ಮಹಾಕಾಳಿ, ನಂದೀಶ್ವರ, ವಿನಾಯಕಾದಿ ಈಶ್ವರನ ಕಿಂಕರರು ಈಕೆಯ ಆಜ್ಞಾನುವರ್ತಿಗಳಾಗಿರುವರು.

೨೮. ಸಮಸ್ತ ಆದಿತ್ಯರಿಂದಲೂ, ಪ್ರಥಮಗಣಗಳಿಂದಲೂ, ಸಪ್ತಮಾತೃಗಳಿಂದಲೂ ಸೇವಿತೆಯೂ ಹಿಮಾದ್ರಿತನಯೆಯೂ ಹರಕಾಲಿಕಾ ಎಂಬ ನಾಮಧೇಯವನ್ನು ಪಡೆದವಳೂ ಆದ ಶ್ರೀ ಗೌರಿಯನ್ನು ವಿರೂಢ ಸಸಿರೂಪದಲ್ಲಿ ಪೂಜಿಸಿ ರಾತ್ರಿಯಲ್ಲಿ ಗೀತ ಮಂಗಳವಾದ್ಯಾದಿಗಳಿಂದಲೂ ಗಂಧ, ಪುಷ್ಪ, ದೀಪ, ಧೂಪ, ಫಲ, ಅಕ್ಷತಾದಿಗಳಿಂದಲೂ ಅರ್ಚಿಸಿ ಜಾಗರಣೆಯನ್ನಾಚರಿಸಿ ಈ ವ್ರತಾನುಷ್ಠಾನ ಮಾಡಿದ ನಾರಿಯರು ಈ ಲೋಕದಲ್ಲಿ ಪತಿಯ ಪ್ರೇಮಕ್ಕೆ ಪಾತ್ರರಾಗುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಹರಕಾಲೀ ತೃತೀಯಾ ವ್ರತವರ್ಣನೆ ಎಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕವಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ಅಥ ಪೃಚ್ಛಾಮಿ ಭಗವನ್ವ್ರತಂ ದ್ವಾದಶಮಾಸಿಕಂ ।**
**ಲಲಿತಾರಾಧನಂ ನಾಮ ಮಾಸಮಾಸಕ್ರಮೇಣ ವಾ ॥ ೧ ॥**

॥ ಶ್ರೀ ಕೃಷ್ಣ ಉವಾಚ ॥

**ಶೃಣು ಪಾಂಡವ ಯತ್ನೇನ ಯಥಾ ವೃತ್ತಂ ಪುರಾತನಂ ।**
**ಶಂಕರಸ್ಯ ಮಹಾದೇವ್ಯಾಃ ಸಂವಾದಂ ಕುರುಸತ್ತಮ ॥ ೨ ॥**

**ಕೈಲಾಸಶಿಖರೇ ರಮ್ಯೇ ಬಹುಪುಷ್ಪಫಲೋಪಗೇ ।**
**ಸಹಕಾರದ್ರುಮಚ್ಛನ್ನೇ ಚಂಪಕಾಶೋಕಭೂಷಿತೇ ॥ ೩ ॥**

---

### ಇಪ್ಪತ್ತೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನಿಸುತ್ತಾನೆ—"ಸ್ವಾಮಿ ಭಗವಂತಾ ! ಹನ್ನೆರಡು ತಿಂಗಳುಗಳಲ್ಲಿ ಪ್ರತಿತಿಂಗಳೂ ಕ್ರಮವಾಗಿ ಆಚರಿಸಬೇಕಾದ ಲಲಿತಾವ್ರತವನ್ನು ಹೇಳು" ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಧರ್ಮರಾಜನೇ ! ಪಾರ್ವತೀ ಪರಮೇಶ್ವರರ ಸಂವಾದರೂಪವಾದ ಪ್ರಾಚೀನ ಚರಿತ್ರೆಯೊಂದನ್ನು ಹೇಳುತ್ತೇನೆ ಕೇಳು.

೩. ಅನೇಕ ಫಲಪುಷ್ಪಗಳಿಂದ ಕೂಡಿದ್ದಾಗಿಯೂ ಮಾವಿನಮರಗಳಿಂದ ಆವರಿಸಲ್ಪಟ್ಟದ್ದಾಗಿಯೂ ಚಂಪಕ ಅಶೋಕಾದಿ ವೃಕ್ಷಗಳಿಂದಲಂಕೃತ ವಾಗಿಯೂ,

ಕದಂಬಬಕುಲಾಮೋದವಶೀಕೃತಮಧುವ್ರತೇ ।
ಮಯೂರರವಸಂಘುಷ್ಟೇ ರಾಜಹಂಸೋಪಶೋಭಿತೇ ॥ ೪ ॥

ಮೃಗರ್ಕ್ಷಗಜಸಿಂಹೈಶ್ಚ ಶಾಖಾಮೃಗಗಣಾವೃತೇ ।
ಗಂಧರ್ವಯಕ್ಷದೇವರ್ಷಿಸಿದ್ಧಕಿನ್ನರಪನ್ನಗೈಃ ॥ ೫ ॥

ತಪಸ್ವಿಭಿರ್ಮಹಾಭಾಗೈಃ ಸೇವಮಾನಂ ಸಮಂತತಃ ।
ಸುಖಾಸೀನಂ ಮಹಾದೇವಂ ಭೂತಸಂಘೈಃ ಸಮಾವೃತಂ ॥ ೬ ॥

ಅಪ್ಸರೋಭಿಃ ಪರಿವೃತಮುಮಾ ನತ್ವಾ ಬ್ರವೀದಿದಂ ।

॥ ಉಮೋವಾಚ ॥

ಭಗವನ್ದೇವದೇವೇಶ ಶೂಲಪಾಣೇ ವೃಷಧ್ವಜ ॥ ೭ ॥

---

೪. ಕದಂಬ, ಬಕುಲಾದಿಪುಷ್ಪಗಳ ವಾಸನೆಗೆ ಅಧೀನವಾದ ಭ್ರಮರ ವೃಂದವುಳ್ಳದ್ದಾಗಿಯೂ ನವಿಲಿನ ಧ್ವನಿಯಿಂದ ಕೂಡಿದ್ದಾಗಿಯೂ ರಾಜಹಂಸಗಳಿಂದ ಶೋಭಾಯಮಾನವಾಗಿಯೂ,

೫. ಜಿಂಕೆ, ಕರಡಿ, ಆನೆ, ಸಿಂಹ ಮತ್ತು ಕೋತಿ ಇವೇ ಮೊದಲಾದುವುಗಳ ಸಮೂಹ ಸಮೇತವಾಗಿಯೂ ಅತಿಸುಂದರವಾಗಿಯೂ ಇರುವ ಕೈಲಾಸವಿದ್ದಿತು. ಆ ಶಿಖರದಲ್ಲಿ ಗಂಧರ್ವರು, ಯಕ್ಷರು, ದೇವರ್ಷಿಗಳು, ಸಿದ್ಧರು, ಕಿನ್ನರರು ಇವರುಗಳಿಂದಲೂ,

೬. ಪನ್ನಗರು ಮಹಾತ್ಮರಾದ ತಪಸ್ವಿಗಳು ಇವರುಗಳಿಂದಲೂ ಸುತ್ತಲೂ ಸೇವಿಸಲ್ಪಡುವವನಾಗಿಯೂ ಭೂತಸಂಘಗಳಿಂದ ಸುತ್ತುವರಿಯಲ್ಪಟ್ಟವನಾಗಿಯೂ ಇರುವ ಪರಮೇಶ್ವರನು ಸುಖವಾಗಿ ಕುಳಿತಿದ್ದನು.

೭. ಅಪ್ಸರಸ್ತ್ರೀ ಪರಿವೃತಳಾದ ಆ ಪಾರ್ವತಿಯು ಶಿವನಿಗೆ ನಮಸ್ಕರಿಸಿ ಈರೀತಿ ಮಾತನಾಡಿದಳು. ಪಾರ್ವತಿಯು ಹೇಳುತ್ತಾಳೆ—ತ್ರಿಶೂಲಪಾಣಿಯೂ ವೃಷಭಾರೂಢನೂ ದೇವಾದಿದೇವನೂ ಆದ ಸ್ವಾಮಿಯೇ !

ಕಥಯಸ್ವ ಮಹೇಶಾನ ತೃತೀಯಾವ್ರತಮುತ್ತಮಂ ।
ಸೌಭಾಗ್ಯಂ ಲಭತೇ ಯೇನ ಧನಂ ಪುತ್ರಾನ್ಪಶೂನ್ಸುಖಂ ॥ ೮ ॥

ನಾರೀ ಸ್ವರ್ಗಂ ಶುಭಂ ರೂಪಮಾರೋಗ್ಯಂ ಶ್ರಿಯಮುತ್ತಮಾಂ ।
ಏವಮುಕ್ತೋ ದಯಿತಯಾ ಭಾರ್ಯಯಾ ಪ್ರೀತಿಪೂರ್ವಕಂ ।
ವಿಹಸ್ಯ ಶಂಕರಃ ಪ್ರಾಹ ಕಿಂ ವ್ರತೇನ ತವ ಪ್ರಿಯೇ ॥ ೯ ।

ಯೇ ಕಾಮಾಸ್ತ್ರಿಷು ಲೋಕೇಷು ದಿವ್ಯಾ ಭೂಮ್ಯಂತರಿಕ್ಷಜಾಃ ।
ಸರ್ವೇಽಪಿ ಯಸ್ಯ ಚಾಯತ್ತಾ ವಶ್ಯಸ್ತೇಽಹಂ ಯತಃ ಪತಿಃ ॥ ೧೦ ॥

॥ ಉಮೋವಾಚ ॥

ಸತ್ಯಮೇತತ್ಸುರೇಶಾನ ತ್ವಯಿ ದೃಷ್ಟೇ ನ ದುರ್ಲಭಂ ।
ಕಿಂಚಿತ್ತ್ರಿಭುವನಾಭೋಗಭೂಷಣೇ ಶಶಿಭೂಷಣೇ ॥ ೧೧ ॥

---

೮. ಯಾವ ತೃತೀಯಾ ವ್ರತಾಚರಣೆಯಿಂದ ಸ್ತ್ರೀಯು ಸೌಭಾಗ್ಯ, ಧನ ಪುತ್ರ, ಪಶು ಇವುಗಳ ಸುಖವನ್ನು ಹೊಂದುವಳೋ ಅಂತಹ ವ್ರತವೊಂದನ್ನು ಹೇಳು.

೯. ಮತ್ತು ಅವಳು ಅದರಿಂದ ಸ್ವರ್ಗ, ಸೌಂದರ್ಯ, ಆರೋಗ್ಯ ಮತ್ತು ಅತ್ಯುತ್ತಮ ಸಂಪತ್ತು ಇವನ್ನೂ ಪಡೆಯಬೇಕು'' ಎಂದಳು. ಪ್ರೇಮಪಾತ್ರಳಾದ ಭಾರ್ಯೆಯಿಂದ ಪ್ರೀತಿಪೂರ್ವಕವಾಗಿ ಈರೀತಿ ಪ್ರಶ್ನಿಸಲ್ಪಟ್ಟ ಶ್ರೀ ಶಂಕರನು "ಓ ಪ್ರಿಯಳೇ! ನಿನಗೆ ಆ ವ್ರತವನ್ನು ತಿಳಿಯುವುದರಿಂದ ಆಗುವ ಫಲವಾದರೂ ಏನು ? '' ಎಂದನು.

೧೦. ವಿತಕ್ಕೆಂದರೆ ಭೂಮ್ಯಾದಿ ಮೂರು ಲೋಕಗಳಲ್ಲೂ ಲಭಿಸುವ ದಿವ್ಯ ಭೋಗ ವಸ್ತುಗಳೆಲ್ಲವೂ ಯಾವ ಪರಮೇಶ್ವರನ ಅಧೀನಗಳಾಗಿರುವುವೋ ಅಂತಹ ಪರಮೇಶ್ವರನೇ ನಿನಗೆ ಪತಿಯಾಗಿರುವನು. ಆದುದರಿಂದ ನಿನಗೆ ಈ ವ್ರತ ಪರಿಜ್ಞಾನದಿಂದ ಪ್ರಯೋಜನವಿಲ್ಲ '' ಎಂದು ಹೇಳಿದನು.

೧೧. ಪಾರ್ವತಿಯು ಹೇಳುತ್ತಾಳೆ—ಓ ದೇವಾಧೀಶನೇ! ಈ ನಿನ್ನ ಮಾತು ನಿಜ. ತ್ರಿಲೋಕಭೂಷಣನಾಗಿಯೂ, ಚಂದ್ರಶೇಖರನಾಗಿಯೂ ಇರುವ ನಿನ್ನ ಸಂದರ್ಶನ ಮಾತ್ರದಿಂದಲೇ ಪ್ರಾಣಿಗೆ ಲೋಕದಲ್ಲಿ ದುರ್ಲಭವಾದ ವಸ್ತುವು ಯಾವುದೂ ಇರುವುದಿಲ್ಲ.

ಭರ್ತ್ರೃಸ್ತ್ರಿಯೋ ಹಿ ನಾಂ ದೇವ ಪ್ರಜಪಂತಿ ಶುಭಾಶುಭಂ ।
ವಿರೂಪಾಃ ಸುಲಭಾಃ ಕಾಶ್ಚಿದಪುತ್ರಾ ಬಹುಪುತ್ರಕಾಃ ॥ ೧೨ ॥

ಸುಶೀಲಾಸ್ತಪಸಾ ಕಾಶ್ಚಿಚ್ಛ್ವಶ್ರೂಭಿಃ ಪೀಡಿತಾ ಭೃಶಂ ।
ಶೌಚಾಚಾರಸಮಾಯುಕ್ತಾ ನ ರೋಚಂತೇಽಥ ಕಸ್ಯಚಿತ್ ॥ ೧೩ ॥

ಏವಂ ಬಹುವಿಧೈರ್ದುಃಖೈಃ ಪೀಡ್ಯಮಾನಾಸ್ತು ದಾರುಣೈಃ ।
ಶರಣಂ ಮಾಂ ಪ್ರಸನ್ನಾಸ್ತಾಃ ಕೃಪಾವಿಷ್ಟಾ ತತೋ ಹ್ಯಹಂ ॥ ೧೪ ॥

ಯೇನ ತಾಃ ಸುಖಸಂಭೋಗರೂಪಲಾವಣ್ಯಸಂಪದಾ ।
ಪುತ್ರೈಃ ಸೌಭಾಗ್ಯವಿತ್ತಾಢ್ಯೈರ್ಯುಕ್ತಾಃ ಸ್ಯುಃ ಸುರಸತ್ತಮ ।
ತನ್ಮೇ ಕಥಯ ತತ್ತ್ವೇನ ವ್ರತಾನಾಮುತ್ತಮಂ ವ್ರತಂ ॥ ೧೫ ॥

---

೧೨. ಸ್ವಾಮಿಾ ದೇವನೇ ! ಆದರೂ ಸ್ತ್ರೀಯರು ನನ್ನಲ್ಲಿ ತಮ್ಮ ಶುಭಾಶುಭ ಫಲಗಳನ್ನು ಅರಿಕೆಮಾಡುವರು. ಅದೇನೆಂದರೆ—ಲೋಕದಲ್ಲಿ ವಿರೂಪರಾದ ಸ್ತ್ರೀಯರೇ ಅಧಿಕಸಂಖ್ಯಾತರಾಗಿರುವರು. ಮತ್ತೆ ಕೆಲವರು ಅಪುತ್ರವತಿಯರೂ, ಕೆಲವರು ಬಹು ಪುತ್ರವತಿಯರೂ ಆಗಿರುತ್ತಾರೆ.

೧೩. ಮತ್ತೆ ಕೆಲವು ನಾರಿಯರು ಸದಾಚಾರಸಂಪನ್ನೆಯರು, ಇತರರು ಶರೀರಶೋಷಕವಾದ ಕೃಛ್ರ, ಚಾಂದ್ರಾಯಣಾದಿ ತಪೋನುಷ್ಠಾನದಿಂದ ಪೀಡಿತರಾದವರು, ಅನ್ಯಸ್ತ್ರೀಯರು ತಮ್ಮ ಅತ್ತೆಯರಿಂದ ಪೀಡಿಸಲ್ಪಟ್ಟವರು, ಇನ್ನೂ ಕೆಲವರು ಶೌಚ ಮತ್ತು ಸದಾಚಾರ ಸಂಪನ್ನರಾಗದ್ದರಿಂದ ತಮ್ಮ ತಮ್ಮ ಪತಿಯ ಅಪ್ರೀತಿಗೆ ಪಾತ್ರರೂ ಆಗಿರುತ್ತಾರೆ.

೧೪. ಈ ರೀತಿಯಲ್ಲಿ ಭಯಂಕರವಾದ ಅನೇಕವಿಧ ದುಃಖಗಳಿಂದ ಪೀಡಿತರಾದ ಆ ಸ್ತ್ರೀಯರು ನನ್ನನ್ನು ಶರಣುಹೊಂದಿರುವರು. ಆದುದರಿಂದ ನಾನು ಅವರಲ್ಲಿ ದಯೆಯುಳ್ಳವಳಾಗಿರುವೆನು.

೧೫. ಅಯ್ಯಾ ಸುರೋತ್ತಮನೇ ! ಆದುದರಿಂದ ಆ ಸ್ತ್ರೀಯರು ಯಾವ ವ್ರತವನ್ನಾಚರಿಸಿ ಪತಿಸೌಖ್ಯ, ಸೌಂದರ್ಯ, ಲಾವಣ್ಯ, ಪುತ್ರಸೌಭಾಗ್ಯ ಮತ್ತು ಧನಸಂಗ್ರಹ ಇವುಗಳನ್ನು ಪಡೆಯಬಹುದೋ ಅಂತಹ ಸರ್ವೋತ್ತಮವಾದ ವ್ರತವನ್ನು ನನಗೆ ಉಪದೇಶಿಸು ” ಎಂದಳು.

॥ ಈಶ್ವರ ಉವಾಚ ॥

ಮಾಘೇ ಮಾಸಿ ಸಿತೇ ಪಕ್ಷೇ ತೃತೀಯಾಯಾಂ ಯತವ್ರತಾಃ ।
ಮುಖಂ ಪ್ರಕ್ಷಾಲ್ಯ ಹಸ್ತೌ ಚ ಪಾದೌ ಚೈವ ಸಮಾಹಿತಾಃ ॥ ೧೬ ॥

ಉಪವಾಸಸ್ಯ ನಿಯಮಂ ದಂತಧಾವನಪೂರ್ವಕಂ ।
ಮಧ್ಯಾಹ್ನೇ ತು ತತಃ ಸ್ನಾನಂ ಬಿಲ್ವೈರಾಮಲಕೈಃ ಶುಭೈಃ ॥ ೧೭ ॥

ಸ್ನಾತ್ವಾ ತೀರ್ಥಜಲೇ ಶುಭ್ರೇ ವಾಸಸೀ ಪರಿಧಾಯ ಚ ।
ಸುಗಂಧೈಃ ಸುಮನೋಭಿಶ್ಚ ಪ್ರಭೂತೈಃ ಕುಂಕುಮಾದಿಭಿಃ ॥ ೧೮ ॥

ಅರ್ಚಯಂತಿ ಸದಾ ದೇವಿ ತ್ವಾಂ ಭಕ್ತ್ಯಾ ಭಕ್ತವತ್ಸಲೇ ।
ಕರ್ಪೂರಾದ್ಯೈಸ್ತಥಾ ಧೂಪೈರ್ನೈವೇದ್ಯೈಃ ಶರ್ಕರಾದಿಭಿಃ ॥ ೧೯ ॥

ಯದೃಚ್ಛಾಲಾಭಸಂಪನ್ನೈರ್ಧೂಪದೀಪಾರ್ಚನಾದಿಭಿಃ ।
ನಾಮ್ನೇಶಾನೀಂ ಗೃಹೀತ್ವಾ ತು ಪ್ರತೀಕ್ಷೇದ್ಘಟಿಕಾಂ ತತಃ ॥ ೨೦ ॥

---

೧೬. ಈಶ್ವರನು ಹೇಳುತ್ತಾನೆ—ಎಲೌ ಪಾರ್ವತಿಯೇ! ಮಾಘಮಾಸದ ಶುಕ್ಲಪಕ್ಷದ ತೃತೀಯಾ ತಿಥಿಯಲ್ಲಿ ಸ್ತ್ರೀಯರು ನಿನ್ನಲ್ಲೇ ಏಕಾಗ್ರತೆಯುಳ್ಳ ಮನಸ್ಕರಾಗಿ ಪ್ರಾತಃಕಾಲದಲ್ಲಿ ಮುಖಪ್ರಕ್ಷಾಳನ ಮತ್ತು ಹಸ್ತ ಪಾದಗಳ ಪ್ರಕ್ಷಾಳನೆಗಳನ್ನು ಮಾಡಬೇಕು.

೧೭-೧೯. ಎಲೌ ಭಕ್ತವತ್ಸಲಳೇ! ದಂತಧಾವನ ಮಾಡಿದಮೇಲೆ ಉಪವಾಸ ನಿಯಮವನ್ನು ಸ್ವೀಕರಿಸಿ, ಪವಿತ್ರವಾದ ಬಿಲ್ವಪತ್ರೆ ಮತ್ತು ನೆಲ್ಲಿಕಾಯಿಗಳಿಂದ ಸಿದ್ಧಪಡಿಸಿದ ತೈಲವನ್ನು ಹಚ್ಚಿಕೊಂಡು, ಮಧ್ಯಾಹ್ನದ ವೇಳೆಯಲ್ಲಿ ತೀರ್ಥಜಲದಲ್ಲಿ ಸ್ನಾನಮಾಡಿ, ಶುಭ್ರವಾದ ಎರಡು ಬಟ್ಟೆಗಳನ್ನು ಧರಿಸಿ, ಸುಗಂಧ, ವಿವಿಧ ಪುಷ್ಪಗಳು, ಕುಂಕುಮ, ಕರ್ಪೂರಾದಿಗಳು ಮತ್ತು ಧೂಪ, ದೀಪ, ಶರ್ಕರಾದಿ ನೈವೇದ್ಯ, ಇವುಗಳಿಂದ ಭಕ್ತಿಪೂರ್ವಕವಾಗಿ ಸದಾ ನಿನ್ನನ್ನು ಅರ್ಚಿಸಬೇಕು.

೨೦. ಈರೀತಿ ಅಯಾಚಿತವಾಗಿ ಯದೃಚ್ಛಾಲಬ್ಧವಾದ ಪೂಜಾಸಂಭಾರಗಳಿಂದ ಅರ್ಚಿಸಿ, ಅನಂತರ ಈಶಾನೀ ಎಂಬ ನಾಮಧೇಯವನ್ನು ಪಡೆದ ಈ ದೇವಿಯನ್ನು ಒಂದು ಕಲಶದ ನೀರಿನಲ್ಲಿ ಆವಾಹನೆಮಾಡಿ ಧ್ಯಾನಿಸಬೇಕು.

**ಪಾತ್ರೇ ತಾಮ್ರಮಯೇ ಶುದ್ಧೇ ಜಲಾಕ್ಷತವಿಮಿಶ್ರಿತೇ ।**
**ಸಹಿರಣ್ಯಂ ದ್ವಿಜಂ ಕೃತ್ವಾ ಮಂತ್ರಪೂರ್ವಂ ಸಮಾಧಿನಾ ॥ ೨೧ ॥**

**ಶಿರಸಿ ಪ್ರಕ್ಷಿಪೇದ್ಭ್ಯೋಯಂ ಧ್ಯಾಯಂತೀ ಮನಸೇಪ್ಸಿತಂ ।**
**ಬ್ರಹ್ಮಾವರ್ತಾತ್ಸಮಾಯಾತಾ ಬ್ರಹ್ಮಯೋನೇರ್ವಿನಿರ್ಗತಾ ॥ ೨೨ ॥**

**ಭದ್ರೇಶ್ವರಾ ತತೋ ದೇವೀ ಲಲಿತಾ ಶಂಕರಪ್ರಿಯಾ ।**
**ಗಂಗಾದ್ವಾರಾದ್ಧರಂ ಪ್ರಾಪ್ತಾ ಗಂಗಾಜಲಪವಿತ್ರಿತಾ ॥ ೨೩ ॥**

**ಸೌಭಾಗ್ಯಾರೋಗ್ಯಪುತ್ರಾರ್ಥಮರ್ಥಾರ್ಥಂ ಹರವಲ್ಲಭೇ ।**
**ಆಯಾತಾ ಘಟಿಕಾಂ ಭದ್ರೇ ಪ್ರತೀಕ್ಷಸ್ವ ನಮೋನಮಃ ॥ ೨೪ ॥**

---

೨೧. ಮತ್ತು ಆ ಕಲಶವು ಪರಿಶುದ್ಧವಾದ ತಾಮ್ರಮಯವಾಗಿರಬೇಕು. ಅದರಲ್ಲಿ ಅಕ್ಷತೆಮಿಶ್ರಿತವಾದ ನೀರನ್ನು ತುಂಬಿ ಹಿರಣ್ಯವನ್ನಿಟ್ಟು ಬ್ರಾಹ್ಮಣನಿಂದ ಮಂತ್ರವನ್ನು ಹೇಳಿಸುತ್ತಾ ಆ ಘಟಜಲದಲ್ಲಿ ಏಕಾಗ್ರತೆಯಿಂದ ದೇವೀದೃಷ್ಟಿಯನ್ನಿಟ್ಟು ಧ್ಯಾನಿಸಬೇಕು.

೨೨–೨೪. ಆಮೇಲೆ ಮನೋಭಿಷ್ಟವನ್ನು ಪ್ರಾರ್ಥಿಸುತ್ತಾ ಆ ಘಟೋದಕವನ್ನು ತನ್ನ ಶಿರಸ್ಸಿನಲ್ಲಿ ಅಭಿಷೇಕ ಮಾಡಿಕೊಳ್ಳಬೇಕು.

ಬ್ರಹ್ಮಾವರ್ತಾತ್ ಸಮಾಯಾತಾ ಬ್ರಹ್ಮಯೋನೇರ್ವಿನಿರ್ಗತಾ ।
ಭದ್ರೇಶ್ವರಾ ತತೋದೇವೀ ಲಲಿತಾ ಶಂಕರಪ್ರಿಯಾ ।
ಗಂಗಾದ್ವಾರಾದ್ಧರಂ ಪ್ರಾಪ್ತಾ ಗಂಗಾ ಜಲಪವಿತ್ರಿತಾ ।
ಸೌಭಾಗ್ಯಾರೋಗ್ಯ ಪುತ್ರಾರ್ಥಂ ಅರ್ಥಾರ್ಥಂ ಹರವಲ್ಲಭೇ ।
ಆಯಾತಾ ಘಟಿಕಾಂ ಭದ್ರೇ ಪ್ರತೀಕ್ಷಸ್ವ ನಮೋನಮಃ ।

ಈರೀತಿ ಹೇಳುತ್ತಾ ಮನಸಾಭೀಷ್ಟ ಪ್ರಾರ್ಥನೆಮಾಡಿಕೊಳ್ಳಬೇಕು.

ಓ ಹರಪ್ರಿಯಳೇ ! ನೀನು ಬ್ರಹ್ಮನಿಗೆ ಜನಕನಾದ ಶ್ರೀ ಮಹಾವಿಷ್ಣು ಪಾದದಿಂದ ಹೊರಟು ಬ್ರಹ್ಮಾವರ್ತದಿಂದ ಬಂದವಳು ಅಂತಹ ನೀನು ಮಂಗಳ ಸ್ವರೂಪಿಯೂ, ಸರ್ವೇಶ್ವರಿಯೂ, ಸುಂದರಿಯೂ, ಶ್ರೀ ಶಂಕರನ ಪ್ರೇಮ ಪಾತ್ರಳೂ ಆಗಿರುವೆ. ಗಂಗಾದ್ವಾರಾ ಪರಮೇಶ್ವರನನ್ನು ಪಡೆದು ಗಂಗಾಜಲ ದಿಂದ ಪವಿತ್ರಿತಳಾದಂತಹ ನೀನು ನನಗೆ ಸೌಭಾಗ್ಯ, ಆರೋಗ್ಯ, ಪುತ್ರ, ಧನ,

ದತ್ವಾ ಹಿರಣ್ಯಂ ತತ್ತಸ್ಮೈ ಪ್ರಾಶ್ನೀಯಾಚ್ಚ ಕುಶೋದಕಂ ।
ಆಚಮ್ಯ ಪ್ರಯತೋ ಭೂತ್ವಾ ಭೂಮಿಸ್ಥಾ ಕ್ಷಪಯೇತ್ ಕ್ಷಪಾಂ ॥ ೨೫ ॥

ಧ್ಯಾಯಮಾನಾ ಉಮಾಂ ದೇವೀಂ ಹರಿತೇ ಯವಸಂಸ್ತರೇ ।
ದ್ವಿತೀಯೇಽಹ್ನಿ ತತಃ ಸ್ನಾತ್ವಾ ತಥೈವಾಭ್ಯರ್ಚ್ಯ ಪಾರ್ವತೀಂ ॥ ೨೬ ॥

ಯಥಾಶಕ್ತಿ ದ್ವಿಜಾನ್ಪೂಜ್ಯ ತತೋ ಭುಞ್ಜೀತ ವಾಗ್ಯತಾ ।
ಏವಂ ತು ಪ್ರಥಮೇ ಮಾಸಿ ಪೂಜನೀಯಾಸಿ ಕಾಲಿಕೇ ॥ ೨೭ ॥

ದ್ವಿತೀಯೇ ಪಾರ್ವತೀ ನಾಮ ತೃತೀಯೇ ಶಂಕರಪ್ರಿಯಾ ।
ಭವಾನ್ಯಥ ಚತುರ್ಥೇ ತ್ವಂ ಸ್ಕಂದಮಾತಾಥ ಪಞ್ಚಮೇ ॥ ೨೮ ॥

---

ಧಾನ್ಯ ಇವುಗಳು ಪ್ರಾಪ್ತಿಯಾಗುವುದಕ್ಕಾಗಿ ಈ ಘಟಜಲದಲ್ಲಿ ಸನ್ನಿಹಿತಳಾಗು. ನಿನಗೆ ಪುನಃ ಪುನಃ ನಮಸ್ಕಾರ ಮಾಡುಪನು ಎಂದು ಈ ಮಂತ್ರಾರ್ಥ.

೨೫. ಆ ಮೇಲೆ ಆ ಕಲಶದ ನೀರಿನಲ್ಲಿ ಹಾಕಿರುವ ಹಿರಣ್ಯವನ್ನು ಬ್ರಾಹ್ಮಣನಿಗೆ ಕೊಟ್ಟು ಕುಶೋದಕವನ್ನು ಪ್ರಾಶನಮಾಡಿ ಅನಂತರ ಆಚಮನ ಮಾಡಿ ಪರಿಶುದ್ಧಳಾಗಿ ಭೂಶಯನಮಾಡಿ ರಾತ್ರಿಯನ್ನು ಕಳೆಯಬೇಕು.

೨೬-೨೭. ಮಲಗುವುದಕ್ಕೆ ಆಧಾರಯುತವಾದ ಭೂಮಿಯು ಪಚ್ಚೆಯ ಬಣ್ಣದ ಯವತೃಣಗಳಿಂದ ಆಚ್ಛಾದಿತವಾಗಿರಬೇಕು. ಆ ಶಯನದಲ್ಲಿ ಶ್ರೀ ದೇವಿಯನ್ನು ಧ್ಯಾನಮಾಡುತ್ತಾ ರಾತ್ರಿಯನ್ನು ಕಳೆದು, ಅನಂತರ ಮರುದಿನ ದಲ್ಲೂ ಸ್ನಾನಮಾಡಿ ಪೂರ್ವೋಕ್ತರೀತಿಯಿಂದಲೇ, ಪಾರ್ವತೀದೇವಿಯನ್ನು ಅರ್ಚಿಸಿ ಸ್ವಶಕ್ತ್ಯನುಸಾರ ಬ್ರಾಹ್ಮಣರನ್ನು ಸತ್ಕರಿಸಿ ಅನಂತರ ತಾನೂ ಮೌನ ದಿಂದ ಭುಂಜಿಸಬೇಕು. ಈರೀತಿ ನೀನು ಮೊದಲನೆಯ ತಿಂಗಳಿನಲ್ಲಿ ಕಾಲಿಕಾ ನಾಮದಿಂದ ಪೂಜಿಸಲ್ಪಡಬೇಕು.

೨೮. ಇದೇ ರೀತಿಯಲ್ಲಿ ಎರಡನೇ ತಿಂಗಳಿನಲ್ಲಿ ಪಾರ್ವತೀ ಎಂಬ ನಾಮದಿಂದಲೂ, ಮೂರನೆಯ ತಿಂಗಳಿನಲ್ಲಿ ಶಂಕರಪ್ರಿಯಾ ಎಂಬ ನಾಮ ದಿಂದಲೂ, ನಾಲ್ಕನೆಯ ತಿಂಗಳಿನಲ್ಲಿ ಭವಾನೀ ಎಂಬ ನಾಮದಿಂದಲೂ, ಐದನೇ ತಿಂಗಳಿನಲ್ಲಿ ಸ್ಕಂಧಮಾತಾ ಎಂಬ ನಾಮದಿಂದಲೂ, ಪೂಜಿಸಲ್ಪಡಬೇಕು.

ದಕ್ಷಸ್ಯ ದುಹಿತಾ ಷಷ್ಠೇ ಮೈನಾಕೀ ಸಪ್ತಮೇ ಸ್ಮೃತಾ ।
ಕಾತ್ಯಾಯನ್ಯಷ್ಟಮೇ ಮಾಸಿ ನವಮೇ ತು ಹಿಮಾದ್ರಿಜಾ ॥ ೨೯ ॥

ದಶಮೇ ಮಾಸಿ ವಿಖ್ಯಾತಾ ದೇವೀ ಸೌಭಾಗ್ಯದಾಯಿನೀ ।
ಉಮಾತ್ವೇಕಾದಶೇ ಮಾಸಿ ಗೌರೀ ತು ದ್ವಾದಶೇ ಪರಾ ॥ ೩೦ ॥

ಕುಶೋದಕಂ ಪಯಃ ಸರ್ಪಿರ್ಗೋಮೂತ್ರಂ ಗೋಮಯಂ ಫಲಂ ।
ನಿಂಬಪತ್ರಂ ಕಂಟಕಾರೀ ಗವಾಂ ಶೃಂಗೋದಕಂ ದಧಿ ॥ ೩೧ ॥

ಪಂಚಗವ್ಯಂ ತಥಾ ಶಾಕಃ ಪ್ರಾಶನಾನಿ ಕ್ರಮಾದಮೀ ।
ಮಾಸಿಮಾಸಿ ಸ್ಥಿತಾ ಹ್ಯೇವಮುಪವಾಸಪರಾಯಣಾ ॥ ೩೨ ॥

ದದಾತಿ ಶ್ರದ್ಧಯೈತಾನಿ ವಾಚಕೇ ಬ್ರಾಹ್ಮಣೋತ್ತಮೇ ।
ಕುಸುಂಭಮಾಜ್ಯಂ ಲವಣಂ ಜೀರಕಂ ಗುಡಮೇವ ಚ ॥ ೩೩ ॥

---

೨೯. ಹೀಗೆಯೇ ಆರು, ಏಳು, ಎಂಟು, ಒಂಭತ್ತನೇ ತಿಂಗಳುಗಳಲ್ಲಿ ಕ್ರಮವಾಗಿ "ದಕ್ಷದುಹಿತಾ" ಮೈನಾಕೀ, "ಕಾತ್ಯಾಯನೀ" ಮತ್ತು ಹಿಮಾದ್ರಿಜಾ ಎಂಬ ನಾಮುಗಳಿಂದ ವ್ರತಿಯು ನಿನ್ನನ್ನು ಪೂಜಿಸಬೇಕು.

೩೦. ಎಲೌ ಪಾರ್ವತಿಯೇ ! ನೀನು ಹತ್ತನೆಯ ತಿಂಗಳಿನಲ್ಲಿ ಲೋಕ ಪ್ರಸಿದ್ಧವಾದ ಸೌಭಾಗ್ಯದಾಯಿನೀ ಎಂಬ ನಾಮಧೇಯದಿಂದಲೂ ಹನ್ನೊಂದನೆಯ ತಿಂಗಳಿನಲ್ಲಿ "ಉಮಾ" ಎಂಬ ಹೆಸರಿನಿಂದಲೂ ಹನ್ನೆರಡನೇ ತಿಂಗಳಿನಲ್ಲಿ ಶ್ರೀ ಗೌರೀ ಎಂಬ ನಾಮಧೇಯದಿಂದಲೂ ಅರ್ಚಿಸಲ್ಪಡಬೇಕು.

೩೧-೩೨. ಪ್ರತಿ ತಿಂಗಳಲ್ಲೂ ಉಪವಾಸವ್ರತ ನಡೆಸುವಾಗ ಹನ್ನೆರಡು ತಿಂಗಳುಗಳಲ್ಲಿ ಕ್ರಮವಾಗಿ ದರ್ಭೋದಕ, ಕ್ಷೀರ, ಘೃತ, ಗೋಮೂತ್ರ, ಗೋಮಯ, ಫಲ, ನಿಂಬಪತ್ರ, ಕಂಟಕಾರಿ (ನೆಗ್ಗಲು), ಗೋಶೃಂಗೋದಕ, ದಧಿ, ಪಂಚಗವ್ಯ, ಶಾಕ ಎಂಬ ಈ ಹನ್ನೆರಡು ದ್ರವ್ಯಗಳನ್ನು ವ್ರತಿಯು ಪ್ರಾಶನೆಗಾಗಿ ಉಪಯೋಗಿಸಬೇಕು.

೩೩. ಮತ್ತು ಕಮಂಡಲು, ತುಪ್ಪ, ಉಪ್ಪು, ಜೀರಿಗೆ, ಬೆಲ್ಲ ಇವುಗಳನ್ನು ಶ್ರೋತ್ರಿಯನಾದ ಬ್ರಾಹ್ಮಣೋತ್ತಮನಿಗೆ ಶ್ರದ್ಧಾಪೂರ್ವಕವಾಗಿ ದಾನಮಾಡಬೇಕು.

ದತ್ತೈರೇಭಿಃ ಸೂರ್ಯಸ್ಥಾ ತ್ವಂ ಸೂರ್ಯಸ್ಥಾ ತುಷ್ಯಸಿ ಪ್ರಿಯೇ ।
ಮಾಸಿಮಾಸಿ ಭವೇನ್ಮಂತ್ರೋ ಗಕಾರೋದ್ವಾದಶಾಕ್ಷರಃ ॥ ೩೪ ॥

ಓಂಕಾರಪೂರ್ವಕೋ ದೇವಿ ನಮಸ್ಕಾರಾಂತ ಈರಿತಃ ।
ಏಭಿಸ್ತ್ವಂ ಪೂಜಿತಾ ಮಂತ್ರೈಸ್ತುಷ್ಯಸಿ ವ್ರತತಃ ಪ್ರಿಯೇ ॥ ೩೫ ॥

ತುಷ್ಟಾ ತ್ವಭೀಪ್ಸಿತಾನ್ಕಾಮಾನ್ದದಾಸಿ ಪ್ರೀತಿಪೂರ್ವಕಂ ।
ಸಮಾಪ್ತೇ ತು ವ್ರತೇ ತಸ್ಮಿನ್ ಬ್ರಾಹ್ಮಣಂ ವೇದಪಾರಗಂ ॥ ೩೬ ॥

ಸಹಿತಂ ಭಾರ್ಯಯಾಭ್ಯರ್ಚ್ಯ ಗಂಧಪುಷ್ಪಾದಿಭಿಃ ಶುಭೈಃ ।
ದ್ವಿಜಂ ಮಹೇಶ್ವರಂ ಕೃತ್ವಾ ಉಮಾಂ ಭಾರ್ಯಾಂ ತಥೈವ ಚ ॥ ೩೭ ॥

---

೩೪-೩೫. ಎಲೌ ಪ್ರಿಯಳೇ! ಇವುಗಳನ್ನು ದಾನಮಾಡುವುದರಿಂದ ಸೂರ್ಯಮಂಡಲದಲ್ಲಿ ಸನ್ನಿಹಿತಳಾದ ನೀನು ಸುಪ್ರೀತಳಾಗುವೆ. ಮತ್ತು ಪ್ರತಿ ತಿಂಗಳಲ್ಲೂ ಓಂಕಾರಪೂರ್ವಕವಾಗಿಯೂ, ನಮಃಶಬ್ದವನ್ನು ಕೊನೆಯಲ್ಲಿ ಸೇರಿಸಿಯೂ ದ್ವಾದಶಾಕ್ಷರೀ ಮಂತ್ರವನ್ನು ಜಪಿಸಬೇಕು. ಈ ರೀತಿಯಲ್ಲಿ ಮಂತ್ರಪೂರ್ವಕವಾಗಿ ಪೂಜೆಮಾಡಿ ನಿಯಮದಿಂದ ವ್ರತಾನುಷ್ಠಾನಮಾಡುವುದರಿಂದ ನೀನು ಅವರಿಗೆ ಪ್ರಸನ್ನಳಾಗುವೆ.

೩೬. ನೀನು ಯಾರವಿಷಯದಲ್ಲಿ ಪ್ರಸನ್ನಳಾಗುವೆಯೋ ಅಂಥವರಿಗೆ ಇಷ್ಟವಾದ ಫಲಗಳನ್ನು ಪ್ರೀತಿಪೂರ್ವಕವಾಗಿ ಅನುಗ್ರಹಿಸುವೆ. ಈರೀತಿ ಹನ್ನೆರಡು ತಿಂಗಳಲ್ಲಿ ಆಚರಿಸಿ ಈ ವ್ರತವನ್ನು ಸಮಾಪ್ತಮಾಡಬೇಕು.

೩೭. ಆಗ ಸಪತ್ನೀಕನೂ, ವೇದವೇದಾಂಗ ಪಾರಂಗತನೂ, ಆದ ಬ್ರಾಹ್ಮಣನನ್ನು ಕರೆದು, ಅವನನ್ನು ಪರಮೇಶ್ವರಸ್ವರೂಪನನ್ನಾಗಿಯೂ ಅವನ ಪತ್ನಿಯನ್ನು ಉಮಾಸ್ವರೂಪಿಣಿಯನ್ನಾಗಿಯೂ ಭಾವಿಸಿ, ಉತ್ತಮವಾದ ಗಂಧ ಪುಷ್ಪತಾಂಬೂಲಾದಿಗಳಿಂದ ಅರ್ಚಿಸಬೇಕು.

ಅನ್ನಂ ಸದಕ್ಷಿಣಂ ದದ್ಯಾತ್ತಥಾ ಶುಕ್ಲೇ ಚ ವಾಸಸೀ ।
ರಕ್ತಂ ವಾಸೋಯುಗಂ ದದ್ಯಾತ್ತ್ವಾಮುದ್ದಿಶ್ಯ ಹರಪ್ರಿಯೇ ॥ ೩೮ ॥

ಬ್ರಾಹ್ಮಣೇ ಶ್ರದ್ಧಯಾ ಯುಕ್ತಸ್ತಸ್ಯಾಂ ಫಲಮಿದಂ ಶೃಣು ।
ದಶವರ್ಷಸಹಸ್ರಾಣಿ ಲೋಕಾನ್ಪ್ರಾಪ್ಯ ಪರಾಪರಾನ್ ॥ ೩೯ ॥

ಮೋದತೇ ಭರ್ತೃಸಹಿತಾ ಯಥೇಂದ್ರೇಣ ಶಚೀ ತಥಾ ।
ಮಾನುಷತ್ವಂ ಪುನಃ ಪ್ರಾಪ್ಯ ಸ್ವೇನ ಭರ್ತ್ರಾ ಸಹೈವ ಸಾ ॥ ೪೦ ॥

ಪುಣ್ಯೇ ಕುಲೇ ಶ್ರಿಯಾ ಯುಕ್ತಾ ನೀರೋಗಾ ಸುಖಮಶ್ನುತೇ ।
ಸಪ್ತ ಜನ್ಮಾನಿ ಯಾವಚ್ಚ ನ ವೈಧವ್ಯಮವಾಪ್ನುಯಾತ್ ॥ ೪೧ ॥

---

೩೮. ಎಲೌ ಹರಪ್ರಿಯಳೇ ! ಮತ್ತು ಆ ದಂಪತಿಗಳಿಗೆ ದಕ್ಷಿಣೆಯನ್ನು ಕೊಟ್ಟು ಅನ್ನದಾನ ಮಾಡುವುದಲ್ಲದೆ ನಿನ್ನ ಪ್ರೀತ್ಯರ್ಥವಾಗಿ ಎರಡು ಬಿಳಿಯ ಬಟ್ಟೆಗಳನ್ನೂ ಎರಡು ರಕ್ತವಸ್ತ್ರಗಳನ್ನೂ ಶ್ರದ್ಧಾಪೂರ್ವಕವಾಗಿ ದಾನಮಾಡ ಬೇಕು.

೩೯–೪೦. ಈರೀತಿಯ ವ್ರತಾಚರಣೆಯಿಂದ ಸ್ತ್ರೀಯರಿಗೆ ಲಭಿಸುವ ಫಲ ವನ್ನು ಹೇಳುತ್ತೇನೆ ಕೇಳು. ಈ ವ್ರತಚಾರಿಣಿಯು ಶ್ರೇಷ್ಠವಾದ ಪರಾಪರ ಲೋಕಗಳನ್ನು ಪಡೆದು, ಅಲ್ಲಿ ಶಚೀದೇವಿಯು ತನ್ನ ಪತಿಯಾದ ಇಂದ್ರನೊಡನೆ ಸುಖವನ್ನನುಭವಿಸುವಂತೆ ಇವಳೂ ತನ್ನ ಪತಿಯೊಡನೆ ಹತ್ತುಸಹಸ್ರವರ್ಷಗಳು ಸುಖವಾಗಿರುವಳು. ಅನಂತರ ತನ್ನ ಪತಿಸಹಿತಳಾಗಿಯೇ ಮನುಷ್ಯಲೋಕದಲ್ಲಿ ಮಾನವಜನ್ಮವನ್ನು ಪಡೆಯುವಳು.

೪೧. ಈ ಲೋಕದಲ್ಲೂ ಸತ್ಕುಲದಲ್ಲಿ ಜನಿಸಿ, ಧನಸಂಪನ್ನೆಯಾಗಿ ಆರೋಗ್ಯದಿಂದ ಸುಖವಾಗಿರುವಳು. ಅಲ್ಲಿಂದ ಮುಂದೆ ಏಳುಜನ್ಮಗಳವರೆಗೆ ಅವಳಿಗೆ ವೈಧವ್ಯ ಪ್ರಾಪ್ತಿಯಿಲ್ಲ.

ಪುತ್ರಾನ್ಭೋಗಾಂಸ್ತಥಾ ರೂಪಂ ಸೌಭಾಗ್ಯಾರೋಗ್ಯಮೇವ ಚ ।
ಏಕಪತ್ನೀ ತಥಾ ಭರ್ತುಃ ಪ್ರಾಣೇಭ್ಯೋಽಪ್ಯಧಿಕಾ ಭವೇತ್ ॥ ೪೨ ॥

ಶೃಣುಯಾದ್ವಾಚ್ಯಮಾನಂ ತು ಭಕ್ತ್ಯಾ ಯಾ ಲಲಿತಾವ್ರತಂ ।
ಮಯಾ ಸ್ನೇಹೇನ ಕಥಿತಂ ಸಾಪಿ ತತ್ಫಲಭಾಗಿನೀ ॥ ೪೩ ॥

ಸಂಪೂಜ್ಯ ಲಕ್ಷಲಲಿತಾಂ ಲಲಿತಾಂಗಯಷ್ಟಿಂ ।
ಗಂಧೋದಕಾಮೃತಘಟೀಂ ಶಿರಸಿ ಕ್ಷಿಪೇದ್ಯಃ ॥
ಸಾ ಸ್ವರ್ಗಮೇತ್ಯ ಲಲಿತಾಸು ಲಲಾಮಭೂತಾ ।
ಭೂಪಾಧಿಪಂ ಪತಿಮವಾಪ್ಯ ಭುವಂ ಭುನಕ್ತಿ ॥ ೪೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಲಲಿತಾ ತೃತೀಯಾವ್ರತ
ಮಹಾತ್ಮ್ಯಂ ನಾಮೈಕ ವಿಂಶತಿತಮೋಽಧ್ಯಾಯಃ.

---

೪೨. ಮತ್ತು ಈಕೆಗೆ ಪುತ್ರರೂ ಪೌತ್ರರೂ ಜನಿಸಿ ವಂಶವೃದ್ಧಿಯಾಗುವುದಲ್ಲದೆ ಅನೇಕ ಭೋಗಗಳೂ ಸೌಂದರ್ಯ ಸೌಭಾಗ್ಯ ಆರೋಗ್ಯಾದಿಗಳೂ ಸ್ಥಿರವಾಗಿರುವುವು. ಮತ್ತು ಅವಳ ಪತಿಗೆ ಇವಳೊಬ್ಬಳೇ ಸತಿಯಾಗಿದ್ದು ಪತಿಗೆ ಪ್ರಾಣಾಧಿಕಳೆನಿಸಿಕೊಳ್ಳುವಳು.

೪೩. ನಾನು ಸ್ನೇಹದಿಂದ ನಿನಗೆ ಹೇಳಿದ ಈ ಲಲಿತಾವ್ರತವನ್ನು ಯಾವ ಸ್ತ್ರೀಯು ಭಕ್ತಿಯಿಂದ ಕೇಳುವಳೋ ಅಂಥವಳು, ಈ ಹಿಂದೆ ಹೇಳಿದ ಈ ವ್ರತ ಫಲಕ್ಕೆ ಭಾಗಿಯಾಗುತ್ತಾಳೆ.

೪೪. ಸುಂದರವಾದ ಶರೀರವುಳ್ಳ ಶ್ರೀ ಲಲಿತಾದೇವಿಗೆ ಲಕ್ಷಪೂಜೆಯನ್ನು ಮಾಡಿ ಗಂಧೋದಕದಿಂದ ತುಂಬಿರುವ ಘಟದಜಲವನ್ನು ತನ್ನ ಶಿರಸ್ಸಿನಲ್ಲಿ ಅಭಿಷೇಕ ಮಾಡಿಕೊಳ್ಳುವ ಸ್ತ್ರೀಯು ಎಲ್ಲಾ ಸ್ತ್ರೀಗಣಕ್ಕೂ ಭೂಷಣಪ್ರಾಯಳಾಗಿದ್ದು ದೇಹಾಂತದಲ್ಲಿ ಸ್ವರ್ಗವನ್ನು ಪಡೆದು ಪುನಃ ಭೂಲೋಕಕ್ಕೆ ಬಂದು ಚಕ್ರವರ್ತಿಯನ್ನು ಪತಿಯನ್ನಾಗಿ ಪಡೆದು ಭೂಲೋಕದ ಸುಖವನ್ನು ಅನುಭವಿಸುವಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಲಲಿತಾತೃತೀಯಾ
ಮಾಹಾತ್ಮ್ಯವರ್ಣನೆ ಎಂಬ ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಾವಿಂಶೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಇಹಾಪಿ ಯೋಗಮಾಸಾದ್ಯ ಭರ್ತೃಬಂಧುಜನೈಃ ಸಹ ।
ವದ ನಾರೀ ನರಶ್ರೇಷ್ಠ ವ್ರಜೇದ್ಯೇನ ಶಿವಾಲಯಂ ॥ ೧ ॥

ವಿಧವಾ ಚ ಪರೇ ಲೋಕೇ ಭೂಯೋಽಪಿ ನ ವಿಯುಜ್ಯತೇ ।
ಸುಖಸಂದೋಹಸೌಭಾಗ್ಯಯುಕ್ತಾ ಭವತಿ ಭಾಮಿನೀ ॥ ೨ ॥

---

### ಇಪ್ಪತ್ತೆರಡನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—"ಓ ಪುರುಷೋತ್ತಮನೇ! ಸ್ತ್ರೀಯರು ಯಾವ ವ್ರತವನ್ನಾಚರಿಸಿ ಈ ಲೋಕದಲ್ಲಿ ಪತಿಯ ಮತ್ತು ಭಾಂಧವರ ವಿಯೋಗ ವಿಲ್ಲದೆ ಸುಖವನ್ನನುಭವಿಸಿ ದೇಹಾಂತದಲ್ಲಿ ಶಿವಲೋಕವನ್ನು ಹೊಂದುವಳೋ ಅಂಥಾ ವ್ರತವನ್ನು ಹೇಳು.

೨. ಮತ್ತು ವಿಧವೆಯು ಪರಲೋಕದಲ್ಲಿ ಶಾಶ್ವತಸುಖವನ್ನನುಭವಿಸಿ ಪುನಃ ಜನ್ಮವೆತ್ತಿ ಪತಿಯುಕ್ತಳಾಗಿ ಸೌಭಾಗ್ಯ ಸುಖಪರಂಪರೆಯನ್ನು ಅನುಭವಿಸುವಳೋ ಅಂಥಾ ವ್ರತವನ್ನುಪದೇಶಿಸು" ಎಂದನು.

॥ ಶ್ರೀ ಕೃಷ್ಣ ಉವಾಚ ॥

ಉಮಯಾಚರಿತಂ ಯಸ್ಮಾದ್ಭವವಾಗ್ಲಲಿತಾಮೃತಂ ।
ಲಬ್ಧ್ವಾ ಹಿ ಭವತೋ ಜನ್ಮ ದಕ್ಷಕೋಪಾದ್ವಿಯುಕ್ತಯಾ ॥ ೧

ಮಹಾಸೌಭಾಗ್ಯ ಸಂದೋಹಂ ದೃಷ್ಟ್ವಾ ದೇವ್ಯಾ ಮಹಾತ್ಮನಾ ।
ಅರುಂಧತ್ಯಾ ವಶಿಷ್ಠೇನ ಪೃಷ್ಟೇನ ಕಥಿತಂ ಶೃಣು ॥ ೪ ।

ಮಾಸಿ ಮಾರ್ಗಶಿರೇ ಪ್ರಾಪ್ತೇ ಚಂದ್ರವೃದ್ಧೌ ಶುಚಿಸ್ಮಿತಾ ।
ದ್ವಿತೀಯಾಯಾಂ ಸಮಾಸಾದ್ಯ ನಕ್ತಂ ಭುಂಜೀತ ಪಾಯಸಂ ॥ ೫ ॥

ಆಚಮ್ಯ ಚ ಶುಚಿರ್ಭೂತ್ವಾ ದಂಡವಚ್ಛಂಕರಂ ನಮೇತ್ ।
ಮುದಾನ್ವಿತಾ ನಮಸ್ಕೃತ್ಯ ವಿಜ್ಞಾಪ್ಯ ಪರಮೇಶ್ವರಂ ॥ ೬ ॥

---

೩. ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ದಕ್ಷಪ್ರಜಾಪತಿಯಮೇಲಿನ ಕೋಪದಿಂದ ತಾನು ಶರೀರಪರಿತ್ಯಾಗ ಮಾಡಿ ಈಶ್ವರವಿಯೋಗವನ್ನು ಪಡೆದ ಉಮೆಯು ಪುನಃ ಜನ್ಮವೆತ್ತಿದಮೇಲೆ ಈಶ್ವರನ ಲಲಿತವಚನಾಮೃತವನ್ನು ಪಾನಮಾಡಿ ಅವನಿಂದ ಈ ವ್ರತವನ್ನು ತಿಳಿದುಕೊಂಡು ಪ್ರಯತ್ನಪೂರ್ವಕವಾಗಿ ಆಚರಿಸಿದಳು.

೪. ಅದರಿಂದ ಆ ಉಮೆಗೆ ಬಂದ ಮಹಾಸೌಭಾಗ್ಯಪರಂಪರೆಯನ್ನು ಅರಿತು, ಆ ವಿಷಯದಲ್ಲಿ ತನ್ನ ಪತ್ನಿಯಾದ ಅರುಂಧತೀದೇವಿಯು ಪ್ರಶ್ನೆಮಾಡಲಾಗಿ, ಮಹಾತ್ಮನಾದ ವಸಿಷ್ಠಮಹರ್ಷಿಯು ತನ್ನ ಪತ್ನಿಗೆ ಉಪದೇಶಿಸಿದ ವ್ರತವನ್ನು ಹೇಳುತ್ತೇನೆ ಕೇಳು.

೫. ನಾರಿಯು ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ದ್ವಿತೀಯಾದಿನ ರಾತ್ರಿಯಲ್ಲಿ ಪಾಯಸವನ್ನು ಮಾಡಿ ಭುಂಜಿಸಬೇಕು.

೬. ಅನಂತರ ಶುದ್ಧ್ಯರ್ಥವಾಗಿ ಆಚಮನಮಾಡಿ ಶುಚಿಯಾಗಿ ಸಂತೋಷದಿಂದ ಪರಮೇಶ್ವರನಿಗೆ ದಂಡವತ್ಪ್ರಣಾಮಮಾಡಿ ನಮಸ್ಕರಿಸಿ ಪ್ರಾರ್ಥನೆಮಾಡಿಕೊಳ್ಳಬೇಕು.

ಔದುಂಬರಮ್ಪುಜಂ ಗೃಹ್ಯ ಭಕ್ಷಯೇದ್ದಂತಧಾವನಂ ।
ಉತ್ತರಾಶಾಗತಂ ಸಾಗ್ರಂ ಸತ್ವಚಂ ನಿರ್ವ್ರಣಂ ಶುಭಂ ॥ ೭ ॥

ದ್ವಿತೀಯಾಯಾಂ ಪರೇವಾಹ್ನಿ ಗೌರೀಂ ಶಂಭುಂ ಚ ಪೂಜಯೇತ್ ।
ಶಾಲಿಪಿಷ್ಟಮಯೇ ಕೃತ್ವಾ ರೂಪೇ ಸ್ತ್ರೀಪುಂಸಯೋಃ ಶುಭೇ ।
ಪಾತ್ರೇ ಸಂಸ್ಥಾಪ್ಯ ಸಂಪೂಜ್ಯ ಜಾಗರಂ ನಿಶಿ ಕಲ್ಪಯೇತ್ ॥ ೮ ॥

ವಿಧಿವತ್ಪೂಜಯಿತ್ವಾ ತು ಶಂಕರಂ ಕೀರ್ತಯನ್ಸ್ವಪೇತ್ ।
ಪ್ರಭಾತೇ ತೇ ಗೃಹೀತ್ವಾ ತು ಆಚಾರ್ಯಾಯ ನಿವೇದಯೇತ್ ॥ ೯ ॥

ಭೋಜಯೇನ್ಮೃಷ್ಟಮನ್ನಾದ್ಯಂ ಶಿವಭಕ್ತ್ಯಾ ದ್ವಿಜೋತ್ತಮಾನ್ ।
ದಾಂಪತ್ಯಾನಿ ಚ ತತ್ರೈವ ಶಕ್ತ್ಯಾ ತಾನ್ಯಪಿ ಭೋಜಯೇತ್ ॥ ೧೦ ॥

---

೭. ಪ್ರಾತಃಕಾಲದಲ್ಲಿ ಉತ್ತರದಿಙ್ಮುಖವಾಗಿ ಬೆಳೆದಿರುವ ತುದಿಯುಳ್ಳದ್ದಾಗಿ, ಕ್ರಿಮಿಕೀಟಾದಿಗಳಿಂದ ಭಕ್ಷಿಸಲ್ಪಡದೆ ಅಖಂಡವಾಗಿ ತೊಗಟೆಯಿಂದ ಕೂಡಿಕೊಂಡು ಋಜುವಾಗಿ ಇರುವ ಶುಭವಾದ ಅತ್ತಿಯಕಡ್ಡಿಯನ್ನು ಮುರಿದು ಅದರಿಂದ ದಂತಧಾವನ ಮಾಡಬೇಕು.

೮. ಮಾರ್ಗಶೀರ್ಷಮಾಸದ ದ್ವಿತೀಯಾ ಅಥವಾ ತೃತೀಯಾ ತಿಥಿಯಲ್ಲಿ ಅಕ್ಕಿಯಹಿಟ್ಟಿನಿಂದ ಶ್ರೀ ಗೌರೀಶಂಕರರ ಪ್ರತಿಮೆಯನ್ನು ಮಾಡಿ, ಪಾತ್ರೆಯಲ್ಲಿಟ್ಟು ಪೂಜೆ, ರಾತ್ರಿಯಲ್ಲಿ ಜಾಗರಣೆ, ಇವು ಈ ವ್ರತದ ಮುಖ್ಯನಿಯಮ.

೯. ಶಾಸ್ತ್ರೋಕ್ತವಿಧಾನದಿಂದ ಪೂಜಿಸಿ ರಾತ್ರಿಯಲ್ಲಿ ನಿದ್ರಿಸದೆ ಶ್ರೀ ಶಿವಧ್ಯಾನಪರಳಾಗಿದ್ದು ಪ್ರಾತಃಕಾಲದಲ್ಲಿ ಆಪಾತ್ರಪ್ರತಿಷ್ಠಿತವಾದ ಶ್ರೀ ಗೌರೀಶಂಕರ ಮೂರ್ತಿಯನ್ನು ಪುರೋಹಿತನಿಗೆ ಸಮರ್ಪಿಸಬೇಕು.

೧೦. ಶಿವಪ್ರೀತ್ಯರ್ಥವಾಗಿ ಬ್ರಾಹ್ಮಣೋತ್ತಮರಿಗೆ ಮೃಷ್ಟಾನ್ನಭೋಜನ ಮಾಡಿಸಬೇಕು. ಅದರಲ್ಲೂ ಸ್ವಶಕ್ತ್ಯಾನುಸಾರ ದಂಪತಿಭೋಜನವನ್ನೇ ಮಾಡಿಸಿ ದಕ್ಷಿಣೆಕೊಡಬೇಕು.

**ಪ್ರತಿಮಾಸಂ ಪ್ರಕುರ್ವೀತ ವಿಧಿನಾ ತೇನ ಸಂಯುತಾ ।**
**ಕಾರ್ತಿಕಾಂತೇ ತತೋ ಮಾಸಿ ಮಾರ್ಗಶೀರ್ಷೇ ಸಮುದ್ಯಮೇತ್ ॥ ೧೧ ॥**

**ನಾಮಾನಿ ಚ ಪ್ರವಕ್ಷ್ಯಾಮಿ ಪ್ರತಿಮಾಸಂ ಕ್ರಮಾಚ್ಛೃಣು ।**
**ಪೂಜಾಜಾಪ್ಯನಿಮಿತ್ತಂ ಚ ಸಿಧ್ಯರ್ಥಂಚೇತಿ ತಸ್ಯ ಚ ॥ ೧೨ ॥**

**ಏವಂ ಪೌಷೇ ತು ಸಂಪ್ರಾಪ್ತೇ ಗಿರಿಶಂ ಪಾರ್ವತೀಂ ತಥಾ ।**
**ಸಮಭ್ಯರ್ಚ್ಯ ಚತುರ್ಥ್ಯಾಂ ತು ಪಂಚಗವ್ಯಂ ಪಿಬೇತ್ಸುಧೀಃ ॥ ೧೩ ॥**

**ಏತತ್ಪ್ರಾರಣಮುದ್ದಿಷ್ಟಂ ಮಾರ್ಗಾದ್ಯಾ ಮಾರ್ಗಗೋಚರಂ ।**
**ನ ಚಾನ್ಯತ್ಪಂಚಗವ್ಯಾದೇಃ ಪಾವನಂ ಪರಮಂ ಸ್ಮೃತಂ ॥ ೧೪ ॥**

---

೧೧. ಒಂದುವರ್ಷದ ಮಾರ್ಗಶೀರ್ಷಮಾಸದಲ್ಲಿ ಪ್ರಾರಂಭಿಸಿ ಅದರ ಮುಂದಿನವರ್ಷ ಕಾರ್ತೀಕಮಾಸ ಪರ್ಯಂತ ಪ್ರತಿಮಾಸದಲ್ಲೂ ಈ ಹಿಂದೆ ಹೇಳಿದ ಕ್ರಮವನ್ನನುಸರಿಸಿ ಪೂಜೆ, ಬ್ರಾಹ್ಮಣ ಭೋಜನಾದಿಗಳನ್ನು ನಿಯಮದಿಂದ ನಡೆಯಿಸಬೇಕು.

೧೨. ಎಲೈ ಧರ್ಮಸೂನುವೇ! ಆ ಗೌರೀಶಂಕರರನ್ನು ಈ ಮಾರ್ಗಶೀರ್ಷದಿಂದ ಮುಂದಿನ ಕಾರ್ತೀಕದವರೆಗೆ ಯಾವಯಾವ ತಿಂಗಳಲ್ಲಿ ಕ್ರಮವಾಗಿ ಯಾವ ಯಾವ ನಾಮವನ್ನುಚ್ಚರಿಸಿ ಪೂಜಿಸಬೇಕು, ಮತ್ತು ಜಪಿಸಬೇಕು, ಯಾವ ಯಾವ ನಾಮವಿಶೇಷಗಳಿಂದ ಪೂಜಿಸಿವರೆ ಈ ವ್ರತಫಲವು ಲಭಿಸುವುದು ಎಂಬ ಸಮಯವನ್ನೂ ಪೂರ್ವೋಕ್ತಮಾಸಕ್ರಮಾನುಸಾರ ಅವರ ನಾಮವಿಶೇಷಗಳನ್ನೂ ಹೇಳುತ್ತೇನೆ ಕೇಳು.

೧೩. ಮಾರ್ಗಶೀರ್ಷದಲ್ಲಿ ಗೌರೀ ಶಂಭು ಎಂದು ಉಚ್ಚರಿಸಬೇಕೆಂಬುದನ್ನು ಪೂರ್ವದಲ್ಲೇ ಹೇಳಿದ್ದಾಗಿದೆ. ಪುಷ್ಯಮಾಸದಲ್ಲಿ ಪಾರ್ವತೀ ಗಿರಿಶ ಎಂಬ ನಾಮವಿಶೇಷದಿಂದ ಪೂಜಿಸಿ, ಚತುರ್ಥೀದಿನ ಪಂಚಗವ್ಯಪ್ರಾಶನ ಮಾಡಬೇಕು.

೧೪. ಮಾರ್ಗಶೀರ್ಷಾದಿ ಕ್ರಮದಿಂದ ಈ ವ್ರತವನ್ನಾಚರಿಸುವಾಗ ಪ್ರತಿ ಮಾಸದಲ್ಲೂ ಪ್ರಾಶನಾರ್ಥವಾಗಿ ಪಂಚಗವ್ಯವನ್ನೇ ಉಪಯೋಗಿಸತಕ್ಕದ್ದು. ಏತಕ್ಕೆಂದರೆ ಪಂಚಗವ್ಯಕ್ಕಿಂತಲೂ ಪವಿತ್ರವಾದ ಇತರವಸ್ತುವು ಇರುವುದಿಲ್ಲ.

ಭವಂ ಚೈವ ಭವಾನೀಂ ಚ ಮಾಸಿ ಮಾಘೇ ಪ್ರಪೂಜಯೇತ್ ।
ಫಾಲ್ಗುನೇ ತು ಮಹಾದೇವಮುಮಯಾ ಸಹಿತಂ ಮತಂ ॥ ೧೫ ॥

ಲಲಿತಾಂ ಶಂಕರಂ ದೇವಂ ಚೈತ್ರೇ ಸಂಪೂಜಯೇತ್ತತಃ ।
ಸ್ಥಾಣುಂ ವೈಶಾಖಮಾಸೇ ತು ಲೋಲನೇತ್ರಾಯುತಂ ಯಜೇತ್ ॥ ೧೬ ॥

ಜ್ಯೇಷ್ಠೇ ವೀರೇಶ್ವರಂ ದೇವಮೇಕವೀರಾಸಮನ್ವಿತಂ ।
ಆಷಾಢೇ ಪಶುನಾಥಂ ಚ ಶಕ್ತ್ಯಾ ಸಾರ್ಧಂ ತ್ರಿಲೋಚನಂ ॥ ೧೭ ॥

ಶ್ರೀಕಂಠಂ ಶ್ರಾವಣೇ ದೇವಂ ಸುತಾನ್ವಿತಮಥಾರ್ಚಯೇತ್ ।
ಭೀಮಂ ಭಾದ್ರಪದೇ ಮಾಸಿ ದುರ್ಗಯಾ ಸಹಿತಂ ಯಜೇತ್ ।
ಈಶಾನಂ ಕಾರ್ತಿಕೇ ಮಾಸಿ ಶಿವಾದೇವೀಯುತಂ ಯಜೇತ್ ॥ ೧೮ ॥

---

೧೫. ಮಾಘಮಾಸದಲ್ಲಿ ಭವಾನೀ ಭವ ಎಂಬ ನಾಮವಿಶೇಷದಿಂದಲೂ ಫಾಲ್ಗುಣಮಾಸದಲ್ಲಿ ಉಮಾ ಮಹಾದೇವ ಎಂಬ ನಾಮವಿಶೇಷದಿಂದಲೂ ಅರ್ಚಿಸಬೇಕು.

೧೬. ಅನಂತರ ಚೈತ್ರಮಾಸದಲ್ಲಿ ಲಲಿತಾ ಶಂಕರ ಎಂಬ ನಾಮದಿಂದ ಪೂಜಿಸಬೇಕು. ವೈಶಾಖಮಾಸದಲ್ಲಿ ಲೋಲಾನೇತ್ರಾ ಸ್ಥಾಣು ಎಂಬ ನಾಮ ವಿಶೇಷವನ್ನು ಹೇಳಿ ಅರ್ಚಿಸಬೇಕು.

೧೭. ಜ್ಯೇಷ್ಠಮಾಸದಲ್ಲಿ ಏಕವೀರಾ ವೀರೇಶ್ವರ ಎಂಬ ನಾಮಧೇಯ ದಿಂದಲೂ ಆಷಾಢದಲ್ಲಿ "ಶಕ್ತಿ ಪಶುನಾಥ" ಎಂಬ ನಾಮಧೇಯದಿಂದಲೂ ಭಕ್ತಿಪೂರ್ವಕವಾಗಿ ಪೂಜಿಸಬೇಕು.

೧೮. ಶ್ರಾವಣಮಾಸದಲ್ಲಿ ಸುತಾ ಶ್ರೀಕಂಠಾ ಎಂಬ ನಾಮಧೇಯದಿಂದ ಅರ್ಚಿಸಬೇಕು. ಭಾದ್ರಪದಮಾಸದಲ್ಲಿ ದುರ್ಗಾ ಭೀಮ ಎಂಬ ನಾಮಧೇಯ ದಿಂದಲೂ ಕಾರ್ತೀಕಮಾಸದಲ್ಲಿ ಶಿವಾದೇವಿ, ಈಶಾನ ಎಂಬ ನಾಮಧೇಯ ದಿಂದಲೂ ಹೇಳಿ ಅರ್ಚನೆಮಾಡಬೇಕು.

ಜಪ್ಯಧ್ಯಾನಾರ್ಚನಾಯ್ಯೈವ ನಾಮಾನ್ಯೇತಾನಿ ಸುವ್ರತ ।
ಸ್ತ್ರ್ರುತಾನಿ ವಿಧಿನಾ ರಾಜನ್ವ್ರತಸಿದ್ಧಿರ್ಭವೇದ್ಧ್ರುವಮ್ ॥ ೧೯ ॥

ಪ್ರತಿಮಾಸಂ ತು ಪುಷ್ಪಾಣಿ ಯಾನಿ ಪೂಜಾಸು ಯೋಜಯೇತ್ ।
ತಾನಿ ಕ್ರಮಾತ್ಪ್ರವಕ್ಷ್ಯಾಮಿ ಸದ್ಯಃ ಪ್ರೀತಿಕರಾಣಿ ವೈ ॥ ೨೦ ॥

ಆದೌ ನೀಲೋತ್ಪಲಂ ಯೋಜ್ಯಂ ತದಭಾವೇಽಪರಾಣ್ಯಪಿ ।
ಪವಿತ್ರಾಣಿ ಸುಗಂಧೀನಿ ಯೋಜಯೇದ್ಭಕ್ತಿತೋಽರ್ಚನೇ ॥ ೨೧ ॥

ಕರವೀರಂ ಬಿಲ್ವಪತ್ರಂ ಕಿಂಶುಕಂ ಕುಬ್ಜಮಲ್ಲಿಕಾ ।
ಪಾಟಲಾಬ್ಜಕದಂಬಂ ಚ ತಗರಂ ದ್ರೋಣಮಾಲತೀ ॥ ೨೨ ॥

ಏತಾನ್ಯುಕ್ತಕ್ರಮೇಣೈವ ಮಾಸೇಷು ದ್ವಾದಶಸ್ವಪಿ ।
ಭಕ್ತ್ಯಾ ಯೋಜ್ಯಾನಿ ರಾಜೇಂದ್ರ ಶಿವಯೋಸ್ತುಷ್ಟಿಹೇತವೇ ॥ ೨೩ ॥

---

೧೯. ಅಯ್ಯಾ ರಾಜನೇ! ಈ ಪೂರ್ವೋಕ್ತನಾಮವಿಶೇಷಗಳನ್ನು ಜಪ, ಧ್ಯಾನ, ಮತ್ತು ಅರ್ಚನೆ ಇವುಗಳಲ್ಲಿ ಉಪಯೋಗಿಸಿಕೊಳ್ಳತಕ್ಕದ್ದೆಂದು ಶಾಸ್ತ್ರದಲ್ಲಿ ವಿಹಿತವಾಗಿವೆ. ಈ ನಾಮಗಳಿಂದ ಜಪಧ್ಯಾನಾರ್ಚನ ಪೂರ್ವಕವಾಗಿ ಈ ವ್ರತವನ್ನು ಆಚರಿಸಿದರೆ ಇವರ ಫಲವು ನಿಯತವಾಗಿ ಲಭಿಸುವುದು.

೨೦. ಮತ್ತು ಪ್ರತಿತಿಂಗಳಲ್ಲೂ ಪೂಜಾವೇಳೆಯಲ್ಲಿ ಯಾವ ಪುಷ್ಪವಿಶೇಷಗಳನ್ನು ಪೂಜೆಗೆ ಉಪಯೋಗಿಸಿದರೆ ಉಮಾಮಹೇಶ್ವರರು ಪ್ರಸನ್ನವಾಗುವರೋ ಅಂತಹ ಪುಷ್ಪವಿಶೇಷವನ್ನು ಹಿಂದೆ ಹೇಳಿದಂತೆಯೇ ಮಾಸಕ್ರಮವನ್ನನುಸರಿಸಿ ಹೇಳುತ್ತೇನೆ ಕೇಳು.

೨೧. ಮೊದಲು ಮಾರ್ಗಶೀರ್ಷಮಾಸದಲ್ಲಿ ಕನ್ನೈದಿಲೆಯನ್ನು ಪೂಜೆಗೆ ಉಪಯೋಗಿಸಬೇಕು. ಅದು ದುರ್ಲಭವಾದ ಪಕ್ಷದಲ್ಲಿ ಇತರ ಸುವಾಸನೆಯುಳ್ಳ ಪವಿತ್ರಪುಷ್ಪಗಳನ್ನೇ ಭಕ್ತಿಯಿಂದ ಅರ್ಚಿಸಬೇಕು.

೨೨–೨೩. ಅಯ್ಯಾ ರಾಜೇಂದ್ರನೇ! ಅನಂತರದ ಇತರ ಮಾಸಗಳಲ್ಲಿ ಕ್ರಮವಾಗಿ ಕರವೀರಪುಷ್ಪ, ಬಿಲ್ವಪತ್ರ, ಪಲಾಶ (ಮುತ್ತುಗ) ಪುಷ್ಪ, ದುಂಡುಮಲ್ಲಿಗೆಹೂ, ಪಾಟಲೀಪುಷ್ಪ, ಕಮಲಪುಷ್ಪ, ಕದಂಬಪುಷ್ಪ, ತಗರಪುಷ್ಪ, ತುಂಬೇ ಹೂವು, ಮಾಲತೀಪುಷ್ಪ ಇವುಗಳಿಂದ ಹನ್ನೆರಡು ತಿಂಗಳಲ್ಲಿ ಶ್ರೀ ಪಾರ್ವತೀಪರಮೇಶ್ವರರ ಪ್ರಸಾದ ಸಿದ್ಧ್ಯರ್ಥವಾಗಿ ಭಕ್ತಿಯಿಂದ ಪೂಜಿಸಬೇಕು.

ವತ್ಸರಾಂತೇ ವಿತಾನಂ ಚ ಧೂಪೋತ್ಕ್ಷೇಪಂ ಸಘಂಟಿಕಂ ।
ಧ್ವಜಂ ದೀಪಂ ವಸ್ತ್ರಯುಗಂ ಶಂಕರಾಯ ನಿವೇದಯೇತ್ ॥ ೨೪ ॥

ಸ್ನಾಪಯಿತ್ವಾ ಚ ಲಿಪ್ತ್ವಾ ಚ ಸೌವರ್ಣಂ ಮೂರ್ಧ್ನಿ ಪಂಕಜಮ್ ।
ಪೂಪಯುಗ್ಮಂ ಚ ಪುರತಃ ಶಾಲಿಪಿಷ್ಟಮಯಂ ನ್ಯಸೇತ್ ॥ ೨೫ ॥

ನೈವೇದ್ಯಂ ಶಕ್ತಿತೋ ದತ್ವಾ ನತ್ವಾ ಚ ವಿಧಿವಚ್ಛಿವಂ ।
ಕುರ್ಯಾನ್ನೀರಾಜನಂ ಶಂಭೋಸ್ತತೋಗಚ್ಛೇತ್ಸ್ವಕಂ ಗೃಹಂ ॥ ೨೬ ॥

ತತ್ರ ಗತ್ವಾ ತ್ರಿಕೋಣಂ ಚ ಚತುರಸ್ರಂ ಚ ಕಾರಯೇತ್ ।
ತ್ರಿಕೋಣೇ ಬ್ರಾಹ್ಮಣೀ ಭೋಜ್ಯಾ ಚತುರಸ್ರೇ ದ್ವಿಜೋತ್ತಮಾಃ ॥ ೨೭ ॥

ವ್ರತಿನೋ ಭೋಜಯೇತ್ ಪಶ್ಚಾದ್ದ್ವಾದಶೈವ ದ್ವಿಜೋತ್ತಮಾನ್ ।
ಮಿಥುನಾನಿ ಚ ತಾವಂತಿ ಶಕ್ತ್ಯಾ ಭಕ್ತ್ಯಾ ಚ ಪಾಂಡವ ॥ ೨೮ ॥

---

೨೪. ವರ್ಷಾಂತದಲ್ಲಿ ಶ್ರೀ ಪರಮೇಶ್ವರನಿಗೆ ಮೇಲ್ಕಟ್ಟು, ಧೂಪ, ಘಂಟೆ, ಧ್ವಜ, ದೀಪ, ವಸ್ತ್ರಯುಗ್ಮ ಇವುಗಳನ್ನು ಸಮರ್ಪಿಸಬೇಕು.

೨೫. ಮತ್ತು ಅಮೃತಾಭಿಷೇಕಮಾಡಿ ಅನಂತರ ಚಂದನವನ್ನು ಹಚ್ಚಿ, ಶಿರೋಭಾಗದಲ್ಲಿ ಸ್ವರ್ಣಕಮಲವನ್ನು ಇರಿಸಿ, ದೇವರಮುಂದೆ ಅಕ್ಕಿಹಿಟ್ಟಿನಿಂದ ಮಾಡಿದ ಅಪೂಪಯುಗಳವನ್ನು ನೈವೇಧ್ಯಾರ್ಥವಾಗಿ ಇಡಬೇಕು.

೨೬. ಮತ್ತು ಇತರ ನೈವೇದ್ಯಗಳನ್ನೂ ಸ್ವಶಕ್ತ್ಯಾನುಸಾರವಾಗಿ ಸಮರ್ಪಿಸಿ, ವಿಧ್ಯುಕ್ತವಾದ ಮಂತ್ರವನ್ನು ಹೇಳಿ ನಮಸ್ಕರಿಸಿ ಉತ್ತರನೀರಾಜನಮಾಡಿ ತನ್ನ ಮನೆಗೆ ಹೋಗಬೇಕು.

೨೭. ಗೃಹವನ್ನು ಸೇರಿದನಂತರ ಅಲ್ಲಿ ಭೋಜನಸ್ಥಳದಲ್ಲಿ ರಂಗವಲ್ಲಿಯಿಂದ ತ್ರಿಕೋಣಾಕಾರ ಮಂಡಲವನ್ನೂ, ಮತ್ತು ಚತುಷ್ಕೋಣಾಕಾರವಾದ ಮಂಡಲವನ್ನೂ ಬರೆದು, ತ್ರಿಕೋಣಾಕಾರ ಮಂಡಲವನ್ನು ರಚಿಸಿದ ಸ್ಥಳದಲ್ಲಿ ಬ್ರಾಹ್ಮಣಸ್ತ್ರೀಯರಿಗೂ, ಚತುರಸ್ರಮಂಡಲದಲ್ಲಿ ಬ್ರಾಹ್ಮಣೋತ್ತಮರಿಗೂ ಭೋಜನಮಾಡಿಸಬೇಕು.

೨೮. ಎಲೈ ಧರ್ಮರಾಜನೇ ! ಭೋಜನಾರ್ಥವಾಗಿ ನಿಮಂತ್ರಿತರಾದವರು ಉಪವಾಸ ವ್ರತವನ್ನಾಚರಿಸಿದ ಸದಾಚಾರಸಂಪನ್ನರಾದ ಬ್ರಾಹ್ಮಣೋತ್ತಮ

ಉಮಾಮಹೇಶ್ವರಂ ಹೈಮಂ ಕಾರಯಿತ್ವಾ ಸುಶೋಭನಂ ।
ಮೌಕ್ತಿಕಾನಿ ಚತುಃಷಷ್ಟಿಸ್ತಾವಂತೋಽಪಿ ಪ್ರವಾಲಕಾಃ ।
ತಾವಂತಿ ಪುಷ್ಪರಾಗಾಣಿ ತಾಮ್ರಪಾತ್ರೋಪರಿ ನ್ಯಸೇತ್ ॥ ೨೯ ॥

ವಸ್ತ್ರೇಣ ವೇಷ್ಟಯಿತ್ವಾ ಚ ಗಂಧೈರ್ಧೂಪೈಸ್ತಥಾರ್ಚಯೇತ್ ।
ಏತತ್ಸಂಭಾರಸಂಯುಕ್ತಮಾಚಾರ್ಯಾಯ ನಿವೇದಯೇತ್ ॥ ೩೦ ॥

ವ್ರತಿನಾಂ ಬ್ರಾಹ್ಮಣಾನಾಂ ಚ ದಂಪತೀನಾಂ ಚ ಭಾರತ ।
ದತ್ವಾ ಹಿರಣ್ಯವಾಸಾಂಸಿ ಕ್ಷಮಯೇತ್ಪ್ರಣಿಪತ್ಯ ಚ ॥ ೩೧ ॥

---

ರಾಗಿರಬೇಕು. ಅಂತಹ ಹನ್ನೆರಡುಜನ ಬ್ರಾಹ್ಮರನ್ನೂ ಅದೇರೀತಿ ಹನ್ನೆರಡು ಜನ ಸುಮಂಗಲಿ ಸ್ತ್ರೀಯರನ್ನೂ, (ಎಂದರೆ ಹನ್ನೆರಡು ದಂಪತಿಗಳಿಗೆ) ಸ್ವಶಕ್ತ್ಯಾನುಸಾರ ಭಕ್ತಿಯಿಂದ ಭೋಜನವನ್ನು ಮಾಡಿಸಬೇಕು.

೨೯. ರಜತ ಮತ್ತು ಸ್ವರ್ಣದಿಂದ "ಉಮಾಮಹೇಶ್ವರ" ಪ್ರತಿಮೆಗಳನ್ನು ಮಾಡಿಸಿ ತಾಮ್ರಪಾತ್ರೆಯಲ್ಲಿಟ್ಟು ಆ ಪ್ರತಿಮೆಗಳನ್ನು ಅರವತ್ತನಾಲ್ಕು ಮುತ್ತುಗಳಿಂದಲೂ, ಅರವತ್ತುನಾಲ್ಕು ಹವಳಗಳಿಂದಲೂ, ಅರವತ್ತನಾಲ್ಕು ಪುಷ್ಯರಾಗಗಳಿಂದಲೂ, ಅಲಂಕರಿಸಬೇಕು.

೩೦. ಮತ್ತು ಆ ಪ್ರತಿಮೆಗಳನ್ನು ವಸ್ತ್ರದಿಂದ ಅಲಂಕರಿಸಿ ಗಂಧ, ಪುಷ್ಪ, ಧೂಪ, ದೀಪಾದಿಗಳಿಂದ ಅರ್ಚಿಸಿ ಈರೀತಿ ಅಲಂಕಾರ ಸಂಭಾರಗಳಿಂದ ಕೂಡಿದ ತಾಮ್ರಪಾತ್ರಸ್ಥವಾದ ಆ ಪ್ರತಿಮೆಗಳನ್ನು ಸಂಭಾರಸಹಿತವಾಗಿ ಆಚಾರ್ಯನಿಗೆ ಸಮರ್ಪಿಸಬೇಕು.

೩೧. ಅಯ್ಯಾ ಧರ್ಮರಾಜನೇ ! ಭೋಜನಾರ್ಥವಾಗಿ ನಿಮಂತ್ರಿತರೂ ವ್ರತಿಗಳೂ ಆದ ಆದ್ವಾದಶಬ್ರಾಹ್ಮಣರು ಮತ್ತು ಅವರ ಪತ್ನಿಯರು ಇವರಿಗೆ ಹಿರಣ್ಯ ಮತ್ತು ವಸ್ತ್ರಗಳನ್ನು ದಾನಮಾಡಿ, ನಮಸ್ಕಾರಪೂರ್ವಕವಾಗಿ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ ಉಪಚರಿಸಬೇಕು.

ಚತ್ವಾರಿಂಶತ್ತಥಾಷ್ಟೌ ಚ ಕುಂಭಾಂಶ್ಛತ್ರಮುಪಾನಹೌ ।
ಸಹಿರಣ್ಯಾಕ್ಷತಾನ್ಸರ್ವಾನ್ದದ್ಯಾತ್ಪುಷ್ಪೋದಕಾನ್ವಿತಾನ್ ॥ ೩೨ ॥

ದೀನಾನ್ಧದುಃಖಿತಾನಾಂ ಚ ತದ್ದಿನೇ ವ್ಯಾನಿವಾರಿತಂ ।
ಕಲ್ಪಯೇದನ್ನದಾನಂ ಚಾಲೋಚಯಂಚ್ಛಕ್ತಿಮಾತ್ಮನಃ ॥ ೩೩ ॥

ನ್ಯೂನಾಧಿಕಂ ನ ಕರ್ತವ್ಯಂ ಸ್ವವಿತ್ತಪರಿಮಾಣತಃ ।
ಸಂಪೂರಯೇತ್ ಕಲ್ಪನಯಾ ವಿತ್ತಶಾಠ್ಯಂ ನ ಕಾರಯೇತ್ ॥ ೩೪ ॥

ಅವಿಯೋಗಕರಂ ಚೈತದ್ರೂಪಸೌಭಾಗ್ಯವಿತ್ತದಂ ।
ಆಯುಃ ಪುತ್ರಪ್ರದಂ ಸ್ವರ್ಗ್ಯಂ ಶಿವಲೋಕಪ್ರದಾಯಕಂ ॥ ೩೫ ॥

---

೩೨. ಹಿರಣ್ಯ ಅಕ್ಷತೆ ಇವುಗಳ ಮತ್ತ ಸಹಿತವಾಗಿಯೂ, ಪುಷ್ಪೋದಕ ಸಮೇತವಾಗಿಯೂ ಇರುವಂತೆ ನಲವತ್ತೆಂಟು ಉದಕುಂಭಗಳನ್ನೂ ಮತ್ತು ಛತ್ರಿ ಪಾದುಕೆ, ಇವುಗಳನ್ನೂ ದಾನಮಾಡಬೇಕು.

೩೩. ಮತ್ತು ಆ ದಿವಸದಲ್ಲಿ ಭೋಜನಾರ್ಥವಾಗಿ ಬಂದಿರುವ ಬಡವರು ಕುರುಡರು ಇತ್ಯಾದಿ ದೀನಜನರನ್ನು ನಿರಾಕರಿಸವೆ ಸ್ವಶಕ್ತ್ಯನುಸಾರ ಅನ್ನದಾನ ಮಾಡತಕ್ಕದ್ದು.

೩೪. ತನ್ನಲ್ಲಿರುವ ಧನದ ಪರಿಮಿತಿಗೆ ಕೇವಲ ಕಡಿಮೆಯಾಗಿಯೂ ಅಥವಾ ಮಿತಿಮೀರಿ ಹೆಚ್ಚಾಗಿಯೂ ವೆಚ್ಚಮಾಡದೆ (ಅಂದರೆ ವಿತ್ತಶಾಠ್ಯ ಲೋಭ ಇವನ್ನು ತೋರಿಸವೆ) ಈರೀತಿ ಈ ವ್ರತವನ್ನು ಆಚರಿಸಿ ಪೂರ್ತಿಗೊಳಿಸ ಬೇಕು.

೩೫. ಈ ವ್ರತಾನುಷ್ಠಾನದಿಂದ ಸ್ತ್ರೀಯು ಪತಿಯಿಂದ ಅವಿಯುಕ್ತಳಾಗು ವುದಲ್ಲದೆ, ಇಹದಲ್ಲಿ ಸೌಂದರ್ಯ, ಸೌಭಾಗ್ಯ, ಧನ, ಧಾನ್ಯ, ಆಯುಷ್ಯ, ಪುತ್ರರು ಇವೇ ಮೊದಲಾದ ಫಲಗಳನ್ನು ಪಡೆದು, ಪರದಲ್ಲೂ ಸ್ವರ್ಗಸುಖ ಶಿವಲೋಕ ಇವುಗಳನ್ನೂ ಹೊಂದುವಳು.

ಸಮ್ಯಕ್ಪುರಾಣಪಠಿತಂ ವ್ರತಚರ್ಯನೋತ ।
ತ್ರಿತ್ವಂ ಚರಾಚರ ಗುರೋರ್ಹೃದಯಂಗಮಾಯಾಃ ।
ಪೂಜಾಂ ವಿಧಾಯವಿಧಿವನ್ನ ವಿಯೋಗಮೇತಿ ।
ಸಾಧ್ವೀಸ್ವಭರ್ತೃಸುತ ಬಂಧುಜನೈರ್ಧನೈಶ್ಚ ॥ ೩೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಅವಿಯೋಗ ತೃತೀಯಾವ್ರತಂ ನಾಮ ದ್ವಾವಿಂಶತಿತಮೋಽಧ್ಯಾಯಃ.



೩೬. ಸ್ಥಾವರಜಂಗಮಾತ್ಮಕ ಜಗತ್ತಿಗೆ ನಿಯಾಮಕನಾದ ಪರಮೇಶ್ವರ ಮತ್ತು ಅವನ ಪ್ರಿಯಳಾದ ಉಮಾ ಈ ಇಬ್ಬರನ್ನೂ ವಿಧಿವತ್ತಾಗಿ ಪೂಜಿಸಿ ಪುರಾಣೋಕ್ತವಾದ ಈ ಅವಿಯೋಗ ತೃತೀಯಾವ್ರತವನ್ನು ಆಚರಿಸುವುದರಿಂದ ಸ್ತ್ರೀಯು ತನ್ನ ಪತಿ, ಸುತ, ಬಂಧುಜನ, ಮತ್ತು ಧನ ಇವುಗಳಿಂದ ಯಾವಾಗಲೂ ವಿಯೋಗವನ್ನು ಹೊಂದುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಉತ್ತರಪರ್ವದಲ್ಲಿ ಅವಿಯೋಗತೃತೀಯಾ ವ್ರತವರ್ಣನೆ ಎಂಬ ಇಪ್ಪತ್ತೆರಡನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ತ್ರಯೋವಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಕೇನ ಧರ್ಮೇಣ ನಾರೀಣಾಂ ವ್ರತೇನ ನಿಯಮೇನ ಚ ।
ಸೌಭಾಗ್ಯಂ ಜಾಯತೇಽತೀವ ಪುತ್ರಾಶ್ಚ ಬಹವಃ ಶುಭಾಃ ॥ ೧ ॥

ಧನಂ ಧಾನ್ಯಂ ಸುವರ್ಣಂ ಚ ವಸ್ತ್ರಾಣಿ ವಿವಿಧಾನಿ ಚ ।
ಅವಿಯೋಗಂ ಚ ಸತತಂ ಲಭತೇ ಪುತ್ರಪೌತ್ರಯೋಃ ॥ ೨ ॥

॥ ಶ್ರೀ ಕೃಷ್ಣ ಉವಾಚ ॥

ಶೃಣು ಪಾರ್ಥ ಪ್ರವಕ್ಷ್ಯಾಮಿ ವ್ರತಾನಾಮುತ್ತಮಂ ವ್ರತಂ ।
ಯತ್ಕೃತ್ವಾ ಸುಭಗಾ ನಾರೀ ಬಹ್ವಪತ್ಯಾ ಚ ಜಾಯತೇ ॥ ೩ ॥

---

### ಇಪ್ಪತ್ತಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಪ್ರಶ್ನೆಮಾಡುತ್ತಾನೆ—ಎಲೈ ಕೃಷ್ಣನೇ! ಯಾವ ಧರ್ಮಾಚರಣದಿಂದ ಅಥವಾ ವ್ರತನಿಯಮಸ್ವೀಕಾರದಿಂದ ಸ್ತ್ರೀಯರಿಗೆ ಸೌಭಾಗ್ಯಾತಿಶಯವೂ ಬಹು ಸತ್ಪುತ್ರತ್ವವೂ ಪ್ರಾಪ್ತಿಯಾಗುವುದು?

೨. ಮತ್ತು ಸ್ತ್ರೀಯು ಧನ, ಧಾನ್ಯ, ಸುವರ್ಣ, ವಿವಿಧ ಶಾಸ್ತ್ರಜ್ಞಾನ, ಪುತ್ರಪೌತ್ರರನ್ನು ಅಗಲದೇ ಇರುವುದು. ಇವುಗಳನ್ನು ಹೇಗೆ ಹೊಂದುವಳು? ಎಂಬುದನ್ನು ಹೇಳು ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುಪುತ್ರನೇ! ಎಲ್ಲಾ ವ್ರತಗಳಲ್ಲೂ ಶ್ರೇಷ್ಠವೆನಿಸಿದ ಒಂದು ವ್ರತವನ್ನು ಹೇಳುತ್ತೇನೆ ಕೇಳು. ಆ

ಧನಂ ಧಾನ್ಯಂ ಹಿರಣ್ಯಂ ಚ ದಾಸೀದಾಸಾದಿಕಂ ಬಹು ।
ಉತ್ಪದ್ಯತೇ ಗೃಹೇ ಯೇನ ತದ್ವ್ರತಂ ಕಥಯಾಮಿ ತೇ ॥ ೪ ॥

ಉಮಾಮಹೇಶ್ವರಂ ನಾಮ ಅಪ್ಸರೋಭಿಃ ಪುರಾ ಕೃತಂ ।
ವಿದ್ಯಾಧರೈಃ ಕಿನ್ನರೈಶ್ಚ ಋಷಿಕನ್ಯಾಭಿರೇವ ಚ ॥ ೫ ॥

ರೂಪಿಣ್ಯಾ ರಂಭಯಾ ಚೈವ ಸೀತಯಾಽಹಲ್ಯಯಾ ತಥಾ ।
ರೋಹಿಣ್ಯಾ ದಮಯಂತ್ಯಾ ಚ ತಾರಯಾ ಚಾನಸೂಯಯಾ ॥ ೬ ॥

ಏತಾಭಿಶ್ಚರಿತಂ ಪಾರ್ಥ ವ್ರತಂ ಸರ್ವವ್ರತೋತ್ತಮಂ ।
ಸೌಭಾಗ್ಯಾರೋಗ್ಯಫಲದಂ ದಾರಿದ್ರ್ಯವ್ಯಾಧಿನಾಶನಂ ॥ ೭ ॥

ಮರ್ತ್ಯಲೋಕೇ ಸ್ತ್ರಿಯೋ ಯಾಶ್ಚ ದುರ್ಭಗಾ ರೂಪವರ್ಜಿತಾಃ ।
ಅಪುತ್ರಾ ನಿರ್ಧನಾಶ್ಚೈವ ಸರ್ವಭೋಗವಿವರ್ಜಿತಾಃ ॥ ೮ ॥

---

ವ್ರತವನ್ನಾಚರಿಸಿದ ಸ್ತ್ರೀಯು ಸೌಭಾಗ್ಯವನ್ನೂ ಬಹುಪುತ್ರ ಸಂಪತ್ತಿಯನ್ನೂ ಹೊಂದುವಳು.

೪. ಮನೆಯಲ್ಲಿ ಬಹುಧನ, ಧಾನ್ಯ, ಹಿರಣ್ಯ, ದಾಸೀದಾಸಾದಿಗಳು ಇವರ ಪ್ರಾಪ್ತಿಯು ಯಾವ ವ್ರತಾನುಷ್ಠಾನದಿಂದ ಸಂಭವಿಸುವುದೋ ಅಂತಹ ವ್ರತವನ್ನು ನಿನಗೆ ಹೇಳುವೆನು.

೫. ಆ ವ್ರತಕ್ಕೆ ಉಮಾಮಹೇಶ್ವರ ವ್ರತವೆಂದು ಹೆಸರು. ಈ ವ್ರತವನ್ನು ಪೂರ್ವದಲ್ಲಿ ಅಪ್ಸರಸ್ತ್ರೀಯರೂ, ವಿದ್ಯಾಧರರೂ, ಕಿನ್ನರರೂ, ಋಷಿಕನ್ನಿಕೆಯರೂ ಆಚರಿಸಿರುತ್ತಾರೆ.

೬–೭. ಎಲೈ ಧರ್ಮರಾಜನೇ! ಕೇಳು. ಸುಂದರಿಯಾದ ರಂಭೆ, ಸೀತೆ, ಅಹಲ್ಯೆ, ರೋಹಿಣೀ, ದಮಯಂತಿ, ತಾರಾ ಅನಸೂಯಾ ಇವರೆಲ್ಲರೂ ಸರ್ವವ್ರತೋತ್ತಮವಾದ ಈ ವ್ರತವನ್ನು ಆಚರಿಸಿರುತ್ತಾರೆ. ಇದರಿಂದ ಸೌಭಾಗ್ಯ, ಆರೋಗ್ಯ ಮುಂತಾದ ಫಲ ಲಭಿಸುವುದಲ್ಲದೆ ಬಡತನವೂ, ವ್ಯಾಧಿಯೂ ಸಹ ನಾಶವಾಗುವುದು.

೮. ಅಯ್ಯಾ ಧರ್ಮಜನೇ! ಮನುಷ್ಯಲೋಕದಲ್ಲಿ ಯಾವ ಸ್ತ್ರೀಯರು ದೌರ್ಭಾಗ್ಯವತಿಯರು ಕುರೂಪಿಗಳು ಅಲ್ಲದೆ ಅಪುತ್ರವತಿಯರು ಇವರುಗಳ

ತಾಸಾಂ ಹಿತಾರ್ಥಂ ಪಾರ್ವತ್ಯಾ ಉಮಾಮಹೇಶ್ವರಂ ವ್ರತಂ ।
ಅವತಾರಿತಂ ಪುರಾ ಪಾರ್ಥ ನ ಜಾನಂತ್ಯಧಮಾಃ ಸ್ತ್ರಿಯಃ ॥ ೯ ॥

ಪೂರ್ವಂ ಮಾರ್ಗಶಿರೇ ಮಾಸಿ ನಾರೀ ಧರ್ಮಪರಾಯಣಾ ।
ಶುಕ್ಲಪಕ್ಷೇ ತೃತೀಯಾಯಾಂ ಸೋಪವಾಸಾ ಜಿತೇನ್ದ್ರಿಯಾ ॥ ೧೦ ॥

ಸ್ನಾತ್ವಾ ಸಂಪೂಜ್ಯ ಲಲಿತಾಂ ಹರಕಾಯಾರ್ಧವಾಸಿನೀಂ ।
ಪುನಃ ಪ್ರಭಾತಸಮಯೇ ಸ್ನಾನಂ ಚಾಕೃತ್ರಿಮೇ ಜಲೇ ।
ಕೃತ್ವಾ ದೇವೀಸ್ತರ್ಪಯಿತ್ವಾ ಇದಂ ವಾಕ್ಯಮುದೀರಯೇತ್ ॥ ೧೧ ॥

ನಮೋ ನಮಸ್ತೇ ದೇವೇಶ ಉಮಾದೇಹಾರ್ಧಧಾರಕ ।
ಮಹಾದೇವಿ ನಮಸ್ತೇಽಸ್ತು ಹರಕಾಯಾರ್ಧವಾಸಿನಿ ॥ ೧೨ ॥

---

೯. ಮತ್ತು ದರಿದ್ರರು ಸರ್ವ ಸುಖವಿವರ್ಜಿತರು ಇವರ ಹಿತಕ್ಕಾಗಿ ಪಾರ್ವತಿಯು ಈ ಉಮಾಮಹೇಶ್ವರ ವ್ರತವನ್ನು ಈ ಲೋಕದಲ್ಲಿ ಪ್ರಸಿದ್ಧಿಗೆ ತಂದಳು. ಮೌಢ್ಯದಿಂದ ಕೂಡಿದ ಅಧಮ ಸ್ತ್ರೀಯರು ಈ ವಿಷಯವನ್ನು ಅರಿಯರು.

೧೦. ಧರ್ಮಪರಾಯಣೆಯರಾದ ಸ್ತ್ರೀಯು ಮೊದಲು ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದ ತೃತೀಯಾ ದಿನ ಜಿತೇಂದ್ರಿಯಳಾಗಿ ಉಪವಾಸವನ್ನಾಚರಿಸಬೇಕು.

೧೧-೧೨. ಮತ್ತು ಆ ದಿನ ಸ್ನಾನಮಾಡಿ ಈಶ್ವರನ ಅರ್ಧಶರೀರದಲ್ಲಿ ವಾಸವಾಗಿರುವ ಶ್ರೀ ಲಲಿತಾದೇವಿಯನ್ನು ಪೂಜಿಸಿ, ಮರುದಿವಸ ಪ್ರಾತಃಕಾಲ ದಲ್ಲಿ ಅಕೃತಿಮ ಜಲ (ನದೀ ಮುಂತಾದುವುಗಳ ಜಲ) ದಲ್ಲಿ ಸ್ನಾನಮಾಡಿ ಶ್ರೀದೇವೀ ಪೂಜೆಯನ್ನು ಮಾಡಿ--

ನಮೋ ನಮಸ್ತೇದೇವೇಶ ಉಮಾ ದೇಹಾರ್ಧಧಾರಕಾ ।
ಮಹಾದೇವಿ ನಮಸ್ತೇಸ್ತು ಹರಕಾಯಾರ್ಧವಾಸಿನೀ ॥

ಎಂಬ ಪ್ರಾರ್ಥನಾಪದ್ಯವನ್ನು ಪಠಣಮಾಡಬೇಕು. ದೇಹಾರ್ಧಭಾಗದಲ್ಲಿ ಉಮಾದೇವಿಯನ್ನು ಧರಿಸಿದ ಓ ದೇವಾಧೀಶನಾದ ಶಂಕರನೇ ! ನಿನಗೆ ಅನೇಕ ನಮಸ್ಕಾರಗಳು. ಈಶ್ವರನ ಅರ್ಧಾಂಗವಾಸಿನಿ ಮಹಾದೇವೀ ಗೌರೀ ! ನಿನಗೆ ನನ್ನ ಅನೇಕ ವಂದನೆಗಳು ಎಂಬುದು ಇದರ ಅರ್ಥ.

ಹೃದಿ ಕೃತ್ವಾ ಶಿವಂ ದೇವೀಂ ಜಪೇದ್ಯಾವದ್ಗೃಹಂ ಗತಾ ।
ಪೂಜಯೇದ್ದೇವಮೀಶಾನಂ ಪುಷ್ಪೈಃ ಕಾಲೋದ್ಭವೈಸ್ತತಃ ॥ ೧೩ ॥

ವಾಮಪಾರ್ಶ್ವೇ ಉಮಾಂ ದೇವೀಂ ದಕ್ಷಿಣೇ ತು ಮಹೇಶ್ವರಂ ।
ಧೂಪಂ ವಾ ಗುಗ್ಗುಲುಂ ವಾಪಿ ದಹೇತ್ತಶ್ಚಾತ್ಸುಭಾವಿತಾ ।
ನೈವೇದ್ಯಂ ತು ಯಥಾಶಕ್ತಿ ಘೃತಪಕ್ವಂ ನಿವೇದಯೇತ್ ॥ ೧೪ ॥

ಕಾರಯೇದ್ವೈಶ್ವದೇವಂ ತು ತಿಲಾಜ್ಯೇನ ಸುಸಂಸ್ಕೃತಂ ।
ಪಂಚಗವ್ಯಂ ತತಃ ಪ್ರಾಶ್ಯ ಆತ್ಮಕಾಯವಿಶೋಧನಂ ॥ ೧೫ ॥

ಏವಂ ದ್ವಾದಶಮಾಸಾಂಸ್ತು ಪೂಜಯಿತ್ವಾ ಮಹೇಶ್ವರಂ ।
ಉದ್ಯಾಪನಂ ತತಃ ಕುರ್ಯಾತ್ ಪ್ರಹೃಷ್ಟೇನಾನ್ತರಾತ್ಮನಾ ॥ ೧೬ ॥

ಶಿವಂ ರೂಪ್ಯಮಯಂ ಕೃತ್ವಾ ಉಮಾಂ ಹೈಮಮಯೀಂ ತಥಾ ।
ಆರೂಢೌ ವೃಷಭೇ ರೌಪ್ಯೇ ಸರ್ವಾಲಂಕಾರಭೂಷಿತೌ ॥ ೧೭ ॥

---

೧೩. ಆಮೇಲೆ ಶ್ರೀ ಗೌರೀಶಂಕರರನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಮನೆಗೆ ಹೋಗಿ, ಅಲ್ಲಿ ಶ್ರೀ ಪರಮೇಶ್ವರನನ್ನು ತತ್ಕಾಲದಲ್ಲಿ ಸಿಕ್ಕುವ ಪುಷ್ಪ ಇತ್ಯಾದಿಗಳಿಂದ ಅರ್ಚಿಸಬೇಕು.

೧೪. ಅರ್ಚನೆಯ ವೇಳೆಯಲ್ಲಿ ಎಡಭಾಗದಲ್ಲಿ ಶ್ರೀ ಉಮಾದೇವಿಯ ಪ್ರತಿಮೆಯನ್ನೂ, ಬಲಭಾಗದಲ್ಲಿ ಶ್ರೀ ಪರಮೇಶ್ವರನ ಪ್ರತಿಮೆಯನ್ನೂ ಇರಿಸಿ, ಗುಗ್ಗುಲ, ಧೂಪವನ್ನು ಬೆಳಗಿ, ಯಥಾಶಕ್ತಿ ಘೃತಪಕ್ವವಾದ ನೈವೇದ್ಯವನ್ನು ಅರ್ಪಿಸಬೇಕು.

೧೫. ಆಮೇಲೆ ದೇಹಪಾಪಶೋಧಕವಾದ ತಿಲ ಮತ್ತು ಘೃತದಿಂದ ಸಂಸ್ಕೃತವಾದ ಪಂಚಗವ್ಯವನ್ನು ಪ್ರಾಶನಮಾಡಿ ಬ್ರಾಹ್ಮಣನಿಂದ ವೈಶ್ವದೇವ ಕರ್ಮವನ್ನು ಮಾಡಿಸಬೇಕು.

೧೬. ಈರೀತಿ ಹನ್ನೆರಡು ತಿಂಗಳುಗಳಲ್ಲಿಯೂ ಉಮೋಮಹೇಶ್ವರರನ್ನು ಪೂಜಿಸಿ, ಅನಂತರ ಹೃಷ್ಟಚಿತ್ತರಾಗಿ ಈ ವ್ರತೋದ್ಯಾಪನೆಯನ್ನು ನೆರವೇರಿಸಬೇಕು

೧೭. ಆಗ ಬೆಳ್ಳಿಯಿಂದ ಶಿವನ ಪ್ರತಿಮೆಯನ್ನೂ ಸ್ವರ್ಣದಿಂದ ಉಮಾ ಪ್ರತಿಮೆಯನ್ನೂ ಮಾಡಿಸಿ, ಬೆಳ್ಳಿಯ ವೃಷಭಪ್ರತಿಮೆಯ ಮೇಲೆ ಆ ಮೂರ್ತಿಗಳನ್ನಿಟ್ಟು ಸರ್ವಾಲಂಕಾರ ವಸ್ತುಗಳಿಂದ ಅವುಗಳನ್ನಲಂಕರಿಸಬೇಕು.

ಚಂದನೇನ ಶಿವಂ ಚರ್ಚ್ಯ ಕುಂಕುಮೇನ ಚ ಪಾರ್ವತೀಂ ।
ಅರ್ಚಯೇತ್ಕುಸುಮೈಃ ಪಶ್ಚಾತ್ಸುಗಂಧೈಃ ಸುಮನೋಹರೈಃ ॥ ೧೮ ॥

ವೇಷ್ಟಯೇಚ್ಛುಕ್ಲವಸ್ತ್ರೇಣ ಶಿವಂ ರಕ್ತೇನ ಪಾರ್ವತೀಂ ।
ಪಶ್ಚಾದ್ಧೂಪಂ ದಹೇನ್ನಾರೀ ಭಕ್ತಿಭಾವೇನ ಭಾವಿತಾ ॥ ೧೯ ॥

ಭೋಜಯೇಚ್ಛಿವಭಕ್ತಾಂಶ್ಚ ಬ್ರಾಹ್ಮಣಾನ್ವೇದಪಾರಗಾನ್ ।
ಭಕ್ತೇಭ್ಯೋ ದಕ್ಷಿಣಾ ದೇಯಾ ಭಕ್ತ್ಯಾ ಶಾಠ್ಯವಿವರ್ಜಿತಾ ॥ ೨೦ ॥

ತತಃ ಪ್ರದಕ್ಷಿಣೀಕೃತ್ಯ ಇದಮುಚ್ಚಾರಯೇದ್ಬುಧಃ ।
ಉಮಾಮಹೇಶ್ವರೌ ದೇವೌ ಸರ್ವಲೋಕಪಿತಾಮಹೌ ।
ವ್ರತೇನಾನೇನ ಸುಪ್ರೀತೌ ಭವೇತಾಂ ಮಮ ಸರ್ವದಾ ॥ ೨೧ ॥

---

೧೮. ಶಿವಪ್ರತಿಮೆಗೆ ಚಂದನ ಗಂಧವನ್ನು ಹಚ್ಚಿ, ಉಮಾಪ್ರತಿಮೆಗೆ ಕುಂಕುಮವನ್ನು ಲೇಪಿಸಿ, ಅನಂತರ ಸುವಾಸನೆಯುಳ್ಳ ಮನೋಹರಗಳಾದ ಪುಷ್ಪಗಳಿಂದ ಅರ್ಚನೆಮಾಡಬೇಕು.

೧೯. ಮತ್ತು ಶಿವನನ್ನು ಶುಕ್ಲವಸ್ತ್ರದಿಂದಲೂ, ಪಾರ್ವತಿಯನ್ನು ರಕ್ತ ವಸನದಿಂದಲೂ ಹೊದ್ದಿಸಿ ಅನಂತರ ಭಕ್ತಿಯಿಂದ ಧೂಪವನ್ನು ಬೆಳಗಬೇಕು.

೨೦. ಮತ್ತು ವೇದಪಾರಂಗತರೂ ಶಿವಪೂಜಾನಿರತರೂ ಆದ ಬ್ರಾಹ್ಮಣರಿಗೆ ಭೋಜನಮಾಡಿಸಿ ಭಕ್ತಿಪೂರ್ವಕವಾಗಿ ಕಾರ್ಪಣ್ಯವಿಲ್ಲದೆ ಶಿವಭಕ್ತರಾದ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.

೨೧. ಆಮೇಲೆ ಪ್ರದಕ್ಷಿಣೆ ಬಂದು—

ಉಮಾಮಹೇಶ್ವರೌದೇವೌ ಸರ್ವಲೋಕ ಪಿತಾಮಹೌ ।
ವ್ರತೇನಾನೇನ ಸುಪ್ರೀತೌ ಭವೇತಾಂ ಮಮ ಸರ್ವದಾ ॥

ಎಂಬ ಪ್ರಾರ್ಥನೆಯನ್ನು ಭಕ್ತಿಯಿಂದ ಪಠಿಸಬೇಕು. ಅದರ ಸಾರವೇನೆಂದರೆ "ಸರ್ವಲೋಕ ಪಿತಾಮಹರಾದ ಉಮಾಮಹೇಶ್ವರರು ಈ ಆಚರಿತವ್ರತದಿಂದ ನನ್ನ ಮೇಲೆ ಸದಾ ಸುಪ್ರೀತರಾಗಿರಲಿ."

ಏವಮುಕ್ತ್ವಾ ಜಿತಕ್ರೋಧೇ ಬ್ರಾಹ್ಮಣೇ ವೇದಪಾರಗೇ ।
ವ್ರತಂ ನಿವೇದಯೇದ್ಭಕ್ತ್ಯಾ ವಾಚಕೇ ವಾ ಗುಣಾನ್ವಿತೇ ॥ ೨೨ ॥

ಇದಂ ಕೃತ್ವಾ ವ್ರತಂ ನಾರೀ ಮಹೇಶಾರ್ಪಿತಮಾನಸಾ ।
ಪ್ರಯಾತಿ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೨೩ ॥

ಶಿವಲೋಕೇ ವಸೇತ್ತಾವದ್ಯಾವದಿನ್ದ್ರಾಶ್ಚತುರ್ದಶ ।
ಅಪ್ಸರೋಭಿಃ ಪರಿವೃತಾ ಕಿನ್ನರೀಭಿಸ್ತಥೈವ ಚ ॥ ೨೪ ॥

ಯದಾ ಮಾನುಷ್ಯಮಾಯಾತಿ ಜಾಯತೇ ವಿಮಲೇ ಕುಲೇ ।
ರೂಪಯೌವನಸಂಪನ್ನಾ ಬಹುಪುತ್ರಾ ಪತಿವ್ರತಾ ॥ ೨೫ ॥

ಧನಧಾನ್ಯಸಮಾಯುಕ್ತೇ ಸುವರ್ಣಮಣಿಮಂಡಿತೇ ।
ಯಾವಜ್ಜೀವಂ ಗೃಹೇ ರಮ್ಯೇ ತಿಷ್ಠತ್ಯವ್ಯಾಹತೇನ್ದ್ರಿಯಾ ॥ ೨೬ ॥

---

೨೨. ಈರೀತಿ ಪ್ರಾರ್ಥನೆಯಾದ ಮೇಲೆ ಆ ವ್ರತದಲ್ಲಿ ಪೂಜಾರ್ಥವಾಗಿ ಉಪಯೋಗಿಸಿದ ಪ್ರತಿಮೆಗಳನ್ನು ಜಿತಕ್ರೋಧನೂ ವೇದವೇದಾಂಗಪಾರಂಗತನೂ ಆದ ಬ್ರಾಹ್ಮಣನಿಗಾಗಲಿ ಅಥವಾ ಗುಣಭರಿತನಾಗಿ ಈ ವ್ರತವನ್ನು ಮಾಡಿಸಿದ ಬ್ರಾಹ್ಮಣನಿಗಾಗಲಿ ದಾನಮಾಡಬೇಕು.

೨೩–೨೪. ಈಶ್ವರಾರ್ಪಿತಬುದ್ಧಿಯಿಂದ ಯಾವ ಸ್ತ್ರೀಯು ಈ ವ್ರತವನ್ನಾಚರಿಸುವಳೋ ಅಂಥವಳು ಸಾಕ್ಷಾತ್ ಈಶ್ವರನು ವಾಸವಾಗಿರುವ ಶ್ರೇಷ್ಠವಾದ ಶಿವಲೋಕವನ್ನು ಪಡೆದು, ಹದಿನಾಲ್ಕುಮಂದಿ ಇಂದ್ರರು ಕ್ರಮವಾಗಿ ಇಂದ್ರ ಪದವಿಗೆ ಬಂದು ತಮ್ಮ ಆಧಿಪತ್ಯವನ್ನು ನಡೆಸುವಷ್ಟು ಕಾಲ ಆ ಶಿವಲೋಕದಲ್ಲಿ ಅಪ್ಸರರ ಮತ್ತು ಕಿನ್ನರ ಸ್ತ್ರೀಯರಿಂದ ಪರಿವೃತಳಾಗಿರುವಳು.

೨೫. ಅನಂತರ ಭೂಲೋಕದಲ್ಲಿ ಸತ್ಕುಲದಲ್ಲಿ ಜನಿಸಿ; ರೂಪ ಯೌವನ ಸಂಪನ್ನಳೂ, ಬಹುಪುತ್ರವತಿಯೂ, ಪತಿವ್ರತೆಯೂ ಆಗುವಳು.

೨೬. ಮತ್ತು ಧನಧಾನ್ಯ ಸಮೃದ್ಧವಾಗಿಯೂ, ಸುವರ್ಣ ಮತ್ತು ಮಣಿಗಳಿಂದಲಂಕೃವಾಗಿಯೂ ಇರುವ ಸುಂದರವಾದ ತಾನು ಭವನದಲ್ಲಿ ಬದುಕಿರುವವರೆಗೂ ಸರ್ವೇಂದ್ರಿಯ ಸೌಖ್ಯಗಳನ್ನನುಭವಿಸಿ ವಾಸಿಸುವಳು.

ವಿಯೋಗಂ ನೈವ ಸಾ ಪಶ್ಯೇದ್ಭರ್ತೃಮಿತ್ರಸುತಾದಿಕೈಃ ।
ಮೃತಾ ಶಿವಪುರಂ ಯಾತಿ ಶಿವಗೌರೀಪ್ರಸಾದತಃ ॥ ೨೭ ॥

ಹೈಮೀಮುಮಾಂ ರಜತಪಿಂಡಮಯಂ ಮಹೇಶಂ ।
ರೌಪ್ಯೇ ಸುರೂಪವೃಷಭೇ ಚ ಸಮಾಸ್ಥಿತೌ ತೌ ।
ಸಂಪೂಜ್ಯ ರಕ್ತಸಿತವಸ್ತ್ರ ಯುಗಾವಗೂಢೌ ।
ನಾರೀ ಭವತ್ಯವಿಧವಾ ಸುತಸೌಖ್ಯಯುಕ್ತಾ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ಉಮಾಮಹೇಶ್ವರವ್ರತಂ
ನಾಮ ತ್ರಯೋವಿಂಶತಿತಮೋಽಧ್ಯಾಯ.



---

೨೭. ಮತ್ತು ಅವಳು ಶ್ರೀ ಉಮಾಮಹೇಶ್ವರರ ಪ್ರಸಾದದಿಂದ ಈ ಲೋಕದಲ್ಲಿ ತನ್ನ ಪತಿ, ಮಿತ್ರ, ಸುತ, ಇವರೇ ಮೊದಲಾದವರ ವಿಯೋಗವನ್ನು ಹೊಂದುವುದಿಲ್ಲ. ಮರಣಾಂತರದಲ್ಲಿ ಶಿವಲೋಕವನ್ನು ಪಡೆಯುವರು.

೨೮. ಭಂಗಾರದಲ್ಲಿ ಉಮಾಪ್ರತಿಮೆಯನ್ನೂ ಬೆಳ್ಳಿಯಲ್ಲಿ ಶ್ರೀ ಪರಮೇಶ್ವರನ ಪ್ರತಿಮೆಯನ್ನೂ ಮಾಡಿಸಿ ಬೆಳ್ಳಿಯ ವೃಷಭದ ಮೇಲೆ ಅವುಗಳನ್ನಿರಿಸಿ, ಕೆಂಪು, ಮತ್ತು ಬಿಳಿಯ ಬಟ್ಟೆಗಳನ್ನು ಹೊದ್ದಿಸಿ, ಆ ಅಧಿಷ್ಠಿತಸ್ವಾಮಿಯನ್ನು ಪೂಜಿಸಿದ ನಾರಿಯು ಸುಮಂಗಲಿಯೂ, ಪುತ್ರಸೌಖ್ಯವುಳ್ಳವಳೂ, ಆಗುವಳು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಉಮಾಮಹೇಶ್ವರ ವ್ರತವರ್ಣನೆ ಎಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುರ್ವಿಂಶತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ರಂಭಾತೃತೀಯಾಂ ವಕ್ಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ಪುತ್ರಸೌಭಾಗ್ಯಫಲದಾಂ ಸರ್ವಾಮಯನಿವಾರಿಣೀಂ ॥ ೧ ॥

ಸರ್ವದುಷ್ಟಹರಾಂ ಪುಣ್ಯಾಂ ಸರ್ವಸೌಖ್ಯಪ್ರದಾಂ ತಥಾ ।
ಸಪತ್ನೀದರ್ಪದಲನಾಂ ತಥೈಶ್ವರ್ಯಕರೀಂ ಶಿವಾಂ ॥ ೨ ॥

ಶಂಕರೇಣ ಪುರಾ ಪ್ರೋಕ್ತಾ ಪಾರ್ವತ್ಯಾಃ ಪ್ರಿಯಕಾಮ್ಯಯಾ ।
ತಾಮಿಮಾಂ ಶೃಣು ಭೂಪಾಲ ಸರ್ವಭೂತಹಿತಾಯ ವೈ ॥ ೩ ॥

---

### ಇಪ್ಪತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಭೂಪತಿಯೇ ! ಇನ್ನು ರಂಭಾತೃತೀಯವ್ರತವನ್ನು ಹೇಳುತ್ತೇನೆ ಕೇಳು. ಈ ವ್ರತಾನುಷ್ಠಾನದಿಂದ ಸರ್ವಪಾಪನಾಶವೂ, ಪುತ್ರಸೌಭಾಗ್ಯಲಾಭವೂ, ಸಮಸ್ತರೋಗನಿವಾರಣೆಯೂ ಆಗುತ್ತದೆ.

೨. ಮತ್ತು ನಿಖಿಲ ದುಷ್ಟಗ್ರಹ ಪಿಶಾಚಾದಿ ಅನಿಷ್ಟನಿವೃತ್ತಿಯಾಗಿ ಉತ್ತಮಪುಣ್ಯಲಾಭವೂ, ಸರ್ವಸೌಖ್ಯಪ್ರಾಪ್ತಿಯೂ, ಸವತಿಯರ ಅಹಂಕಾರ ನಾಶವೂ, ಮತ್ತು ಐಶ್ವರ್ಯಪ್ರಾಪ್ತಿಯೂ ಆಗುವುದು.

೩. ಪೂರ್ವದಲ್ಲಿ ಶ್ರೀ ಶಂಕರನು ಸರ್ವಪ್ರಾಣಿಗಳಿಗೂ ಹಿತವಾಗಲಿ ಎಂಬ ಉದ್ದೇಶದಿಂದ ಮಂಗಳಕರವಾದ ಈ ವ್ರತವನ್ನು ತನ್ನ ಪ್ರಿಯಳಾದ ಪಾರ್ವತೀ ಪ್ರೀತಿಯಿಂದುಪದೇಶಿಸಿದನು.

ಮಾರ್ಗಶೀರ್ಷೇ ಶುಭೇ ಮಾಸಿ ತೃತೀಯಾಯಾಂ ನರಾಧಿಪ ।
ಶುಕ್ಲಾಯಾಂ ಪ್ರಾತರುತ್ಥಾಯ ದಂತಧಾವನಪೂರ್ವಕಂ ।
ಉಪವಾಸಸ್ಯ ನಿಯಮಂ ಗೃಹ್ಣೀಯಾದ್ಭಕ್ತಿಭಾವಿತಾ ॥ ೪ ॥

ದೇವಿ ಸಂವತ್ಸರಂ ಯಾವತ್ತೃತೀಯಾಯಾಮುಪೋಷಿತಾ ।
ಪ್ರತಿಮಾಸಂ ಕರಿಷ್ಯಾಮಿ ಪಾರಣಂ ಚಾಪರೇಽಹನಿ ।
ತದವಿಘ್ನೇನ ಮೇ ಯಾತು ಪ್ರಸಾದಾತ್ತವ ಪಾರ್ವತಿ ॥ ೫ ॥

ಏವಂ ಸಂಕಲ್ಪ್ಯ ವಿಧಿವತ್ಕೌಂತೇಯ ಕೃತನಿಶ್ಚಯಃ ।
ಭಕ್ತ್ಯಾ ನರೋ ವಾ ನಾರೀ ವಾ ಸ್ನಾನಂ ಕುರ್ಯಾದತಂದ್ರಿತಃ ॥ ೬ ॥

ನದ್ಯಾಂ ತಡಾಗೇ ವಾಪ್ಯಾಂ ವಾ ಗೃಹೇ ವಾ ನಿಯತಾತ್ಮವಾನ್ ।
ಪೂಜಯೇತ್ಪಾರ್ವತೀಂ ನಾಮ ರಾತ್ರೌ ಪ್ರಾಶ್ಯ ಕುಶೋದಕಂ ॥ ೭ ॥

---

೪. ಎಲೈ ರಾಜಗ್ರಣಿಯೇ! ಶುಭಕರವಾದ ಮಾರ್ಗಶೀರ್ಷಮಾಸದ ಶುಕ್ಲ ಪಕ್ಷದ ತೃತೀಯೆಯದಿನ ಪ್ರಾತಃಕಾಲದಲ್ಲೆದ್ದು ದಂತಧಾವನಮಾಡಿಕೊಂಡು ಭಕ್ತಿ ಶ್ರದ್ಧಾಪೂರ್ವಕವಾಗಿ ಉಪವಾಸ ನಿಯಮವನ್ನು ಸ್ವೀಕರಿಸಬೇಕು.

೫. " ಅನಂತರ ಮಹಾದೇವೀ ! ಇಂದುಮೊದಲ್ಗೊಂಡು ಒಂದುವರ್ಷದ ವರೆಗೆ ನಾನು ಪ್ರತಿಮಾಸದಲ್ಲೂ ಶುಕ್ಲಪಕ್ಷತೃತೀಯಾದಿನದಲ್ಲಿ ಉಪವಾಸದಲ್ಲಿದ್ದು (ಮರುದಿನ) ಚತುರ್ಥಿಯಲ್ಲಿ ಪಾರಣೆಮಾಡುತ್ತೇನೆ. ತಾಯಿ, ಪಾರ್ವತೀ! ನಿನ್ನ ಅನುಗ್ರಹದಿಂದ ನನಗೆ ಈ ವ್ರತವು ನಿರ್ವಿಘ್ನವಾಗಿ ಪೂರೈಸಲಿ " ಎನ್ನಬೇಕು.

೬-೭. ಅಪ್ಪಾ ಕುಂತೀಪುತ್ರನೇ ! ಕೇಳು ; ಗಂಡಸಾಗಲಿ ಅಥವಾ ಹೆಂಗಸಾಗಲಿ ಈರೀತಿ ಭಕ್ತಿಪೂರ್ವಕವಾಗಿ ದೃಢನಿಶ್ಚಯದಿಂದ ವಿಧಿವತ್ತಾಗಿ ಸಂಕಲ್ಪಿಸಿ ಹೊಳೆ, ಕೊಳ, ಅಥವಾ ಭಾವಿಯಲ್ಲಿ ಆಲಸ್ಯವಿಲ್ಲದೆ ಸ್ನಾನಮಾಡಿ ಏಕಾಗ್ರತೆಯಿಂದ ಪಾರ್ವತೀದೇವಿಯನ್ನು ಪೂಜಿಸಬೇಕು. ಆದಿನ ರಾತ್ರಿಯಲ್ಲಿ ದರ್ಭೋದಕವನ್ನು ಮಾತ್ರ ಪ್ರಾಶನಮಾಡತಕ್ಕದ್ದು.

ಪ್ರಭಾತೇ ಭೋಜಯೇದ್ವಿದ್ವಾಞ್ಶಿವ ಭಕ್ತಾನ್ವಿಶೇಷತಃ ।
ಹಿರಣ್ಯಂ ಲವಣಂ ಚೈವ ತೇಷಾಂ ದದ್ಯಾತ್ತು ದಕ್ಷಿಣಾಂ ।
ಗೌರೀಶ್ವರಂ ಯಥಾಶಕ್ತಿ ಭೋಜಯೇತ್ಪ್ರಯತಾ ಸತೀ ॥ ೮ ॥

ಅನೇನ ವಿಧಿನಾ ರಾಜನ್ಯಃ ಕುರ್ಯಾನ್ಮಾಸಿ ಪೌಷಕೇ ।
ಗೋಮೂತ್ರಂ ಪ್ರಾಶಯೇದ್ರಾತ್ರೌ ಪ್ರಭಾತೇ ಭೋಜಯೇದ್ವಿಜಾನ್ ॥ ೯ ॥

ಹಿರಣ್ಯಂ ಜೀರಕಂ ಚೈವ ಸ್ವಶಕ್ತ್ಯಾ ದಾಪಯೇತ್ತತಃ ।
ಕಡುಹುಂಡಂ ಚ ಕನಕಂ ತೇಭ್ಯೋ ದತ್ವಾ ವಿಸರ್ಜಯೇತ್ ॥ ೧೦ ॥

ವಾಜಪೇಯಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತ್ಯಸಂಶಯಃ ।
ಶಕ್ರಲೋಕೇ ವಸೇತ್ಕಲ್ಪಂ ತತಃ ಶಿವಪುರಂ ವ್ರಜೇತ್ ॥ ೧೧ ॥

---

೮. ಮರುದಿನ ಪ್ರಾತಃಕಾಲದಲ್ಲಿ ಶುಚಿಯಾಗಿ ಗೌರೀಶಂಕರರನ್ನುದ್ದೇಶಿಸಿ ವಿಶೇಷತಃ ಶಿವಪೂಜಾನಿರತರಾದ ಶ್ರೋತ್ರಿಯ ಬ್ರಾಹ್ಮಣರಿಗೆ ಭೋಜನಮಾಡಿಸಿ, ಆಮೇಲೆ ಅವರಿಗೆ ಸ್ವಶಕ್ತ್ಯನುಸಾರವಾಗಿ ಸುವರ್ಣ ಮತ್ತು ಲವಣ ಇವುಗಳನ್ನು ದಕ್ಷಿಣಾಸಮೇತ ದಾನಮಾಡಬೇಕು.

೯. ಎಲೈ ರಾಜನೇ ! ಪೂರ್ವೋಕ್ತರೀತಿಯಿಂದ ಮಾರ್ಗಶೀರ್ಷಮಾಸದಲ್ಲಿ ಆಚರಿಸಿ, ಅನಂತರ ಪುಷ್ಯಮಾಸದಲ್ಲಿ ಪೂರ್ವದಂತೆಯೇ ಸ್ನಾನಪೂಜಾದಿಗಳನ್ನಾಚರಿಸಿದ ಮೇಲೆ ರಾತ್ರಿಯಲ್ಲಿ ಗೋಮೂತ್ರವನ್ನು ಪ್ರಾಶನೆಮಾಡಿ ಮರುದಿನ ಪ್ರಾತಃಕಾಲದಲ್ಲಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸತಕ್ಕದ್ದು.

೧೦. ಅನಂತರ ಆ ಬ್ರಾಹ್ಮಣರಿಗೆ ತನ್ನ ಶಕ್ತಿಗನುಸಾರವಾಗಿ ಸುವರ್ಣ, ಜೀರಿಗೆ ಇತ್ಯಾದಿಗಳನ್ನು ದಾನಮಾಡಿ ದಕ್ಷಿಣೆಯನ್ನು ಕೊಟ್ಟು ಕಳುಹಿಸಬೇಕು.

೧೧. ಈರೀತಿ ವ್ರತಾಚರಣಮಾಡಿದವರು ನಿಜವಾಗಿಯೂ ವಾಜಪೇಯ ಮತ್ತು ಅತಿರಾತ್ರ ಈ ಯಾಗಗಳ ಅನುಷ್ಠಾನದಿಂದ ಯಾವ ಫಲ ಹೊಂದುವನೋ ಅಷ್ಟೇ ಫಲಪ್ರಾಪ್ತಿಯುಳ್ಳವನಾಗುವರು. ಮತ್ತು ಅವರು ಒಂದು ಬ್ರಾಹ್ಮಕಲ್ಪ ಪರ್ಯಂತವಾಗಿ ಇಂದ್ರಲೋಕದಲ್ಲಿ ವಾಸಮಾಡಿ ಅನಂತರ ಶಿವಲೋಕಕ್ಕೆ ಹೋಗುವರು.

ಮಾಘೇ ಮಾಸಿ ತೃತೀಯಾಯಾಂ ಸುದೇವೀಂ ನಾಮ ಪೂಜಯೇತ್ ।
ಗೋಮಯಂ ಪ್ರಾಶಯೇದ್ರಾತ್ರೌ ತತಶ್ಚೈಕಾಕಿನೀ ಸ್ವಪೇತ್ ॥ ೧೨ ॥

ಪ್ರಾತಃ ಕುಸುಂಭಾಂ ಕನಕಂ ದದ್ಯಾಚ್ಛಕ್ತ್ಯಾ ದ್ವಿಜಾತಿಷು ।
ವಿಷ್ಣುಲೋಕೇ ಚಿರಂ ಸ್ಥಿತ್ವಾ ಪ್ರಾಪ್ನೋತಿ ಶಿವಸಾಮ್ಯತಾಂ ॥ ೧೩ ॥

ಗೌರೀತಿ ಫಾಲ್ಗುನೇ ನಾಮ ಗೋಕ್ಷೀರಂ ಪ್ರಾಶಯೇನ್ನಿಶಿ ।
ಪ್ರಭಾತೇ ಭೋಜಯೇದ್ವಿದ್ವಾಞ್ಶಿವಭಕ್ತಾನ್ಸುವಾಸಿನೀಃ ॥ ೧೪ ॥

ಕಡುಹುಂಡಂ ಸಕನಕಂ ತೇಭ್ಯೋ ದತ್ವಾ ವಿಸರ್ಜಯೇತ್ ।
ವಾಜಪೇಯಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತ್ಯಸಂಶಯಃ ॥ ೧೫ ॥

---

೧೨. ಮಾಘಶುಕ್ಲ ತೃತೀಯಾತಿಥಿಯಲ್ಲಿ "ಸುದೇವೀ" ಎಂಬ ಹೆಸರಿನಿಂದ ದೇವಿಗೆ ಪೂಜೆಯನ್ನುಮಾಡಿ, ರಾತ್ರಿಯಲ್ಲಿ ಗೋಮಯವನ್ನು ಪ್ರಾಶನೆ ಮಾಡಿ ಪತಿಸಂಗವಿಲ್ಲದೆ ಏಕಾಕಿಯಾಗಿ ಶಯನಮಾಡಬೇಕು.

೧೩. ಮರುದಿನ ಪ್ರಾತಃಕಾಲ ಸ್ವಶಕ್ತ್ಯನುಸಾರವಾಗಿ ಗೋವು ಮತ್ತು ಹಿರಣ್ಯಗಳನ್ನು ಸದ್ಬ್ರಾಹ್ಮಣರಿಗೆ ದಾನಮಾಡಬೇಕು. ಅದರಿಂದ ಬಹುಕಾಲ ವೈಕುಂಠದವಾಸವು ಲಭಿಸಿ ಅನಂತರ ಶಿವಸಾಯುಜ್ಯವನ್ನು ಪಡೆಯುವಳು.

೧೪. ಫಾಲ್ಗುಣಮಾಸದಲ್ಲಿ ಈ ದೇವಿಯನ್ನು ಗೌರೀ ಎಂಬ ನಾಮಧೇಯದಿಂದಲೂ ಪೂಜಿಸಿ ರಾತ್ರಿಯಲ್ಲಿ ಗೋಕ್ಷೀರವನ್ನು ಪ್ರಾಶನೆಮಾಡಬೇಕು. ಮರುದಿನ ಪ್ರಾತಃಕಾಲ ಶಿವಪೂಜಾರತವಾದ ಬ್ರಾಹ್ಮಣರಿಗೂ ಸುವಾಸಿನಿಯರಿಗೂ ಭೋಜನಮಾಡಿಸಬೇಕು.

೧೫. ಮತ್ತು ಆ ಬ್ರಾಹ್ಮಣರಿಗೆ ಹಿರಣ್ಯವೇ ಮೊದಲಾದ ದಾನಗಳನ್ನು ಕೊಟ್ಟು ಕಳುಹಿಸಬೇಕು. ಇದರಿಂದ ವಾಜಪೇಯ, ಅತಿರಾತ್ರ ಈ ಯಾಗಗಳಿಂದಾಗುವಷ್ಟು ಫಲಪ್ರಾಪ್ತಿಯಾಗುತ್ತದೆ.

ಚೈತ್ರೇ ಮಾಸಿ ವಿಶಾಲಾಕ್ಷೀಂ ಪೂಜಯೇದ್ಭಕ್ತಿತತ್ಪರಾ ।
ದಧಿ ಪ್ರಾಶ್ಯ ಸ್ವಪೇತ್ಪ್ರಾತರ್ದದ್ಯಾದ್ಧೇಮ ಸಕುಂಕುಮಂ ।
ಸೌಭಾಗ್ಯಂ ಮಹದಾಪ್ನೋತಿ ವಿಶಾಲಾಕ್ಷ್ಯಾಃ ಪ್ರಸಾದತಃ ॥ ೧೬ ॥

ವೈಶಾಖಸ್ಯ ತೃತೀಯಾಯಾಂ ಶ್ರೀಮುಖೀಂ ನಾಮ ಪೂಜಯೇತ್ ।
ಘೃತಂ ಚ ಪ್ರಾಶಯೇದ್ರಾತ್ರೌ ತತಶ್ಚೈಕಾಕಿನೀ ಸ್ವಪೇತ್ ॥ ೧೭ ॥

ಶಿವಭಕ್ತಾನ್ದ್ವಿಜಾನ್ಪ್ರಾತರ್ಭೋಜಯಿತ್ವಾ ಯಥೇಪ್ಸಿತಂ ।
ತಾಂಬೂಲಂ ಲವಣಂ ದತ್ವಾ ಪ್ರಣಿಪತ್ಯ ವಿಸರ್ಜಯೇತ್ ।
ಅನೇನ ವಿಧಿನಾ ದತ್ವಾ ಪುತ್ರಾನಾಪ್ನೋತಿ ಶೋಭನಾನ್ ॥ ೧೮ ॥

ಆಷಾಢೇ ಮಾಧವೀಂ ನತ್ವಾ ಪ್ರಾಶ್ನೀಯಾಚ್ಚ ತಿಲೋದಕಂ ।
ಪ್ರಭಾತೇ ಭೋಜಯೇದ್ವಿಪ್ರಾನ್ದಕ್ಷಿಣಾಯಾಂ ಗುಡಃ ಸ್ಮೃತಃ ।
ಸಕಾಂಚನಃ ಶುಭಾಲ್ಲೋಕಾನ್ಪ್ರಾಪ್ನೋತಿ ಹಿ ನ ಸಂಶಯಃ ॥ ೧೯ ॥

---

೧೬. ಚೈತ್ರಮಾಸದಲ್ಲಿ ಭಕ್ತಿಯುತಳಾಗಿ ವಿಶಾಲಾಕ್ಷೀ ಎಂಬ ನಾಮ ಪೂರ್ವಕವಾಗಿ ಆ ದೇವಿಯನ್ನು ಪೂಜಿಸಿ, ರಾತ್ರಿಯಲ್ಲಿ ಮೊಸರನ್ನು ಪ್ರಾಶನಮಾಡಿ ಮರುದಿನ ಪ್ರಾತಃಕಾಲ ಬ್ರಾಹ್ಮಣರಿಗೂ ಮತ್ತು ಸುವಾಸಿನಿಯರಿಗೂ ಹಿರಣ್ಯ ಕುಂಕುಮ ಇವನ್ನು ದಾನಮಾಡಬೇಕು ಈರೀತಿ ಆಚರಿಸುವುದರಿಂದ ಶ್ರೀ ವಿಶಾಲಾಕ್ಷಿಯ ಅನುಗ್ರಹಕ್ಕೆ ಪಾತ್ರಳಾಗಿ ಮಹಾಸೌಭಾಗ್ಯವನ್ನು ಹೊಂದುವಳು.

೧೭. ವೈಶಾಖಮಾಸದ ಶುಕ್ಲಪಕ್ಷದ ತೃತೀಯೆಯಲ್ಲಿ ಈ ದೇವಿಯನ್ನು ಶ್ರೀಮುಖೀ ಎಂಬ ನಾಮವಿಶೇಷದಿಂದ ಅರ್ಚಿಸಬೇಕು. ರಾತ್ರಿಯಲ್ಲಿ ತುಪ್ಪವನ್ನು ಪ್ರಾಶನೆಮಾಡಿ ಏಕಾಕಿಯಾಗಿ ಮಲಗಬೇಕು.

೧೮. ಮರುದಿನ ಪ್ರಾತಃಕಾಲದಲ್ಲಿ ಶಿವಪೂಜಾನಿರತರಾದ ಬ್ರಾಹ್ಮಣರಿಗೆ ಯಥೇಷ್ಟವಾಗಿ ಭೋಜನಮಾಡಿಸಿ ತಾಂಬೂಲ ಮತ್ತು ಲವಣವನ್ನು ದಾನಮಾಡಿ ನಮಸ್ಕರಿಸಿ ಕಳುಹಿಸಬೇಕು. ಈ ಪ್ರಕಾರವಾಗಿ ದಾನಮಾಡೋಣವರಿಂದ ಸತ್ಪುತ್ರಪ್ರಾಪ್ತಿಯಾಗುವುದು.

೧೯. ಆಷಾಢಮಾಸದಲ್ಲಿ ಈ ದೇವಿಯನ್ನು ಮಾಧವೀ ಎಂಬ ನಾಮಧೇಯದಿಂದ ಪೂಜಿಸಿ, ಭಕ್ತಿವಿನಯದಿಂದ ನಮಸ್ಕರಿಸಿ ರಾತ್ರಿಯಲ್ಲಿ ತಿಲೋದಕ

ಶ್ರಾವಣೇ ತು ಶ್ರಿಯಂ ಪೂಜ್ಯ ಪಿಬೇದ್ಗೋಶೃಂಗಜಂ ಜಲಂ ।
ಶಿವಭಕ್ತಾಂಶ್ಚ ಸಂಪೂಜ್ಯ ದದ್ಯಾದ್ಧೇಮಫಲೈಃ ಸಹ ।
ಸರ್ವಲೋಕೇಶ್ವರೋ ಭೂತ್ವಾ ಸರ್ವಕಾಮಾನವಾಪ್ನುಯಾತ್ ॥ ೨೦ ॥

ಭಾದ್ರೇ ಚೈವ ತೃತೀಯಾಯಾಂ ಹರಕಾಲೀತಿ ಪೂಜಯೇತ್ ।
ಮಾಹಿಷಂ ಚ ಪಿಬೇದ್ದುಗ್ಧಂ ಸೌಭಾಗ್ಯಮತುಲಂ ಲಭೇತ್ ।
ಇಹ ಲೋಕೇ ಸುಖಂ ಭುಕ್ತ್ವಾ ಚಾಂತೇ ಶಿವಪುರಂ ವ್ರಜೇತ್ ॥ ೨೧ ॥

ಆಶ್ವಿನೇ ತು ತೃತೀಯಾಯಾಂ ಗಿರಿಪುತ್ರೀತಿ ಪೂಜಯೇತ್ ।
ಸಂಪ್ರಾಶ್ಯ ತಂಡುಲಜಲಂ ಪ್ರಾತರ್ವಿಪ್ರಾಂಶ್ಚ ಪೂಜಯೇತ್ ॥ ೨೨ ॥

---

ವನ್ನು ಪ್ರಾಶನಮಾಡಿ, ಮರುದಿನ ಪ್ರಾತಃಕಾಲದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಬೆಳ್ಳಿ ಮುತ್ತು ಸುವರ್ಣಗಳನ್ನು ದಕ್ಷಿಣಾಸಮೇತವಾಗಿ ಕೊಟ್ಟುಕಳುಹಿಸ ಬೇಕು. ಇದರಿಂದ ನಿಸ್ಸಂದೇಹವಾಗಿ ಶಿವಲೋಕ ಪ್ರಾಪ್ತಿಯಾಗುವುದು.

೨೦. ಶ್ರಾವಣಮಾಸದಲ್ಲಿ ಶ್ರೀ ಎಂಬ ನಾಮವಿಶೇಷದಿಂದ ದೇವಿಪೂಜೆ ಯನ್ನಾಚರಿಸಿ, ರಾತ್ರಿಯಲ್ಲಿ ಗೋಶೃಂಗೋದಕವನ್ನು ಪಾನಮಾಡಬೇಕು. ಮರು ದಿನ ಪ್ರಾತಃಕಾಲ ಶಿವಪೂಜಾಸಕ್ತರಾದ ಬ್ರಾಹ್ಮಣರನ್ನು ಭೋಜನಾದಿಗಳಿಂದ ಸತ್ಕರಿಸಿ ಫಲಸಹಿತವಾಗಿ ಸುವರ್ಣದಾನಮಾಡಬೇಕು. ಇದರಿಂದ ಸರ್ವ ಲೋಕಾಧಿಪತ್ಯವು ಲಭಿಸಿ ಸರ್ವಕಾಮಾವಾಪ್ತಿಯಾಗುವುದು.

೨೧. ಭಾದ್ರಪದಮಾಸದ ಶುಕ್ಲಪಕ್ಷದ ತೃತೀಯೆಯಲ್ಲಿ ಹರಕಾಲೀ ಎಂಬ ನಾಮಧೇಯದಿಂದ ದೇವೀಪೂಜೆಯನ್ನು ಮಾಡಿ, ರಾತ್ರಿಯಲ್ಲಿ ಎಮ್ಮೆಯಹಾಲನ್ನು ಕುಡಿಯಬೇಕು. ಇದರಿಂದ ಅತಿಶಯ ಸೌಭಾಗ್ಯವನ್ನು ಪಡೆಯುವುದಲ್ಲದೆ ಇಹ ಲೋಕದಲ್ಲಿ ಸರ್ವಸುಖವನ್ನನುಭವಿಸಿ ಮರಣಾನಂತರ ಶಿವಲೋಕವನ್ನು ಪಡೆಯುವಳು.

೨೨. ಆಶ್ವಯುಜಮಾಸದ ಶುಕ್ಲಪಕ್ಷ ತೃತೀಯಾತಿಥಿಯಲ್ಲಿ ಗಿರಿಪುತ್ರೀ ಎಂಬ ನಾಮಪೂರ್ವಕವಾಗಿ ಭಕ್ತಿಯಿಂದ ಪೂಜೆಮಾಡಿ ಮರುದಿನ ಪ್ರಾತಃಕಾಲ ಬ್ರಾಹ್ಮಣರನ್ನು ಅರ್ಚಿಸಬೇಕು.

ದಕ್ಷಿಣಾ ಚಾಪಿ ನಿರ್ದಿಷ್ಟಾ ಕನಕಂ ಚ ಸಚನ್ದನಂ ।
ಸರ್ವಯಜ್ಞಫಲಂ ಪ್ರಾಪ್ಯ ಗೌರೀಲೋಕೇ ಮಹೀಯತೇ ॥ ೨೩ ॥

ಪದ್ಮೋದ್ಭವಾ ಕಾರ್ತಿಕೇ ಚ ಪಂಚಗವ್ಯಂ ಪಿಬೇತ್ತತಃ ।
ರಾತ್ರೌ ಪ್ರಜಾಗರಂ ಕುರ್ಯಾತ್ಪ್ರಭಾತೇ ಭೋಜಯೇದ್ದ್ವಿಜಾನ್॥ ೨೪॥

ಸಪತ್ನೀಕಾಞ್ಛುಭಾಚಾರಾನ್ಮಾಲ್ಯವಸ್ತ್ರವಿಭೂಷಣೈಃ ।
ಪೂಜಯೇಚ್ಛಿವಭಕ್ತಾಂಶ್ಚ ಕುಮಾರೀಶ್ಚೈವ ಭೋಜಯೇತ್ ॥ ೨೫ ॥

ಉಮಾಮಹೇಶ್ವರಂ ಹೈಮಂ ಸಮಾಪ್ತೇ ಕಾರಯೇನ್ನೃಪ ।
ಯಥಾವಿಭವಸಾರೇಣ ವಿತಾನಂ ಪಂಚವರ್ಣಕಂ ॥ ೨೬ ॥

---

೨೩. ಮತ್ತು ಆ ಬ್ರಾಹ್ಮಣರಿಗೆ ಚಂದನಸಹಿತವಾಗಿ ಸುವರ್ಣದಾನಮಾಡಿ ದಕ್ಷಿಣೆಯನ್ನೂ ಕೊಡಬೇಕು. ಇದರಿಂದ ಸರ್ವಯಾಗಫಲವು ಪ್ರಾಪ್ತಿಯಾಗುವುದಲ್ಲದೆ ಕೊನೆಯಲ್ಲಿ ಶ್ರೀ ಗೌರೀಲೋಕವನ್ನು ಸೇರಿ ಅಲ್ಲಿ ಬಹಳಕಾಲ ಪೂಜಿತೆಯಾಗಿರುತ್ತಾಳೆ.

೨೪. ಕಾರ್ತೀಕಮಾಸದಲ್ಲಿ ಈ ದೇವಿಯನ್ನು ಪದ್ಮೋದ್ಭವೆ ಎಂಬ ನಾಮಧೇಯದಿಂದ ಅರ್ಚಿಸಿ, ಅನಂತರ ರಾತ್ರಿಯಲ್ಲಿ ಪಂಚಗವ್ಯಪ್ರಾಶನಮಾಡಿ ಜಾಗರಣೆಯನ್ನು ಮಾಡಬೇಕು.

೨೫. ಮರುದಿನ ಪ್ರಾತಃಕಾಲದಲ್ಲಿ ಸದಾಚಾರಸಂಪನ್ನರಾಗಿಯೂ, ಸಪತ್ನೀಕರಾಗಿಯೂ, ಶಿವಪೂಜಾಧುರಂಧರರಾಗಿಯೂ, ಇರುವ ಬ್ರಾಹ್ಮಣರಿಗೂ, ಕನ್ನಿಕೆಯರಿಗೂ ಭೋಜನಮಾಡಿಸಿ ಸುಗಂಧ ಮಾಲಿಕಾ ವಸ್ತ್ರಭೂಷಣ ಇತ್ಯಾದಿಗಳಿಂದ ಪೂಜಿಸಬೇಕು.

೨೬. ಎಲೈ ರಾಜನೇ ! ಈ ಪ್ರಕಾರ ಒಂದುವರ್ಷದಲ್ಲಿ ಆಚರಿಸಿ ಈ ವ್ರತ ಸಮಾಪ್ತಿಯಾಗುವಾಗ ತನ್ನ ಸಂಪತ್ತಿಗನುಸಾರವಾಗಿ ಭಂಗಾರದಿಂದ ಶ್ರೀ ಉಮಾಮಹೇಶ್ವರರ ಪ್ರತಿಮೆಮಾಡಿಸಿ ಪೂಜಿಸಿ ಅದರ ಮೇಲ್ಭಾಗಲ್ಲಿ ಪಂಚವರ್ಣದ ಮೇಲ್ಕಟ್ಟನ್ನು ಕಟ್ಟಬೇಕು.

ಅಶನಂ ಚ ಶುಭಂ ದದ್ಯಾಚ್ಛ್ವೇತಚ್ಛತ್ರಂ ಕಮಂಡಲುಂ ।
ಪಾದುಕೋಪಾನಹೌ ದಿವ್ಯೈರ್ವಸ್ತ್ರಯುಗ್ಮೈಶ್ಚ ಪಾಂಡವ ॥ ೨೭ ॥

ಪೀತಯಜ್ಞೋಪವೀತೈಶ್ಚ ದೀಪನೇತ್ರೈಃ ಸಮುಜ್ಜ್ವಲೈಃ ।
ಶಂಖಶುಕ್ತಿಸಮೋಪೇತೈರ್ದ್ದರ್ಪಣೈಶ್ಚ ಸುಶೋಭಿತೈಃ ॥ ೨೮ ॥

ಉಮಾಮಹೇಶ್ವರಂ ಸ್ಥಾಪ್ಯ ಪೂಜಯಿತ್ವಾ ಯಥಾವಿಧಿ ।
ನಾನಾವಿಧೈಃ ಸುಗಂಧೈಶ್ಚ ಪತ್ರೈಃ ಪುಷ್ಪೈಃ ಫಲೈಸ್ತಥಾ ॥ ೨೯ ॥

ಘೃತಪಕ್ವೈಶ್ಚ ನೈವೇದ್ಯೈರ್ದೀಪಮಾಲಾಭಿರೇವ ಚ ।
ಶರ್ಕರಾನಾಲಿಕೇರೈಶ್ಚ ದಾಡಿಮ್ಬೈರ್ಬೀಜಪೂರಕೈಃ ॥ ೩೦ ॥

ಜೀರಕೈರ್ಲವಣೈಶ್ಚೈವ ಕುಸುಂಭೈಃ ಕುಂಕುಮೈಸ್ತಥಾ ।
ಸತಾಮ್ರಭಾಜನೈರ್ದಿವ್ಯೈರ್ಮೋದಕೈ ರಸಸಂಯುತೈಃ ।
ಪೂಜಯೇದ್ದೇವದೇವೇಶಂ ಕ್ಷಮಯೇತ್ತದನಂತರಂ ॥ ೩೧ ॥

---

೨೭. ಎಲೈ ಪಾಂಡುಪುತ್ರನೇ ! ಉತ್ತಮವಾದ ನೈವೇದ್ಯಗಳನ್ನರ್ಪಿಸಿ ಶ್ವೇತಚ್ಛತ್ರಿ, ಕಮಂಡಲು, ಪಾದುಕೆಗಳು ದಿವ್ಯವಾದ ವಸ್ತ್ರಯುಗ್ಮಗಳು.

೨೮. ಮತ್ತು ಪೀತಯಜ್ಞೋಪವೀತ ಪ್ರಜ್ವಲಿಸುವ ದೀಪ, ಶಂಖ, ಶುಕ್ತಿ ಮನೋಹರವಾದ ದರ್ಪಣ, ಇತ್ಯಾದಿಗಳನ್ನಿಟ್ಟು ಆ ಪ್ರತಿಮೆಯನ್ನು ಅಲಂಕರಿಸಬೇಕು.

೨೯. ಉಮಾಮಹೇಶ್ವರರ ಪ್ರತಿಮೆಯನ್ನು ಶಾಸ್ತ್ರಾನುಸಾರವಾಗಿ ಸಂಸ್ಥಾಪಿಸಿ ನಾನಾವಿಧವಾದ ಸುಗಂಧಪತ್ರೆ, ಪುಷ್ಪ ಮತ್ತು ಫಲಗಳು ಇವುಗಳನ್ನು ಸಮರ್ಪಿಸಿ ಭಕ್ತಿಯಿಂದ ಅರ್ಚನೆಮಾಡಬೇಕು.

೩೦. ಮತ್ತು ಘೃತಪಕ್ವನೈವೇದ್ಯಗಳನ್ನು ಸಮರ್ಪಿಸಿ ಅನೇಕ ದೀಪಗಳನ್ನು ಹತ್ತಿಸಿಟ್ಟು ಸಕ್ಕರೆ, ತೆಂಗಿನಕಾಯಿ, ದಾಡಿಂಬ ಮೊದಲಫಲಗಳು,

೩೧. ಮತ್ತು ಜೀರಿಗೆ ಲವಣ ಇತ್ಯಾದಿಗಳನ್ನು ಸಮರ್ಪಿಸಿ ಕುಸುಂಭ ಕುಂಕುಮಾದಿಗಳಿಂದಲೂ ಅರ್ಚಿಸಿ ತಾಮ್ರದಪಾತ್ರೆಯಲ್ಲಿ ರಸಯುಕ್ತವೂ ದಿವ್ಯವೂ ಆದ ಮೋದಕಗಳನ್ನಿಟ್ಟು ಅರ್ಪಿಸಿ ದೇವದೇವನಾದ ಶ್ರೀ ಪರಮೇಶ್ವರನನ್ನು ಪೂಜಿಸಿ ಕ್ಷಮಾಯಾಚನೆ ಮಾಡಬೇಕು.

**ಶಂಖವಾದಿತ್ರ ನಿರ್ಘೋಷೈರ್ವೇದಧ್ವನಿಸಮನ್ವಿತೈಃ ।**
**ಏವಂ ಕೃತೇ ಫಲಂ ಯತ್ಸ್ಯಾತ್ತನ್ನ ಶಕ್ಯಂ ಮಯೋದಿತುಂ ॥ ೩೨ ॥**

**ಪೂರ್ವೋಕ್ತಫಲಭಾಗೀ ಸ್ಯಾತ್ಸರ್ವದೇವೈಶ್ಚ ಪೂಜ್ಯತೇ ।**
**ಕಲ್ಪಕೋಟಿಶತಂ ಯಾವತ್ಸರ್ವಕಾಮಾನವಾಪ್ನುಯಾತ್ ॥ ೩೩ ॥**

**ತದಂತೇ ಶಿವಸಾಯುಜ್ಯಂ ಪ್ರಾಪ್ನೋತೀಹ ನ ಸಂಶಯಃ ।**
**ಪುರೈತದ್ರಂಭಯಾ ಚೀರ್ಣಂ ತೇನ ರಂಭಾವ್ರತಂ ಸ್ಮೃತಂ ॥ ೩೪ ॥**

**ಯೋಽಹಂ ಸಾ ಚ ಸ್ಮೃತಾ ಗೌರೀ ಯಾ ಗೌರೀ ಸ ಮಹೇಶ್ವರಃ ।**
**ಇತಿ ಮತ್ವಾಮಹಾರಾಜ ಶರಣಂ ವ್ರಜ ಪಾರ್ವತೀಂ ॥ ೩೫ ॥**

---

೩೨. ಪ್ರಾರ್ಥನಾಸಮಯದಲ್ಲಿ ಶಂಖ, ವಾದ್ಯ, ವೇದಘೋಷ ಇವುಗಳು ಮೊಳಗುತ್ತಿರಬೇಕು. ಅಯ್ಯಾ ರಾಜನೇ ! ಈರೀತಿಯಲ್ಲಿ ಈ ವ್ರತವನ್ನಾಚರಿಸಿದರೆ ಯಾವಫಲ ಪ್ರಾಪ್ತಿಯಾಗುವುದೋ ಅದನ್ನು ಮಾತಿನಿಂದ ವಿವರಿಸಿ ಹೇಳಲು ನನಗೆ ಸಾಧ್ಯವಿಲ್ಲ.

೩೩. ಈ ವ್ರತಾಚರಣೆಯಿಂದ ಹಿಂದೆ ಹೇಳಿದಂತೆಯೇ ತತ್ತನ್ಮಾಸಿಕ ಫಲಗಳು ಬರುವುದಲ್ಲದೆ ಸರ್ವದೇವತಾ ಪೂಜ್ಯತ್ವವೂ ಶತಕೋಟಿಕಲ್ಪದವರೆಗೂ ಸರ್ವಇಷ್ಟಾರ್ಥಗಳ ಲಾಭವೂ ಆಗುವುದು.

೩೪. ಕೊನೆಗೆ ಶಿವಸಾಯುಜ್ಯವೂ ಲಭಿಸುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ಪೂರ್ವದಲ್ಲಿ ರಂಭೆಯು ಈ ವ್ರತಾನುಷ್ಠಾನ ಮಾಡಿದುದರಿಂದ ಇದಕ್ಕೆ ರಂಭಾವ್ರತವೆಂದು ಹೆಸರುಬಂದಿತು.

೩೫. ಎಲೈ ಮಹಾರಾಜನೇ ! ಶಿವನಾದ ನಾನೇ ಶ್ರೀ ಗೌರಿ. ಗೌರಿಯೆಂದು ಯಾವಳು ಪ್ರಸಿದ್ಧಳಾಗಿರುವಳೋ ಅವಳೇ ಸಾಕ್ಷಾತ್ ಮಹೇಶ್ವರ ಎಂಬ ಅದ್ವೈತಭಾವನೆಯಿಂದ ಶ್ರೀ ಪಾರ್ವತಿಯ ಪಾದಕ್ಕೆ ಶರಣಾಗತನಾಗು.

ಏಷಾ ಹಿಮಾದ್ರಿದುಹಿತುರ್ದಯಿತಾ ತೃತೀಯಾ ।
ರಂಭಾಭಿಧಾನಮಲಭದ್ಭುವಿ ತತ್ಕೃತೇತಿ ।
ಸತ್ಪ್ರಾಶಿತೈರುದಿತ ನಾಮಯುತಾಮುಪೋಷ್ಯ ।
ಪ್ರಾಪ್ನೋತಿ ವಾಂಛಿತಫಲಾನ್ಯಬಲಾ ಬಹೂನಿ ॥ ೩೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ರಂಭಾ ತೃತೀಯಾವ್ರತಂ ನಾಮ ಚತುರ್ವಿಂಶತಿ ತಮೋಽಧ್ಯಾಯಃ.



---

೩೬. ಶ್ರೀ ಪಾರ್ವತಿಯ ಪ್ರೀತಿಪ್ರಾತವಾದ ಈ ತೃತೀಯಾವ್ರತವು ಮೊದಲು ರಂಭಾಕೃತವಾದುದರಿಂದ ರಂಭಾವ್ರತವೆಂಬ ನಾಮಧೇಯವನ್ನು ಪಡೆಯಿತು. ಯಾವನಾರಿಯು ಉಪವಾಸವನ್ನಾಚರಿಸಿ ಆಯಾತಿಂಗಳುಗಳಲ್ಲಿ ಹಿಂದೆ ಹೇಳಿದಂತೆ ಪ್ರಾಶನೆಗಳನ್ನುಮಾಡಿ ಮಾಸಕ್ರಮಾನುಸಾರ ಹಿಂದೆ ಹೇಳಿದ ನಾಮಧೇಯಗಳಿಂದ ದೇವಿಯ ಅರ್ಚನೆಮಾಡುವುದರಿಂದ ಈ ವ್ರತಪೂರ್ಣವಾಗಿ ಅವಳಿಗೆ ಸರ್ವೇಷ್ಟಾರ್ಥಗಳ ಲಾಭವಾಗುವುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ರಂಭಾತೃತೀಯಾ ವ್ರತ ವರ್ಣನೆ ಎಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚವಿಂಶತಿತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ತಥೈವಾನ್ಯತ್ಪ್ರವಕ್ಷ್ಯಾಮಿ ಸರ್ವಕಾಮಫಲಪ್ರದಂ ।
ಸೌಭಾಗ್ಯಶಯನಂ ನಾಮ ಯತ್ಪುರಾಣವಿದೋ ವಿದುಃ ॥ ೧ ॥

ಪುರಾ ದಗ್ಧೇಷು ಲೋಕೇಷು ಭೂರ್ಭುವಃಸ್ವರ್ಮಹಾದಿಷು ।
ಸೌಭಾಗ್ಯಂ ಸರ್ವಲೋಕಾನಾಮೇಕಸ್ಥಮಭವತ್ತದಾ ॥ ೨ ॥

ತಚ್ಚ ವೈಕುಂಠಮಾಸಾದ್ಯ ವಿಷ್ಣೋರ್ವಕ್ಷಸ್ಥಲೇ ಸ್ಥಿತಂ ।
ತತಃ ಕಾಲೇನ ಮಹತಾ ಪುನಃ ಸರ್ಗವಿಧೌ ನೃಪ ॥ ೩ ॥

---

## ಇಪ್ಪತ್ತೈದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಧರ್ಮರಾಜನೇ ! ಪೌರಾಣಿಕರ ಅವಗಾಹನೆಗೆ ಬಂದಿರತಕ್ಕದ್ದಾಗಿ ಸರ್ವಾಭೀಷ್ಟಫಲಗಳನ್ನು ಕೊಡುವ “ ಸೌಭಾಗ್ಯಶಯನ ಎಂಬ ಮತ್ತೊಂದು ವ್ರತವನ್ನು ಹೇಳುತ್ತೇನೆ ಕೇಳು.

೨. ಪೂರ್ವಕಾಲದಲ್ಲಿ ಭೂಲೋಕ, ಭುವರ್ಲೋಕ, ಮಹೋಲೋಕಾದಿ ಸಪ್ತಲೋಕಗಳೂ ಕಾಲಾಗ್ನಿಯಿಂದ ಸುಡಲ್ಪಡುತ್ತಿರಲು ಸರ್ವಲೋಕಗಳ ಸೌಭಾಗ್ಯವೂ ಆಗ ಗುಂಪಾಗಿಸೇರಿತು.

೩. ಅಯ್ಯಾ ರಾಜೇಂದ್ರನೇ ! ಹೀಗೆ ಆ ಸರ್ವಲೋಕಸೌಭಾಗ್ಯವೂ ಒಟ್ಟಿಗೆಸೇರಿ ವೈಕುಂಠಕ್ಕೆಹೋಗಿ ಶ್ರೀ ಮಹಾವಿಷ್ಣುವಿನ ವಕ್ಷಸ್ಥಲದಲ್ಲಿ ನೆಲೆಯಾಗಿ ನಿಂತಿತು. ಅನಂತರ ಬಹುಕಾಲ ಕಳೆಯಲು ಪುನಃ ಸೃಷ್ಟ್ಯಾರಂಭವಾಗಬೇಕಾಯಿತಷ್ಟೆ ?

ಅಹಂಕಾರಾವೃತೇ ಲೋಕೇ ಪ್ರಧಾನಪುರುಷಾನ್ವಿತೇ ।
ಸ್ಪರ್ಧಾಯಾಂ ಚ ಪ್ರವೃತ್ತಾಯಾಂ ಕಮಲಾಸನಕೃಷ್ಣಯೋಃ ॥ ೪ ॥

ಪಿಂಗಾಕಾರಾ ಸಮುದ್ಭೂತಾ ಜ್ವಾಲಾ ವಕ್ಷಸ್ಥಲೀ ತದಾ ।
ತಯಾಭಿತಪ್ತಸ್ಯ ಹರೇರ್ವಕ್ಷಸಸ್ತದ್ವಿನಿಃಸೃತಂ ॥ ೫ ॥

ಯದ್ವಕ್ಷಸ್ಥಲಮಾಶ್ರಿತ್ಯ ವಿಷ್ಣೋಃ ಸೌಭಾಗ್ಯಮಾಸ್ಥಿತಂ ।
ರಸರೂಪತಯಾ ಯಾವತ್ಪ್ರಾಪ್ನೋತಿ ವಸುಧಾತಲಂ ॥ ೬ ॥

ಉತ್ಕ್ಷಿಪ್ತಮಂತರಿಕ್ಷಸ್ಥಂ ಬ್ರಹ್ಮಪುತ್ರೇಣ ಧೀಮತಾ ।
ದಕ್ಷೇಣ ಪೀತಮಾತ್ರಂ ತು ರೂಪಲಾವಣ್ಯಕಾರಣಂ ॥ ೭ ॥

---

೪. ಆ ವೇಳೆಯಲ್ಲಿ ಈ ಲೋಕವು ಉದ್ಬುದ್ಧಾಹಂಕಾರವುಳ್ಳದ್ದಾಗಿ, ಪ್ರಕೃತ್ತಿ ಮತ್ತು ಪುರುಷ ಇವರಿಂದಮಾತ್ರ ಕೂಡಿರುವಾಗ ಬ್ರಹ್ಮ ಮತ್ತು ಶ್ರೀ ಮಹಾವಿಷ್ಣು ಇವರಿಗೆ ಅನ್ಯೋನ್ಯ ಸ್ಪರ್ಧೆಯು ಹುಟ್ಟಿತ್ತು.

೫. ಹೀಗಿರುವಾಗ ಪೂರ್ವದಲ್ಲಿ ವಿಷ್ಣುವಕ್ಷಸ್ಥಳವನ್ನಾಶ್ರಯಿಸಿ ಅಲ್ಲಿ ವಾಸವಾಗಿರುವ ಸೌಭಾಗ್ಯದೇವತೆಯು (ಅಂದರೆ ಸೃಷ್ಟಿಹೇತುವಾದ ಮಾಯೆಯು) ಪಿಂಗಲವರ್ಣದ ಜ್ವಾಲೆಯುಳ್ಳದ್ದಾಗಿ ಉದ್ಭೂತಾವಸ್ಥೆಗೆ ಬಂದಿತು. ಆ ಸೌಭಾಗ್ಯಜ್ವಾಲೆಯಿಂದ ಅತಿ ಸಂತಾಪಹೊಂದಿದ ವಿಷ್ಣುವಿನ ವಕ್ಷಸ್ಥಳದಿಂದ ಅದು ಹೊರಕ್ಕೆ ಹೊರಟಿತು.

೬. ಆ ವಿಷ್ಣುವಕ್ಷಸ್ಥಳವನ್ನಾಶ್ರಯಿಸಿದ್ದ ಸೌಭಾಗ್ಯವು ಅಲ್ಲಿಂದ ಹೊರಟು ಜಲರೂಪವಾಗಿ ಪರಿಣಮಿಸಿ ಭೂಲೋಕಕ್ಕೆ ಬರಬೇಕೆಂದಿರುವಾಗ,

೭. ಬುದ್ಧಿಶಾಲಿಯೂ ಬ್ರಹ್ಮಪುತ್ರನೂ ಆದ ದಕ್ಷ (ಪ್ರಜಾಪತಿ) ಬ್ರಹ್ಮನು ಅದನ್ನು ಅಷ್ಟರಲ್ಲೇ ಅಂತರಿಕ್ಷದಲ್ಲಿ ಬರುತ್ತಿರುವಾಗಲೇ ಕೈಯಿಂದ ಎತ್ತಿ ಪಾನಮಾಡಿದನು. ಈರೀತಿ ಪಾನಮಾಡಲ್ಪಟ್ಟ ಆ ದ್ರವವಸ್ತುವು ಆ ದಕ್ಷ ಪ್ರಜಾಪತಿಯ ಶರೀರದ ಸೌಂದರ್ಯ ಮತ್ತು ಲಾವಣ್ಯಕ್ಕೆ ಕಾರಣವಾಯಿತು.

**ಬಲಂ ತೇಜೋ ಮಹಜ್ಞಾತಂ ದಕ್ಷಸ್ಯ ಪರಮೇಷ್ಠಿನಃ ।**
**ಶೇಷಂ ಯದಪತದ್ಭೂಮಾವಷ್ಟಧಾ ತದಜಾಯತ ॥ ೮ ॥**

**ಇಕ್ಷವಸ್ತವರಾಜಂ ಚ ನಿಷ್ಪಾವಾಜಾಜಿಧಾನ್ಯಕಂ ।**
**ವಿಕಾರವಚ್ಚ ಗೋಕ್ಷೀರಂ ಕುಸುಂಭಂ ಕುಂಕುಮಂ ತಥಾ ।**
**ಲವಣಂ ಚಾಷ್ಟಮಂ ತತ್ರ ಸೌಭಾಗ್ಯಾಷ್ಟಕಮುಚ್ಯತೇ ॥ ೯ ॥**

**ಪೀತಂ ಯದ್ಬ್ರಹ್ಮಪುತ್ರೇಣ ಯೋಗಜ್ಞಾನವಿದಾ ತಥಾ ।**
**ದುಹಿತಾಸ್ಯಾ ಭವತ್ತಸ್ಮಾದ್ಯಾ ಸತೀತ್ಯಭಿಧೀಯತೇ ।**
**ಲೋಕಾನತೀತ್ಯ ಲಾಲಿತ್ಯಾಲ್ಲಲಿತಾ ತೇನ ಚೋಚ್ಯತೇ ॥ ೧೦ ॥**

**ತ್ರೈಲೋಕ್ಯಸುಂದರೀಮೇನಾಮುಪಯೇಮೇ ಪಿನಾಕಧೃಕ್ ।**
**ತ್ರಿವಿಶ್ವಸೌಭಾಗ್ಯಮಯೀ ಭುಕ್ತಿಮುಕ್ತಿಫಲಪ್ರದಾ ॥ ೧೧ ॥**

---

೮. ಅಲ್ಲಿಯೆ ಬಲ ಮತ್ತು ತೇಜೋರೂಪವಾಗಿಯೂ ಪರಿಣಮಿಸಿತು. ಅದನ್ನು ದಕ್ಷನು ಪಾನಮಾಡುವಾಗ ಅವನ ಕೈಗೆ ಸಿಕ್ಕದೆ ಭೂಮಿಯಲ್ಲಿ ಪತಿತವಾದ ಪೀತಶೇಷವಾದ ಆ ರಸವು ಎಂಟುಪಾಲಾಗಿ ಪರಿಣಮಿಸಿತು.

೯. ಆ ಎಂಟುವಿಭಾಗಗಳೇ ಕಬ್ಬು, ತವರಾಜ, ಅವರೆ, ಜೀರಿಗೆ, ವಿಕಾರ ಸ್ವಭಾವವುಳ್ಳ ಗೋಕ್ಷೀರ, ಕುಸುಂಭೆ, ಪುಷ್ಪಕುಂಕುಮ, ಮತ್ತು ಲವಣ ಎಂಬ ದಾಗಿ " ಸೌಭಾಗ್ಯಾಷ್ಟಕ " ವೆಂಬ ನಾಮಧೇಯದಿಂದ ಹೇಳಲ್ಪಡುವುದು.

೧೦. ಸಮಾಧಿಜ್ಞಾನನಿಷ್ಠನಾದ ದಕ್ಷಪ್ರಜಾಪತಿಬ್ರಹ್ಮಪುತ್ರನು ಪಾನ ಮಾಡಿದ ಸೌಭಾಗ್ಯರಸದಿಂದ ಅವನಿಗೆ " ಸತೀ " ಎಂಬ ಪ್ರಸಿದ್ಧಳಾದ ಮಗಳು ಜನಿಸಿದಳು. ಅವಳಲ್ಲಿ ಲೋಕಾತಿಶಯವಾದ ಸೌಂದರ್ಯವಿದ್ದುದರಿಂದ ಲಾಲಿತ್ಯ ಗುಣವನ್ನನುಸರಿಸಿ " ಲಲಿತಾ " ಎಂಬ ಗೌಣನಾಮಧೇಯವೂ ಉಂಟಾ ಯಿತು.

೧೧. ತ್ರಿಲೋಕಸೌಭಾಗ್ಯಸ್ವರೂಪಿಣಿಯೂ ಭುಕ್ತಿ ಮತ್ತು ಮುಕ್ತಿರೂಪ ವಾದ ಫಲವನ್ನು ಕೊಡುವವಳೂ ಆದ ಈ ತ್ರಿಲೋಕಸುಂದರಿಯನ್ನು ಪಿನಾಕ ಪಾಣಿಯಾದ ಶ್ರೀ ಪರಮೇಶ್ವರನು ಪಾಣಿಗ್ರಹಣಮಾಡಿಕೊಂಡನು.

ಆರಾಧ್ಯ ತಾಮುಮಾಂ ಭಕ್ತ್ಯಾ ಸ್ತ್ರೀ ರಾಜನ್ಕಿನ್ನ ವಿಂದತಿ ॥ ೧೨ ॥

॥ ಯುಧಿಷ್ಠಿರ ಉವಾಚ ॥

ಕಥಮಾರಾಧನಂ ತಸ್ಯಾ ಜಗದ್ಧಾತ್ರ್ಯಾ ಜನಾರ್ದನ ।
ಯದ್ವಿಧಾನಂ ಚ ತತ್ಸರ್ವಂ ಜಗನ್ನಾಥ ವದಸ್ವ ಮೇ ॥ ೧೩ ॥

॥ ಶ್ರೀ ಕೃಷ್ಣ ಉವಾಚ ॥

ವಸಂತಮಾಸಮಾಸಾದ್ಯ ತೃತೀಯಾಯಾಂ ಯುಧಿಷ್ಠಿರ ।
ಶುಕ್ಲಪಕ್ಷಸ್ಯ ಪೂರ್ವಾಹ್ಣೇ ತಿಲೈಃ ಸ್ನಾನಂ ಸಮಾಚರೇತ್ ॥ ೧೪ ॥

ತಸ್ಮಿನ್ನಹನಿ ಸಾ ದೇವೀ ಕಿಲ ವಿಶ್ವಾತ್ಮನೋ ಸತೀ ।
ಪಾಣಿಗ್ರಹಣಕೈರ್ಮಂತ್ರೈರುದ್ವಾಹ್ಯಾ ವರವರ್ಣಿನೀ ॥ ೧೫ ॥

---

೧೨. ಅಯ್ಯಾ ರಾಜನೇ ! ಇಂಥ ಉಮಾದೇವಿಯನ್ನು ಭಕ್ತಿ ಶ್ರದ್ಧೆಯಿಂದಾರಾಧಿಸಿದ ಸ್ತ್ರೀಯು ಯಾವ ಫಲವನ್ನು ತಾನೆ ಹೊಂದಲಾರಳು ? ಅವಳಿಗೆ ಸರ್ವ ಇಷ್ಟಾರ್ಥ ಸಿದ್ಧಿಯೂ ಆಗುವುದೆಂಬುದರಲ್ಲಿ ಸಂದೇಹವುಂಟೇ.

೧೩. ಯುಧಿಷ್ಠಿರನು ಹೇಳುತ್ತಾನೆ—"ಪೂಜ್ಯನಾದ ಜನಾರ್ದನನೇ ! ಜಗದಂಬೆಯಾದ ಆ ಪಾರ್ವತಿಯ ಆರಾಧನ ಕ್ರಮವೇನು ? ಅಯ್ಯಾ ಜಗತ್ಪತಿಯೇ ! ಅವಳ ಆರಾಧನಕ್ಕೆ ಯಾವ ವಿಧಾನ ಉಕ್ತವಾಗಿದೆ; ಇತ್ಯಾದಿ ತದಾರಾಧನ ವಿಷಯಗಳನ್ನೆಲ್ಲಾ ನನಗೆ ಹೇಳು" ಎಂದನು.

೧೪. ಶ್ರೀ ಕೃಷ್ಣನು ಹೇಳುತ್ತಾನೆ—ರಾಜೇಂದ್ರನೇ ! ವಸಂತಋತುವಿನ ಚೈತ್ರಮಾಸದ ಶುಕ್ಲಪಕ್ಷದ ತೃತೀಯಾತಿಥಿಯ ಪೂರ್ವಾಹ್ನದ ವ್ರತಿಯು ತೈಲಾಭ್ಯಂಗನ ಸ್ನಾನಮಾಡಬೇಕು.

೧೫. ಅನಂತರ ಆ ದಿನ ಪಾಣಿಗ್ರಹಣ ಮಂತ್ರಗಳನ್ನು ಹೇಳಿ ಉತ್ತಮ ನಾರೀಶಿರೋಮಣಿಯಾದ ಆ ಸತೀದೇವಿಗೂ ಜಗತ್ಪತಿಯಾದ ಶ್ರೀ ಪರಮೇಶ್ವರನಿಗೂ ವಿವಾಹೋತ್ಸವವನ್ನು ನಡೆಸಬೇಕು.

**ತಯಾ ಸಹೈವ ದೇವೇಶಂ ತೃತೀಯಾಯಾಮಥಾರ್ಚಯೇತ್ ।**
**ಫಲೈರ್ನಾನಾವಿಧೈರ್ಧೂಪದೀಪನೈವೇದ್ಯಸಂಯುತೈಃ ॥ ೧೬ ॥**

**ಪಂಚಗವ್ಯೇನಾನುಮಾಸಂ ತಥಾ ಗಂಧೋದಕೇನ ಚ ।**
**ಸ್ನಪಯಿತ್ವಾರ್ಚಯೇದ್ಗೌರೀಮಿಂದುಶೇಖರಸಂಯುತಾಂ ॥ ೧೭ ॥**

**ಪಾಟಲಾಂ ಶಂಭುಸಹಿತಾಂ ಪಾದಯೋಸ್ತು ಪ್ರಪೂಜಯೇತ್ ।**
**ತ್ರಿಯುಗಾಂ ಶಿವಸಂಯುಕ್ತಾಂ ಗುಲ್ಫಯೋರುಭಯೋರಪಿ ॥ ೧೮ ॥**

**ಭದ್ರೇಶ್ವರೇಣ ಸಹಿತಾಂ ವಿಜಯಾಂ ಜಾನುನೋರ್ಯುಗೇ ।**
**ಈಶಾನೀಂ ಹರಿಕೇಶಂ ಚ ಕಟ್ಯಾಂ ಸಂಪೂಜಯೇದ್ಬುಧಃ ॥ ೧೯ ॥**

೧೬. ಈ ತೃತೀಯಾ ದಿನದಲ್ಲಿ ಸತೀಸಮೇತನಾದ ಶ್ರೀ ಪರಮೇಶ್ವರನಿಗೆ ನಾನಾವಿಧ ಫಲ, ಧೂಪ, ದೀಪ, ನೈವೇದ್ಯಾದಿಗಳನ್ನು ಸಮರ್ಪಣೆಮಾಡಿ ಪೂಜೆ ಮಾಡಬೇಕು.

೧೭. ಚಂದ್ರಶೇಖರ ಸಹಿತನಾದ ಆ ಶ್ರೀಗೌರಿಗೆ ಚೈತ್ರಾದಿ ಪ್ರತಿಮಾಸ ಗಳಲ್ಲೂ ಮೊದಲು ಪಂಚಗವ್ಯಾಭಿಷೇಕವನ್ನು ಮಾಡಿ ಅನಂತರ ಗಂಧೋದಕಾ ಭಿಷೇಕವನ್ನು ಮಾಡಬೇಕು.

೧೮. ಶಂಭು ಸಹಿತಳಾದ ಪಾಟಲೆ ಎಂಬ ನಾಮವನ್ನು ಹೇಳಿ ದೇವಿಯ ಪಾದಗಳನ್ನು ಪೂಜಿಸಬೇಕು. ಅಂದರೆ—ಓಂ ಶ್ರೀ ಶಂಭು ಸಹಿತಾಯೈ ಪಾಟಲಾಯೈ ನಮಃ ಪಾದೌಪೂಜಯಾಮಿ ಎಂದು ಹೇಳಿ ಪಾದಗಳಲ್ಲಿ ಅರ್ಚಿಸ ಬೇಕು. ಮತ್ತೆ ಓಂ ಶಿವಯುಕ್ತಾಯೈ ತ್ರಿಯುಗಾಯೈನಮಃ ಗುಲ್ಫೌ ಪೂಜ ಯಾಮಿ ಎಂದು ಹೇಳಿ ಪಾದಗಳ ಹರಡುಗಳನ್ನು ಪೂಜಿಸಬೇಕು.

೧೯. ಓಂ ಬೃಹದೇಶ್ವರ ಸಹಿತಾಯೈ ವಿಜಯಾಯೈ ನಮಃ ಎಂದು ಹೇಳಿ ಎರಡು ಮೊಣಕಾಲುಗಳನ್ನರ್ಚಿಸಬೇಕು. ಓಂ ಹರಿಕೇಶಸಹಿತಾಯೈಃ ಈಶಾನ್ಯೈ ನಮಃ ಎಂದು ಹೇಳಿ ದೇವಿಯ ಕಟಿಪ್ರದೇಶವನ್ನು ಪೂಜಿಸಬೇಕು.

ಕೋಟಿನೀಂ ಶೂಲಿನಂ ಕುಕ್ಷೌ ಮಂಗಲಾಂ ಶರ್ವಸಂಯುತಾಂ ।
ಉದರೇ ಪೂಜಯೇದ್ರುದ್ರಂ ಜನ್ನುಮಾಂ ರುದ್ರಂ ಕುಚದ್ವಯೇ ॥ ೨೦ ॥

ಅನಂತಾಂ ತ್ರಿಪುರಘ್ನಂ ಚ ಪೂಜಯೇತ್ಕರಸಂಪುಟೇ ।
ಕಂಠೇ ಭವಂ ಭವಾನೀಂ ಚ ಮುಖೇ ಗೌರೀಂ ಹರಂ ತಥಾ ॥ ೨೧ ॥

ಸರ್ವಾತ್ಮನಾ ಚ ಸಹಿತಾಂ ಲಲಿತಾಂ ಮಸ್ತಕೋಪರಿ ।
ಓಂಕಾರ ಪೂರ್ವಕೈರೇತೈರ್ನಮಸ್ಕಾರಾಂತಯೋಜಿತೈಃ ।
ಪೂಜಯೇದ್ಭಕ್ತಿಸಹಿತೋ ಗಂಧಮಾಲ್ಯಾನುಲೇಪನೈಃ ॥ ೨೨ ॥

ಏವಮಭ್ಯರ್ಚ್ಯ ವಿಧಿವತ್ಸೌಭಾಗ್ಯಾಷ್ಟಕಮಗ್ರತಃ ।
ಸ್ಥಾಪಯೇತ್ಸಿದ್ಧನಿಷ್ಪಾವಾನ್ಕುಸುಂಭಂ ಕ್ಷೀರಜೀರಕಂ ॥ ೨೩ ॥

---

೨೦. ಹೀಗೆಯೇ ಓಂ ಶೂಲಿಸಹಿತಾಯೈ ಕೋಟನ್ಯೈ ನಮಃ ಎಂದು ಹೇಳಿ ಕುಕ್ಷಿಯಲ್ಲೂ, ಓಂ ಶರ್ವಸಂಯುತಾಯೈ ಮಂಗಲಾಯೈ ನಮಃ ಎಂದು ಹೇಳಿ ಉದರಪ್ರದೇಶದಲ್ಲೂ, ಮತ್ತು ಓಂ ರುದ್ರಸಹಿತಾಯೈ ಉಮಾಯೈ ನಮಃ ಎಂದು ಹೇಳಿ ಸ್ತನದ್ವಯಗಳಲ್ಲೂ, ಪೂಜಿಸಬೇಕು.

೨೧. ಓಂ ತ್ರಿಪುರಘ್ನಸಹಿತಾಯೈ ಅನಂತಾಯೈ ನಮಃ ಎಂದು ಹೇಳಿ ದೇವಿಯ ಕರಸಂಪುಟವನ್ನೂ, ಓಂ ಭವಸಹಿತಾಯೈ ಭವಾನ್ಯೈ ನಮಃ ಎಂದು ಹೇಳಿ ಕಂಠಪ್ರದೇಶವನ್ನೂ ಮತ್ತು ಓಂ ಹರಸಹಿತಾಯೈ ಗೌರ್ಯೈ ನಮಃ ಎಂದು ಹೇಳಿ ಮುಖವನ್ನೂ ಅರ್ಚನೆ ಮಾಡಬೇಕು.

೨೨. ಓಂ ಸರ್ವಾತ್ಮ ಸಹಿತಾಯೈ ಲಲಿತಾಯೈ ನಮಃ ಎಂದು ಹೇಳಿ ಶಿರಸ್ಸಿನಲ್ಲಿ ಅರ್ಚಿಸಬೇಕು. ಈ ರೀತಿ ಓಂಕಾರ ಪೂರ್ವಕವಾಗಿಯೂ ಕೊನೆಯಲ್ಲಿ ನಮಃ ಶಬ್ದ ಸಹಿತವಾಗಿಯೂ ಹಿಂದೆ ಹೇಳಿದ ನಾಮಗಳನ್ನುಚ್ಚರಿಸಿ ಅರ್ಚಿಸುವುದಲ್ಲದೆ ಭಕ್ತಿಪೂರ್ವಕವಾಗಿ ಗಂಧ ಮಾಲ್ಯಾನುಲೇಪನಗಳಿಂದಲೂ ಅರ್ಚಿಸಬೇಕು.

೨೩-೨೪. ಈರೀತಿ ಶಾಸ್ತ್ರೋಕ್ತ ರೀತಿಯಲ್ಲಿ ಅರ್ಚನೆಮಾಡಿ ದೇವಿಯ ಇದಿರು ಭಾಗದಲ್ಲಿ ಹಸಿಯ ಅವರೆ, ಕುಸುಂಭ ಬಣ್ಣದ ಹೂವು, ಹಾಲು, ಜೀರಿಗೆ,

ತವರಾಜೇಕ್ಷುಲವಣಂ ಕುಂಕುಮಂ ಚ ತಥಾಷ್ಟಮಂ ।
ದತ್ತಂ ಸೌಭಾಗ್ಯದಂ ಯಸ್ಮಾತ್ಸೌಭಾಗ್ಯಾಷ್ಟಕಮುಚ್ಯತೇ　　॥ ೨೪ ॥

ಏವಂ ನಿವೇದ್ಯ ತತ್ಸರ್ವಂ ಶಿವಯೋಃ ಪ್ರೀಯತಾಮಿತಿ ।
ಚೈತ್ರೇ ಶೃಂಗೋದಕಂ ಪ್ರಾಶ್ಯ ಸ್ವಪ್ಯಾದ್ಭೂಮಾವರಿಂದಮ　　॥ ೨೫ ॥

ತತಃ ಪ್ರಾತಃ ಸಮುತ್ಥಾಯ ಕೃತಪ್ರಾಣಜಯಃ ಶುಚಿಃ ।
ಸಂಪೂಜ್ಯ ದ್ವಿಜದಾಂಪತ್ಯಂ ಮಾಲ್ಯವಸ್ತ್ರವಿಭೂಷಣೈಃ ।
ಸೌಭಾಗ್ಯಾಷ್ಟಕಸಂಯುಕ್ತಂ ಸೌವರ್ಣಂ ಚರಣದ್ವಯಂ　　॥ ೨೬ ॥

ಪ್ರೀಯತಾಮತ್ರ ಲಲಿತಾ ಬ್ರಾಹ್ಮಣಾಯ ನಿವೇದಯೇತ್ ।
ಏವಂ ಸಂವತ್ಸರಂ ಯಾವತ್ತೃತೀಯಾಯಾಂ ಸದಾ ನೃಪ　　॥ ೨೭ ॥

---

ತವರಾಜ, ಕಬ್ಬು, ಉಪ್ಪು ಮತ್ತು ಕುಂಕುಮ ಎಂಬ ಸೌಭಾಗ್ಯಾಷ್ಟಕವನ್ನೂ ಇರಿಸಿ ನಿವೇದನ ಮಾಡಬೇಕು. ಈ ಎಂಟು ಪದಾರ್ಥಗಳನ್ನು ದೇವಿಗೆ ಸಮರ್ಪಣೆ ಮಾಡುವುದರಿಂದ ಸೌಭಾಗ್ಯಲಾಭವಾಗುತ್ತದೆಯಾದುದರಿಂದ ಇದಕ್ಕೆ ಸೌಭಾಗ್ಯಾಷ್ಟಕವೆಂಬ ನಾಮವುಂಟಾಯಿತು.

೨೫. ಶತ್ರುಶಿಕ್ಷಕನಾದ ಧರ್ಮರಾಜನೇ! ಶ್ರೀ ಉಮಾಮಹೇಶ್ವರರು ಸುಪ್ರೀತರಾಗಲೆಂಬ ದೃಢಭಾವನೆಯಿಂದ ಈ ರೀತಿಯಾಗಿ ಈ ಎಲ್ಲವನ್ನೂ ಸಮರ್ಪಿಸಿ ಚೈತ್ರಮಾಸವಲ್ಲಿ ಗೋಶೃಂಗೋದಕವನ್ನು ಪ್ರಾಶನಮಾಡಿ ರಾತ್ರಿಯಲ್ಲಿ ಭೂಶಯನಮಾಡಬೇಕು.

೨೬–೨೭. ಓ ರಾಜನೇ! ಅನಂತರ ಮರುದಿನ ಪ್ರಾತಃಕಾಲದಲ್ಲೆದ್ದು ಜಿತೇಂದ್ರಿಯನಾಗಿ ಸ್ನಾನಾದಿಗಳಿಂದ ಶುಚಿಯಾಗಿ, ಮಾಲ್ಯ ವಸ್ತ್ರ ಮತ್ತು ಭೂಷಣ ಇವುಗಳಿಂದ ದಂಪತಿಗಳನ್ನು ಪೂಜಿಸಿ, ಭಂಗಾರದಿಂದ ಮಾಡಿಸಿದ ದೇವೀ ಪಾದದ್ವಯಗಳನ್ನು ಹಿಂದೆ ಹೇಳಿದ ಸೌಭಾಗ್ಯಾಷ್ಟಕ ಸಹಿತವಾಗಿ ಶ್ರೀ ಲಲಿತಾದೇವಿಯು ಸುಪ್ರೀತಳಾಗಲಿ ಎಂಬ ಸದುದ್ದೇಶದಿಂದ ಬ್ರಾಹ್ಮಣನಿಗೆ ದಾನಮಾಡಬೇಕು. ಈ ರೀತಿ ಒಂದು ವರ್ಷದವರೆಗೆ ಪ್ರತಿಮಾಸದಲ್ಲೂ ತೃತೀಯಾ ತಿಥಿಯಲ್ಲಿ ದೇವೀ ಪೂಜೆಯನ್ನು ಮಾಡಬೇಕು.

ಪ್ರಾಶನೇ ನಾಮಮಂತ್ರೇ ಚ ವಿಶೇಷೋಽಯಂ ನಿಬೋಧ ಮೇ ।
ಗೋಶೃಂಗೋದಕಮಾದ್ಯೇ ಸ್ಯಾದ್ವೈಶಾಖೇ ಗೋಮಯಂ ಪುನಃ ॥ ೨೮ ॥

ಜ್ಯೇಷ್ಠೇ ಮಂದಾರಪುಷ್ಪಂ ಚ ಬಿಲ್ವಪತ್ರಂ ಶುಚೌ ಸ್ಮೃತಂ ।
ಶ್ರಾವಣೇ ದಧಿ ಸಂಪ್ರಾಶ್ಯಂ ನಭಸ್ಯೇ ಚ ಕುಶೋದಕಂ ॥ ೨೯ ॥

ಕ್ಷೀರಮಾಶ್ವಯುಜೇ ತದ್ವತ್ಕಾರ್ತಿಕೇ ಪೃಷದಾಜ್ಯಕಂ ।
ಮೃಗೋತ್ತಮಾಂಗೇ ಗೋಮೂತ್ರಂ ಪೌಷೇ ಸಂಪ್ರಾಶಯೇದ್ಘೃತಂ ॥

ಮಾಘೇ ಕೃಷ್ಣತಿಲಾಂಸ್ತದ್ವತ್ಪಂಚಗವ್ಯಂ ಚ ಫಾಲ್ಗುನೇ ।
ಲಲಿತಾ ವಿಜಯಾ ಭದ್ರಾ ಭವಾನೀ ಕುಮುದಾಶ್ರಿತಾ ॥ ೩೧ ॥

---

೨೮. ಪ್ರಾಶನದ್ರವ್ಯವೂ ನಾಮ ಮಂತ್ರವೂ ಪ್ರತಿ ಮಾಸಕ್ಕೂ ಬೇರೆ ಬೇರೆಯಾಗಿವೆ. ಅದನ್ನು ಹೇಳುವೆನು.ಕೇಳು. ಚೈತ್ರ ಮಾಸದಲ್ಲಿ ಗೋಶೃಂಗೋದಕವನ್ನು ಪ್ರಾಶನಮಾಡಬೇಕು. ಮತ್ತು ವೈಶಾಖದಲ್ಲಿ ಗೋಮಯವೇ ಪ್ರಾಶನ ದ್ರವ್ಯವು.

೨೯. ಜ್ಯೇಷ್ಠಮಾಸದಲ್ಲಿ ಮಂದಾರಪುಷ್ಪ ಪ್ರಾಶನವೂ, ಆಷಾಢದಲ್ಲಿ ಬಿಲ್ವ ಪತ್ರ ಪ್ರಾಶನವೂ ಹೇಳಲ್ಪಟ್ಟಿದೆ. ಮತ್ತು ಶ್ರಾವಣದಲ್ಲಿ ದಧಿ ಪ್ರಾಶನ ಮಾಡಬೇಕು. ಭಾದ್ರಪದ ಮಾಸದಲ್ಲಿ ದರ್ಭೋದಕವನ್ನು ಪ್ರಾಶನಮಾಡಬೇಕು.

೩೦. ಆಶ್ವಯುಜ ಮಾಸದಲ್ಲಿ ಹಾಲೂ, ಕಾರ್ತೀಕದಲ್ಲಿ ದಧಿಮಿಶ್ರ ಘೃತವೂ, ಮಾರ್ಗಶೀರ್ಷದಲ್ಲಿ ಗೋಮೂತ್ರವೂ, ಪುಷ್ಯದಲ್ಲಿ ಘೃತವೂ ನಿಯಮ ಪ್ರಕಾರ ಪ್ರಾಶನೆಯ ದ್ರವ್ಯಗಳಾಗಿವೆ.

೩೧-೩೨. ಈ ರೀತಿಯಲ್ಲಿಯೇ ಮಾಘದಲ್ಲಿ ಕರಿಯ ಎಳ್ಳನ್ನೂ, ಫಾಲ್ಗುಣ ಮಾಸದಲ್ಲಿ ಪಂಚಗವ್ಯವನ್ನೂ ಪ್ರಾಶನಮಾಡಬೇಕು. ಮತ್ತು ಲಲಿತಾ, ವಿಜಯಾ, ಭದ್ರಾ, ಭವಾನೀ, ಕುಮುದಾ, ಶ್ರಿತಾ, ವಾಸುದೇವೀ, ಗೌರೀ, ಮಂಗಲಾ, ಕಮಲಾ, ಸತೀ ಮತ್ತು ಉಮಾ ಎಂಬ ಈ ಹನ್ನೆರಡು ನಾಮಗಳೂ, ಚೈತ್ರಾದಿ ಹನ್ನೆರಡು ತಿಂಗಳುಗಳಲ್ಲಿ ಕ್ರಮವಾಗಿ ಹೇಳಬೇಕಾದ ವಿಶೇಷ ನಾಮಗಳೆಂದು

ವಾಸುದೇವೀ ತಥಾ ಗೌರೀ ಮಂಗಲಾ ಕಮಲಾ ಸತೀ ।
ಉಮಾ ಚ ದಾನಕಾಲೇ ತು ಪ್ರೀಯತಾಮಿತಿ ಕೀರ್ತಯೇತ್ ॥ ೩೨ ॥

ಮಲ್ಲಿಕಾಶೋಕಕಮಲ ಕದಂಬೋತ್ಪಲ ಮಾಲತೀ ।
ಕುಡ್ಮಲಂ ಕರವೀರಂ ಚ ಬಾಣಮಮ್ಲಾನಕುಂಕುಮಂ ।
ಸಿಂದುವಾರಂ ಚ ಮಾಸೇಷು ಸರ್ವೇಷು ಕ್ರಮಶಃ ಸ್ಮೃತಂ ॥ ೩೩ ॥

ಜಪಾ ಕುಸುಂಭಕುಸುಮಂ ಮಾಲತೀ ಶತಪತ್ರಿಕಾ ।
ಯಥಾಲಾಭಂ ಪ್ರದೇಯಾನಿ ಕರವೀರಂ ಚ ಸರ್ವದಾ ॥ ೩೪ ॥

ಏವಂ ಸಂವತ್ಸರಂ ಯಾವದುಪೋಷ್ಯ ವಿಧಿವನ್ನರಃ ।
ಸ್ತ್ರೀ ನಕ್ತೇ ತು ಕುಮಾರೀ ವಾ ಶಿವಾಮಭ್ಯರ್ಚ್ಯ ಶಕ್ತಿತಃ ।
ವ್ರತಾಂತೇ ಶಯನಂ ದದ್ಯಾತ್ಸರ್ವೋಪಸ್ಕರಸಂಯುತಂ ॥ ೩೫ ॥

---

ತಿಳಿಯಬೇಕು. ಆಯಾಯಾ ತಿಂಗಳುಗಳಲ್ಲಿ ದಾನಮಾಡುವಾಗ ಈ ನಾಮ ವಿಶೇಷಗಳನ್ನೇ ಹೇಳಿ "ಲಲಿತಾ ಪ್ರೀಯತಾಂ" ಇತ್ಯಾದಿ ಕ್ರಮಗಳಿಂದ ಉಚ್ಚರಿಸಿ ದಾನಕೊಡಬೇಕು.

೩೩. ಚೈತ್ರಾದಿ ಮಾಸಗಳಲ್ಲಿ ಕ್ರಮವಾಗಿ ಮಲ್ಲಿಗೆ, ಅಶೋಕ, ಕಮಲ, ಕಡಹದ ಹೂವು, ನೈದಿಲೆ, ಇರುವಂತಿಗೆ, ಕುಡ್ಮಲ, ಕರವೀರ, ಗೋರಂಟೆ, ದೊಡ್ಡಗೋರಂಟೆ, ಕುಂಕುಮಕೇಸರಿ, ಸಿಂಧುವಾರ ಇತ್ಯಾದಿ ಪುಷ್ಪಗಳನ್ನು ಪೂಜೆಗೆ ಉಪಯೋಗಿಸಬೇಕು.

೩೪. ದಾಸವಾಳ, ಕುಸುಂಭಪುಷ್ಪ, ಮಲ್ಲಿಗೆ, ಕಮಲ, ಕರವೀರ ಈ ಪುಷ್ಪಗಳನ್ನು ಹಿಂದೆ ಹೇಳಿದ ಪುಷ್ಪಗಳು ಲಭ್ಯವಾಗದ ಪ್ರಸಂಗದಲ್ಲಿ ಯಥಾ ಸೌಕರ್ಯದಿಂದ ಯಾವಾಗಲೂ ಪೂಜೆಗೆ ಉಪಯೋಗಿಸಬಹುದು.

೩೫. ಈರೀತಿ ವಿಧಿಪ್ರಕಾರವಾಗಿ ಒಂದುವರ್ಷದವರೆಗೆ ಪುರುಷರು ಸ್ತ್ರೀಯರು ಅಥವಾ ಅವಿವಾಹಿತೆಯಾದ ಕನ್ನಿಕೆ ಇವರು ಹಗಲು ಉಪವಾಸವಿದ್ದು ರಾತ್ರಿಯಲ್ಲಿ ಶ್ರೀ ದೇವಿಯ ಅರ್ಚನೆಯನ್ನು ಮಾಡಿ, ವ್ರತಾಂತ್ಯಕಾಲದಲ್ಲಿ ತನ್ನ ಶಕ್ತಿಯನ್ನನುಸರಿಸಿ ಹಾಸಿಗೆ, ದಿಂಬು, ಇತ್ಯಾದಿ ಸಮಸ್ತ ಉಪಕರಣಯುಕ್ತವಾದ ಮಂಚವನ್ನು ಸತ್ಪಾತ್ರನಿಗೆ ದಾನಮಾಡಬೇಕು.

**ಉಮಾಮಹೇಶ್ವರಂ ಹೈಮಂ ವೃಷಭಂ ಚ ಗವಾ ಸಹ ।**
**ಸ್ಥಾಪಯಿತ್ವಾ ತು ಶಯನೇ ಬ್ರಾಹ್ಮಣಾಯ ನಿವೇದಯೇತ್ ॥ ೩೬ ॥**

**ಅನ್ಯಾನ್ಯಪಿ ಯಥಾಶಕ್ತಿ ಮಿಥುನಾನ್ಯಂಬರಾದಿಭಿಃ ।**
**ಧಾನ್ಯಾಲಂಕರಣೈರ್ದಾನೈರನ್ಯೈಶ್ಚ ಧನಸಂಚಯೈಃ ।**
**ವಿತ್ತಶಾಠ್ಯೇನ ರಹಿತಃ ಪೂಜಯೇದ್ಗತವಿಸ್ಮಯಃ ॥ ೩೭ ॥**

**ಏವಂ ಕರೋತಿ ಯಃ ಸಮ್ಯಕ್ಸೌಭಾಗ್ಯಶಯನವ್ರತಂ ।**
**ಸರ್ವಾನ್ಕಾಮಾನವಾಪ್ನೋತಿ ಪದಂ ಚಾನನ್ತ್ಯಮಶ್ನುತೇ ॥ ೩೮ ॥**

**ಸೌಭಾಗ್ಯಾರೋಗ್ಯರೂಪಾಯುರ್ವಸ್ತ್ರಾಲಂಕಾರ ಭೂಷಣೈಃ ।**
**ನ ವಿಯುಕ್ತೋ ಭವೇದ್ರಾಜನ್ವರ್ಷಾಯುತ ಶತತ್ರಯಂ ॥ ೩೯ ॥**

---

೩೬. ಮತ್ತು ಭಂಗಾರದ ಉಮಾಮಹೇಶ್ವರರ ಪ್ರತಿಮೆಗಳನ್ನು, ಗೋ ಮತ್ತು ವೃಷಭಗಳ ಪ್ರತಿಮಾಸಹಿತವಾಗಿ ಆ ಶಯನದಲ್ಲಿರಿಸಿ ಬ್ರಾಹ್ಮಣನಿಗೆ ಸಮರ್ಪಿಸಬೇಕು.

೩೭. ಇತರ ದಂಪತಿಗಳಿಗೂ ಯಥಾಶಕ್ತಿ ವಸ್ತ್ರಾದಿಗಳನ್ನು ಕೊಟ್ಟು ಸತ್ಕರಿಸಿ, ಕಾರ್ಪಣ್ಯ ತೋರಿಸದೆ ಧಾನ್ಯ, ಅಲಂಕಾರ ಇತ್ಯಾದಿಗಳನ್ನು ದಾನಮಾಡಬೇಕು. ಅಲ್ಲದೆ ಧನರಾಶಿಗಳಿಂದಲೂ ವಿಧವಿಧವಾದ ಉತ್ತಮವಾದ ಪೂಜಾದ್ರವ್ಯಗಳಿಂದಲೂ ಬ್ರಾಹ್ಮಣರನ್ನು ಪೂಜಿಸಬೇಕು. ಧನವ್ಯಯಮಾಡುವ ವಿಷಯದಲ್ಲಿ ಚಿತ್ತವಿಕಾರವನ್ನು ಹೊಂದದೆ ಔದಾರ್ಯವರ್ತನೆಯಿಂದ ನಡೆಸಬೇಕು.

೩೮. ಯಾವನು ವಿಧಿವತ್ತಾಗಿ ಈ ಸೌಭಾಗ್ಯಶಯನವ್ರತವನ್ನು ಆಚರಿಸುವನೋ ಅಂಥವನು ಇಹದಲ್ಲಿ ಸರ್ವೇಷ್ಟಾರ್ಥವನ್ನೂ ಪಡೆಯುವುದಲ್ಲದೆ ಪರದಲ್ಲೂ ಶಾಶ್ವತವಾದ ಸ್ಥಾನವನ್ನು ಹೊಂದುವನು.

೩೯. ಎಲೈ ರಾಜನೇ ! ಈ ವ್ರತಿಯು ಮೂವತ್ತುಲಕ್ಷ ವರ್ಷಗಳವರೆಗೆ ಸೌಭಾಗ್ಯ, ಆರೋಗ್ಯ, ರೂಪ, ಆಯುಷ್ಯ ವಸ್ತ್ರಾಲಂಕಾರಾಭರಣಾದಿಗಳಿಂದ ಕೂಡಿ ಎಂದೂ ವಿಯೋಗದುಃಖವನ್ನು ಹೊಂದುವುದಿಲ್ಲ.

ಯಸ್ತು ದ್ವಾದಶವರ್ಷಾಣಿ ಸೌಭಾಗ್ಯಶಯನಂ ವ್ರತಂ ।
ಕರೋತಿ ಸಪ್ತ ಚಾಷ್ಟೌ ವಾ ಶ್ರೀಕಂಠಭುವನೇಶ್ವರೈಃ ।
ಪೂಜ್ಯಮಾನೋ ಭವೇತ್ಸಮ್ಯಗ್ಯಾವತ್ಕಲ್ಪಾಯುತತ್ರಯಂ ॥ ೪೦ ॥

ನಾರೀ ವಾ ಕುರುತೇ ಯಾ ತು ಕುಮಾರೀ ವಾ ನರೇಶ್ವರ ।
ಸಾಪಿ ತತ್ಫಲಮಾಪ್ನೋತಿ ದೇವ್ಯನುಗ್ರಹಲಾಲಿತಾ ॥ ೪೧ ॥

ಶೃಣುಯಾದಪಿ ಯಶ್ಚೈತತ್ಪ್ರದದ್ಯಾದಥ ವಾ ಮತಿಂ ।
ಸೋಽಪಿ ವಿದ್ಯಾಧರೋ ಭೂತ್ವಾ ಸ್ವರ್ಗಲೋಕೇ ಚಿರಂ ವಸೇತ್ ॥ ೪೨ ॥

ಇದಮಿಹ ಮದನೇನ ಪೂರ್ವಮಿಷ್ಟಂ ।
ಚರಿತಮಿದಂ ಶಶಬಿಂದುನಾ ವ್ರತಂ ಸ್ಯೈ ।
ಸುರಪತಿಧನದೇಶವಾಯುಸೋಮೈ ।
ಶ್ಚರಿತಮಿದಂ ವರುಣೇನ ಬಂದಿನಾ ಚ ॥ ೪೩ ॥

---

೪೦. ಯಾವನು ಹನ್ನೆರಡುವರ್ಷ, ಇಲ್ಲವೇ ಎಂಟುವರ್ಷ ಅಥವಾ ಏಳು ವರ್ಷಗಳಕಾಲ ಈ ಸೌಭಾಗ್ಯಶಯನ ವ್ರತವನ್ನು ಆಚರಿಸುವನೋ ಅಂತಹವನು ಮೂರು ಆಯುತಕಲ್ಪದವರೆಗೆ ಕೈಲಾಸದಲ್ಲಿ ವಾಸಿಸುತ್ತಾ ಅಲ್ಲಿ ಪ್ರಧಾನಪುರುಷರಿಂದ ಚನ್ನಾಗಿ ಪೂಜಿತನಾಗುವನು.

೪೧. ಎಲೈ ನರಾಧಿಪನೇ ! ಸ್ತ್ರೀಯು ಅಥವಾ ಕನ್ನಿಕೆಯು ಇದೇರೀತಿ ವ್ರತವನ್ನಾಚರಿಸಿದರೆ ಅಂತಹವರು ಶ್ರೀ ದೇವೀಪ್ರಸಾದದಿಂದ ಮೇಲೆ ಹೇಳಿದ ಈ ವ್ರತಾನುಷ್ಠಾನದ ಫಲವನ್ನು ಪಡೆಯುವರು.

೪೨. ಮತ್ತು ಈ ವ್ರತಮಹಾತ್ಮ್ಯವನ್ನು ಶ್ರವಣಮಾಡಿದವನೂ, ಅಥವಾ ಈ ವ್ರತಾನುಷ್ಠಾನದ ಮಹಿಮೆಯನ್ನೂ ವಿಧಾನವನ್ನೂ ಇತರರಿಗೆ ಶ್ರವಣ ಮಾಡಿಸಿದವನೂ, ಆ ಪುಣ್ಯದಿಂದಲೇ ಸ್ವರ್ಗದಲ್ಲಿ ವಿದ್ಯಾಧರನಾಗಿ ಜನಿಸಿ ಅಲ್ಲಿ ಬಹುಕಾಲ ವಾಸಿಸುತ್ತಾನೆ.

೪೩. ಪೂರ್ವದಲ್ಲಿ ಇಷ್ಟಫಲದಾಯಕವಾದ ಈ ವ್ರತವನ್ನು ಮನ್ಮಥ, ಶಶಬಿಂದು. ಇಂದ್ರ, ಕುಬೇರ, ಈಶಾನ, ವಾಯು, ಸೋಮ, ವರುಣ, ಬಂದಿ, ಇವರೇ ಮೊದಲಾದವರು ಆಚರಿಸಿರುತ್ತಾರೆ.

ಯಾನೀಹ ದತ್ತಾನಿ ಪುರಾ ನರೇಂದ್ರೈಃ ।
ದಾನಾನಿ ಧರ್ಮಾರ್ಥಯಶಸ್ಕರಾಣಿ ।
ನಿರ್ಮಾಲ್ಯವಂತಿ ಪ್ರತಿಮಾನಿ ತಾನಿ ।
ಸ ನಾಮ ಸಾಧುಃ ಪುನರಾದದಾನಃ ॥ ೪೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಸೌಭಾಗ್ಯಾಷ್ಟಕ ತೃತೀಯಾವ್ರತಂ ನಾಮ ಪಂಚವಿಂಶತಿತಮೋಽಧ್ಯಾಯಃ.



---

೪೪. ಮೊದಲು ಈ ಲೋಕದಲ್ಲಿ ರಾಜರು ಧರ್ಮ, ಅರ್ಥ ಮತ್ತು ಕೀರ್ತಿ ಇವುಗಳಿಗೆ ಸಾಧನಗಳಾದ ಎಷ್ಟುದಾನಗಳನ್ನು ಮಾಡಿರುತ್ತಾರೋ ಆ ದಾನಗಳು ನಿರ್ಮಾಲ್ಯಸಹಿತವಾದ ಪ್ರತಿಮಾಸಮಾನವಾಗಿ ಅಪ್ರಶಸ್ತಗಳು. ಈ ದಾನದಿಂದ ಪರಲೋಕದಲ್ಲಿ ಅದರ ಫಲವನ್ನು ಪುನಃ ದ್ವಿಗುಣವಾಗಿ ಪಡೆಯುವವನೇ ಶ್ರೇಷ್ಠನು. ಆದ್ದರಿಂದಲೇ ದಾನದಿಂದೊಡಗೂಡಿದ ವ್ರತಮಹಾತ್ಮೆಯು ಮಹಾ ಶ್ರೇಷ್ಠವಾದುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾದ ಉತ್ತರಪರ್ವದಲ್ಲಿ ಸೌಭಾಗ್ಯಷ್ಟಕ ತೃತೀಯ ವ್ರತವರ್ಣನೆ ಎಂಬ ಇಪ್ಪತ್ತೈದನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಡ್ವಿಂಶತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ಸೌಭಾಗ್ಯಾರೋಗ್ಯಫಲದಂ ವಿಪಕ್ಷಕ್ಷಯಕಾರಕಂ ।**
**ಭುಕ್ತಿಮುಕ್ತಿಪ್ರದಂ ಕಿಂಚಿದ್ವ್ರತಂ ಬ್ರೂಹಿ ಜನಾರ್ದನ ॥ ೧ ॥**

॥ ಶ್ರೀ ಕೃಷ್ಣ ಉವಾಚ ॥

**ಯದುಮಾಯೈ ಪುರಾ ದೇವ ಉವಾಚಾಸುರಸೂದನಃ ।**
**ಕಥಾಸು ಸಂಪ್ರವೃತ್ತಾಸು ಲಲಿತಾರಾಧನಂ ಪ್ರತಿ ॥ ೨ ॥**

---

### ಇಪ್ಪತ್ತಾರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಜನಾರ್ದನನೇ ! ಸೌಭಾಗ್ಯ, ಆರೋಗ್ಯ, ಭೋಗ, ಮತ್ತು ಮೋಕ್ಷ ಈ ಫಲಗಳನ್ನು ಕೊಡುವುದಾಗಿಯೂ, ಶತ್ರುನಾಶನವಾಗುವುದಕ್ಕೆ ಕಾರಣವಾಗಿಯೂ ಇರುವ ಒಂದು ವ್ರತವನ್ನು ಹೇಳು ಎಂದನು.

ಶ್ರೀ ಕೃಷ್ಣನು ಹೇಳುತ್ತಾನೆ

೨-೩. ಎಲೈ ಧರ್ಮರಾಜನೇ ! ಪೂರ್ವದಲ್ಲಿ ಅಸುರಸಂಹಾರಕನಾದ ಪರಮೇಶ್ವರನು ಲಲಿತಾದೇವಿಯ ಆರಾಧನ ವಿಷಯಕವಾದ ಕಥಾಪ್ರಸಂಗದಲ್ಲಿ ಭೋಗ ಮತ್ತು ಮೋಕ್ಷ ಪ್ರಾಪ್ತಿಗೆ ಕಾರಣವೂ, ಸರ್ವೋತ್ತಮವೂ, ಸ್ತ್ರೀ ಪುರುಷರಿಗೆ ಅನುಷ್ಠೇಯವೂ ಆಗಿರುವ ಯಾವ ವ್ರತವನ್ನು ಪ್ರಿಯಳಾದ ಉಮಾ

ತದಿದಾನೀಂ ಪ್ರವಕ್ಷ್ಯಾಮಿ ಭುಕ್ತಿಮುಕ್ತಿಫಲಪ್ರದಂ ।
ನರಾಣಾಮಥ ನಾರೀಣಾಮಾರಾಧನಮನುತ್ತಮಂ ॥ ೩ ॥

ಶೃಣುಷ್ವಾವಹಿತೋ ಭೂತ್ವಾ ಸರ್ವಪಾಪಪ್ರಣಾಶನಂ ।
ನಭಸ್ಯೇ ವಾಥ ವೈಶಾಖೇ ಪುನರ್ಮಾರ್ಗಶಿರೇಽಥವಾ ॥ ೪ ॥

ಶುಕ್ಲಪಕ್ಷತೃತೀಯಾಯಾಂ ಸ್ನಾತಃ ಸದ್ಗೌರಸರ್ಷಪೈಃ ।
ಗೋರೋಚನ ಸುಗೋಮೂತ್ರಮುಸ್ತಾ ಗೋಶಕೃತಂ ತಥಾ ।
ದಧಿಚಂದನಸಂಮಿಶ್ರಂ ಲಲಾಟೇ ತಿಲಕಂ ನ್ಯಸೇತ್ ॥ ೫ ॥

ಸೌಭಾಗ್ಯಾರೋಗ್ಯಕೃದ್ಯತ್ಸ್ಯಾತ್ಸದಾ ಚ ಲಲಿತಾಪ್ರಿಯಂ ।
ಪ್ರತಿಪಕ್ಷಂ ತೃತೀಯಾಯಾಂ ಬದ್ಧ್ವಾ ವಾ ಪೀತವಾಸಸೀ ॥ ೬ ॥

---

ದೇವಿಗೆ ಉಪದೇಶಮಾಡಿದನೋ ಅಂಥ ವ್ರತವನ್ನು ಈಗ ನಿನಗೆ ನಾನು ಹೇಳುತ್ತೇನೆ ಕೇಳು.

೪. ಅಂಥ ಸರ್ವಪಾಪನಾಶಕಕವೆನಿಸಿದ ವ್ರತಾನುಷ್ಠಾನವನ್ನು ನಾನು ಹೇಳುವೆನು. ಏಕಾಗ್ರತೆಯಿಂದ ಕೇಳು. ಭಾದ್ರಪದ ಅಥವಾ ವೈಶಾಖ ಅಥವಾ ಮಾರ್ಗಶೀರ್ಷ ಈ ಮಾಸಗಳ ಶುಕ್ಲಪಕ್ಷದ ತೃತೀಯಾ ತಿಥಿಯಲ್ಲಿ ಈ ವ್ರತವನ್ನು ಮಾಡಬೇಕು.

೫. ವ್ರತಮಾಡಬೇಕಾದವನು ಬಿಳೀ ಸಾಸುವೆಯ ಎಣ್ಣೆಯನ್ನು ಹಚ್ಚಿಕೊಂಡು ಸ್ನಾನಮಾಡಿ ಗೋರೋಚನ, ಗೋಮೂತ್ರ, ಭದ್ರಮುಸ್ತೆ, ಗೋಮಯ, ಮೊಸರು ಮತ್ತು ಚಂದನ ಇವುಗಳನ್ನು ಮಿಶ್ರಣಮಾಡಿ ಅದರಿಂದ ಹಣೆಯಲ್ಲಿ ತಿಲಕವನ್ನು ಧಾರಣೆಮಾಡಬೇಕು.

೬. ಈ ತಿಲಕಧಾರಣವು ಶ್ರೀ ಲಲಿತಾದೇವಿಯ ಅನುಗ್ರಹಕ್ಕೆ ಕಾರಣವೂ, ಸೌಭಾಗ್ಯವನ್ನೂ ಮತ್ತು ಆರೋಗ್ಯಾದಿ ಫಲವನ್ನೂ ಕೊಡತಕ್ಕದ್ದೂ ಆಗಿದೆ. ಆದುದರಿಂದ ಪ್ರತಿ ತಿಂಗಳಿನ ಪ್ರತಿಪಕ್ಷದ ತೃತೀಯಾ ತಿಥಿಯಲ್ಲೂ ಈ ತಿಲಕವನ್ನು ಧರಿಸಬೇಕು. ಮತ್ತು ಈ ವ್ರತ ಕರ್ತೃವು ಆ ಕಾಲದಲ್ಲಿ ಹಳದಿಯ (ಪೀತ) ವಸ್ತ್ರಗಳನ್ನು ಧರಿಸಬೇಕು.

ಧಾರಯೇದಥ ವಾ ರಕ್ತಪೀತಾನಿ ಕುಸುಮಾನಿ ಚ ।
ವಿಧವಾಪ್ಯತಿರಕ್ತಾನಿ ಕುಮಾರೀ ಶುಕ್ಲವಾಸಸೀ ॥ ೭ ॥

ದೇವ್ಯರ್ಚಾಂ ಪಂಚಗವ್ಯೇನ ತತಃ ಕ್ಷೀರೇಣ ಕೇವಲಂ ।
ಸ್ನಾಪಯೇನ್ಮಧುನಾ ತದ್ವತ್ಪುಷ್ಪಗಂಧೋದಕೇನ ಚ ॥ ೮ ॥

ಪೂಜಯೇಚ್ಛುಕ್ಲಪುಷ್ಪೈಶ್ಚ ಫಲೈರ್ನಾನಾವಿಧೈರಪಿ ।
ಧಾನ್ಯಾಕಾ ಜಾಜಿಲವಣಗುಡಕ್ಷೀರಘೃತಾದಿಭಿಃ ॥ ೯ ॥

ಶುಕ್ಲಾಕ್ಷತೈಸ್ತಿಲೈರರ್ಚ್ಯಾಂ ಲಲಿತಾಂ ಯಃ ಸದಾರ್ಚಯೇತ್ ।
ಆಷಾದಾದ್ಯರ್ಚನಂ ಕುರ್ಯಾದ್ಯಾವದ್ಯಾವನ್ಮಾಸತಃ ॥ ೧೦ ॥

---

೭. ಅಥವಾ ರಕ್ತ ಪೀತ ಈ ಬಣ್ಣವುಳ್ಳ ವಸ್ತ್ರವನ್ನೂ ಅದೇ ಬಣ್ಣದ ಪುಷ್ಪಗಳನ್ನೂ ಧಾರಣಮಾಡಬೇಕು. ವಿಧವೆಯು ಈ ವ್ರತವನ್ನಾಚರಿಸುವುದಾದರೆ ಕೇವಲ ರಕ್ತವಸ್ತ್ರವನ್ನೂ ಕುಮಾರಿಯು ಆಚರಿಸುವುದಾದರೆ ಬಿಳಿಯ ಬಟ್ಟೆಗಳನ್ನೂ ಉಡಬೇಕು.

೮. ಪಂಚಗವ್ಯದಿಂದ ಮೊದಲು ಶ್ರೀದೇವಿಗೆ ಅಭಿಷೇಕಮಾಡಿ ಅನಂತರ ಕ್ಷೀರ, ಜೇನುತುಪ್ಪ, ಪುಷ್ಪೋದಕ, ಗಂಧೋದಕ ಇವುಗಳನ್ನೂ ಸಹ ಅಭಿಷೇಕ ಮಾಡಬೇಕು.

೯. ಮತ್ತು ಬಿಳಿಯ ಪುಷ್ಪಗಳಿಂದ ಪೂಜಿಸಿ ನಾನಾವಿಧವ ಫಲ, ಕೊತ್ತಂಬರೀ, ಜೀರಿಗೆ, ಉಪ್ಪು, ಬೆಲ್ಲ, ಹಾಲು, ತುಪ್ಪ ಮೊದಲಾದುವುಗಳನ್ನು ಸಮರ್ಪಿಸಬೇಕು.

೧೦. ಶ್ರೀ ಲಲಿತಾದೇವಿಯ ಅರ್ಚನೆಯನ್ನು ಮಾಡುವವನು ಶುಕ್ಲಾಕ್ಷತೆ, ತಿಲಾಕ್ಷತೆ ಇವುಗಳಿಂದ ಯಾವಾಗಲೂ ವಿಧಿವತ್ತಾಗಿ ಷಾಢದಿಂದಾರಂಭಿಸಿ ೭ರಃಪರ್ಯಂತವಾಗಿ ಅರ್ಚನೆಯನ್ನು ಮಾಡಬೇಕು.

ವರದಾಯೈ ನಮಃ ಪಾದೌ ತಥಾ ಗುಲ್ಫೌ ಶ್ರಿಯೇ ನಮಃ ।
ಅಶೋಕಾಯೈ ನಮೋ ಜಂಘೇ ಭವಾನ್ಯೈ ಜಾನುನೀ ತಥಾ ॥ ೧೧ ॥

ಊರೂ ಮಾಂಗಲ್ಯಕಾರಿಣ್ಯೈ ಕಾಮದೇವ್ಯೈ ತಥಾ ಕಟಿಂ ।
ಪದ್ಮೋದ್ಭವಾಯೈ ಜಠರಮುರಃ ಕಾಮಪ್ರಿಯೇ ನಮಃ ॥ ೧೨ ॥

ಕರೌ ಸೌಭಾಗ್ಯವಾಸಿನ್ಯೈ ಬಾಹೂ ಶಶಿಮುಖಶ್ರಿಯೈ ।
ಮುಖಂ ಕಂದರ್ಪವಾಸಿನ್ಯೈ ಪಾರ್ವತ್ಯೈ ತು ಸ್ಮಿತಂ ತಥಾ ॥ ೧೩ ॥

ಗೌರ್ಯೈ ನಮಸ್ತಥಾ ನಾಸಾಂ ಸುನೇತ್ರಾಯೈ ಚ ಲೋಚನೇ ।
ತುಷ್ಟ್ಯೈ ಲಲಾಟಫಲಕಂ ಕಾತ್ಯಾಯನ್ಯೈ ಶಿರಸ್ತಥಾ ॥ ೧೪ ॥

ನಮೋ ಗೌರ್ಯೈ ನಮಃ ಸೃಷ್ಟ್ಯೈ ನಮಃ ಕಾಂತ್ಯೈ ನಮಃ ಶ್ರಿಯೈ ।
ರಂಭಾಯೈ ಲಲಿತಾಯೈ ಚ ವಾಸುದೇವ್ಯೈ ನಮೋನಮಃ ॥ ೧೫ ॥

---

೧೧. ವರದಾಯೈಃ ನಮಃ ಎಂದು ಹೇಳಿ ಕಾಲುಗಳನ್ನು ಅರ್ಚಿಸಬೇಕು. ಹೀಗೆಯೇ ಶ್ರಿಯೇ ನಮಃ ಎಂದು ಕಾಲುಗಳ ಗಿಣ್ಣುಗಳನ್ನೂ, ಅಶೋಕಾಯೈ ನಮಃ ಎಂದು ಮುಂಗಾಲುಗಳನ್ನೂ, ಭವಾನ್ಯೈ ನಮಃ ಎಂದು ಮೊಣಕಾಲುಗಳನ್ನೂ ಪೂಜಿಸಬೇಕು.

೧೨. ಹೀಗೆಯೇ ಊರುಗಳನ್ನು ಮಾಂಗಲ್ಯಕಾರಿಣ್ಯೈ ನಮಃ ಎಂದೂ, ಸೊಂಟದಲ್ಲಿ ಕಾಮದೇವ್ಯೈ ನಮಃ ಎಂದೂ, ಉದರಪ್ರದೇಶದಲ್ಲಿ ಪದ್ಮೋದ್ಭವಾಯೈ ನಮಃ ಎಂದೂ, ಎದೆಯಲ್ಲಿ ಕಾಮಪ್ರಿಯೇ ನಮಃ ಎಂದೂ ಹೇಳಿ ಅರ್ಚಿಸಬೇಕು.

೧೩. ಮತ್ತು ಕೈಗಳಲ್ಲಿ ಸೌಭಾಗ್ಯವಾಸಿನ್ಯೈ ನಮಃ ಎಂದೂ, ಬಾಹುಗಳಲ್ಲಿ ಶಶಿಮುಖಶ್ರಿಯೈ ನಮಃ ಎಂದೂ, ಮುಖದಲ್ಲಿ ಕಂದರ್ಪವಾಸಿನ್ಯೈ ನಮಃ ಎಂದೂ, ಮತ್ತು ಶಿರಸ್ಸಿನಲ್ಲಿ ಪಾರ್ವತ್ಯೈ ನಮಃ ಎಂದೂ ಹೇಳಿ ಪೂಜಿಸಬೇಕು.

೧೪. ಮತ್ತು ಗೌರ್ಯ್ಯೈ ನಮಃ ಎಂದು ನಾಸಿಕದಲ್ಲೂ, ಸುನೇತ್ರಾಯೈ ನಮಃ ಎಂದು ನೇತ್ರಗಳಲ್ಲೂ, ತುಷ್ಟ್ಯೈ ನಮಃ ಎಂದು ಲಲಾಟಫಲಕದಲ್ಲೂ ಕಾತ್ಯಾಯನ್ಯೈ ನಮಃ ಎಂದು ಮುಖದಲ್ಲೂ ಅರ್ಚಿಸಬೇಕು.

೧೫-೧೬. ಮತ್ತು ಗೌರ್ಯ್ಯೈ ನಮಃ, ಸೃಷ್ಟ್ಯೈ ನಮಃ, ಕಾಂತ್ಯೈ ನಮಃ, ಶ್ರಿಯೈಃ ನಮಃ, ರಂಭಾಯೈ ನಮಃ, ಲಲಿತಾಯೈ ನಮಃ, ವಾಸುದೇವ್ಯೈ

ಏವಂ ಸಂಪೂಜ್ಯ ವಿಧಿವದಗ್ರತಃ ಪದ್ಮಮಾಲಿಖೇತ್ ।
ಪತ್ರೈರ್ದ್ವಾದಶಭಿರ್ಯುಕ್ತಂ ಕುಂಕುಮೇನ ಸಕರ್ಣಿಕಂ ॥ ೧೬ ॥

ಪೂರ್ವೇಣ ವಿನ್ಯಸೇದ್ಗೌರೀಮಪರ್ಣಾಂ ಚ ತತಃ ಪರಂ ।
ಭವಾನೀಂ ದಕ್ಷಿಣೇ ತದ್ವದ್ರುದ್ರಾಣೀಂ ಚ ತತಃ ಪರಂ ॥ ೧೭ ॥

ವಿನ್ಯಸೇತ್ಪಶ್ಚಿಮೇ ಸೌಮ್ಯಾಂ ತತೋ ಮದನವಾಸಿನೀಂ ।
ವಾಯವ್ಯಾಂ ಪಾಟಲಾವಾಸಾಮುತ್ತರೇಣ ತತೋ ಹ್ಯುಮಾಂ ॥ ೧೮ ॥

ಲಕ್ಷ್ಮೀಂ ಸ್ವಾಹಾಂ ಸ್ವಧಾಂ ತುಷ್ಟಿಂ ಮಂಗಲಾಂ ಕುಮುದಾಂ ಸತೀಂ ।
ರುದ್ರಾಣೀಂ ಮಧ್ಯತಃ ಸ್ಥಾಪ್ಯ ಲಲಿತಾಂ ಕರ್ಣಿಕೋಪರಿ ।
ಕುಸುಮೈರಕ್ಷತೈಃ ಶುಭ್ರೈರ್ನಮಸ್ಕಾರೇಣ ವಿನ್ಯಸೇತ್ ॥ ೧೯ ॥

ಗೀತಮಂಗಲಘೋಷಂ ಚ ಕಾರಯಿತ್ವಾ ಸುವಾಸಿನೀಃ ।
ಪೂಜಯೇದ್ರಕ್ತವಾಸೋಭೀ ರಕ್ತಮಾಲ್ಯಾನುಲೇಪನೈಃ ॥ ೨೦ ॥

---

ನಮಃ ಎಂದು ಈ ನಾಮಗಳನ್ನು ಹೇಳಿ ಶಾಸ್ತ್ರಪ್ರಕಾರವಾಗಿ ಪೂಜೆಮಾಡಿ ದೇವಿಯ ಮುಂಭಾಗದಲ್ಲಿ ಕುಂಕುಮದಿಂದ ದ್ವಾದಶದಳವುಳ್ಳ ಪದ್ಮವನ್ನು ಕರ್ಣಿಕಾಸಹಿತವಾಗಿ ಬರೆಯಬೇಕು.

೧೭. ಆ ಪದ್ಮದಲ್ಲಿ ಪೂರ್ವದಿಗ್ಭಾಗದಲ್ಲಿ ಗೌರೀ ಮತ್ತು ಅಪರ್ಣಾ ಈ ಎರಡು ಪ್ರತಿಮೆಗಳನ್ನೂ, ದಕ್ಷಿಣ ದಿಕ್ಕಿನಲ್ಲಿ ಭವಾನೀ ಮತ್ತು ರುದ್ರಾಣೀ ಈ ಎರಡು ಪ್ರತಿಮೆಗಳನ್ನೂ,

೧೮-೧೯. ಪಶ್ಚಿಮದಿಕ್ಕಿನಲ್ಲಿ ಸೌಮ್ಯಾ, ಮತ್ತು ಮದನವಾಸಿನೀ ಈ ಎರಡು ಪ್ರತಿಮೆಗಳನ್ನೂ, ವಾಯವ್ಯದಿಕ್ಕಿನಲ್ಲಿ "ಪಾಟಲಾವಾಸಾ" ಪ್ರತಿಮೆಯನ್ನೂ ಉತ್ತರದಲ್ಲಿ ಉಮಾ, ಲಕ್ಷ್ಮೀ, ಸ್ವಾಹಾ, ಸ್ವಧಾ, ತುಷ್ಟಿ, ಮಂಗಲಾ, ಕುಮುದಾ, ಸತೀ ಈ ಪ್ರತಿಮೆಗಳನ್ನೂ ಇಟ್ಟು, ಮಧ್ಯದಲ್ಲಿ ರುದ್ರಾಣೀ ಪ್ರತಿಮೆಯನ್ನು ಪ್ರತಿಷ್ಠೆಮಾಡಿ ಶುಕ್ಲಾಕ್ಷತೆಪುಷ್ಪ ಮೊದಲಾದುವುಗಳಿಂದ ಪೂಜಿಸಿ ನಮಸ್ಕರಿಸಬೇಕು.

೨೦. ಮತ್ತು ಸಂಗೀತ, ಮಂಗಲವಾದ್ಯಘೋಷ ಇವುಗಳನ್ನು ಮಾಡಿಸಿ ರಕ್ತವಸ್ತ್ರ, ರಕ್ತಮಾಲ್ಯ ಮತ್ತು ಗಂಧಾದಿಲೇಪನ ಇವುಗಳಿಂದ ಸುವಾಸಿನಿಯರನ್ನು ಪೂಜಿಸಬೇಕು.

ಸಿಂದೂರಂ ಸ್ನಾನಚೂರ್ಣಂ ಚ ತಾಸಾಂ ಶಿರಸಿ ಪಾತಯೇತ್ ।
ಸಿಂದೂರಂ ಕುಂಕುಮಂ ಸ್ನಾನಮಿಷ್ಟಂ ಸತ್ಯಾಃ ಸದಾ ಯತಃ ॥ ೨೧ ॥

ನಭಸ್ಯೇ ಪೂಜಯೇದ್ಗೌರೀಮುತ್ಪಲೈರಸಿತೈಸ್ತಥಾ ।
ಬಂಧುಜೀವೈರಾಶ್ವಯುಜೇ ಕಾರ್ತಿಕೇ ಶತಪತ್ರಕೈಃ ॥ ೨೨ ॥

ಕುಂದಪುಷ್ಪೈರ್ಮಾರ್ಗಶಿರೇ ಪೌಷೇ ವೈ ಕುಂಕುಮೇನ ಚ ।
ಮಾಘೇ ತು ಪೂಜಯೇದ್ದೇವೀಂ ಸಿಂದುವಾರೇಣ ಭಕ್ತಿತಃ ॥ ೨೩ ॥

ಜಾತ್ಯಾ ತು ಫಾಲ್ಗುನೇ ಪೂಜ್ಯಾ ಪಾರ್ವತೀ ಪಾಂಡುನಂದನ ।
ಚೈತ್ರೇ ಚ ಮಲ್ಲಿಕಾಶೋಕೈರ್ವೈಶಾಖೇ ಗಂಧಪಾಟಲೈಃ ॥ ೨೪ ॥

---

೨೧. ಮತ್ತು ಆ ಸುವಾಸಿನಿಯರಿಗೆ ಲಲಾಟದಲ್ಲಿ ಧರಿಸುವುದಕ್ಕಾಗಿ ಸಿಂಧೂರ ಚೂರ್ಣವನ್ನು ಕೊಟ್ಟು ಸುಗಂಧಸ್ನಾನಚೂರ್ಣವನ್ನು ಶಿರಸ್ಸಿನಲ್ಲಿಡಬೇಕು. ಶ್ರೀ ಸತೀದೇವಿಗೆ ಕುಂಕುಮ, ಚಂದ್ರ ಮತ್ತು ಸ್ನಾನಚೂರ್ಣ ಇವುಗಳು ಸದಾ ಪ್ರಿಯವಾದುವು. ಆದ್ದರಿಂದ ಸುವಾಸಿನಿಯರಿಗೆ ಇವುಗಳನ್ನು ಕೊಟ್ಟು ಸತಿಯ ಅನುಗ್ರಹಕ್ಕೆ ಪಾತ್ರರಾಗಬೇಕು.

೨೨. ಮತ್ತು ಭಾದ್ರಪದಮಾಸದಲ್ಲಿ ಕನ್ನೈದಿಲೆಗಳಿಂದ ಶ್ರೀ ಗೌರೀ ಪೂಜೆಯನ್ನು ಮಾಡಬೇಕು. ಹಾಗೆಯೇ ಆಶ್ವಯುಜಮಾಸದಲ್ಲಿ ಕೆಂಪುಗುಲಾಬೀ ಪುಷ್ಪದಿಂದಲೂ, ಕಾರ್ತೀಕಮಾಸದಲ್ಲಿ ಪದ್ಮಪುಷ್ಪಗಳಿಂದಲೂ ಅರ್ಚಿಸಬೇಕು.

೨೩. ಮಾರ್ಗಶೀರ್ಷಮಾಸದಲ್ಲಿ ಮಲ್ಲಿಗೆಹೂವುಗಳಿಂದಲೂ, ಪುಷ್ಯಮಾಸದಲ್ಲಿ ಕುಂಕುಮಕೇಸರಿ ಪುಷ್ಪಗಳಿಂದಲೂ, ಮಾಘಮಾಸದಲ್ಲಿ ಸಿಂದುವಾರಪುಷ್ಪಗಳಿಂದಲೂ ಭಕ್ತಿಪೂರ್ವಕವಾಗಿ ಪೂಜಿಸಬೇಕು.

೨೪. ಅಯ್ಯಾ ಧರ್ಮಜನೇ ! ಫಾಲ್ಗುಣಮಾಸದಲ್ಲಿ ಶ್ರೀ ಪಾರ್ವತಿಯನ್ನು ಜಾಜೀಹೂವಿನಿಂದ ಅರ್ಚಿಸಬೇಕು. ಚೈತ್ರಮಾಸದಲ್ಲಿ ಮಲ್ಲಿಗೆ ಮತ್ತು ಅಶೋಕಪುಷ್ಪಗಳಿಂದಲೂ ವೈಶಾಖಮಾಸದಲ್ಲಿ ಸುಗಂಧವುಳ್ಳ ಪಾಟಲೀಪುಷ್ಪದಿಂದಲೂ, ಅರ್ಚಿಸಬೇಕು,

ಜ್ಯೇಷ್ಠೇ ಕಮಲಮಂದಾರೈರಾಷಾಢೇ ಚಂಪಕಾಂಬುಜೈಃ ।
ಕದಂಬೈರಥ ಮಾಲತ್ಯಾ ಶ್ರಾವಣೇ ಪೂಜಯೇದುಮಾಂ　　॥ ೧೫ ॥
ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।

ಬಿಲ್ವಪತ್ರಾರ್ಕಪುಷ್ಪಂ ಚ ಗವಾಂ ಶೃಂಗೋದಕಂ ತಥಾ ।
ಪಂಚಗವ್ಯಂ ತಥಾ ಬಿಲ್ವಂ ಪ್ರಾಶಯೇತ್ಕ್ರಮಶಃ ಸದಾ　　॥ ೧೬ ॥

ಏತದ್ಭಾದ್ರಪದಾದ್ಯಂ ತು ಪ್ರಾಶನಂ ಸಮುದಾಹೃತಂ ।
ಪ್ರತಿಪಕ್ಷಂ ದ್ವಿತೀಯಾಯಾಂ ಮಯಾ ಪ್ರೋಕ್ತಂ ವರಾನನೇ　　॥ ೧೭ ॥

ಬ್ರಾಹ್ಮಣಂ ಬ್ರಾಹ್ಮಣೀಂ ಚೈವ ಶಿವಂ ಗೌರೀಂ ಪ್ರಕಲ್ಪ್ಯ ಚ ।
ಭೋಜಯಿತ್ವಾರ್ಚಯೇದ್ಭಕ್ತ್ಯಾ ವಸ್ತ್ರಮಾಲ್ಯಾನುಲೇಪನೈಃ ।
ಪುಂಸೇ ಪೀತಾಂಬರಂ ದತ್ವಾ ಸ್ತ್ರಿಯೈ ಕೌಸುಂಭವಾಸಸೀ　　॥ ೧೮ ॥

---

೧೫. ಹಾಗೆಯೇ ಜ್ಯೇಷ್ಠಮಾಸದಲ್ಲಿ ಕಮಲ ಮತ್ತು ಮಂದಾರಪುಷ್ಪಗಳಿಂದಲೂ, ಆಷಾಢಮಾಸದಲ್ಲಿ ಸಂಪಿಗೆ ಮತ್ತು ಕಮಲಪುಷ್ಪಗಳಿಂದಲೂ, ಪೂಜಿಸಬೇಕು. ಅನಂತರ ಶ್ರಾವಣಮಾಸದಲ್ಲಿ ಶ್ರೀ ಉಮಾದೇವಿಯನ್ನು ಕದಂಬ ಮತ್ತು ಮಲ್ಲಿಗೆಹೂವುಗಳಿಂದ ಅರ್ಚಿಸಬೇಕು.

೧೬. ಕ್ರಮವಾಗಿ ಹನ್ನೆರಡು ತಿಂಗಳುಗಳಲ್ಲಿ ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ, ದರ್ಭೆಯ ಜಲ, ಬಿಲ್ವಪತ್ರ, ಯಕ್ಕದ ಹೂವು, ಗೋಶೃಂಗೋದಕ, ಪಂಚಗವ್ಯ, ಬಿಲ್ವ ಈ ಹನ್ನೆರಡು ವಸ್ತುಗಳನ್ನು ಪ್ರಾಶನೆಗೆ ಉಪಯೋಗಿಸಬೇಕು.

೧೭. ಎಲೌ ಸುಂದರಮುಖಿಯಾದ ಪಾರ್ವತಿಯೇ ! ಭಾದ್ರಪದಮಾಸ ಮೊದಲ್ಗೊಂಡು ಪ್ರತಿಮಾಸದ ಶುಕ್ಲಪಕ್ಷದ ತೃತೀಯಾತಿಥಿಯಲ್ಲಿ ಕ್ರಮವಾಗಿ ಈ ಪ್ರಾಶನವು ಕರ್ತವ್ಯವೆಂದು ನಾನು ನಿನಗೆ ಹೇಳಿರುತ್ತೇನೆ.

೧೮. ವಿಪ್ರದಂಪತಿಗಳನ್ನು ಕರೆದು ಅವರಲ್ಲಿ ಪತಿಯಾದ ಬ್ರಾಹ್ಮಣನನ್ನು ಸಾಕ್ಷಾತ್ ಶಿವನೆಂದೂ ಅವನ ಪತ್ನಿಯನ್ನು ಸಾಕ್ಷಾತ್ ಗೌರಿಯೆಂದೂ ಭಾವನೆಯಿಂದ ಭಕ್ತಿಪೂರ್ವಕವಾಗಿ ಅವರಿಗೆ ಭೋಜನಮಾಡಿಸಿ ವಸ್ತ್ರಮಾಲ್ಯ ಅನುಲೇಪನಾದಿಗಳನ್ನು ಕೊಟ್ಟು ಪೂಜೆಮಾಡಬೇಕು. ಅದರಲ್ಲೂ ಪುರುಷನಿಗೆ ಪೀತಾಂಬರವನ್ನೂ ಸ್ತ್ರೀಗೆ ಕುಸುಂಭೆಬಣ್ಣದ ಸೀರೆ ರವಿಕೆಗಳನ್ನೂ ಕೊಡಬೇಕು.

ನಿಷ್ಪಾವಾಜಾಜಿಲವಣಮಿಕ್ಷುದಂಡಂ ಗುಡಾನ್ವಿತಂ ।
ಸ್ತ್ರಿಯೈ ದದ್ಯಾತ್ಫಲಂ ಪುಂಸೇ ಸುವರ್ಣೋತ್ಪಲಸಂಯುತಂ ॥ ೨೯ ॥

ಯಥಾ ನ ದೇವದೇವೇಶಸ್ತ್ವಾಂ ಪರಿತ್ಯಜ್ಯ ಗಚ್ಛತಿ ।
ತಥಾ ಮಾಂ ಸಂಪರಿತ್ಯಜ್ಯ ಪತಿರ್ನಾನ್ಯತ್ರ ಗಚ್ಛತು ॥ ೩೦ ॥

ಕುಮುದಾ ವಿಮಲಾನಂತಾ ಭವಾನೀ ವಸುಧಾ ಶಿವಾ ।
ಲಲಿತಾ ಕಮಲಾ ಗೌರೀ ಸತೀ ರಂಭಾಥ ಪಾರ್ವತೀ ॥ ೩೧ ॥

ನಭಸ್ಯಾದಿಷು ಮಾಸೇಷು ಪ್ರೀಯತಾಮಿತ್ಯುದೀರಯೇತ್ ।
ವ್ರತಾಂತೇ ಶಯನಂ ದದ್ಯಾತ್ಸುವರ್ಣಕಮಲಾನ್ವಿತಂ ॥ ೩೨ ॥

---

೨೯. ಮತ್ತು ಆ ಸ್ತ್ರೀಗೆ ಅವರೆ, ಜೀರಿಗೆ, ಉಪ್ಪು, ಬೆಲ್ಲ, ಇವುಗಳ ಸಹಿತವಾಗಿ ಕಬ್ಬಿನತುಂಡನ್ನು ದಾನಮಾಡಬೇಕು. ಪುರುಷನಿಗೆ ಭಂಗಾರದ ಕಮಲ ಸಹಿತವಾಗಿ ಫಲದಾನಮಾಡಬೇಕು.

೩೦. ಅನಂತರ "ಓ ದೇವಿಯೇ! ದೇವಾಧಿದೇವನಾದ ಶ್ರೀ ಪರಮೇಶ್ವರನು ನಿನ್ನನ್ನು ಅಗಲಿ ಅನ್ಯತ್ರಹೋಗದಿರುವಂತೆಯೇ ನನ್ನ ಪತಿಯೂ ನನ್ನನ್ನು ಬಿಟ್ಟು ಅನ್ಯತ್ರ ಹೋಗದಿರಲಿ. (ಅರ್ಧನಾರೀಶ್ವರನಾದುದರಿಂದ ದೇವೀ ವಿಯೋಗವು ಎಂದೂ ಈಶ್ವರನಿಗೆ ಸಂಭಾವಿತವಲ್ಲವು. ಅದರಂತೆ ನನಗೂ ಪತಿ ವಿಯೋಗ ಬಾರದಿರುವಂತೆ ಅನುಗ್ರಹಿಸು" ಎಂದು ಪ್ರಾರ್ಥಿಸಬೇಕು.

"ಯಥಾನ ದೇವದೇವೇಶ ಸ್ತ್ವಾಂ ಪರಿತ್ಯಜ್ಯಗಚ್ಛತಿ ।
ತಥಾಮಾಂ ಸಂಪರಿತ್ಯಜ್ಯ ಪತಿರ್ನಾನ್ಯತ್ರಗಚ್ಛತು ॥

ಎಂಬುದೇ ಪ್ರಾರ್ಥನಾ ಶ್ಲೋಕವು.

೩೧. ಕುಮುದಾ, ವಿಮಲಾ, ಅನಂತಾ, ಭವಾನೀ, ವಸುಧಾ, ಶಿವಾ, ಲಲಿತಾ, ಕಮಲಾ, ಗೌರೀ, ಸತೀ, ರಂಭಾ, ಪಾರ್ವತೀ ಈ ಹನ್ನೆರಡು ನಾಮಗಳನ್ನು ಭಾದ್ರಪದಾದಿಮಾಸಗಳಲ್ಲಿ ಉಚ್ಚರಿಸಿ ಈ ದೇವತೆಯು ಪ್ರೀತಳಾಗಲಿ ಎಂದು ಹೇಳಬೇಕು.

೩೨. ಭಾದ್ರಪದಮಾಸದಲ್ಲಿ "ಕುಮುದಾಪ್ರೀಯತಾಂ" ಎಂದೂ ಕೊನೆಯಲ್ಲಿ ಉಚ್ಚರಿಸಬೇಕು. ಹೀಗೆಯೇ ಮುಂದಿನ ಮಾಸಗಳಲ್ಲೂ ತತ್ತದ್ದೇವತಾ

ಮಿಥುನಾನಿ ಚತುರ್ವಿಂಶತ್ತದರ್ಧಂ ಸಕೃದರ್ಚಯೇತ್ ।
ಅಷ್ಟಾವಷ್ಟಾವಥ ಪುನಶ್ಚಾತುರ್ಮಾಸ್ಯೇ ಸಮರ್ಚಯೇತ್ ॥ ೩೩ ॥

ತಥೋಪದೇಷ್ಟಾರಮಪಿ ಪ್ರೂಜಯೇದ್ಯತ್ನತೋ ಗುರುಂ ।
ನ ಪೂಜ್ಯತೇ ಗುರುರ್ಯತ್ರ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೩೪ ॥

ಉಕ್ತಾನಂತತೃತೀಯೈಷಾ ಸದಾನಂತಫಲಪ್ರದಾ ।
ಸರ್ವಪಾಪಹರಾ ದೇವೀ ಸೌಭಾಗ್ಯಾರೋಗ್ಯವರ್ಧಿನೀ ॥ ೩೫ ॥

ನ ಚೈನಾಂ ವಿತ್ತಶಾಠ್ಯೇನ ಕದಾಚಿದಪಿ ಲಂಘಯೇತ್ ।
ನರೋ ವಾ ಯದಿ ವಾ ನಾರೀ ವಿತ್ತಶಾಠ್ಯಾತ್ಪತತ್ಯಧಃ ॥ ೩೬ ॥

---

ಪ್ರೀತಿಯನ್ನುದ್ದೇಶಿಸಿ ವ್ರತಸಮರ್ಪಣೆಯನ್ನು ಮಾಡತಕ್ಕದ್ದು ಮತ್ತು ಈ ವ್ರತವು ಪೂರ್ತಿಯಾದನಂತರ ಸ್ವರ್ಣಕಮಲಸಹಿತವಾದ ಶಯ್ಯಾದಾನವನ್ನು ಸತ್ಪಾತ್ರನಾದವನಿಗೆ ಕೊಡಬೇಕು.

೩೩. ಮತ್ತು ವ್ರತಾಂತ್ಯದಲ್ಲಿ ಇಪ್ಪತ್ತುನಾಲ್ಕು ದಂಪತಿಗಳಿಗೆ ಪೂಜೆಮಾಡಬೇಕು. ಒಂದುಪಕ್ಷ ತದರ್ಧವಾದ ಹನ್ನೆರಡು ದಂಪತಿಗಳನ್ನು ಅರ್ಚಿಸಬಹುದು. ಚಾತುರ್ಮಾಸ್ಯದಲ್ಲಿ ಆಚರಿಸುವುದಾದರೆ ಎಂಟುದಂಪತಿಗಳನ್ನು ಅರ್ಚಿಸಬಹುದು.

೩೪. ಮತ್ತು ವ್ರತೋಪದೇಷ್ಟೃವಾದ ಗುರುವನ್ನು ಅತಿಸಂಭ್ರಮದಿಂದ ಅರ್ಚಿಸಬೇಕು. ಯಾವಕರ್ಮಗಳಲ್ಲಿ ಗುರುಪೂಜೆಯು ನಡೆಸಲ್ಪಡುವುದಿಲ್ಲವೋ ಆ ಕರ್ಮಗಳು ನಿಷ್ಫಲಗಳು.

೩೫. ಸಮಸ್ತ ಪಾಪನಿವಾರಕಳೂ ಸೌಭಾಗ್ಯ ಮತ್ತು ಆರೋಗ್ಯಪ್ರದಳೂ ಆದ ಶ್ರೀ ದೇವೀ ಉದ್ದಿಶ್ಯವಾಗಿ ಈ ಹಿಂದೆ ಹೇಳಿದ ಅನಂತತೃತೀಯಾ ವ್ರತಾಚರಣೆಯಿಂದ ಸದಾಕಾಲದಲ್ಲೂ ಅನಂತಫಲಗಳು ಲಭಿಸುವುವು.

೩೬. ಯಾವ ಅವಸ್ಥೆಯಲ್ಲಿಯೇ ಇರಲಿ ದ್ರವ್ಯಲೋಭದಿಂದ ವಿಧ್ಯುಕ್ತ ಕ್ರಮವನ್ನತಿಕ್ರಮಿಸಿ ದೇವಿಯನ್ನು ಪೂಜಿಸಬಾರದು. ಪುರುಷನಾಗಲಿ ಸ್ತ್ರೀಯಾಗಲಿ ದ್ರವ್ಯಲೋಭದಿಂದ ವಿಧ್ಯುಕ್ತರೀತಿಯನ್ನುಲ್ಲಂಘಿಸಿ ಈ ವ್ರತವನ್ನಾಚರಿಸಿದರೆ ಅವರಿಗೆ ನಿಸ್ಸಂದೇಹವಾಗಿ ಅಧಃಪತನವಾಗುವುದು.

**ಗರ್ಭಿಣೀ ಸೂತಿಕಾ ನಕ್ತಂ ಕುಮಾರೀ ಚಾಥ ರೋಗಯುಕ್ ।**
**ಯದಾ ಶ್ರದ್ಧಾ ತದಾನ್ಯೇನ ಕ್ರಿಯಮಾಣಂ ತು ಕಾರಯೇತ್ ॥ ೩೭ ॥**

**ಇಮಾಮನಂತಫಲದಾಂ ತೃತೀಯಾಂ ಯಃ ಸಮಾಚರೇತ್ ।**
**ಕಲ್ಪಕೋಟಿಶತಂ ಸಾಗ್ರಂ ಶಿವಲೋಕೇ ಸ ಪೂಜ್ಯತೇ ॥ ೩೮ ॥**

**ವಿತ್ತಹೀನೋಽಪಿ ಕುರ್ವೀತ ವರ್ಷತ್ರಯಮುಪೋಷಣೈಃ ।**
**ಪುಷ್ಪಪತ್ರವಿಧಾನೇನ ಸೋಽಪಿ ತತ್ಫಲಮಾಪ್ನುಯಾತ್ ॥ ೩೯ ॥**

**ನಾರೀ ವಾ ಕುರುತೇ ಯಾ ತು ಕುಮಾರೀ ವಿಧವಾ ತಥಾ ।**
**ಸಾಽಪಿ ತತ್ಫಲಮಾಪ್ನೋತಿ ಗೌರ್ಯನುಗ್ರಹಭಾವಿತಾ ॥ ೪೦ ॥**

**ಇತಿ ಪಠತಿ ಶೃಣೋತಿ ವಾ ಯ ಇತ್ಥಂ ।**
**ಗಿರಿತನಯಾವ್ರತಮಿಂದುಲೋಕಸಂಸ್ಥಃ ।**

---

೩೭. ಗರ್ಭಿಣಿ ಅಥವಾ ಬಾಣಂತಿ, ಕುಮಾರೀ ಅಥವಾ ರೋಗಿಷ್ಠೆ ಇಂಥವರಿಗೆ ಸ್ವಯಂ ವ್ರತಾಚರಣ ಸೌಕರ್ಯವು ಇಲ್ಲದಿರುವಾಗ ಈ ವ್ರತವನ್ನಾ ಚರಿಸಬೇಕೆಂಬ ಶ್ರದ್ಧೆಯುಂಟಾದರೆ ಅವರು ಇತರರಿಂದ ಈ ವ್ರತವನ್ನು ಮಾಡಿಸ ಬೇಕು.

೩೮. ಈ ಅನಂತತೃತೀಯಾವ್ರತವನ್ನು ಯಾವನು ಆಚರಿಸುವನೋ ಅಂಥವನು ಶತಕೋಟಿಕಲ್ಪ ಪರ್ಯಂತ ಶಿವಲೋಕದಲ್ಲಿ ಪೂಜಾರ್ಹನಾಗಿರುತ್ತಾನೆ.

೩೯. ದರಿದ್ರನು ಆದಿನ ಉಪವಾಸವನ್ನಾಚರಿಸಿ ಕೇವಲ ಪುಷ್ಪ ಪತ್ರಾದಿ ಸಮರ್ಪಣ ಮಾಡಿ ಯಥಾಶಕ್ತಿ ದಾನದಿಂದ ಮೂರವರ್ಷ ಇದನ್ನಾಚರಿಸಿದರೆ ಈ ವ್ರತಫಲವು ಅವನಿಗೂ ಲಭಿಸುವುದು.

೪೦. ಈ ವ್ರತವನ್ನು ಸುಮಂಗಲಿಯರು ಕನ್ನಿಕೆಯರು ಅಥವಾ ವಿಧವೆ ಯರು ಆಚರಿಸಿದರೂ ಶ್ರೀದೇವೀ ಪ್ರಸಾದದಿಂದ ಅವರಿಗೂ ಈ ವ್ರತಫಲ ಪ್ರಾಪ್ತಿ ಯಾಗುವುದು.

೪೧. ಪಾರ್ವತೀಸಂಬಂಧವಾದ ಈ ಅನಂತತೃತೀಯಾ ವ್ರತವನ್ನು ಹೇಳುವ ಈ ಗ್ರಂಥವನ್ನು ಪಠಣ ಮಾಡುವವನಿಗೂ ಮತ್ತು ಪಠಿಸುವುದನ್ನು

ಮತಿಮಪಿ ಚ ದದಾತಿ ಸೋಽಪಿ ದೇವ್ಯೈ ।
ರಮರವಧೂಜನಕಿನ್ನರೈಶ್ಚ ಪೂಜ್ಯಃ ॥ ೪೧ ॥

(ಇತಿ ಅನಂತ ತೃತೀಯಾವ್ರತಂ)



॥ ಶ್ರೀ ಕೃಷ್ಣ ಉವಾಚ ॥
ಅನ್ಯಾಮಪಿ ಪ್ರವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।
ರಸಕಲ್ಯಾಣಿನೀಂ ನಾಮ ಪುರಾಕಲ್ಪವಿದೋ ವಿದುಃ ॥ ೪೨ ॥

ಮಾಘಮಾಸೇ ತು ಸಂಪ್ರಾಪ್ತೇ ತೃತೀಯಾಂ ಶುಕ್ಲಪಾಕ್ಷಿಕೀಂ ।
ಪ್ರಾತರ್ಗವ್ಯೇನ ಪಯಸಾ ತಿಲೈಃ ಸ್ನಾನಂ ಸಮಾಚರೇತ್ ॥ ೪೩ ॥

---

ಶ್ರವಣ ಮಾಡಿದವನಿಗೂ ಚಂದ್ರಲೋಕಪ್ರಾಪ್ತಿಯಾಗುವುದು. ಮತ್ತು ಈ ವ್ರತವಿಧಾನವನ್ನು ಹೇಳಿ ಇತರರಿಗೆ ಇದರಲ್ಲಿ ಜ್ಞಾನವನ್ನು ಹುಟ್ಟಿಸಿದವನು ಸ್ವರ್ಗದಲ್ಲಿ ದೇವತೆಗಳ ದೇವತಾಸ್ತ್ರಿಯರ ಮತ್ತು ಕಿನ್ನರರ ಪೂಜೆಗೆ ಪಾತ್ರನಾಗುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅನಂತ ತೃತೀಯಾ ವ್ರತವರ್ಣನೆ ಎಂಬ ವಿಭಾಗವು ಮುಗಿದುದು.



೪೨. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಧರ್ಮರಾಜನೇ ! ಪೂರ್ವ ಕಲ್ಪಜ್ಞರು ತಿಳಿದುದಾಗಿ ತೃತೀಯಾ ತಿಥಿಯಲ್ಲಿ ಆಚರಿಸಲ್ಪಡುವ ಸರ್ವ ಪಾಪನಾಶಕವಾದ “ ರಸಕಲ್ಯಾಣಿನೀ ” ಎಂಬ ಇನ್ನೊಂದು ವ್ರತವನ್ನು ಹೇಳುವೆನು.

೪೩. ಮಾಘಮಾಸದ ಶುಕ್ಲಪಕ್ಷದ ತೃತೀಯಾದಿನ ಪ್ರಾತಃಕಾಲದಲ್ಲಿ ಗೋಕ್ಷೀರ ಮಿಶ್ರಿತವಾದ ತೈಲವನ್ನು ಹಚ್ಚಿಕೊಂಡು ಸ್ನಾನಮಾಡಬೇಕು.

ಸ್ನಾಪಯೇನ್ಮಧುನಾ ದೇವೀಂ ತಥೈವೇಕ್ಷುರಸೇನ ಚ ।
ಪುನಃ ಪೂಜಾ ಪ್ರಕರ್ತವ್ಯಾ ಜಾತ್ಯಾ ವಾ ಕುಂಕುಮೇನ ವಾ ॥ ೪೪ ॥

ದಕ್ಷಿಣಾಂಗಾನಿ ಸಂಪೂಜ್ಯ ತತೋ ವಾಮಾನಿ ಪೂಜಯೇತ್ ।
ಲಲಿತಾಯೈ ನಮಃ ಪಾದೌ ಗುಲ್ಫಂ ತದ್ವದಥಾರ್ಚಯೇತ್ ॥ ೪೫ ॥

ಜಂಘೇ ಜಾನೂ ತಥಾ ಸತ್ಯೈ ತಥೋರಶ್ಚ ಶ್ರಿಯೈ ನಮಃ ।
ಮದನಾಲಸಾಯೈ ತು ಕಟಿಂ ಮದನಾಯೈ ತಥೋದರಂ ॥ ೪೬ ॥

ಸ್ತನೌ ಮದನವಾಸಿನ್ಯೈ ಕುಮುದಾಯೈ ಚ ಕಂಧರಂ ।
ಭುಜಾನ್ಭುಜಾಗ್ರಂ ಮಾಧವ್ಯೈ ಕಮಲಾಯೈ ಹ್ಯುಪಸ್ಥಕಂ ॥ ೪೭ ॥

---

೪೪. ಆ ಮೇಲೆ ಶ್ರೀ ದೇವಿಗೆ ಮಧುವಿನಿಂದಲೂ ಹಾಗೆಯೇ ಕಬ್ಬಿನ ಹಾಲಿನಿಂದಲೂ ಅಭಿಷೇಕವನ್ನು ಮಾಡಿ, ಪುನಃ ಜಾಜಿಹೂವು, ಕುಂಕುಮ ಇತ್ಯಾದಿಗಳಿಂದ ಪೂಜೆಮಾಡಬೇಕು.

೪೫. ಪೂಜಾಕಾಲದಲ್ಲಿ ಶ್ರೀದೇವಿಯ ದಕ್ಷಿಣಾಂಗಗಳಿಗೆ ಮೊದಲು ಮೊದಲು ಪೂಜೆಯನ್ನು ಮಾಡಿ ಅನಂತರ ವಾಮಾಂಗಗಳಿಗೆ ಪೂಜೆಮಾಡಬೇಕು. ಲಲಿತಾಯೈಃ ನಮಃ ಎಂದು ಹೇಳಿ ಪಾದ ಮತ್ತು ಗುಲ್ಫ (ಕಾಲಿನ ಹರಡುಗಳು) ಇವುಗಳನ್ನು ಪೂಜೆಮಾಡಬೇಕು.

೪೬. ಹಾಗೆಯೇ ಜಂಘಾ ಮತ್ತು ಜಾನುಗಳಲ್ಲಿ ಸತ್ಯೈಃ ನಮಃ ಎಂದೂ, ಕಟಿಯಲ್ಲಿ ಮದನಾಲಸಾಯೈ ನಮಃ ಎಂದೂ, ಹಾಗೆಯೇ ಉದರದಲ್ಲಿ ಮದನಾಯೈ ನಮಃ ಎಂದೂ ಹೇಳಿ ಅರ್ಚಿಸಬೇಕು.

೪೭. ಮದನವಾಸಿನ್ಯೈಃ ನಮಃ ಎಂದು ಸ್ತನಗಳನ್ನೂ, ಕುಮುದಾಯೈ ನಮಃ ಎಂದು ಶಿರಸ್ಸನ್ನೂ, ಮಾಧವ್ಯೈಃ ನಮಃ ಎಂದು ಭುಜ ಮತ್ತು ಭುಜಾಗ್ರಗಳನ್ನೂ, ಕಮಾಲಾಯೈ ನಮಃ ಎಂದು ಉಪಸ್ಥವನ್ನೂ ಅರ್ಚಿಸಬೇಕು.

**ಭ್ರೂಲಲಾಟೇ ಚ ರುದ್ರಾಣ್ಯೈ ಶಂಕರಾಯೈ ತಥಾಲಕಾನ್ ।**
**ಮುಕುಟಂ ವಿಶ್ವವಾಸಿನ್ಯೈ ಪುನಃ ಕಾಂತ್ಯೈ ತಥಾಲಕಾನ್ ।　॥ ೪೮ ॥**

**ನೇತ್ರಂ ಚಕ್ರಾವಧಾರಿಣ್ಯೈ ಪುಷ್ಟ್ಯೈ ಚ ವದನಂ ಪುನಃ ।**
**ಉತ್ಕಂಠಿನ್ಯೈ ನಮಃ ಕಂಠಮನಂತಾಯೈ ತು ಕಂಧರಾಂ　॥ ೪೯ ॥**

**ರಂಭಾಯೈ ವಾಮಬಾಹುಂ ಚ ವಿಶೋಕಾಯೈ ನಮಃ ಪರಂ ।**
**ಹೃದಯಂ ಮನ್ಮಥಾದಿತ್ಯೈ ಪಾಟಲಾಯೈ ನಮೋನಮಃ　॥ ೫೦ ॥**

**ಏವಂ ಸಂಪೂಜ್ಯ ವಿಧಿವದ್ದ್ವಿಜದಾಂಪತ್ಯಮರ್ಚಯೇತ್ ।**
**ಭೋಜಯಿತ್ವಾನ್ನದಾನೇನ ಮಧುರೇಣ ವಿಮತ್ಸರಃ　॥ ೫೧ ॥**

---

೪೮. ಹಾಗೆಯೇ ರುದ್ರಾಣ್ಯೈ ನಮಃ ಎಂದು ಹುಬ್ಬು ಮತ್ತು ಲಲಾಟಗಳನ್ನೂ, ಶಂಕರಾಯೈ ನಮಃ ಎಂದು ದೇವಿಯ ಮುಂಗುರುಳುಗಳನ್ನೂ, ವಿಶ್ವವಾಸಿನ್ಯೈ ನಮಃ ಎಂದು ಕಿರೀಟವನ್ನೂ, ಕಾಂತ್ಯೈ ನಮಃ ಎಂದು ಪುನಃ ದೇವಿಯ ಶ್ರೇಷ್ಠ ಮುಂಗುರುಳುಗಳನ್ನೂ ಪೂಜಿಸಬೇಕು.

೪೯. ಚಕ್ರಾವಧಾರಿಣ್ಯೈ ನಮಃ ಎಂದು ನೇತ್ರಗಳನ್ನೂ, ಪುಷ್ಟ್ಯೈ ನಮಃ ಎಂದು ವದನವನ್ನೂ ಉತ್ಕಂಠಿನ್ಯೈ ನಮಃ ಎಂದು ಕಂಠವನ್ನೂ, ಅನಂತಾಯೈ ನಮಃ ಎಂದು ಕಂಧರವನ್ನೂ ಭಕ್ತಿಯಿಂದ ಅರ್ಚಿಸಬೇಕು.

೫೦. ರಂಭಾಯೈ ನಮಃ ಎಂದು ಎಡತೋಳನ್ನೂ, ವಿಶೋಕಾಯೈ ನಮಃ ಎಂದು ಬಲತೋಳನ್ನೂ, ಮನ್ಮಥಾದಿತ್ಯೈ ನಮಃ ಎಂದು ಹೃದಯವನ್ನೂ ಕೊನೆಯಲ್ಲಿ ಪಾಟಲಾಯೈ ನಮೋ ನಮಃ ಎಂದು ಹೇಳಿ ಸರ್ವಾಂಗವನ್ನೂ ಅರ್ಚಿಸಬೇಕು.

೫೧. ಮಾತ್ಸರ್ಯಾದಿ ದೋಷಗಳನ್ನು ತ್ಯಜಿಸಿ ಶಾಂತತೆಯಿಂದ ಈರೀತಿ ಶಾಸ್ತ್ರಪ್ರಕಾರವಾಗಿ ಪೂಜಿಸಿ ಅನಂತರ ಬ್ರಾಹ್ಮಣ ದಂಪತಿಗಳಿಗೂ ಪೂಜೆಮಾಡಿ ಅವರಿಗೆ ಮಧುರವಾದ ಮೃಷ್ಟಾನ್ನ ಭೋಜನ ಮಾಡಿಸಬೇಕು.

**ಸಲಡ್ಡುಕಂ ವಾರಿಕುಂಭಂ ಶುಕ್ಲಾಂಬರಯುಗಂ ತತಂ ।**
**ದತ್ವಾ ಸುವರ್ಣಕಲಶಂ ಗಂಧಮಾಲ್ಯೈರಥಾರ್ಚಯೇತ್ ॥ ೫೨ ॥**

**ಪ್ರೀಯತಾಮತ್ರ ಕುಮುದಾ ಗೃಹ್ಣೀಯಾಲ್ಲವಣವ್ರತಂ ।**
**ಅನೇನ ವಿಧಿನಾ ದೇವೀಂ ಮಾಸಿ ಮಾಸಿ ಸಮರ್ಚಯೇತ್ ॥ ೫೩ ॥**

**ಲವಣಂ ವರ್ಜಯೇನ್ಮಾಘೇ ಫಾಲ್ಗುನೇ ಚ ಗುಡಂ ಪುನಃ ।**
**ತವರಾಜಂ ತಥಾ ಚೈತ್ರೇ ವರ್ಜ್ಯಂ ಚ ಮಧು ಮಾಧವೇ ॥ ೫೪ ॥**

**ಪಾರಕಂ ಜ್ಯೇಷ್ಠಮಾಸೇ ತು ಆಷಾಢೇ ಜೀರಕಂ ತಥಾ ।**
**ಶ್ರಾವಣೇ ವರ್ಜಯೇತ್ಕ್ಷೀರಂ ದಧಿ ಭಾದ್ರಪದೇ ತಥಾ ॥ ೫೫ ॥**

**ಘೃತಮಾಶ್ವಯುಜೇ ತದ್ವದ್ವರ್ಜಯೇದ್ಯಾ ಚ ಮಜ್ಜಿಕಾ ।**
**ಧಾನ್ಯಾಕಂ ಮಾರ್ಗಶೀರ್ಷೇ ತು ಪೌಷೇ ವರ್ಜ್ಯಾ ತು ಶರ್ಕರಾ ॥ ೫೬ ॥**

---

೫೨. ಮತ್ತು ಅವರಿಗೆ ಲಡ್ಡುಕಾ ಸಹಿತವಾಗಿ ಉದಕುಂಭವನ್ನೂ, ವಿಸ್ತಾರವಾದ ಶುಭ್ರವಸ್ತ್ರಯುಗಳವನ್ನೂ, ಸೌವರ್ಣ ಕಲಶವನ್ನೂ ಕೊಟ್ಟು ಗಂಧಮಾಲ್ಯಾದಿಗಳಿಂದ ಅರ್ಚಿಸಬೇಕು.

೫೩. "ಕುಮುದಾ ಪ್ರೀಯತಾಂ" ಎಂದು ವ್ರತವನ್ನು ಸಮರ್ಪಿಸಿ ಲವಣ ವ್ರತವನ್ನು ಸ್ವೀಕರಿಸಬೇಕು. ಎಂದರೆ ಉಪ್ಪನ್ನು ವರ್ಜ್ಯನೆಮಾಡಬೇಕು. ಇದೇ ರೀತಿಯಿಂದ ಪ್ರತಿ ತಿಂಗಳೂ ಶ್ರೀದೇವಿಯ ಅರ್ಚನೆಯನ್ನು ಮಾಡಬೇಕು.

೫೪. ಮಾಘಮಾಸದಲ್ಲಿ ಲವಣವನ್ನು ತ್ಯಜಿಸಬೇಕು. ಫಾಲ್ಗುಣ ಮಾಸದಲ್ಲಿ ಬೆಲ್ಲವನ್ನು ಉಪಯೋಗಿಸಬಾರದು. ಚೈತ್ರದಲ್ಲಿ ತವರಾಜವನ್ನೂ ವೈಶಾಖದಲ್ಲಿ ಮಧುವನ್ನೂ ತ್ಯಜಿಸಬೇಕು.

೫೫. ಜ್ಯೇಷ್ಠಮಾಸದಲ್ಲಿ ಹಾರಕವೂ, ಆಷಾಢದಲ್ಲಿ ಜೀರಿಗೆಯೂ, ಶ್ರಾವಣದಲ್ಲಿ ಹಾಲೂ, ಹಾಗೆಯೇ ಭಾದ್ರಪದದಲ್ಲಿ ಮೊಸರೂ ವರ್ಜ್ಯವು.

೫೬. ಅಶ್ವಯುಜ ಮಾಸದಲ್ಲಿ ತುಪ್ಪವೂ, ಕಾರ್ತೀಕ ಮಾಸವಲ್ಲಿ ವಜ್ಜಿಗೆಯೂ, ಮಾರ್ಗಶೀರ್ಷದಲ್ಲಿ ಕೊತ್ತಂಬರಿಯೂ, ಪುಷ್ಯದಲ್ಲಿ ಸಕ್ಕರೆಯೂ, ವರ್ಜ್ಯವು.

ವ್ರತಾಂತೇ ಕರಕಾಪೂರ್ಣಾ ಏತೇಷಾಂ ಮಾಸಿ ಮಾಸಿ ಚ ।
ದದ್ಯಾದ್ವಿಕಾಲವೇಲಾಯಾಂ ಭಕ್ಷ್ಯಪಾತ್ರೇಣ ಸಂಯುತಾನ್ ॥ ೫೭ ॥

ತಂಡುಲಾಞ್ಶ್ವೇತವರ್ಣಾಂಶ್ಚ ಸಂಯಾವಮಧುಪೂರಿಕಾಃ ।
ಘಾರಿಕಾ ಘೃತಪೂರಾಂಶ್ಚ ಮುಂಡಕಾನ್ಕ್ಷೀರಶಾಕಕಂ ॥ ೫೮ ॥

ದಧ್ಯನ್ನಂ ಷಡ್ವಿಧಂ ಚೈವ ಭಿಂಡಯಃ ಶಾಕವರ್ತಿಕಾಃ ।
ಮಾಘಾದೌ ಕ್ರಮಶೋ ದದ್ಯಾದೇತಾನಿ ಕರಕೋಪರಿ ॥ ೫೯ ॥

ಕುಮುದಾ ಮಾಧವೀ ಗೌರೀ ರಂಭಾ ಭದ್ರಾ ಜಯಾ ಶಿವಾ ।
ಉಮಾ ಶಚೀ ಸತೀ ತದ್ವನ್ಮಂಗಲಾ ರತಿಲಾಲಸಾ ॥ ೬೦ ॥

ಕ್ರಮಾನ್ಮಾಘಾದಿ ಸರ್ವತ್ರ ಪ್ರೀಯತಾಮಿತಿ ಕೀರ್ತಯೇತ್ ।
ಚರ್ವಂತಂ ಪಂಚಗವ್ಯಂ ಚ ಪ್ರಾಶನಂ ಸಮುದಾಹೃತಂ ॥ ೬೧ ॥

---

೫೭. ಪ್ರತಿಮಾಸದಲ್ಲೂ ವ್ರತಾಂತ್ಯದಲ್ಲಿ ತತ್ತನ್ಮಾಸಗಳಲ್ಲಿ ವರ್ಜಿಸಿದ ವಸ್ತುಗಳಿಂದ ತುಂಬಿದ ಕಮಂಡುಲುವನ್ನು ಭಕ್ಷ್ಯತುಂಬಿದ ಪಾತ್ರಸಹಿತವಾಗಿ ಆಯಾ ತಿಂಗಳು ಕಳೆದಮೇಲೆ ದಾನಮಾಡಬೇಕು.

೫೮. ಶ್ವೇತವರ್ಣದ ತಂಡುಲ, ರವೆಯಸಜ್ಜಿಗೆ, ಅಕ್ಕಿಯ ಹಿಟ್ಟಿನಿಂದ ಮಾಡಿದ ಮಧುರವಾದ ಪೂರಿ, ಗಾರಿಗೆ, ಘೃತದಲ್ಲಿ ಪಕ್ವಮಾಡಿದ ಭಕ್ಷ್ಯ, ಮಂಡಿಗೆ ಮತ್ತು ಹಾಲಿನ ಪಾಕದಿಂದ ತಯಾರಿಸಿದ ಭಕ್ಷ್ಯ.

೫೯. ಮತ್ತು ದಧಿ ಮೊದಲಾದ ಸಂಭಾರಗಳಿಂದ ಕಲಸಿದ ಷಡ್ವಿಧವಾದ ಅನ್ನ, ಶಾಕಗಳಿಂದ ಮಾಡುವ ಬೋಂಡವೆಂಬ ಭಕ್ಷ್ಯ ಇತ್ಯಾದಿಗಳನ್ನು ಕಮಂಡುಲುವಿನಲ್ಲಿ ಇಟ್ಟು ಪ್ರತಿಮಾಸಗಳಲ್ಲೂ ದಾನಮಾಡಬೇಕು.

೬೦-೬೧. ಕುಮುದಾ, ಮಾಧವೀ, ಗೌರೀ, ರಂಭಾ, ಭದ್ರಾ, ಜಯಾ, ಶಿವಾ, ಉಮಾ, ಶಚೀ, ಸತೀ, ಮಂಗಲಾ, ರತಿಲಾಲಸಾ ಎಂಬ ಈ ಹನ್ನೆರಡು ನಾಮಗಳನ್ನು ಮಾಘಾದಿಮಾಸಗಳಲ್ಲಿ ಕ್ರಮವಾಗಿ ಹೇಳಿ ವ್ರತಸಮರ್ಪಣೆಮಾಡಬೇಕು. ಅಂದರೆ ಮಾಘಮಾಸದಲ್ಲಿ ಕುಮುದಾಪ್ರೀಯತಾಂ ಎಂದು ಹೇಳಿ ಉದಕವನ್ನು ಬಿಡಬೇಕು. ಈ ವ್ರತದಲ್ಲಿ ಜೀರು ಮತ್ತು ಪಂಚಗವ್ಯ ಇವನ್ನು ಪ್ರಾಶನದ್ರವ್ಯವಾಗಿ ಉಪಯೋಗಿಸಬೇಕೆಂದು ಉಕ್ತವಾಗಿದೆ.

ಉಪವಾಸೀ ಭವೇನ್ನಿತ್ಯಮಶಕ್ತೋ ದಕ್ಷಿಣೇ ಕರೇ ।
ಪುನರ್ಮಾಘೇ ತು ಸಂಪ್ರಾಪ್ಯ ಶರ್ಕರಾಂ ಕರಕೋಪರಿ ॥ ೬೨ ॥

ಕೃತ್ವಾ ತು ಕಾಂಚನೀಂ ಗೋಧಾಂ ಪಂಚರತ್ನಸಮನ್ವಿತಾಂ ।
ಉಮಾಮಂಗುಷ್ಠಮಾತ್ರಾಂ ಚ ಸುಧಾಸೂತ್ರೇ ಕಮಂಡಲುಂ ॥ ೬೩ ॥

ತದ್ವದ್ಗೋಮಿಥುನಂ ಸರ್ವಂ ಸುವರ್ಣಾಸ್ಯಂ ಸಿತಂ ಪರಂ ।
ಸವಸ್ತ್ರಭಾಜನಂ ದತ್ವಾ ಭವಾನೀಪ್ರೀಯತಾಮಿತಿ ॥ ೬೪ ॥

ಅನೇನ ವಿಧಿನಾ ಯಶ್ಚ ರಸಕಲ್ಯಾಣಿನೀವ್ರತಂ ।
ಕುರ್ಯಾತ್ಸ ಸರ್ವಪಾಪೇಭ್ಯಸ್ತತ್ಕ್ಷಣಾದೇವ ಮುಚ್ಯತೇ ॥ ೬೫ ॥

---

೬೨. ಈ ವ್ರತವನ್ನಾಚರಿಸುವಾಗ ಯಾವಾಗಲೂ ಉಪವಾಸದಿಂದಿರಬೇಕು. ವರ್ಷವೂ ಹಾಗೆ ಮಾಡಲು ಅಶಕ್ತನಾದರೆ ದಕ್ಷಿಣಾಯನದಲ್ಲಾದರೂ ಉಪವಾಸಮಾಡಿದರೆ ಸಾಕು.

೬೩. ಈರೀತಿ ಮಾಘಮಾಸ ಶುಕ್ಲಪಕ್ಷದಿಂದಾರಂಭಿಸಿ ಒಂದುವರ್ಷ ಪೂರ್ತವಾದಮೇಲೆ ಪುನಃ ಮಾಘಮಾಸಬರಲು ಶರ್ಕರಾಪೂರ್ಣವಾದ ಕಮಂಡಲುವನ್ನು ಅಂಗುಷ್ಠಪರಿಣಾಮದ ಸ್ವರ್ಣಮಯವಾದ ಉಮಾಪ್ರತಿಮೆಯನ್ನು ಪಂಚರತ್ನಗಳಿಂದಲಂಕರಿಸಿ,

೬೪. ಸುವರ್ಣಪಾತ್ರೆಯಲ್ಲಿರಿಸಿ ಆ ಪ್ರತಿಮೆಯನ್ನೂ, ಸೂತ್ರವೇಷ್ಟಿತವಾದ ಆ ಸುಧಾಕಲಶವನ್ನೂ ಸುವರ್ಣದ ಮುಖ ಬೆಳ್ಳಿಯಿಂದ ಇತರಾಂಗಗಳು, ಉಳ್ಳದ್ದಾಗಿ ತಯಾರಿಸಿದ ಗೋಮಿಥುನವನ್ನೂ ವಸ್ತ್ರ ಮತ್ತು ಹಾಲುಕರೆಯುವ ಪಾತ್ರೆ ಸಹಿತವಾಗಿ "ಭವಾನೀಪ್ರೀಯತಾಂ" ಎಂದು ಹೇಳಿ ಮೇಲೆಹೇಳಿದ ಪದಾರ್ಥಗಳೆಲ್ಲವನ್ನೂ ದಾನಮಾಡಬೇಕು.

೬೫. ಈರೀತಿಯಾಗಿ ಯಾವನು ರಸಕಲ್ಯಾಣಿನೀ ವ್ರತವನ್ನಾಚರಿಸುವನೋ ಅವನು ತತ್‌ಕ್ಷಣವೇ ಸರ್ವಪಾಪನಿರ್ಮುಕ್ತನಾಗುವನು.

ಭವಾರ್ಬುದಸಹಸ್ರಂ ತು ನ ದುಃಖೀ ಜಾಯತೇ ಕ್ವಚಿತ್ ।
ಅಗ್ನಿಷ್ಟೋಮಸಹಸ್ರೇಣ ಯತ್ಫಲಂ ತದವಾಪ್ನುಯಾತ್ ॥ ೬೬ ॥

ನಾರೀ ವಾ ಕುರುತೇ ಯಾ ತು ಕುಮಾರೀ ವಾ ಯುಧಿಷ್ಠಿರ ।
ವಿಧವಾ ವಾ ವರಾಕೀ ವಾ ಸಾಽಪಿ ತತ್ಫಲಭಾಗಿನೀ ।
ಸೌಭಾಗ್ಯಾರೊಗ್ಯ ಸಂಪನ್ನಾ ಗೌರೀ ಲೋಕೇ ಮಹೀಯತೇ ॥ ೬೭ ॥

ಇತಿ ಪಠತಿ ಯ ಇತ್ಥಂ ಯಃ ಶೃಣೋತಿ ಪ್ರಸಂಗಾತ್ ।
ಸಕಲಕಲುಷಮುಕ್ತಃ ಪಾರ್ವತೀಲೋಕಮೇತಿ ।

---

೬೬. ಮತ್ತು ಸಹಸ್ರಾರ್ಬುದ ಜನ್ಮಗಳವರೆಗೂ ಯಾವಾಗಲೂ ಎಲ್ಲೂ ದುಃಖಿತನಾಗುವುದಿಲ್ಲ. ಸಹಸ್ರಾವರ್ತನೆಯಾಗಿ ಅಗ್ನಿಷ್ಟೋಮ ಯಾಗವನ್ನಾಚರಿಸಿದವನಿಗೆ ಎಂತಹ ಪುಣ್ಯಫಲ ಲಭಿಸುವುದೋ ಅಂತಹ ಫಲವು ಈ ಪುಣ್ಯ ವ್ರತವನ್ನಾಚರಿಸಿದವನಿಗೂ ಬರುತ್ತದೆ.

೬೭. ಅಯ್ಯಾ ಯುಧಿಷ್ಠಿರ ! ಈ ವ್ರತವನ್ನು ಸುಮಂಗಲಿ, ಕನ್ನಿಕೆ, ವಿಧವೆ, ದುಷ್ಟಸ್ತ್ರೀ ಇಂತಹವರು ಆಚರಿಸಿದರೂ ಮೇಲೆ ಹೇಳಿದ ಫಲವು ಅವರಿಗೆ ಲಭಿಸುವುದು. ಮತ್ತು ಇಹದಲ್ಲಿ ಸೌಭಾಗ್ಯಾರೋಗ್ಯಗಳಿಂದ ಕೂಡಿ ಪರದಲ್ಲೂ ಶ್ರೀ ಗೌರೀಲೋಕಪ್ರಾಪ್ತಿಯು ಆಗಿ ಅಲ್ಲಿ ಪೂಜಿತರಾಗುವರು.

೬೮. ಮತ್ತು ಈ ವ್ರತಪ್ರತಿಪಾದಕರಾದ ಈ ಗ್ರಂಥವನ್ನು ಯಾವನು ಪಠನಮಾಡುವನೋ ಅಥವಾ ಪಠನಮಾಡುವುದನ್ನು ಪ್ರಸಂಗಾತ್ ಯಾವನು ಶ್ರವಣಮಾಡುವನೋ ಅಂಥವನು ಸಕಲಪಾಪವಿನಿರ್ಮುಕ್ತನಾಗಿ ಪಾರ್ವತೀ ಲೋಕವನ್ನು ಪಡೆಯುವನು. ಈ ವ್ರತವಿಷಯಕವಾದ ಈ ಗ್ರಂಥವನ್ನು ಓದಿ ಅರ್ಥವಿವರಣೆಮಾಡಿ ಇದರ ತಿಳುವಳಿಕೆಯನ್ನು ಇತರರಿಗೆ ಉಂಟುಮಾಡಿ ಸಿದವನು ಇಷ್ಟಾರ್ಥವನ್ನು ಪಡೆಯುವುದಲ್ಲದೆ ಮಹಾಜ್ಞಾನವುಳ್ಳ ಪುರುಷರಿಗೆ

**ಮತಿಮಪಿ ಚ ನರಾಣಾಂ ಯೋ ದದಾತಿ ಪ್ರಿಯಾರ್ಥಂ ।**
**ವಿಪುಲಮತಿಜನಾನಾಂ ನಾಯಕಃ ಸ್ಯಾದಮೋಘಂ ॥ ೨೮ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ರಸಕಲ್ಯಾಣಿನೀ ವ್ರತವರ್ಣನಂ ನಾಮ ಷಡ್ವಿಂಶತಿತಮೋಽಧ್ಯಾಯಃ.**



---

ನಾಯಕನಾಗುವನು. ಎಂದರೆ ಅಮೋಘವಾದ ಜ್ಞಾನೋದಯವನ್ನು ಪಡೆಯುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ರಸಕಲ್ಯಾಣಿನಿ ವರ್ಣನೆಯೆಂಬ ಇಪ್ಪತ್ತಾರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತವಿಂಶತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ತಥಾ ಚಾನ್ಯಾಂ ಪ್ರವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।
ಲೋಕೇಷು ನಾಮ್ನಾ ವಿಖ್ಯಾತಾಮಾರ್ದ್ರಾನಂದಕರೀಮಿಮಾಂ ॥ ೧ ॥

ಯದಾ ಶುಕ್ಲತೃತೀಯಾಯಾಮಾಷಾಢರ್ಕ್ಷಂ ಭವೇತ್ಕ್ವಚಿತ್ ।
ಬ್ರಹ್ಮರ್ಕ್ಷಂ ಚಾಥ ಮಾರ್ಗಂ ವಾ ವ್ರತಂ ಗ್ರಾಹ್ಯಂ ತದಾ ಶುಭಂ ॥ ೨ ॥

ದರ್ಭಗಂಧೋದಕೈಃ ಸ್ನಾನಂ ತದಾ ಸಮ್ಯಕ್ಸಮಾಚರೇತ್ ।
ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ॥ ೩ ॥

### ಇಪ್ಪತ್ತೇಳನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಸರ್ವಪಾಪ ನಾಶಕವಾಗಿಯೂ-ಲೋಕದಲ್ಲಿ "ಆರ್ದ್ರಾನಂದಕರೀ'' ಎಂಬ ನಾಮಧೇಯದಿಂದ ಪ್ರಸಿದ್ಧವಾಗಿಯೂ ಇರುವ ಇನ್ನೊಂದು ತೃತೀಯಾ ವ್ರತವನ್ನು ಹೇಳುತ್ತೇನೆ.

೨. ಯಾವಮಾಸದಲ್ಲಾದರೂ ಶುಕ್ಲಪಕ್ಷ ತೃತೀಯೆಯಲ್ಲಿ ಕದಾಚಿತ್ ಪೂರ್ವಾಷಾಢಾನಕ್ಷತ್ರ, ರೋಹಿಣೀನಕ್ಷತ್ರ ಅಥವಾ ಮೃಗಶಿರಾ ನಕ್ಷತ್ರ ಇವು ಬಂದಾಗ ಈ ಶುಭವ್ರತವನ್ನು ಪ್ರಾರಂಭಿಸಬೇಕು.

೩. ಈ ವ್ರತವನ್ನು ಆಚರಿಸುವವನು ದರ್ಭೋದಕ ಮತ್ತು ಗಂಧೋದಕ ಗಳಿಂದ ಚೆನ್ನಾಗಿ ಸ್ನಾನಮಾಡಬೇಕು. ಅನಂತರ ಬಿಳಿಯ ಶುಭ್ರವಸ್ತ್ರದ್ವಯ ನ್ನುಟ್ಟು ಬಿಳಿಯಪುಷ್ಪಮಾಲಿಕೆಗಳನ್ನು ಧರಿಸಿಕೊಂಡು ಶ್ರೀ ಗಂಧವನ್ನು ಹಚ್ಚಿ ಕೊಳ್ಳಬೇಕು.

ಭವಾನೀಮರ್ಚಯೇದ್ಭಕ್ತ್ಯಾ ಶುಕ್ಲಪುಷ್ಪೈಃ ಸುಗಂಧಿಭಿಃ ।
ಮಹಾದೇವೇನ ಸಹಿತಾಮುಪವಿಷ್ಟಾಂ ವರಾಸನೇ ॥ ೪ ॥

ವಾಸುದೇವ್ಯೈ ನಮಃ ಪಾದೌ ಶಂಕರಾಯ ನಮೋ ವಿಭೋಃ ।
ಜಂಘೇ ಶೋಕವಿನಾಶಿನ್ಯಾಯಾನಂದಾಯ ನಮಃ ಪ್ರಭೋಃ ॥ ೫ ॥

ರಂಭಾಯೈ ಪೂಜಯೇದೂರೂ ಶಿವಾಯ ಚ ಪಿನಾಕಿನಃ ।
ಆದಿತ್ಯೈ ಚ ಕಟಿಂ ಪೂಜ್ಯಾ ಶೂಲಿನಃ ಶೂಲಪಾಣಯೇ ॥ ೬ ॥

ಮಾಧವ್ಯೈ ಚ ತಥಾ ನಾಭಿಮಥ ಶಂಭೋರ್ಭವಾಯ ವೈ ।
ಸ್ತನಾವಾನಂದಕಾರಿಣ್ಯೈ ಶಂಕರಾಯೇಂದುಧಾರಿಣೇ ॥ ೭ ॥

---

೪. ಅನಂತರ ಉತ್ತಮವಾದ ಪೀಠದಲ್ಲಿ ಶ್ರೀ ಮಹಾದೇವನ ಮೂರ್ತಿ ಮತ್ತು ಭವಾನೀಮೂರ್ತಿ ಇವುಗಳನ್ನಿರಿಸಿ ಬಿಳಿಯಪುಷ್ಪಗಳಿಂದ ಭಕ್ತಿಪೂರ್ವಕವಾಗಿ ಅರ್ಚನೆಮಾಡಬೇಕು.

೫. ಅರ್ಚನಾಕಾಲದಲ್ಲಿ ವಾಸುದೇವ್ಯೈನಮಃ ಎಂದು ಹೇಳಿ ದೇವಿಯ ಪಾದಗಳಲ್ಲಿ ಅರ್ಚಿಸಬೇಕು. ಶಂಕರಾಯನಮಃ ಎಂದು ಹೇಳಿ ಮಹಾದೇವನ ಪಾದವನ್ನು ಪೂಜೆಮಾಡತಕ್ಕದ್ದು. ಇದೇರೀತಿ ಅಂಗಪೂಜಾನಾಮಗಳಲ್ಲಿ ಮೊದಲಿನ ನಾಮ ದೇವಿಯದಾಗಿಯೂ ಎರಡನೆ ನಾಮ ಮಹಾದೇವನದಾಗಿಯೂ ಕ್ರಮವಿಟ್ಟುಕೊಂಡು ಶೋಕವಿನಾಶಿನ್ಯೈಃನಮಃ ಎಂದು ದೇವಿಯಜಂಘೆಯನ್ನೂ ಆನಂದಾಯನಮಃ ಎಂದು ಮಹಾದೇವನ ಜಂಘೆಯನ್ನೂ ಅರ್ಚಿಸಬೇಕು.

೬. ರಂಭಾಯನಮಃ ಶಿವಾಯನಮಃ ಎಂದು ಹೇಳಿ ಇಬ್ಬರ ಊರುಪ್ರದೇಶವನ್ನೂ ಆದಿತ್ಯೈನಮಃ ಶೂಲಪಾಣಿಯೇನಮಃ ಎಂದು ಕಟಿಯನ್ನೂ ಪೂಜಿಸಬೇಕು.

೭. ಮಾಧವ್ಯೈನಮಃ ಭವಾಯನಮಃ ಎಂದು ಹೇಳಿ ನಾಭಿಯನ್ನೂ ಇದೇ ರೀತಿಯಲ್ಲಿ ಆನಂದಕಾರಿಣ್ಯೈನಮಃ ಮತ್ತು ಇಂದುಧಾರಿಣೇನಮಃ ಎಂದು ಸ್ತನಗಳನ್ನು ಅರ್ಚಿಸಬೇಕು.

**ಉತ್ಕಂಠಿನ್ಯೈ ನಮಃ ಕಂಠಂ ನೀಲಕಂಠಾಯ ವೈ ವಿಭೋಃ ।**
**ಕರಾವುತ್ಪಲಧಾರಿಣ್ಯೈ ರುದ್ರಾಯ ಜಗತೀಪತೇಃ　　॥ ೮ ॥**

**ಬಾಹುಂ ಚ ಪರಿರಂಭಿಣ್ಯೈ ನೃತ್ಯಶೀಲಾಯ ಶೂಲಿನಃ　　॥ ೯ ॥**

**ದೇವ್ಯಾ ಮುಖಂ ವಿಲಾಸಿನ್ಯೈ ವೃಷೇಶಾಯ ಪುನರ್ವಿಭೋಃ ।**
**ಸ್ಮಿತಂ ಸಸ್ಮರಶೀಲಾಯ್ಯೈ ವಿಶ್ವವಕ್ತ್ರಾಯ ವೈ ವಿಭೋಃ　　॥ ೧೦ ॥**

**ನೇತ್ರಂ ಮದನವಾಸಿನ್ಯೈ ವಿಶ್ವಧಾಮ್ನೇ ತ್ರಿಶೂಲಿನಃ ।**
**ಭ್ರುವೌ ರತಿಪ್ರಿಯಾಯ್ಯೈ ಚ ತಾಂಡವೇಶಾಯ ವೈ ವಿಭೋಃ　　॥ ೧೧ ॥**

**ದೇವ್ಯಾ ಲಲಾಟಮಿಂದ್ರಾಣ್ಯೈ ಹವ್ಯವಾಹಾಯ ವೈ ವಿಭೋಃ ।**
**ಸ್ವಾಹಾಯ್ಯೈ ಮುಕುಟಂ ದೇವ್ಯಾ ವಿಭೋಃ ಪಂಚಶರಾಯ ವೈ　　॥ ೧೨ ॥**

---

೮. ಉತ್ಕಂಠಿನ್ಯೈನಮಃ ನೀಲಕಂಠಾಯನಮಃ ಎಂದು ಇಬ್ಬರ ಕಂಠವನ್ನೂ ಉತ್ಪಲಧಾರಿಣ್ಯೈನಮಃ ರುದ್ರಾಯನಮಃ ಎಂದು ಹಸ್ತವನ್ನೂ ಪೂಜಿಸಬೇಕು.

೯. ಪರಿರಂಭಿಣ್ಯೈನಮಃ ನೃತ್ಯಶೀಲಾಯನಮಃ ಎಂದು ಇಬ್ಬರ ಬಾಹುಗಳನ್ನು ಮತ್ತೆಮತ್ತೆ ಅರ್ಚಿಸಬೇಕು.

೧೦. ಲಾಸಿನ್ಯೈನಮಃ ಎಂದು ಹೇಳಿ ದೇವಿಯ ಮುಖವನ್ನೂ ವೃಷೇಶಾಯನಮಃ ಎಂದು ಈಶ್ವರನ ಮುಖವನ್ನೂ ಸಸ್ಮರಶೀಲಾಯ್ಯೈನಮಃ ಎಂದು ದೇವಿಯಸ್ಮಿತವನ್ನೂ ವಿಶ್ವವಕ್ತ್ರಾಯನಮಃ ಎಂದು ಶಿವನಸ್ಮಿತವನ್ನೂ ಪೂಜಿಸಬೇಕು.

೧೧. ನೇತ್ರಗಳ ಪೂಜೆಯಲ್ಲಿ ದೇವಿಯನ್ನು ಮದನವಾಸಿನ್ಯೈನಮಃ ಎಂದೂ ಈಶ್ವರನನ್ನು ವಿಶ್ವಧಾಮ್ನೆನಮಃ ಎಂದೂ, ದೇವಿಯ ಹುಬ್ಬುಗಳನ್ನು ರತಿಪ್ರಿಯಾಯ್ಯೈ ನಮಃ ಎಂದೂ ಶಿವನಹುಬ್ಬನ್ನು ತಾಂಡವೇಶಾಯನಮಃ ಎಂದೂ ಪೂಜಿಸಬೇಕು.

೧೨. ದೇವಿಯ ಲಲಾಟವನ್ನು ಇಂದ್ರಾಣ್ಯೈನಮಃ ಎಂದೂ, ಪರಶಿವನ ಲಲಾಟವನ್ನು ಹವ್ಯವಾಹಾಯನಮಃ ಎಂದೂ, ದೇವಿಯ ಮುಕುಟವನ್ನು ಸ್ವಾಹಾಯ್ಯೈನಮಃ ಎಂದೂ ಈಶ್ವರನ ಮುಕುಟವನ್ನು ಪಂಚಶರಾಯನಮಃ ಎಂದೂ ಅರ್ಚಿಸಬೇಕು.

ವಿಶ್ವಕಾಯ್ಯೈ ವಿಶ್ವಮುಖ್ಯೈ ವಿಶ್ವಪಾದಕರೌ ಶಿವೌ ।
ಪ್ರಸನ್ನವದನೌ ವಂದೇ ಪಾರ್ವತೀಪರಮೇಶ್ವರೌ ॥ ೧೩ ॥

ಏವಂ ಸಂಪೂಜ್ಯ ವಿಧಿವದಗ್ರತಃ ಶಿವಯೋಃ ಪುನಃ ।
ಪದ್ಮೋತ್ಪಲಾನಿ ಚ ತಥಾ ನಾನಾವರ್ಣಾನಿ ಕಾರಯೇತ್ ॥ ೧೪ ॥

ಶಂಖಚಕ್ರೇ ಸಕಟಕೇ ಸ್ವಸ್ತಿಕಂ ವರ್ಧಮಾನಕಂ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ॥ ೧೫ ॥

ಶೃಂಗೋದಕಂ ಬಿಲ್ವಪತ್ರಂ ವಾರಿಕುಂಭಾನ್ವಿತಂ ತಥಾ ।
ಉಶೀರನೀರಂ ತದ್ವಚ್ಚ ಯವಚೂರ್ಣೋದಕಂ ತತಃ ॥ ೧೬ ॥

---

೧೩. ಆಮೇಲೆ

ವಿಶ್ವಕಾಯ್ಯೈ ವಿಶ್ವಮುಖ್ಯೈ ವಿಶ್ವಪಾದಕರೌಶಿವೌ ।
ಪ್ರಸನ್ನವದನೌ ವಂದೇ ಪಾರ್ವತೀ ಪರಮೇಶ್ವರೌ ॥

ಎಂದು ಹೇಳಿ ನಮಸ್ಕರಿಸಬೇಕು (ಸಮಸ್ತ ಪ್ರಂಚಸ್ವರೂಪಳೂ, ಲೋಕಪ್ರಧಾನಳೂ ಆದ ಪಾರ್ವತಿಯನ್ನೂ, ಪ್ರಪಂಚವೇ ಪಾದ ಮತ್ತು ಹಸ್ತವಾಗಿ ಉಳ್ಳ ಪರಮೇಶ್ವರನನ್ನೂ ಪ್ರಸನ್ನರಾದ ಈ ದಂಪತಿಗಳನ್ನು ನಾನು ನಮಸ್ಕರಿಸುವೆನು. ಇದು ಈ ಶ್ಲೋಕದ ಅರ್ಥ)

೧೪. ಈರೀತಿ ವಿಧಿವತ್ತಾಗಿ ಪೂಜಿಸಿ ಪಾರ್ವತೀ ಪರಮೇಶ್ವರರ ಎದುರು ಭಾಗದಲ್ಲಿ ನಾನಾ ವರ್ಣದ ರಂಗವಲ್ಲಿಗಳಿಂದ ತಾವರೆ, ನೈದಿಲೆ, ಶಂಕ, ಚಕ್ರ, ಕಟಕ, ಸ್ವಸ್ತಿಕ ಇತ್ಯಾದಿಗಳನ್ನು ಬರೆಸಬೇಕು.

೧೫. ಮಾರ್ಗಶೀರ್ಷಮಾಸ ಮೊದಲ್ಗೊಂಡು ಪ್ರತಿಮಾಸದ ಶುಕ್ಲಪಕ್ಷದ ದ್ವಿತೀಯಾದಲ್ಲಿ ಕ್ರಮವಾಗಿ ಗೋಮೂತ್ರ, ಗೋಮಯ, ಕ್ಷೀರ, ಮೊಸರು, ತುಪ್ಪ, ದರ್ಭೋದಕ.

೧೬. ಮತ್ತು ಗೋಶೃಂಗೋದಕ, ಬಿಲ್ವಪತ್ರ, ಕುಂಭೋದಕ, ಲಾಮಂಚದ ಉದಕ, ಯವಚೂರ್ಣ ಮಿಶ್ರೋದಕ.

ತಿಲೋದಕಂ ಚ ಸಂಪ್ರಾಶ್ಯ ಸ್ವಪ್ಯಾನ್ಮಾರ್ಗಶಿರಾದಿಷು ।
ಪ್ರತಿಪಕ್ಷದ್ವಿತೀಯಾಯಾಂ ಪ್ರಾಶನಂ ಸಮುದಾಹೃತಂ ॥ ೧೭ ॥

ಸರ್ವತ್ರ ಶುಕ್ಲಪುಷ್ಪಾಣಿ ಪ್ರಶಸ್ತಾನಿ ಶಿವಾರ್ಚನೇ ।
ದಾನಕಾಲೇಷು ಸರ್ವೇಷು ಮಂತ್ರಮೇತಮುದೀರಯೇತ್ ॥ ೧೮ ॥

ಗೌರೀ ಮೇ ಪ್ರೀಯತಾಂ ನಿತ್ಯಮಘನಾಶಾಯ ಮಂಗಲಾ ।
ಸೌಭಾಗ್ಯಾಯಾಸ್ತು ಲಲಿತಾ ಭವಾನೀ ಸರ್ವಸಿದ್ಧಯೇ ॥ ೧೯ ॥

ಸಂವತ್ಸರಾಂತೇ ಲವಣಂ ಗುಡಕುಂಭಂ ಸಮರ್ಜಿತಂ ।
ಚಂದನಂ ನೇತ್ರಪಟ್ಟಂ ಚ ಸಿತವಸ್ತ್ರಯುಗಾನ್ವಿತಂ ।
ಉಮಾಮಹೇಶ್ವರಂ ಹೈಮಂ ತದ್ವದಿಕ್ಷುಫಲೈರ್ಯುತಂ ॥ ೨೦ ॥

---

೧೭. ಮತ್ತು ತಿಲೋದಕ ಈ ಹನ್ನೆರಡು ಪದಾರ್ಥಗಳನ್ನು ಮಾರ್ಗಶಿರಾದಿ ಹನ್ನೆರಡು ತಿಂಗಳುಗಳ ಎರಡು ಪಕ್ಷದ ದ್ವಿತೀಯೆಯಲ್ಲೂ ಪ್ರಾಶನಾರ್ಥವಾಗಿ ಉಪಯೋಗಿಸಿ, ರಾತ್ರಿಯಲ್ಲಿ ಭೂಶಯನಮಾಡಬೇಕು.

೧೮. ಶ್ರೀ ಉಮಾಮಹೇಶ್ವರರ ಪೂಜೆಯಲ್ಲಿ ಬಿಳಿಯ ಪುಷ್ಪಗಳನ್ನು ಉಪಯೋಗಿಸುವುದು ಪ್ರಶಸ್ತ. ಎಲ್ಲಾಮಾಸಗಳಲ್ಲೂ ಈ ವ್ರತೋದ್ದೇಶವಾಗಿ ಕೊಡಬೇಕಾದ ದಾನಗಳಲ್ಲಿ ದಾತೃವು.

೧೯. ಗೌರೀಮೇ ಪ್ರಿಯತಾಂ ನಿತ್ಯಂ ಅಘನಾಶಾಯಮಂಗಲಾ ।
ಸೌಭಾಗ್ಯಾಯಾಸ್ತು ಲಲಿತಾಭವಾನೀ ಸರ್ವಸಿದ್ಧಯೇ ॥

ಈ ಮಂತ್ರವನ್ನು ಹೇಳಬೇಕು. "ಶ್ರೀ ಗೌರಿಯು ಯಾವಾಗಲೂ ನನ್ನ ವಿಷಯದಲ್ಲಿ ಸುಪ್ರೀತಳಾಗಿರಲಿ; ಮಂಗಲಾದೇವಿಯು ಸರ್ವಪಾಪವನ್ನೂ ನಾಶಮಾಡಲಿ. ಲಲಿತಾದೇವಿಯು ಸರ್ವಸೌಭಾಗ್ಯವನ್ನೂ ನೀಡಲಿ. ಭವಾನಿಯು ಸರ್ವಾರ್ಥವನ್ನೂ ಸಾಧಿಸಿಕೊಡಲಿ" ಎಂದು ಮಂತ್ರಾರ್ಥವು.

೨೦-೨೧. ಈರೀತಿ ಪ್ರತಿಮಾಸದಲ್ಲೂ ಪೂಜೆಮಾಡಿ ವರ್ಷಾಂತದಲ್ಲಿ ಬೆಲ್ಲ, ಉಪ್ಪು-ತುಂಬಿದ ಕಲಶ, ಚಂದನ, ಕುಂಕುಮ, ಕಾಡಿಗೆ, ಶುಕ್ಲವಸ್ತ್ರಯುಗ್ಮ, ಸುವರ್ಣದ ಉಮಾಮಹೇಶ್ವರರ ಪ್ರತಿಮೆ, ಹಣ್ಣು, ಕಬ್ಬು, ಮಂಚ, ಹಾಸುವ ಬಟ್ಟೆಸಹಿತವಾದ ಹಾಸಿಗೆ ಈ ಪದಾರ್ಥಗಳನ್ನು ಸಪತ್ನೀಕನಾದ ಬ್ರಾಹ್ಮಣನಿಗೆ

ಪ್ರಸ್ತರಾವರಣಂ ಶಯ್ಯಾಂ ಸವಿಶ್ರಾಮಾಂ ನಿವೇದಯೇತ್ ।
ಸಪತ್ನೀಕಾಯ ವಿಪ್ರಾಯ ಗೌರೀ ಮೇ ಪ್ರೀಯತಾಮಿತಿ ॥ ೨೧ ॥

ಆರ್ದ್ರಾನಂದಕರೀ ನಾಮ ತೃತೀಯ್ಯೈಷಾ ಸನಾತನೀ ।
ಯಾಮುಪೋಷ್ಯ ನರೋ ಯಾತಿ ಶಂಭೋಸ್ತತ್ಪರಮಂ ಪದಂ ॥ ೨೨ ॥

ಇಹ ಲೋಕೇ ಯಮಾನಂದಂ ಪ್ರಾಪ್ನೋತಿ ಧನಸಂಚಯಾತ್ ।
ಆಯುರಾರೋಗ್ಯಸಂಪನ್ನೋ ನ ಕಿಂಚಿಚ್ಛೋಕಮಾಪ್ನುಯಾತ್ ॥ ೨೩ ॥

ನಾರೀ ವಾ ಕುರುತೇ ಯಾ ತು ಕುಮಾರೀ ವಿಧವಾ ತಥಾ ।
ಸಾಪಿ ತತ್ಫಲಮಾಪ್ನೋತಿ ದೇವ್ಯನುಗ್ರಹಲಾಲಿತಾ ॥ ೨೪ ॥

ಪ್ರತಿಪಕ್ಷಮುಪೋಷ್ಯೈವಂ ಮಂತ್ರಾರ್ಚನವಿಧಾನತಃ ।
ರುದ್ರಾಣೀಲೋಕಮಾಪ್ನೋತಿ ಪುನರಾವೃತ್ತಿವರ್ಜಿತಂ ॥ ೨೫ ॥

---

"ಗೌರೀಮೇ ಪ್ರೀಯತಾಂ" ಗೌರಿಯು ನನ್ನಲ್ಲಿ ಸುಪ್ರೀತಳಾಗಲಿ ಎಂದು ಹೇಳಿ ದಾನಮಾಡಬೇಕು.

೨೨. ಪುರಾತನವಾದ ಈ ಆರ್ದ್ರಾನಂದಕರೀ ತೃತೀಯಾವ್ರತವನ್ನು ಉಪವಾಸಪೂರ್ವಕವಾಗಿ ಆಚರಿಸಿದ ಮನುಷ್ಯನು ಶ್ರೀ ಶಿವನ ಪರಮಪದವನ್ನು ಪಡೆಯುವನು.

೨೩. ಮತ್ತು ಈ ಲೋಕದಲ್ಲೂ ಆಯುರಾರೋಗ್ಯಸಂಪನ್ನನಾಗಿ ಪ್ರಭೂತ ಧನವನ್ನು ಹೊಂದಿ ಸಕಲಾನಂದವನ್ನೂ ಪಡೆಯುತ್ತಾನೆ. ಅವನಿಗೆ ದುಃಖ ಲೇಶವೂ ಸಂಭವಿಸುವುದಿಲ್ಲ.

೨೪. ಈ ವ್ರತವನ್ನು ನಾರಿಯಾಗಲಿ, ಕುಮಾರಿಯಾಗಲಿ, ವಿಧವೆ ಯಾಗಲಿ ಆಚರಿಸಿದರೆ ಶ್ರೀದೇವೀ ಪ್ರಸಾದದಿಂದ ಅವರಿಗೂ ಈ ವ್ರತವು ಫಲದಾಯಕವಾಗುವುದು.

೨೫. ಪ್ರತಿಮಾಸದ ಎರಡು ದ್ವಿತೀಯದಲ್ಲೂ ಉಪವಾಸದಿಂದ ಇದ್ದು ಈರೀತಿ ಮಂತ್ರಪೂರ್ವಕವಾಗಿ ಅರ್ಚನೆಯನ್ನು ಮಾಡುವುದರಿಂದ ಪುನರಾವೃತ್ತಿ ಯಿಲ್ಲದ ರುದ್ರಾಣೀಲೋಕವು ಲಭಿಸುವುದು.

**ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಪಿ ಮಾನವಃ ।**
**ಶಕ್ರಲೋಕೇ ಸಗಂಧರ್ವೈಃ ಪೂಜ್ಯತೇಽಬ್ದಶತತ್ರಯಂ ॥ ೨೬ ॥**

**ಆನಂದದಾಂ ಸಕಲದುಃಖಹರಾಂ ತೃತೀಯಾಂ ।**
**ಯಾ ಸ್ತ್ರೀ ಕರೋತಿ ವಿಧಿವತ್ಸಧವಾಧವಾ ಚ ।**
**ಸಾ ಸ್ವೇ ಗೃಹೇ ಸುಖಶತಾನ್ಯನುಭೂಯ ಭೂಯೋ ।**
**ಗೌರೀಪುರಂ ಸದಯಿತಾ ಮುದಿತಾ ಪ್ರಯಾತಿ ॥ ೨೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಆದ್ರಾ್ರನಂದಕರೀ ತೃತೀಯಾ ವ್ರತಂ ನಾಮ ಸಪ್ತವಿಂಶತಿತಮೋಽಧ್ಯಾಯಃ.**



---

೨೬. ಯಾವ ಮನುಷ್ಯನು ಈ ವ್ರತವನ್ನು ಶ್ರವಣಮಾಡುವನೋ ಅಥವಾ ಇತರರಿಗೆ ಶ್ರವಣಮಾಡಿಸುವನೋ ಅಂಥವನು ಇಂದ್ರಲೋಕದಲ್ಲಿ ಮುನ್ನೂರು ವರ್ಷಕಾಲ ದೇವಗಂಧರ್ವಾದಿಗಳಿಂದ ಪೂಜಿತನಾಗುತ್ತಾನೆ.

೨೭. ಸುಖದಾಯಕವೂ ಸಕಲದುಃಖನಿವಾರಕವೂ ಆದ ಈ ಆದ್ರಾ್ರನಂದ ಕರೀ ತೃತೀಯಾವ್ರತವನ್ನು ಸುಮಂಗಲಿಯಾಗಲಿ ಅಥವಾ ವಿಧವೆಯಾಗಲಿ ವಿಧಿವತ್ತಾಗಿ ಮಾಡಿದರೆ ಅಂಥವಳು ಸ್ವಗೃಹದಲ್ಲಿ ಅನೇಕ ಸುಖಗಳನ್ನನುಭವಿಸಿ ಆನಂದ ಸಂತೋಷಗಳಿಂದ ತನ್ನ ಪ್ರಿಯನಜೊತೆಯಲ್ಲಿ ಶ್ರೀ ಗೌರೀಲೋಕವನ್ನು ಪಡೆಯುವಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಆದ್ರಾ್ರನಂದಕರೀ ತೃತೀಯಾವ್ರತವರ್ಣನೆ ಎಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟವಿಂಶತಿತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಚೈತ್ರೇ ಭಾದ್ರಪದೇ ಮಾಘೇ ರೂಪಸೌಭಾಗ್ಯಪುತ್ರದಂ ।
ತೃತೀಯಾತ್ರಯಮೇತನ್ಮೇ ಕೃಷ್ಣ ಕಸ್ಮಾನ್ನ ಕೀರ್ತಿತಂ ॥ ೧ ॥

ಕಿಮಹಂ ಭಕ್ತಿರಹಿತಸ್ತ್ರಯೀಮಾರ್ಗಾತಿಗೋ ನರಃ ।
ಸುಪ್ರಸಿದ್ಧಂ ಜಗತ್ಯೇತದ್ಗೋಪಿತಂ ಕೇನ ಹೇತುನಾ ॥ ೨ ॥

ಭವಾನ್ಸರ್ವಾರ್ಥಾನುಕೂಲಃ ಸರ್ವಜ್ಞ ಇತಿ ಮೇ ಮತಿಃ ।
॥ ಶ್ರೀ ಕೃಷ್ಣ ಉವಾಚ ॥
ವ್ರತಂ ಚೈತಜ್ಜಗತ್ಖ್ಯಾತಂ ನಾಖ್ಯಾತಂ ತೇನ ತೇ ಮಯಾ ॥ ೩ ॥

---

### ಇಪ್ಪತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—"ಎಲೈ ಕೃಷ್ಣನೇ! ರೂಪ, ಸೌಭಾಗ್ಯ ಮತ್ತು ಸಂತಾನಫಲದಾಯಕವಾದ ಚೈತ್ರ, ಭಾದ್ರಪದ ಮತ್ತು ಮಾಘಮಾಸಗಳ ಶುಕ್ಲಪಕ್ಷದ ಮೂರು ತೃತೀಯಾತಿಥಿಯಲ್ಲೂ ಆಚರಿಸಬೇಕಾದ ವ್ರತವನ್ನು ನನಗೆ ನೀನು ಏತಕ್ಕೆ ಹೇಳಲಿಲ್ಲ.

೨. ನಾನು ನಿನ್ನ ಭಕ್ತವೃಂದದವನಲ್ಲವೇ ? ಅಥವಾ ವೇದೋಕ್ತಮಾರ್ಗವನ್ನುಲ್ಲಂಘನೆಮಾಡಿದ ನಾಸ್ತಿಕನೇ ! ಲೋಕದಲ್ಲಿ ಸುಪ್ರಸಿದ್ಧವಾದ ಈ ವ್ರತವನ್ನು ನನಗೆ ಹೇಳದೆ ರಹಸ್ಯವಾಗಿಡಲು ಕಾರಣವೇನು ?

೩. ನೀನು ಸರ್ವ ಇಷ್ಟಾರ್ಥಗಳ ದಾತೃವೂ ಮತ್ತು ಸರ್ವಜ್ಞನೂ ಎಂದು ನಾನು ದೃಢವಾಗಿ ನಂಬಿದ್ದೇನೆ " ಎಂದನು.

ಯದ್ಯಸ್ತಿ ಶ್ರವಣೇ ಬುದ್ಧಿಃ ಶ್ರೂಯತಾಂ ಪಾಂಡುನಂದನ ।
ಕೋಽನ್ಯಃ ಶ್ರೋತಾ ಜಗತ್ಯಸ್ಮಿನ್ಭವತಾ ಸದೃಶೋ ಭುವಿ ॥ ೪ ॥

ಜಯಾ ಚ ವಿಜಯಾ ಚೈವ ಉಮಾಯಾಃ ಪರಿಚಾರಿಕೇ ।
ಆಗತ್ಯ ಮುನಿಕನ್ಯಾಭಿಃ ಪೃಷ್ಟೇಭೀಷ್ಟಫಲೇಚ್ಛಯಾ ॥ ೫ ॥

ಭವತ್ಯೌ ಸರ್ವದಾ ದೇವ್ಯಾಶ್ಚಿತ್ತವೃತ್ತಿವಿದೌ ಕಿಲ ।
ಕೇನ ವ್ರತೋಪಚಾರೇಣ ಕಸ್ಮಿನ್ನಹನಿ ಪಾರ್ವತೀ ।
ಪೂಜಿತಾ ತುಷ್ಟಿಮಭ್ಯೇತಿ ಮಂತ್ರೈಃ ಕೈಶ್ಚ ವರಾನನೇ ॥ ೬ ॥

ತಾಸಾಂ ತದ್ವಚನಂ ಶ್ರುತ್ವಾ ಜಯಾ ಪ್ರೋವಾಚ ಸಾದರಂ ।
ಶ್ರೂಯತಾಭಿಧಾಸ್ಯಾಮಿ ಸರ್ವಕಾಮಫಲಪ್ರದಂ ।
ವ್ರತಮುತ್ಸವಸಂಯುಕ್ತಂ ನರನಾರೀಮನೋರಮಂ ॥ ೭ ॥

---

೪. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಪಾಂಡುಪುತ್ರನೇ ! ಇದು ಎಲ್ಲರಿಗೂ ಗೊತ್ತಿರುವ ಪ್ರಸಿದ್ಧ ವ್ರತ ಎಂಬ ಕಾರಣದಿಂದ ಹೇಳಲಿಲ್ಲ ಇದನ್ನು ಕೇಳಬೇಕೆಂದು ಅಪೇಕ್ಷೆ ಇರುಪ್ಪದಾದರೆ ಹೇಳುತ್ತೇನೆ. ಈ ಜಗತ್ತಿನಲ್ಲಿ ನಿನ್ನಂತಹ ಶ್ರೋತೃವು ಇನ್ಯಾವನಿದ್ದಾನೆ ?

೫. ಪೂರ್ವದಲ್ಲಿ ಶ್ರೀ ಉಮಾದೇವಿಯ ಪರಿಚಾರಿಣಿಯರಾದ ಜಯಾ ಮತ್ತು ವಿಜಯಾ ಎಂಬ ದಾಸಿಯರ ಸಮೀಪಕ್ಕೆ ಋಷಿಕನ್ನಿಕೆಯರು ಒಂದು ದಿನ ಬಂದು ಇಷ್ಟಫಲಪ್ರಾಪ್ತ್ಯಭಿಲಾಷೆಯಿಂದ ಈ ಮುಂದೆ ಹೇಳುವ ರೀತಿ ಪ್ರಶ್ನೆ ಮಾಡಿದರು.

೬. " ಸುಂದರಮುಖಿಯರೇ ! ನೀವಿಬ್ಬರೂ ಸಹ ಉಮಾದೇವಿಯ ಚಿತ್ತವೃತ್ತಿಯನ್ನು ಚೆನ್ನಾಗಿ ಅರಿತಿರುವಿರಿ. ಯಾವ ದಿನದಲ್ಲಿ ಯಾವ ವ್ರತವನ್ನು ಆಚರಿಸಿದರೆ ಶ್ರೀ ಪಾರ್ವತಿಯು ಆ ಪೂಜೆಯಿಂದ ಸಂತುಷ್ಟಳಾಗುವಳು ? ಯಾವ ಮಂತ್ರ ಜಪದಿಂದ ನಾವು ಅವಳ ಪ್ರೀತಿಗೆ ಪಾತ್ರರಾಗಬಹುದು ? '' ಎಂದರು.

೭. ಆ ಋಷಿಕನ್ನಿಕೆಯರ ಈ ಮಾತನ್ನು ಕೇಳಿ ಜಯಾ ಎಂಬ ದಾಸಿಯು " ಎಲೌ ಋಷಿಕನ್ನಿಕೆಯರೇ ! ಸರ್ವಾಭಿಲಾಷಿತ ಫಲದಾಯಕವಾಗಿಯೂ ಸಂಗೀತ ನರ್ತನಾದ್ಯುತ್ಸವ ಸಹಿತವಾಗಿಯೂ ನರನಾರಿಯರಿರ್ವರಿಗೂ ಪ್ರಿಯವಾಗಿಯೂ ಇರುವ ವ್ರತವೊಂದನ್ನು ಹೇಳುತ್ತೇನೆ ಕೇಳಿ '' ಎಂದು ಸಾದರದಿಂದ ನುಡಿದಳು.

ಚೈತ್ರೇ ಸಿತತೃತೀಯಾಯಾಂ ದಂತಧಾವನಪೂರ್ವಕಂ ।
ಉಪವಾಸಸ್ಯ ನಿಯಮಂ ಗೃಹ್ಣೀಯಾದ್ಭಕ್ತಿಭಾವಿತಂ ॥ ೮ ॥

ಸಕುಂಕುಮಂ ಸತಾಂಬೂಲಂ ಸಿಂದೂರಂ ರಕ್ತವಾಸಸೀ ।
ಬಿಭೃಯಾತ್ ಸೋಪವಾಸಾಸ್ಯವೈಧವ್ಯಕರಣಂ ಪರಂ ॥ ೯ ॥

ವಿಧವಾ ಯಾತಿ ಮಾರ್ಗೇಣ ಕುಮಾರೀ ತು ಯದೃಚ್ಛಯಾ ।
ಕುರ್ಯಾದಭ್ಯರ್ಚನವಿಧಿಂ ಶ್ರೂಯತಾಂ ಮಂತ್ರವಿತ್ಕ್ರಮಃ ॥ ೧೦ ॥

ನೇತ್ರಪಟ್ಟಪಟೀವಸ್ತ್ರೈರ್ವಸ್ತ್ರಮಂಡಪಿಕಾಂ ಶುಭಾಂ ।
ಕಾರಯೇತ್ಕುಸುಮಾಮೋದದಿವ್ಯಾಭರಣಭೂಷಿತಾಂ ॥ ೧೧ ॥

---

೮. ಚೈತ್ರಮಾಸದ ಶುಕ್ಲಪಕ್ಷದ ತೃತೀಯಾ ದಿನದಲ್ಲಿ ದಂತಧಾವನ ಮಾಡಿದ ಮೇಲೆ ಭಕ್ತಿಪೂರ್ವಕವಾಗಿ ಉಪವಾಸ ನಿಯಮವನ್ನು ಪರಿಗ್ರಹಿಸಬೇಕು.

೯. ಉಪವಾಸ ವ್ರತವನ್ನಾಚರಿಸುವುದರ ಜೊತೆಗೆ ಮುಂದೆ ಯಾವಾಗಲೂ ವೈಧವ್ಯ ಬಾರದಿರುವುದಕ್ಕಾಗಿ ಕುಂಕುಮ, ಚಂದ್ರದ ತಿಲಕವನ್ನು ಇಟ್ಟು ತಾಂಬೂಲ ಸೇವಿಸಿ ರಕ್ತವಸ್ತ್ರಗಳನ್ನು ಧಾರಣೆಮಾಡಬೇಕು.

೧೦. ವಿಧವೆ ಆಚರಿಸಿದರೆ ಇನ್ನೊಂದು ಜನ್ಮದಲ್ಲಿ ದೀರ್ಘಸುಮಂಗಲೀ ಪದವನ್ನು ಪಡೆಯುವಳು. ಕುಮಾರಿಯು ಈ ವ್ರತವನ್ನಾಚರಿಸಿದರೆ ಅವಳಿಗೆ ಈ ಜನ್ಮದಲ್ಲೇ ಸಮೃದ್ಧವಾಗಿ ಫಲಗಳು ಲಭಿಸುವುವು. ಅರ್ಚನಾಕ್ರಮದಲ್ಲಿ ವಿಧವೆಯು ವಿಧ್ಯುಕ್ತಮಾರ್ಗಕ್ಕೆ ನ್ಯೂನತೆಬಾರದಂತೆ ಅನುಷ್ಠಾನಮಾಡಬೇಕು. ಕನ್ನಿಕೆಯು ಯದೃಚ್ಛಯಾ ಲಭ್ಯವಾದ ಪದಾರ್ಥಗಳಿಂದ ಅರ್ಚನೆಮಾಡಬಹುದು. ಮಂತ್ರಜ್ಞರು ಹೇಳುವ ಅರ್ಚನಾ ವಿಧಿಯನ್ನು ಹೇಳುತ್ತೇನೆ ಕೇಳು.

೧೧. ಸೂಕ್ಷ್ಮವಾದ ಪಟ್ಟೆವಸ್ತ್ರಗಳಿಂದ ಮಂಗಳಕರವಾದ ವಸ್ತ್ರಮಂಟಪವನ್ನು ರಚಿಸಿ ಆ ಮಂಟಪವನ್ನು ಸುಗಂಧ ಪುಷ್ಪಗಳಿಂದಲೂ ದಿವ್ಯಾಭರಣಗಳಿಂದಲೂ ಅಲಂಕರಿಸಬೇಕು.

ಪ್ರವಾಲಲಂಬಿತವ್ರಾತಾಮಂತರ್ದಿವ್ಯವಿತಾನಿಕಾಂ ।
ವಿನ್ಯಸ್ತಪೂರ್ಣಕಲಶಾಂ ಸತ್ಪೀಠಸ್ಥಾಪಿತದ್ವಿಜಾಂ ॥ ೧೨ ॥

ಪುರತಃ ಕಾರಯೇತ್ಕುಂಡಂ ಹಸ್ತಮಾತ್ರಂ ಸಮೇಖಲಂ ।
ತತಃ ಸ್ನಾತಾನುಲಿಪ್ತಾ ಚ ಪರಿಧಾಯ ಸುವಾಸಸೀ ॥ ೧೩ ॥

ದೇವಾನ್ಪಿತ್ರ್ಯಾನ್ ಸಮಭ್ಯರ್ಚ್ಯ ತತೋ ದೇವೀಗೃಹಂ ವ್ರಜೇತ್ ।
ನಾಮಾಷ್ಟಕೇನ ಸಂಪೂಜ್ಯಾ ಗೌರೀ ಗೋಪತಿವಲ್ಲಭಾ ॥ ೧೪ ॥

ತತ್ಕಾಲಪ್ರಭವೈಃ ಪುಷ್ಪೈರ್ಗಂಧಾಲಿಬಕುಲಾಕುಲೈಃ ।
ಕುಂಕುಮೇನ ಸಮಾಲಭ್ಯ ಕರ್ಪೂರಾಗುರುಚನ್ದನೈಃ ॥ ೧೫ ॥

---

೧೨. ಮತ್ತು ಆ ಮಂಟಪದ ಸುತ್ತಲೂ ಹವಳಗಳನ್ನು ಲಂಬಮಾನವಾಗಿ ಅಲಂಕರಿಸಿ, ಒಳಭಾಗದಲ್ಲಿ ದಿವ್ಯವಾದ ಮೇಲ್ಕಟ್ಟನ್ನು ಕಟ್ಟಬೇಕು. ಈ ಮಂಟಪದೊಳಗೆ ಪೂರ್ಣಕಲಶವನ್ನು ಸ್ಥಾಪನೆಮಾಡಿ, ಉತ್ತಮ ಪೀಠದಲ್ಲಿ ದೇವೀ ಪ್ರತಿಮೆಯನ್ನು ಸ್ಥಾಪಿಸಬೇಕು.

೧೩. ಪುರೋಭಾಗದಲ್ಲಿ ಪರಿಸ್ತರಣಸಹಿತವಾಗಿ ಒಂದು ಹಸ್ತಪ್ರಮಾಣವುಳ್ಳ ಹೋಮಕುಂಡವನ್ನು ರಚಿಸಬೇಕು. ಅನಂತರ ತೈಲವನ್ನು ಲೇಪನಮಾಡಿಕೊಂಡು ಸ್ನಾನಮಾಡಿ ಸುವಸನಗಳನ್ನು ಧರಿಸಬೇಕು.

೧೪. ಅನಂತರದಲ್ಲಿ ದೇವಪೂಜೆ ಮತ್ತು ಪಿತೃಪೂಜೆಯನ್ನು ಮಾಡಿ ಆ ದೇವೀಮಂಟಪಕ್ಕೆ ಹೋಗಿ ಎಂಟು ನಾಮಗಳನ್ನು ಹೇಳಿ ಪಶುಪತಿವಲ್ಲಭೆಯಾದ ಶ್ರೀ ಗೌರಿಯನ್ನು ಪೂಜಿಸಬೇಕು.

೧೫. ತತ್ಕಾಲದಲ್ಲಿ ದೊರೆಯುವ ಪುಷ್ಪಗಳಿಂದಲೂ ಸುಗಂಧವುಳ್ಳ ಬಕುಲಾದಿ ಇತರ ಪುಷ್ಪಗಳಿಂದಲೂ ಪೂಜಿಸಬೇಕು. ದೇವಿಗೆ ಕುಂಕುಮ, ಕರ್ಪೂರ, ಅಗುರು, ಚಂದನ ಇತ್ಯಾದಿಗಳನ್ನು ಲೇಪಿಸಬೇಕು.

ಏವಂ ಸಂಪೂಜ್ಯ ವಿಧಿವತ್ಸದ್ಧೂಪೇನಾಧಿವಾಸಯೇತ್ ।
ಪಾರ್ವತೀ ಲಲಿತಾ ಗೌರೀ ಗಾಂಧಾರೀ ಶಾಂಕರೀ ಶಿವಾ ।
ಉಮಾ ಸತೀ ಸಮುದ್ದಿಷ್ಟನಾಮಾಷ್ಟಕಮಿದಂ ಮಯಾ ॥ ೧೬ ॥

ಲಡ್ಡುಕೈಃ ಖಂಡವೇಷ್ಟೈಶ್ಚ ಗುಡಕೈಃ ಸಿಂಹಕೇಸರೈಃ ।
ಸೋಹಾಲಕೈಃ ಕೋಕಸರೈಃ ಖಂಡಖಾದ್ಯಕರಂಬಕೈಃ ॥ ೧೭ ॥

ಘೃತಪಕ್ವೈರ್ಬಹುವಿಧೈಃ ಸುಪಕ್ವಫಲಕಲ್ಪಿತೈಃ ।
ದೃಷ್ಟಿಘ್ರಾಣಹರೈರ್ಹೃದ್ಯೈರ್ನೈವೇದ್ಯೈಃ ಪ್ರೀಣಯೇದುಮಾಂ ॥ ೧೮ ॥

ಕಟುಖಂಡಂ ಜೀರಕಂ ಚ ಕುಂಕುಮಂ ಲವಣಾರ್ದ್ರಕಂ ।
ಇಕ್ಷುದಂಡಾನೈಕ್ಷವಂ ಚ ಹರಿದ್ರಾದ್ರಾನ್ಪುರೋ ನ್ಯಸೇತ್ ॥ ೧೯ ॥

ನಾರಿಕೇಲಾನಾಮಲಕಾನ್ಮಾತುಲುಂಗಾನ್ಸದಾಡಿಮಾನ್ ।
ಕೂಷ್ಮಾಂಡಕರ್ಕಟೀವೃಂತನಾರಂಗಪನಸಾದಿಕಾನ್ ॥ ೨೦ ॥

---

೧೬. ಈರೀತಿ ವಿಧಿವತ್ತಾಗಿ ಪೂಜಿಸಿ ಉತ್ತಮ ಧೂಪವನ್ನು ಸಮರ್ಪಿಸಿ ಈ ಮೊದಲೇ ಹೇಳಿದಂತೆ ಪಾರ್ವತೀ, ಲಲಿತಾ, ಗೌರೀ, ಗಾಂಧಾರೀ, ಶಂಕರೀ, ಶಿವಾ, ಉಮಾ ಮತ್ತು ಸತೀ, ಎಂಬ ಈ ಎಂಟು ನಾಮುಗಳಿಂದ ಅರ್ಚಿಸಬೇಕು.

೧೭–೧೮. ಮತ್ತು ನೋಡುವುದಕ್ಕೆ ಮನೋಹರವೂ ವಾಸನೆ ಹಿತಕರವೂ ಹೃದ್ಯವೂ ಆಗಿರುವ ಲಡ್ಡಿಗೆ, ಮಂಡಿಗೆ, ಸಿಂಹದ ಕೇಸರದಂತಿರುವ ಫೇಣಿ, ಬೆಲ್ಲದಿಂದ ಮಾಡಲ್ಪಟ್ಟ ಭಕ್ಷ್ಯ, ಕರಿಗಡುಬು ಇತರ ಅನೇಕತರಹೆಯ ಘೃತಪಕ್ವವಾದ ಭಕ್ಷ್ಯ ಮತ್ತು ಪಕ್ವಫಲ ರಸಾಯನ ಮುಂತಾದ ವಸ್ತುಗಳನ್ನು ನಿವೇದನ ಮಾಡಿ ಶ್ರೀ ಉಮಾದೇವಿಯನ್ನು ಸಂತುಷ್ಟಿಗೊಳಿಸಬೇಕು.

೧೯. ಮತ್ತು ಮೆಣಸಿನಕಾಳು, ಜೀರಿಗೆ, ಕುಂಕುಮ, ಉಪ್ಪು, ಹಸಿಶುಂಠಿ, ಕಬ್ಬಿನ ತುಂಡು, ಬೆಲ್ಲ, ಹಸಿಯರಿಶಿನದಕೊನೆ ಈ ಎಂಟು ಪದಾರ್ಥಗಳನ್ನೂ ದೇವಿಯ ಪುರೋಭಾಗದಲ್ಲಿಡಬೇಕು.

೨೦. ಹಾಗೆಯೇ ತೆಂಗಿನಕಾಯಿ, ನೆಲ್ಲೀಕಾಯಿ, ಮಾದಲಫಲ, ದಾಳಿಂಬ, ಬೂದುಗುಂಬಳಕಾಯಿ, ಸೌತೇಕಾಯಿ, ಬದನೇಕಾಯಿ, ಕಿತ್ತಳೇಹಣ್ಣು, ಹಲಸಿನ ಹಣ್ಣು ಈ ಫಲಗಳನ್ನೂ ಇನ್ನೂ ತತ್ಕಾಲದಲ್ಲಿ ಸಿಗುವ ಇತರ ಫಲಗಳನ್ನೂ ಆ ದೇವಿಗೆ ಅರ್ಪಿಸಬೇಕು.

ಕಾಲೋದ್ಭವಾನಿ ಚಾನ್ಯಾನಿ ಫಲಾನಿ ವಿನಿವೇದಯೇತ್ ।
ಗೃಹಾದ್ಯುಲೂಖಲಶಿಲಾಶೂರ್ಪಾನ್ಸ್ರಣತಿಭಿಃ ಸಹ ॥ ೨೦ ॥

ನೇತ್ರಾಂಜನಶಲಾಕಾಶ್ಚ ನಖರೇಚನಕಾನಿ ಚ ।
ದರ್ಪಣಂ ವಂಶಪಾತ್ರಾಣಿ ಭವಾನ್ಯೈ ವಿನಿವೇದಯೇತ್ ॥ ೨೨ ॥

ಶಂಖತೂರ್ಯನಿನಾದೇನ ಗೀತಮಂಗಲನಿಸ್ವನೈಃ ।
ಭಕ್ತ್ಯಾ ಸಂಪೂಜಯೇದ್ದೇವೀಂ ಸ್ವಶಕ್ತ್ಯಾ ಶಿವವಲ್ಲಭಾಂ ॥ ೨೩ ॥

ತತೋऽಸ್ತಸಮಯೇ ಭಾನೋಃ ಕುಮಾರ್ಯಃ ಕರಕೈರ್ನವೈಃ ।
ಸ್ನಾನಂ ಕುರ್ಯುರ್ಮುದಾ ಯುಕ್ತಾಃ ಸೌಭಾಗ್ಯಾರೋಗ್ಯವೃದ್ಧಯೇ॥೨೪॥

---

೨೧. ಮತ್ತು ಗ್ರಹೋಪಕರಣವಾದ ಉಲೂಖಲ (ಒರಳುಕಲ್ಲು) ಮತ್ತು ಅಶ್ಮಲ (ಗುಂಡುಕಲ್ಲು) ಮತ್ತು ಮೊರ ಇವುಗಳನ್ನು ಭಕ್ತಿಯಿಂದ ನಮಸ್ಕಾರ ಪೂರ್ವಕವಾಗಿ ಅರ್ಪಿಸಬೇಕು.

೨೨. ಮತ್ತು ಶ್ರೀ ಭವಾನೀದೇವಿಗೆ ಕಾಡಿಗೆ ಮತ್ತು ಅಂಜನಶಲಾಕೆ ಉಗುರುಗಳಿಗೆ ಬಳಿಯುವ ಬಣ್ಣ, ಕನ್ನಡಿ ಮತ್ತು ಬಿದಿರಿನ ಬುಟ್ಟಿ ಮೊದಲಾದವುಗಳನ್ನೆಲ್ಲಾ ಸಮರ್ಪಿಸಬೇಕು.

೨೩. ಅನಂತರ ಶಿವ ವಲ್ಲಭೆಯಾದ ಆ ದೇವಿಯನ್ನು ಶಂಖ ಮತ್ತು ಮಂಗಳವಾದ್ಯಧ್ವನಿ, ಮಂಗಳಗೀತಗಳು ಇವುಗಳಿಂದ ಸ್ವಶಕ್ತ್ಯನುಸಾರ ಭಕ್ತಿ ಪೂರ್ವಕವಾಗಿ ಚನ್ನಾಗಿ ಪೂಜಿಸಬೇಕು.

೨೪. ಈರೀತಿ ಹಗಲು ಶ್ರೀ ದೇವ್ಯರ್ಚನ ಮಾಡಿ ಅನಂತರ ಸೂರ್ಯಾಸ್ತ ಮಯವಾದ ಮೇಲೂ ಅರ್ಚನೆಯನ್ನು ಮಾಡಬೇಕು. ಕನ್ನಿಕೆಯರು ತಮ್ಮ ಸೌಭಾಗ್ಯ ಮತ್ತು ಅರೋಗ್ಯದ ಅಭಿವೃದ್ಧಿಯಾಗುವುದಕ್ಕಾಗಿ ಆಗ ಸಂತೋಷ ದಿಂದ ಕೂಡಿ ಹೊಸ ಕುಂಭೋದಕಗಳಿಂದ ಸ್ನಾನಮಾಡಬೇಕು.

ಯಾಮೇಯಾಮೇ ಗತೇ ಸ್ನಾನಂ ದೇವೀಪೂಜನಮೇವ ಚ ।
ತೈರೇವ ನಾಮಭಿರ್ಹೋಮಸ್ತಿಲಾಜ್ಯೇನ ಪ್ರಶಸ್ಯತೇ ॥ ೨೫ ॥

ಪದ್ಮಾಸನಸ್ಥಿತಾ ಸಾಧ್ವೀ ತೇನೈವಾರ್ದ್ರೇಣ ವಾಸಸಾ ।
ಗೌರೀಮುಖೇಕ್ಷಣಪರಾ ತಾಂ ರಾತ್ರಿಮತಿವಾಹಯೇತ್ ॥ ೨೬ ॥

ಕಾಶ್ಚಿದ್ವಾದ್ಯಂತಿ ಸಂಹೃಷ್ಟಾಃ ಕಾಶ್ಚಿನ್ನೃತ್ಯಂತಿ ಹರ್ಷಿತಾಃ ।
ಕಥಯಂತಿ ಕಥಾ ಕಾಶ್ಚಿದ್ದೇವ್ಯಾಸ್ತತ್ರ ಮಹೋತ್ಸವೇ ॥ ೨೭ ॥

ಗೀತತಾಲಾನುಸಂಬದ್ಧಮನುದ್ಧತಮನಾಕುಲಂ ।
ನೃತ್ಯಂತಿ ಸ್ಮ ಪುರೇ ದೇವ್ಯಾಃ ಕಾಶ್ಚಿದುಲ್ಲಸಿತಭ್ರುವಃ ॥ ೨೮ ॥

---

೨೫. ಈರೀತಿ ಪ್ರತಿಯಾಮದಲ್ಲೂ ಸ್ನಾನಮಾಡಿ ದೇವೀಪೂಜೆಯನ್ನು ಮಾಡಬೇಕು. ಹಿಂದಿನಯಾಮ ಕಳೆಯುತ್ತಲೆ ಪುನಃ ಸ್ನಾನ ಪೂಜೆ ಈ ಕ್ರಮದಲ್ಲಿ ಮಾಡಬೇಕು. ದೇವೀಮಂಟಪದ ಪುರೋಭಾಗದಲ್ಲಿ ರಚಿಸಿದ ಕುಂಡದಲ್ಲಿ ಹಿಂದೆ ಹೇಳಿದ ಎಂಟು ನಾಮಗಳಿಂದ ಹೋಮವನ್ನಾಚರಿಸಬೇಕು. ಹೋಮಕ್ಕೆ ಎಳ್ಳು ಮತ್ತು ತುಪ್ಪ ಇವು ಪ್ರಶಸ್ತವಾದ ಹೋಮದ್ರವ್ಯವು.

೨೬. ಈ ವ್ರತವನ್ನಾಚರಿಸುವವಳು ಸದಾಚಾರ ಸಂಪನ್ನಳಾದ . ಸ್ತ್ರೀಯಾದರೆ ಅವಳು ಮೊದಲು ಸ್ನಾನಕಾಲದಲ್ಲಿಟ್ಟಿರುವ ಆ ಒದ್ದೆಯ ಬಟ್ಟೆಯನ್ನೇ ಉಟ್ಟುಕೊಂಡು ಪದ್ಮಾಸನವನ್ನು ಹಾಕಿಕೊಂಡು ಕುಳಿತವಳಾಗಿ ಕೇವಲ ಶ್ರೀಃ ಗೌರಿಯ ಮುಖದಲ್ಲೇ ದೃಷ್ಟಿಯನ್ನಿಟ್ಟು ಏಕಾಗ್ರತೆಯಿಂದ ದೇವೀಧ್ಯಾನಪರಳಾಗಿಯೇ ಆ ರಾತ್ರಿಯನ್ನು ಕಳೆಯಬೇಕು.

೨೭. ಈ ದೇವೀವ್ರತಾಚರಣಮಹೋತ್ಸವ ಸಮಾರಂಭದಲ್ಲಿ ರಾತ್ರಿಯಲ್ಲಿ ಜಾಗರಣೆಗಾಗಿ ಕೆಲವು ಸ್ತ್ರೀಯರು ಸಂತೋಷದಿಂದ ವೀಣಾವಾದನವನ್ನು ಮಾಡುವ ರೂಢಿ ಇದೆ. ಇನ್ನು ಕೆಲವರು ಹರ್ಷಚಿತ್ತರಾಗಿ ನರ್ತನಮಾಡುವುದೂ ಉಂಟು. ಮತ್ತೆ ಕೆಲವರು ಶ್ರೀದೇವಿಯ ಚರಿತ್ರಾತ್ಮಕವಾದ ಹಾಡುಗಳನ್ನು ಹೇಳುತ್ತಾರೆ.

೨೮. ಮತ್ತೆ ಕೆಲವರು ಸ್ತ್ರೀಯರು ಔದ್ಧತ್ಯ ಮತ್ತು ಮನೋವ್ಯಾಕುಲತೆ ಇವು ಇಲ್ಲದೆ ಭಕ್ತಿಯಿಂದ ಭ್ರೂಚಾಲನಪೂರ್ವಕವಾಗಿ ಆ ದೇವಿಯ ಸಮ್ಮುಖದಲ್ಲೇ ಗೀತ ಮತ್ತು ತಾಳಕ್ಕೆ ಸರಿಯಾಗಿ ನರ್ತನಮಾಡುವರು.

ನೃತ್ಯೇನ ಹೃಷ್ಯತಿ ಹರೋ ಗೌರೀ ಗೀತೇನ ತುಷ್ಯತಿ ।
ಸದ್ಭಾವೇನಾಥ ವಾ ಸರ್ವೇ ಗಚ್ಛಂತಿ ಪರಮಾಂ ಮುದಂ ॥ ೨೯ ॥

ಸುವಾಸಿನೀಭ್ಯಸ್ತಾಂಬೂಲಂ ಕುಂಕುಮಂ ಕುಸುಮಾನಿ ಚ ।
ಪ್ರದೇಯಂ ಜಾಗರವತ್ಯಾ ಚಾನ್ಯೇಷಾಮಪಿ ಕಿಂಚನ ॥ ೩೦ ॥

ನಟೈರ್ವಿಟೈರ್ಭಟೈಶ್ಚೈವ ತಥಾ ಪ್ರೇಕ್ಷಣಕೋತ್ಸವೈಃ ।
ಸಖಿಭಿಃ ಸಹಿತಾ ರಾತ್ರಿಂ ಗಾಯನ್ನೃತ್ಯನ್ತಿ ತಾಂ ನಯೇತ್ ॥ ೩೧ ॥

ಏವಂ ಪ್ರಭಾತಸಮಯೇ ಸ್ನಾತ್ವಾ ಸಂಪೂಜ್ಯ ಪಾರ್ವತೀಂ ।
ತತೋ ವೈ ಸಾ ಸಮಾರೋಹೇದ್ವಸ್ತ್ರಾಲಂಕೃತತೋರಣಂ ॥ ೩೨ ॥

---

೨೯. ನರ್ತನದಿಂದ ಪರಮೇಶ್ವರನು ಸಂತುಷ್ಟನಾಗುವನು. ಮತ್ತು ಸಂಗೀತದಿಂದ ಶ್ರೀ ಗೌರಿಯು ಸುಪ್ರೀತಳಾಗುವಳು. ಹೆಚ್ಚೇನು ! ತದೇಕಭಾವನೆಯಿಂದ ಧ್ಯಾನಮಾಡುವುದರಿಂದ ಎಲ್ಲಾ ದೇವತೆಗಳೂ ಪರಮಸಂತೋಷವನ್ನು ಹೊಂದುವುದು. ಆದುದರಿಂದ ಈ ವ್ರತಾನುಷ್ಠಾನಮಾಡುವ ಸ್ತ್ರೀಯರಲ್ಲಿ ದೇವೀ ಧ್ಯಾನ ಗಾನ ಅಥವಾ ನರ್ತನ ಇವುಗಳು ತದೇಕನಿಷ್ಠೆಯಿಂದ ಕೂಡಿ ಇರಬೇಕು.

೩೦. ಈ ಜಾಗರಣೆಯನ್ನಾಚರಿಸುವ ಸ್ತ್ರೀಯು ಸುವಾಸಿನಿಯರಿಗೆ ತಾಂಬೂಲ ಕುಂಕುಮ ಮತ್ತು ಪುಷ್ಪಗಳು ಇವುಗಳನ್ನು ಕೊಡಬೇಕು. ಮತ್ತು ಈ ಜಾಗರಣಕಾಲದಲ್ಲಿ ದರ್ಶನಾರ್ಥವಾಗಿ ಬಂದಿರುವ ಇತರರಿಗೂ ತಾಂಬೂಲಾದಿಗಳನ್ನು ಯತ್ಕಿಂಚಿತ್‌ಕೊಟ್ಟು ಮನ್ನಿಸಬೇಕು.

೩೧. ಆ ವ್ರತವನ್ನಾಚರಿಸುವ ವ್ರತಿಯು ರಾತ್ರಿಯನ್ನು ನಟ, ವಿಟಾದಿಗಳಿಂದ ನರ್ತನ, ಗಾನಾದಿಗಳನ್ನು ಮಾಡಿಸುವ ಮೂಲಕವೋ, ದರ್ಶನೀಯವಾದ ಇತರ ಉತ್ಸವಗಳ ಮೂಲಕವೋ, ಸಖೀಸಮೇತಳಾಗಿ ತಾನೂ ಗಾನನರ್ತನಾದಿಗಳನ್ನು ಮಾಡುತ್ತಲೋ, ಜಾಗರಣೆಯಿಂದ ರಾತ್ರಿಯನ್ನು ಕಳೆಯಬೇಕು.

೩೨ ಈರೀತಿ ರಾತ್ರೆ ಜಾಗರಣೆಮಾಡಿ, ಮರುದಿನ ಪ್ರಾತಃಕಾಲದಲ್ಲೆದ್ದು ಸ್ನಾನಮಾಡಿ, ಶ್ರೀ ಪಾರ್ವತಿಗೆ ಉತ್ತರಪೂಜೆ ಮಾಡಿ, ಆ ದೇವೀ ಮಂಟಪದಲ್ಲಿ ವಸ್ತ್ರಾಲಂಕೃತವಾಗಿ ತೂಗಿಸಿರುವ ತಕ್ಕಡಿಯ ಒಂದು ತಟ್ಟೆಯಲ್ಲಿ ತಾನು ಹತ್ತಿ ಕುಳಿತುಕೊಳ್ಳಬೇಕು.

ತೋಲಯೇತ್ತ್ವಾ ತಥಾಸೀನಾ ಗುಡೇನ ಲವಣೇನ ಚ ।
ಕುಂಕುಮೇನಾಥ ವಾ ಶಕ್ತ್ಯಾ ಕರ್ಪೂರಾಗುರುಚಂದನೈಃ ॥ ೩೩ ॥

ಪರ್ವತಾನಾಮುಪಿಚ್ಛೇದ್ಯೈಃ ಕೇಚಿದಿಚ್ಛಂತಿ ಸೂರಯಃ ।
ಕುಂಡಮಂಡಪಸಂಭಾರೈರ್ಮಂತ್ರೈಸ್ತತ್ರೈವ ಶೋಭಯೇತ್ ॥ ೩೪ ॥

ಲವಣೇನ ಸಹಾತ್ಮಾ ಹಿ ತೋಲ್ಯತೇ ಚ ಗುಡೇನ ವಾ ।
ಕಯಾಪಿ ಭಕ್ತಿಪರಯಾ ಸೌಭಾಗ್ಯಮತುಲೀಕೃತಂ ॥ ೩೫ ॥

ಏವಂ ದೇವೀಂ ಪ್ರಣಮ್ಯಾರ್ಯಾಂ ಕ್ಷಮಾಪ್ಯ ಗೃಹಮಾವಿಶೇತ್ ।
ಆಮಂತ್ರ್ಯ ಶಾಸ್ತ್ರಕುಶಲಾನಾಚಾರ ವಿಧಿಪಾರಗಾನ್ ॥ ೩೬ ॥

---

೩೩. ಇನ್ನೊಂದು ತಟ್ಟೆಯಲ್ಲಿ ಬೆಲ್ಲವೋ, ಉಪ್ಪೋ, ಅಥವಾ ಕುಂಕುಮವೋ ಅಥವಾ ಸ್ವಶಕ್ತಿಗನುಸಾರವಾಗಿ ಕರ್ಪೂರವೋ, ಅಗರೋ, ಗಂಧವೋ ಇವುಗಳಲ್ಲಿ ಯಾವುದಾದರೂ ಒಂದನ್ನು ತನ್ನ ತೂಕಕ್ಕೆ ಸರಿಯಾಗಿ ಭರ್ತಿಮಾಡಿ ತುಲಾಭಾರ ತೂಗಿಸಿಕೊಳ್ಳಬೇಕು.

೩೪. ಕೆಲವರು ಈ ವ್ರತಜ್ಞರಾದ ಪಂಡಿತರು ಪರ್ವತ ವೇದಕ ವಜ್ರಾದಿಗಳಿಂದಲೂ ಈ ತುಲಾಭಾರವನ್ನು ಮಾಡಿಸಬಹುದೆಂದು ಅಭಿಪ್ರಾಯವುಳ್ಳವರಾಗಿದ್ದಾರೆ. ಹೋಮಕುಂಡ, ದೇವಮಂಟಪ ಇವುಗಳನ್ನು ಅಲಂಕರಿಸುವಾಗ ಉಪಯೋಗಿಸುವ ಸಂಭಾರಗಳಿಂದ ಈ ತುಲೆಯನ್ನೂ ಅಲಂಕರಿಸುವುದಲ್ಲದೆ ಮಂತ್ರಪೂರ್ವಕವಾಗಿ ತುಲಾರ್ಚನೆಯನ್ನೂ ಮಾಡಬೇಕು.

೩೫. ಯಾವ ಸ್ತ್ರೀಯಾದರೂ ಭಕ್ತಿಪರಳಾಗಿ ತನ್ನ ಸರಿತೂಕದ ಉಪ್ಪು ಅಥವಾ ಬೆಲ್ಲ ಇವುಗಳಿಂದ ತುಲಾಭಾರ ತೂಗಿಸಿಕೊಂಡರೆ ಅವಳಿಗೆ ಅಪರಿಮಿತ ಸೌಭಾಗ್ಯವು ಖಂಡಿತವಾಗಿ ಲಭಿಸುವುದು.

೩೬–೩೭. ಈರೀತಿ ತುಲಾಭಾರ ತೂಗಿಸಿದ ಮೇಲೆ ಪೂಜ್ಯಳಾದ ದೇವಿಗೆ ನಮಸ್ಕಾರಮಾಡಿ ಅಪರಾಧ ಕ್ಷಮೆಯನ್ನು ಬೇಡಿ ಸ್ವಗೃಹವನ್ನು ಪ್ರವೇಶಮಾಡಬೇಕು. ಅನಂತರ ಶಾಸ್ತ್ರಕುಶಲರಾಗಿಯೂ, ಸದಾಚಾರ ಸಂಪನ್ನರಾಗಿಯೂ ಇರುವ ಬ್ರಾಹ್ಮಣರನ್ನೂ ಮತ್ತು ಸುವಾಸಿನಿಯರನ್ನೂ ಸ್ವಗೃಹಕ್ಕೆ ಕರೆದು

ಅನ್ನಂ ಚ ಮಧುರಪ್ರಾಯಂ ಭೋಜಯಿತ್ವಾ ಸುವಾಸಿನೀಃ ।
ಸ್ವಯಂ ಭುಂಜೀತ ಸಹಸಾ ಜ್ಞಾತೀಜನಬುಧೈಃ ಸ್ವಕೈಃ ॥ ೩೭ ॥

ಯಚ್ಚ ದೇವ್ಯಾಃ ಪುರೋ ದತ್ತಂ ನೈವೇದ್ಯಾದಿ ತದಿಚ್ಛಯಾ ।
ಗೃಹಂ ಪ್ರತಿನಯೇತ್ಸರ್ವಂ ವಿಭಜ್ಯಾಭ್ರಾಂತಮಾನಸಾ ॥ ೩೮ ॥

ತತೋ ದದ್ಯಾದ್ಗೃಹಸ್ಥೇಭ್ಯಃ ಕೃತಕೃತ್ಯಾ ಭವೇತ್ತದಾ ।
ವಿಧಿರ್ಭಾದ್ರಪದೇಽಪ್ಯೇಷ ಸುಸೌಂದರ್ಯಪ್ರದಾಯಕಃ ॥ ೩೯ ॥

ಸಪ್ತಧಾನ್ಯಸ್ವರೂಪಾಂ ಚ ಶೂರ್ಪೇ ಸಂಪೂಜಯೇದುಮಾಂ ।
ಗೋಮೂತ್ರಪ್ರಾಶನಂ ಹ್ಯತ್ರ ತೇನ ಗೋಮೂತ್ರಸಂಜ್ಞಿತಾ ॥ ೪೦ ॥

---

ಅವರಿಗೆ ರಸವತ್ತಾದ ಅನ್ನಾದಿಗಳಿಂದ ಭೋಜನಮಾಡಿಸಿ ಅನಂತರ ತನ್ನ ಬಂಧುವರ್ಗ ಸಹಿತ ತಾನೂ ಭುಂಜಿಸಬೇಕು.

೩೮. ಮೊದಲು ದೇವೀ ಮಂಟಪದಲ್ಲಿ ದೇವಿಯ ಮುಂಭಾಗದಲ್ಲಿ ನೈವೇದ್ಯಾರ್ಥವಾಗಿ ಇರಿಸಿದ ದ್ರವ್ಯ ಮತ್ತು ತುಲಾಭಾರದ ದ್ರವ್ಯ ಮೊದಲಾದ ಎಲ್ಲಾ ದ್ರವ್ಯಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಸಾವಧಾನವಾಗಿ ಮನೆಗೆ ತರಬೇಕು.

೩೯. ಹಾಗೆ ಮನೆಗೆ ತಂದಮೇಲೆ ಅವುಗಳನ್ನು ಸದ್ಗೃಹಸ್ಥರಿಗೆ ದಾನ ಮಾಡಿದರೆ ಅಲ್ಲಿಗೆ ಅವಳು ಕೃತಕೃತ್ಯಳಾಗುವಳು. ಚೈತ್ರ ಶುಕ್ಲ ತೃತೀಯಾ ದಿನ ಮಾಡಬೇಕಾದ ವ್ರತದ ವಿಧಾನವನ್ನು ತಿಳಿಸಿ ಆಯಿತು. ಇದೇ ಕ್ರಮ ದಿಂದ ಭಾದ್ರಪದ ಶುಕ್ಲ ತೃತೀಯಾ ದಿನದಲ್ಲೂ ಆಚರಿಸಬೇಕು. ಅದರಿಂದ ವ್ರತಿಗೆ ಅತುಲವಾದ ಸೌಂದರ್ಯ ಪ್ರಾಪ್ತವಾಗುವುದು.

೪೦. ಪೂರ್ವೋಕ್ತ ವ್ರತಕ್ಕಿಂತ ಭಾದ್ರಪದಮಾಸ ವ್ರತಾನುಷ್ಠಾನದಲ್ಲಿ ಇರುವ ವಿಶೇಷವೇನೆಂದರೆ ಹೊಸ ಮೊರದಲ್ಲಿ ಸಪ್ತಧಾನ್ಯಗಳನ್ನಿಟ್ಟು ಶ್ರೀ ಉಮಾ ದೇವಿಯನ್ನು ಆ ಸಪ್ತಧಾನ್ಯದಲ್ಲಿ ಆವಾಹಿಸಿ ಪೂಜಿಸಬೇಕು. ಈ ಮಾಸದಲ್ಲಿ ಪ್ರಾಶನಾರ್ಥವಾಗಿ ಗೋಮೂತ್ರವನ್ನು ಉಪಯೋಗಿಸಬೇಕು. ಅದುದರಿಂದ ಈ ಮಾಸದ ತೃತೀಯಾವ್ರತ ಪೂಜೆಗೆ ಗೋಮೂತ್ರ ಸಂಜ್ಞೆ ಬಂದಿದೆ.

ಮಾಘಮಾಸತೃತೀಯಾಯಾಂ ವಿಶೇಷಃ ಶ್ರೂಯತಾಮಿತಿ ।
ಪೂರ್ವೋಕ್ತಂ ಸಕಲಂ ಕೃತ್ವಾ ಪ್ರಭಾತೇ ಯವಸಂಸ್ತರಂ ।
ತೋಲಯಿತ್ವಾ ಕುಂದಪುಷ್ಪೈಃ ಪೂಜಯೇತ್ತತ್ಸುತಾಮಿತಿ ॥ ೪೧ ॥

ಏತೇನ ಕಾರಣೇನೋಕ್ತಾ ಚತುರ್ಥೀ ಕುಂದಸಂಜ್ಞಯಾ ।
ತೃತೀಯಾಖ್ಯಂ ಮಯೈತತ್ತೇ ಕಥಿತಂ ಸರ್ವಕಾರಣಂ ।
ಜಯಯಾ ಮುನಿಕನ್ಯಾನಾಂ ಯತ್ಪುರಾ ಸಮುದಾಹೃತಂ ॥ ೪೨ ॥

॥ ಶ್ರೀ ಕೃಷ್ಣ ಉವಾಚ ॥

ಆಸೀದ್ವಿದರ್ಭನಗರೇ ವೇಶ್ಯಾ ಸರ್ವಾಂಗಸುಂದರೀ ।
ತಯಾ ಬ್ರಾಹ್ಮಣವಾಕ್ಯೇನ ಸರ್ವಮೇತತ್ಕೃತಂ ಪುರಾ ॥ ೪೩ ॥

ಭುಕ್ತ್ವಾ ಭೋಗಾನ್ಮಹೀಪೃಷ್ಠೇ ದತ್ವಾ ದಾನಂ ಯಥೇಪ್ಸಯಾ ।
ಕಾಲೇನ ಸಮನುಪ್ರಾಪ್ತಾ ಮರಣಂ ಮನುಜೇಶ್ವರ ॥ ೪೪ ॥

---

೪೧. ಮಾಘಮಾಸದ ತೃತೀಯಾ ವ್ರತಾಚರಣೆಯಲ್ಲಿ ತತ್ಪೂರ್ವಾಪೇಕ್ಷಿಯಾಗಿರುವ ವಿಶೇಷವನ್ನು ಹೇಳುವೆನು ಕೇಳು. ಹಿಂದೆ ಹೇಳಿದಂತೆಯೇ ಸ್ನಾನ ಪೂಜಾದಿ ಸಕಲಕ್ರಿಯೆಗಳನ್ನೂ ಮಾಡಿ ಮರುದಿನ ಪ್ರಾತಃಕಾಲದಲ್ಲಿ ಯವಾಸ್ತರಣವನ್ನು ತುಲಾದಲ್ಲಿ ತೂಗಬೇಕು. ಅನಂತರ ಕುಂದ ಪುಷ್ಪಗಳಿಗೆ ದೇವೀಪೂಜೆಯನ್ನು ಮಾಡಬೇಕು.

೪೨. ಈ ಕಾರಣದಿಂದಲೇ ಈ ಮಾಘ ಚತುರ್ಥಿಗೆ ಕುಂದಚತುರ್ಥಿ ಎಂಬ ಸಂಜ್ಞಾ ಲಾಭವಾಗಿದೆ. ಅಯ್ಯಾ ಯುಧಿಷ್ಠಿರನೇ! ಪೂರ್ವದಲ್ಲಿ ಶ್ರೀ ಉಮಾದೇವಿಯ ದಾಸಿ ಜಯ ಎಂಬವಳು ಋಷಿ ಕನ್ನಿಕೆಯರಿಗೆ ಉಪದೇಶಿಸಿದ ಸರ್ವಫಲದಾಯಕವಾದ ಈ ತೃತೀಯಾವ್ರತವನ್ನು ನಿನಗೆ ಹೇಳಿ ಆಯಿತು ಎಂದು ಹೇಳಿ ಮುಂದಕ್ಕೆ ಶ್ರೀ ಕೃಷ್ಣನು ಹೇಳುತ್ತಾನೆ.

೪೩. ವಿದರ್ಭನಗರದಲ್ಲಿ ಸರ್ವಾಂಗ ಸುಂದರಿಯಾದ ಒಬ್ಬ ವೇಶ್ಯೆ ಇದ್ದಳು. ಪೂರ್ವಕಾಲದಲ್ಲಿ ಅವಳು ಒಬ್ಬ ಬ್ರಾಹ್ಮಣನ ಮಾತಿನಂತೆ ಈ ವ್ರತವನ್ನು ಸಾಂಗವಾಗಿ ನೆರವೇರಿಸಿದಳು.

೪೪. ಅಯ್ಯಾ ರಾಜೇಂದ್ರನೇ! ಈ ವ್ರತಾಚರಣೆಯಿಂದ ಅವಳು ಭೂಲೋಕದಲ್ಲಿ ಸಕಲಭೋಗಗಳನ್ನೂ ಅನುಭವಿಸಿ ಇತರರಿಗೂ ಯಥೇಚ್ಛವಾಗಿ ದಾನಮಾಡಿ ಕಾಲಕ್ರಮದಲ್ಲಿ ಮರಣ ಹೊಂದಿದಳು.

**ಅಚಿಂತ್ಯಾ ರಾಜದುಹಿತಾ ಸಾ ಬಭೂವಾತಿಶೋಭನಾ ।**
**ಅವಂತಿಸುಂದರೀ ನಾಮ ದೇವಾನಾಮಪಿ ಸುಂದರೀ　　　॥ ೪೫ ॥**

**ಯದಿ ವಕ್ತ್ರಸಹಸ್ರಾಣಾಂ ಸಹಸ್ರಂ ಸ್ಯಾತ್ಕಥಂಚನ ।**
**ತಥಾಪಿ ನಿರ್ವರ್ಣಯಿತುಮಶಕ್ಯಾ ಸಾ ಸುಲೋಚನಾ　　　॥ ೪೬ ॥**

**ಚೈತ್ರತೃತೀಯಾಮಾಹಾತ್ಮ್ಯಾತ್ಸಾ ಬಭೂವ ಪ್ರಭಾವತೀ ।**
**ಮಾತಾಪಿತ್ರೋರತಿಪ್ರೇಷ್ಠಾ ಶಿಷ್ಟಾನ್ಯಜನವಲ್ಲಭಾ　　　॥ ೪೭ ॥**

**ದುಗ್ಧಾಬ್ಧಿಸಂಭವಾ ಯದ್ವತ್ಕೃಷ್ಣೇನಾಕ್ಲಿಷ್ಟಕರ್ಮಣಾ ।**
**ತತಃ ಸಾ ಬುಭುಜೇ ಭೋಗಾನ್ಪತ್ಯಾ ಸಾರ್ಧಂ ಮುದಾ ಸತೀ　　　॥ ೪೮ ॥**

---

೪೫. ಈ ವ್ರತಪ್ರಭಾವದಿಂದ ಅವಳು ಮುಂದಿನ ಜನ್ಮದಲ್ಲಿ ಸರ್ವ ಮಂಗಲರೂಪಿಣಿಯೂ ನಿರತಿಶಯ ಸೌಂದರ್ಯಶಾಲಿನಿಯೂ ದೇವಸುಂದರಿಯ ರನ್ನು ಮೀರಿಸಿದವಳೂ ಆದ ರಾಜಪುತ್ರಿಯಾಗಿ ಜನಿಸಿ " ಅವಂತಿಸುಂದರೀ " ಎಂಬ ನಾಮಧೇಯದಿಂದ ವಿಖ್ಯಾತಳಾಗಿದ್ದಳು.

೪೬. ಕದಾಚಿತ್ ಅತಿ ಕಷ್ಟದಿಂದ ಅಪೂರ್ವವಾಗಿ ಒಬ್ಬನು ಕೋಟ್ಯಂತರ ಮುಖಗಳುಳ್ಳವನಾದರೂ ಅಂಥವನಿಗೂ ಈ ಸುಂದರಿಯ ಸೌಂದರ್ಯವರ್ಣನೆ ಮಾಡಲು ಸಾಧ್ಯವಿಲ್ಲ.

೪೭. ಚೈತ್ರಮಾಸದ ಶುಕ್ಲಪಕ್ಷದ ತೃತೀಯಾ ತಿಥಿಯಲ್ಲಿ ಉಕ್ತರೀತಿ ತೃತೀಯಾ ವ್ರತವನ್ನಾಚರಿಸಿದ ಮಹಾತ್ಮೆಯಿಂದ ಆ ಅವಂತಿಸುಂದರಿಗೆ ಅಂಥ ಲಾವಣ್ಯವು ಪ್ರಾಪ್ತವಾಯಿತು. ಮತ್ತು ಅವಳು ತನ್ನ ಮಾತಾಪಿತೃಗಳ ಅತಿಶಯ ವಾದ ಪ್ರೀತಿಗೆ ಪಾತ್ರಳೂ, ಸದಾಚಾರಯುಕ್ತಳೂ, ಇತರ ಜನರಿಗೆ ಗೌರವಾ ರ್ಹಳೂ ಆದಳು.

೪೮. ಕ್ಷೀರಸಮುದ್ರದಲ್ಲಿ ಆವಿರ್ಭೂತಳಾದ ಶ್ರೀ ಮಹಾಲಕ್ಷ್ಮಿಯು ನಿಷ್ಕಲ್ಮಷನೂ ಮಹಾಭಾಗ್ಯಶಾಲಿಯೂ ಆದ ಶ್ರೀ ಕೃಷ್ಣನ ಜತೆಯಲ್ಲಿ ಹೇಗೆ ಅನೇಕ ದಿವ್ಯಭೋಗಗಳನ್ನು ಅನುಭವಿಸಿದಳೋ ಹಾಗೆಯೇ ಆಕೆ ತನ್ನ ಪತಿ ಯೊಡನೆ ಹರ್ಷದಿಂದ ಸಕಲ ದಿವ್ಯಭೋಗಗಳನ್ನೂ ಅನುಭವಿಸಿದಳು.

ಯದದಾದ್ಬ್ರಾಹ್ಮಣೇಭ್ಯಃ ಸಾ ಭೂಷಣಂ ಕಟಕಾದಿಕಂ ।
ತತ್ಪ್ರಭಾವೇಣ ಸಾ ಲೇಭೇ ಸೌಭಾಗ್ಯಂ ಕಿಂ ತತಃ ಪರಂ ॥ ೪೯ ॥

ಪುತ್ರಾಂಶ್ಚ ಜನಯಾಮಾಸ ವಿಷ್ಣುಶಕ್ರಪರಾಕ್ರಮಾನ್ ।
ಸರ್ವಾಸ್ತ್ರಶಸ್ತ್ರ ಕುಶಲಾನ್ವೇದೋಕ್ತ ವಿಧಿಪಾರಗಾನ್ ॥ ೫೦ ॥

ಏವಂ ರೂಪಂ ಮಹತ್ಪ್ರಾಪ್ಯ ಸೌಭಾಗ್ಯಂ ಪುತ್ರಸಂಪದಂ ।
ಭರ್ತ್ರಾ ಸಹೈವ ಮರಣಮಂತೇ ಪ್ರಾಪ್ಯ ಪತಿವ್ರತಾ ॥ ೫೧ ॥

ಶಕ್ರಾದಿಲೋಕಪಾಲಾನಾಂ ಭವನೇಷು ಯಥಾಕ್ರಮಂ ।
ಆಕ್ರಮ್ಯ ಬ್ರಹ್ಮಲೋಕಂ ಚ ಜಗಾಮ ಶಿವಸಾತ್ಮತಾಂ ॥ ೫೨ ॥

---

೪೯. ಅಕೆಯು ಪೂರ್ವಜನ್ಮದಲ್ಲಿ ಈ ವ್ರತಾಚರಣೆಯಿಂದ ಲಬ್ಧವಾದ ಸಂಪತ್ತನಿಂದ ಸ್ವರ್ಣಪದಕವೇ-ಮೊದಲಾದ ಆಭರಣಗಳನ್ನು ಮಾಡಿಸಿ, ಬ್ರಾಹ್ಮಣರಿಗೆ ದಾನಮಾಡಿದ್ದರಿಂದ ಆ ದಾನ ಪ್ರಭಾವದಿಂದ ಈ ನಿರತಿಶಯ ಸೌಭಾಗ್ಯವನ್ನು ಪಡೆದಳು. ಅವಳ ಸೌಭಾಗ್ಯಕ್ಕಿಂತ ಹೆಚ್ಚಿನ ಸೌಭಾಗ್ಯವು ಲೋಕವಲ್ಲಿ ಇನ್ನಾರಲ್ಲಿದೆ.

೫೦. ಮತ್ತು ಅವಳು ಶ್ರೀ ಮಹಾವಿಷ್ಣು ಮತ್ತು ಇಂದ್ರ ಇವರ ಸಮಾನ ಪರಾಕ್ರಮವುಳ್ಳವರಾಗಿಯೂ, ಸರ್ವಶಾಸ್ತ್ರ ಮತ್ತು ಶಸ್ತ್ರವಿದ್ಯಾಕುಶಲರಾಗಿಯೂ, ಶ್ರೌತಕರ್ಮಾನುಷ್ಠಾನತತ್ಪರರಾಗಿಯೂ ಇರುವ ಪುತ್ರರನ್ನು ಪ್ರಸುವಿಸಿದಳು.

೫೧. ಪತಿವ್ರತಾ ಶಿರೋಮಣಿಯಾದ ಆ ಅವಂತಿಸುಂದರಿಯು ಈ ಲೋಕದಲ್ಲಿ ಈ ರೀತಿಯಾಗಿ ಮಹಾಸೌಂದರ್ಯ, ಸೌಭಾಗ್ಯ ಮತ್ತು ಸತ್ಸಂತಾನ ಇವುಗಳನ್ನು ಪಡೆದು ಕೊನೆಯಲ್ಲಿ ತನ್ನ ಪತಿಯೊಡನೆ ಮರಣ ಹೊಂದಿದಳು.

೫೨. ಆಗ ಪತಿಸಮೇತಳಾಗಿ ಕ್ರಮವಾಗಿ ಇಂದ್ರಾದಿಲೋಕಪಾಲಕರ ಲೋಕಗಳಲ್ಲಿ ಭೋಗಗಳನ್ನನುಭವಿಸುತ್ತಾ ಕ್ರಮೇಣ ಬ್ರಹ್ಮಲೋಕಕ್ಕೂ ಹೋಗಿ ಕೊನೆಯಲ್ಲಿ ಶಿವಸಾಯುಜ್ಯವನ್ನು ಪಡೆದಳು.

ಏವಂ ಯಾನ್ಯಾಪಿ ಕುರುತೇ ನಾರೀ ವ್ರತಮಿದಂ ಶುಭಂ ।
ಸಾ ರೂಪಸೌಭಾಗ್ಯಸುತಾನ್ಪ್ರಾಪ್ಯ ಸ್ವರ್ಗೇ ಮಹೀಯತೇ ॥ ೫೩ ॥

ನ ದುರ್ಭಗಾ ಕುಲೇ ತಸ್ಯಾಃ ಕಾಚಿದ್ಭವತಿ ಕನ್ಯಕಾ ।
ನ ದುರ್ವಿನೀತಶ್ಚ ಸುತೋ ನ ಭೃತ್ಯೋಽಪ್ರಿಯಕೃದ್ಭವೇತ್ ॥ ೫೪ ॥

ನ ದಾರಿದ್ರ್ಯಂ ಗೃಹೇ ತಸ್ಮಿನ್ನ ವ್ಯಾಧಿರುಪಜಾಯತೇ ।
ಯತ್ರ ಸಾ ರಮತೇ ಸಾಧ್ವೀ ಧ್ಮಾತಚಾಮೀಕರಪ್ರಭಾ ॥ ೫೫ ॥

ಅನ್ಯಾಶ್ಚ ಯಾಶ್ಚರಿಷ್ಯಂತಿ ಬ್ರಾಹ್ಮಣಾನುಮತೇ ವ್ರತಂ ।
ಸಂಪೂಜ್ಯ ವಾಚಕಂ ಭಕ್ತ್ಯಾ ಭೂಷಣಾಚ್ಛಾದನಾದಿಭಿಃ ॥ ೫೬ ॥

---

೫೩. ಈರೀತಿಯಾಗಿ ಯಾವ ಸ್ತ್ರೀಯು ಈ ವ್ರತವನ್ನಾಚರಿಸಿದರೂ ಅವಳು ಇಹದಲ್ಲಿ ಸೌಂದರ್ಯ, ಸೌಭಾಗ್ಯ, ಸತ್ಸಂತಾನ ಮುಂತಾದ ಫಲಗಳನ್ನು ಅನುಭವಿಸಿ ಪರತ್ರ ಸ್ವರ್ಗಲೋಕದಲ್ಲಿಯೂ ಪೂಜಿಸಲ್ಪಡುವಳು.

೫೪. ಮತ್ತು ಈ ವ್ರತಾನುಷ್ಠಾತ್ರಿಯಾದ ಸ್ತ್ರೀಯ ವಂಶದಲ್ಲಿ ದೌರ್ಭಾಗ್ಯವುಳ್ಳ ಕನ್ನಿಕೆಯು ಎಂದಿಗೂ ಜನಿಸುವುದಿಲ್ಲ. ದುಷ್ಟರೂ ಕಳಕಿಂಗಳೂ ಆದ ಪುತ್ರರೂ ಸಹ ಜನಿಸಲಾರರು. ಇವಳ ಪರಿಚಾರಕರೂ ಸಹ ಸ್ವಾಮಿನೀ ದ್ರೋಹವನ್ನು ಚಿಂತಿಸದೆ ಪ್ರಿಯಕರ್ಮವಲ್ಲೇ ಸದಾ ಆಸಕ್ತರಾಗಿರುತ್ತಾರೆ.

೫೫. ಈ ವ್ರತಾನುಷ್ಠಾತ್ರಿಯಾದ ಸಾಧ್ವಿಯು ಯಾವ ಗೃಹದಲ್ಲಿ ವಾಸಿಸುವಳೋ ಆ ಗೃಹವು ಪುಟಹಾಕಿದ ಭಂಗಾರದಂತೆ ಬಣ್ಣವುಳ್ಳದ್ದಾಗಿ ದಾರಿದ್ರ್ಯ ರೋಗ ಇವುಗಳು ಪ್ರವೇಶ ಮಾಡಲಾರವು.

೫೬. ಅಯ್ಯಾ ಕುರುಕುಲೋತ್ತಮನೇ ! ಬ್ರಾಹ್ಮಣಾನುಜ್ಞೆಯನ್ನು ಪಡೆದು ಈ ವ್ರತವನ್ನು ಯಾವ ಸ್ತ್ರೀಯರು ಮಾಡಿದರೂ ಅವರು ಆ ಕಾಲದಲ್ಲಿ ವಾಚಕ ವಿಪ್ರನನ್ನು ಭೂಷಣವಸ್ತ್ರಾದಿಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು.

ತಾಃ ಸರ್ವಸುಖಸಂಪನ್ನಾ ಅವಿಪನ್ನಮನೋರಥಾಃ ।
ಭವಿಷ್ಯಂತಿ ಕುರುಶ್ರೇಷ್ಠ ತಸ್ಯೈ ದೇವಿ ನಮೋಽಸ್ತು ತೇ ॥ ೫೭ ॥

ಮಾಘೇ ಮಹಾರ್ಘ್ಯಮಣಿಮಂಡಿತಪಾದಪೀಠಾಂ ।
ಚೈತ್ರೇ ವಿಚಿತ್ರಕುಸುಮೋತ್ಕರಚರ್ಚಿತಾಂಗೀಂ ।
ಶೂರ್ಪಪ್ರರೂಢನವಸಸ್ಯಮಯೀಂ ನಭಸ್ಯೇ ।
ಸಂಪೂಜ್ಯ ಶಂಭುದಯಿತಾಂ ಪ್ರಭವಂತಿ ನಾರ್ಯಃ ॥ ೫೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಚೈತ್ರ ಭಾದ್ರಪದ ಮಾಘ
ತೃತೀಯಾವ್ರತ ವರ್ಣನಂ ನಾಮಾಷ್ಟವಿಂಶತಿತಮೋಽಧ್ಯಾಯಃ.



---

೫೭. ಹೀಗೆ ಪೂಜಿಸಿದ ಸ್ತ್ರೀಯರು ಸರ್ವಸುಖ ಸಂಪನ್ನೆಯರೂ ಸಫಲ ಮನೋರಥವುಳ್ಳವರೂ ಆಗುವರು. ಆರೀತಿ ಫಲದಾತ್ರಿಯಾದ ಎಲೈ ದೇವಿಯೇ ! ಅಂಥ ನಿನಗೆ ಸದಾ ನಮಸ್ಕಾರ.

೫೮. ಸ್ತ್ರೀಯರು ಶ್ರೀ ಪರಮೇಶ್ವರಿಯನ್ನು ಮಾಘಮಾಸದಲ್ಲಿ ಅಮೂಲ್ಯ ರತ್ನ ಖಚಿತವಾದ ಪೀಠಯುಕ್ತಳನ್ನಾಗಿಯೂ, ಚೈತ್ರಮಾಸದಲ್ಲಿ ವಿವಿಧ ಪುಷ್ಪ ಸಮೂಹದಿಂದ ಅಲಂಕೃತ ಶರೀರವುಳ್ಳವಳನ್ನಾಗಿಯೂ, ಭಾದ್ರಪದಮಾಸದಲ್ಲಿ ಸಪ್ತಧಾನ್ಯ ನವಾಂಕುರ ಸ್ವರೂಪಿಣಿಯನ್ನಾಗಿಯೂ, ಮಾಡಿ ಪೂಜಿಸಿದರೆ ಸರ್ವೋತ್ಕೃಷ್ಟರಾಗುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಚೈತ್ರ, ಭಾದ್ರಪದ,
ಮಾಘ ತೃತೀಯಾ ವ್ರತವರ್ಣನೆ ಎಂಬ ಇಪ್ಪತ್ತೆಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನತ್ರಿಂಶತ್ತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಶುಕ್ಲಪಕ್ಷತೃತೀಯಾಸ್ತು ಬಹವಃ ಸಮುದಾಹೃತಾಃ ।
ಅನಂತರ್ಯವ್ರತಂ ಬ್ರೂಹಿ ತೃತೀಯೋಭಯಸಂಯುತಂ ॥ ೧ ॥

ಹಿತಾಯ ಸರ್ವಭೂತಾನಾಂ ಲಲನಾನಾಂ ವಿಶೇಷತಃ ।
ನಾಮ ಪ್ರಾಶನ ನೈವೇದ್ಯೈರ್ಮಾಸಿಮಾಸಿ ಪೃಥಕ್ಪೃಥಕ್ ॥ ೨ ॥

---

### ಇಪ್ಪತ್ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—" ಎಲೈ ಶ್ರೀ ಕೃಷ್ಣಪರಮಾತ್ಮನೇ ! ಶುಕ್ಲಪಕ್ಷದ ತೃತೀಯಾ ತಿಥಿಯಲ್ಲಿ ಆಚರಿಸಬೇಕಾದ ಅನೇಕ ವ್ರತಗಳನ್ನು ಹೇಳಿರುವೆ. ಶುಕ್ಲಪಕ್ಷ ಮತ್ತು ಕೃಷ್ಣಪಕ್ಷ ಈ ಉಭಯ ತೃತೀಯಾ ಸಂಬಂಧವುಳ್ಳ ಅನಂತರ ತೃತೀಯಾವ್ರತವನ್ನು ಇನ್ನು ಮುಂದೆ ಹೇಳು.

೨. ಸರ್ವ ಪ್ರಾಣಿಗಳ ಹಿತೋದ್ದೇಶದಿಂದಲೂ, ವಿಶೇಷತಃ ಸ್ತ್ರೀಯರ ಹಿತಕ್ಕಾಗಿಯೂ, ವ್ರತವನ್ನು ಆಚರಿಸುವವರಿಗೆ ದೇವತಾನಾಮ ಪ್ರಾಶನ ದ್ರವ್ಯ ನೈವೇದ್ಯ, ಇವುಗಳನ್ನು ಪ್ರತಿಮಾಸಕ್ಕೂ, ಪ್ರತಿಪಕ್ಷಕ್ಕೂ ಬೇರೆಬೇರೆಯಾಗಿ ವಿವರಿಸಿ ಹೇಳು " ಎಂದನು.

॥ ಶ್ರೀ ಕೃಷ್ಣ ಉವಾಚ ॥

ಬ್ರಹ್ಮವಿಷ್ಣುಮಹೇಶಾದ್ಯೈರ್ಯಥೋಕ್ತಂ ಸುರಸತ್ತಮೈಃ ।
ಅಪೂರ್ವಂ ಸರ್ವಮಂತ್ರಾಣಾಮಾನಂತರ್ಯವ್ರತಂ ಶೃಣು ॥ ೩ ॥

ಆದೌ ಮಾರ್ಗಶಿರೇ ಮಾಸಿ ವ್ರತಮೇತತ್ಸಮಾಚರೇತ್ ।
ನಕ್ತಂ ಕುರ್ಯಾದ್ದ್ವಿತೀಯಾಯಾಂ ತೃತೀಯಾಯಾಮುಪೋಷಿತಾ॥ ೪ ॥

ಉಮಾಂ ದೇವೀಂ ಸಮಭ್ಯರ್ಚ್ಯ ಪುಷ್ಪಗಂಧಾದಿಭಿಃ ಕ್ರಮಾತ್ ।
ಶರ್ಕರಾಪುತ್ರಿಕಾಂ ಶಕ್ತ್ಯಾ ಪ್ರಣಿಪತ್ಯ ನಿವೇದಯೇತ್ ॥ ೫ ॥

ಸಂಪ್ರಾಶ್ಯ ದಧಿ ರಾತ್ರೌ ಚ ಸ್ವಪ್ಯಾದ್ವಿಗತಮತ್ಸರಾ ।
ಪ್ರಭಾತೇ ವಿಧಿವದ್ಭಕ್ತ್ಯಾ ಮಿಥುನಂ ಭೋಜಯೇತ್ಸುಧೀಃ ॥ ೬ ॥

---

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಅಪೂರ್ವವಾಗಿಯೂ, ಮಂತ್ರಜಪಗಳಿಂದ ಅತ್ಯುತ್ತಮವಾಗಿಯೂ ಇರುವ ಈ ಅನಂತರ ತೃತೀಯಾವ್ರತವನ್ನು ಬ್ರಹ್ಮ, ವಿಷ್ಣು, ಮಹೇಶ್ವರರೂ, ಸುರೋತ್ತಮರೂ ಪೂರ್ವಕಾಲದಲ್ಲಿ ನಿರೂಪಿಸಿದ ಕ್ರಮವನ್ನನುಸರಿಸಿ ಈಗ ನಿನಗೆ ಹೇಳುತ್ತೇನೆ ಕೇಳು.

೪. ಆದಿಯಲ್ಲಿ ಮಾರ್ಗಶೀರ್ಷಮಾಸದ ಶುಕ್ಲಪಕ್ಷದಿಂದ ಪ್ರಾರಂಭಿಸಿ ಈ ವ್ರತವನ್ನು ಆಚರಿಸಬೇಕು. ಈ ಮಾಸದಲ್ಲಿ ದ್ವಿತೀಯಾ ತಿಥಿಯಲ್ಲಿ ಏಕಭೋಜನವನ್ನು (ನಕ್ತವನ್ನು) ಮಾಡಿ ಮರುದಿನ ತೃತೀಯಾ ತಿಥಿಯಲ್ಲಿ ಉಪವಾಸದಿಂದಿರಬೇಕು.

೫. ಆದಿನ ಪುಷ್ಪಗಂಧಾದಿ ಪೂಜಾದ್ರವ್ಯಗಳಿಂದ ಕ್ರಮವಾಗಿ ಶ್ರೀ ಉಮಾದೇವಿಯನ್ನರ್ಚಿಸಿ ಸ್ವಶಕ್ತಿಗನುಸಾರವಾದಷ್ಟು ಸಕ್ಕರೆ ಪಾಕದಿಂದ ಸಕ್ಕರೆ ಬೊಂಬೆಗಳನ್ನು ಮಾಡಿ ಅರ್ಪಿಸಿ ನಮಸ್ಕರಿಸಬೇಕು.

೬. ಆದಿನ ರಾತ್ರಿ ದಧಿಪ್ರಾಶನೆಮಾಡಿ ಮಾತ್ಸರ್ಯಾದಿಗಳಿಂದ ಕಲುಷಿತ ಮನಸ್ಕಳಾಗದೆ ಶಯನಮಾಡಿ ಮರುದಿವಸ ಪ್ರಾತಃಕಾಲ ಭಕ್ತಿಯಿಂದ ವಿಧಿವತ್ತಾಗಿ ದಂಪತಿಗಳಿಗೆ ಭೋಜನ ಮಾಡಿಸಬೇಕು.

ಅಶ್ವಮೇಧಮವಾಪ್ನೋತಿ ಸಮಗ್ರಂ ನಾತ್ರ ಸಂಶಯಃ ।
ತಥಾ ಕೃಷ್ಣತೃತೀಯಾಯಾಂ ಸೋಪವಾಸಾ ಜಿತೇನ್ದ್ರಿಯಾ ॥ ೭ ॥

ಯಜೇತ್ಕಾತ್ಯಾಯನೀಂ ನಾಮ ನಾಲಿಕೇರಂ ನಿವೇದಯೇತ್ ।
ಸ್ವಪ್ಯಾತ್ಪ್ರಾಶ್ಯ ಪಯೋ ರಾತ್ರೌ ಕಾಮಕ್ರೋಧವಿವರ್ಜಿತಾ ।
ದಾಂಪತ್ಯಂ ಸುಭಗಂ ಭೋಜ್ಯಂ ಗೋಮೇಧಫಲಮಾಪ್ನುಯಾತ್ ॥ ೮ ॥

ಪೌಷಸ್ಯಾದಿತೃತೀಯಾಯಾಂ ಸೋಪವಾಸಾ ಜಿತೇನ್ದ್ರಿಯಾ ।
ಗೌರೀಂ ನಾಮ ತು ಸಂಪೂಜ್ಯ ಲಡ್ಡುಕಾನ್ವಿನಿವೇದಯೇತ್ ॥ ೯ ॥

ಸ್ವಪ್ಯಾತ್ಪ್ರಾಶ್ಯ ಘೃತಂ ರಾತ್ರೌ ತ್ಯಕ್ತ್ವಾ ಕಾಮಂ ತದಗ್ರತಃ ।
ಪ್ರಭಾತೇ ಮಿಥುನಂ ಭೋಜ್ಯಂ ನರಮೇಧಫಲಂ ಭವೇತ್ ॥ ೧೦ ॥

---

೭. ಈರೀತಿ ಆಚರಿಸುವುದರಿಂದ ಸಾಂಗವಾದ ಅಶ್ವಮೇಧ ಯಾಗಾನುಷ್ಠಾನದಿಂದ ಬರುವ ಫಲವು ನಿಶ್ಚಯವಾಗಿ ಲಭಿಸುವುದು. ಹಾಗೆಯೇ ಈ ಮಾರ್ಗಶೀರ್ಷ ಕೃಷ್ಣ ತೃತೀಯೆಯಲ್ಲಿಯೂ ಜಿತೇಂದ್ರಿಯಳಾಗಿ ಉಪವಾಸದಿಂದಿರಬೇಕು.

೮. ಆಗ ದೇವಿಯನ್ನುದ್ದೇಶಿಸಿ "ಕಾತ್ಯಾಯನೀ" ನಾಮದಿಂದ ಪೂಜೆ ಮಾಡಿ ನಾರಿಕೇಳ ಫಲವನ್ನು ನಿವೇದನ ಮಾಡಬೇಕು. ಆದಿನ ಕ್ಷೀರಪ್ರಾಶನೆ ಮಾಡಿ ಕಾಮಕ್ರೋಧಾದಿವರ್ಜಿತಳಾಗಿ ರಾತ್ರಿಯಲ್ಲಿ ಜಿತೇಂದ್ರಿಯತೆಯಿಂದ ಮಲಗಬೇಕು. ಮರುದಿನ ಬೆಳಗ್ಗೆ ಸದಾಚಾರನಿರತರಾದ ದಂಪತಿಗಳಿಗೆ ಭೋಜನ ಮಾಡಿಸಬೇಕು. ಈ ವ್ರತಾಚರಣೆಯಿಂದ ಗೋಮೇಧ ಯಜ್ಞಾನುಷ್ಠಾನದಿಂದ ಬರುವಷ್ಟು ಪುಣ್ಯಫಲವು ಲಭಿಸುವುದು.

೯. ಪುಷ್ಯ ಶುಕ್ಲ ತೃತೀಯೆಯಲ್ಲಿ ಜಿತೇಂದ್ರಿಯಳಾಗಿ ಉಪವಾಸದಿಂದಿದ್ದು "ಗೌರೀ" ನಾಮದಿಂದ ದೇವಿಯನ್ನು ಪೂಜಿಸಿ, ಲಡ್ಡುಗಗಳನ್ನು ನಿವೇದನ ಮಾಡಬೇಕು.

೧೦. ರಾತ್ರಿಯಲ್ಲಿ ಘೃತಪ್ರಾಶನಮಾಡಿ ಕಾಮವಿಕಾರರಹಿತಳಾಗಿ ದೇವಿಯ ಮುಂದುಗಡೆಯಲ್ಲಿಯೇ ಶಯನಮಾಡಿ, ಮರುದಿನ ಪ್ರಾತಃಕಾಲ ಸದ್ಧರ್ಮಯುತರಾದ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು. ಇವರಿಂದ ನರಮೇಧ ಯಾಗ ಮಾಡಿದರೆ ಬರುವಷ್ಟು ಪುಣ್ಯವು ಲಭಿಸುವುದು.

ಏವಂ ಕೃಷ್ಣ ತೃತೀಯಾಯಾಂ ಪಾರ್ವತೀಮಿತಿ ಪೂಜಯೇತ್ ।
ನಿವೇದಯಾನ್ನಂ ಶಷ್ಕುಲ್ಯೋ ಗೋಮಯಂ ಪ್ರಾಶಯೇನ್ನಿಶಿ ।
ದಾಂಪತ್ಯಂ ವಿವಿಧಂ ಭೋಜ್ಯಮಶ್ವಮೇಧಫಲಂ ಲಭೇತ್ ॥ ೧೧ ॥

ಮಾಘಸ್ಯ ಶುಕ್ಲಪಕ್ಷೇ ತು ತೃತೀಯಾಯಾಮುಪೋಷಿತಾ ।
ಸುರನಾಯಿಕಾಂ ಚ ಸಂಪೂಜ್ಯ ಖಂಡಬಿಲ್ವಂ ನಿವೇದಯೇತ್ ॥ ೧೨ ॥

ತತಃ ಕುಶೋದಕಂ ಪ್ರಾಶ್ಯ ಸ್ವಪ್ಯಾದ್ಭೂಮೌ ಜಿತೇನ್ದ್ರಿಯಾ ।
ಪ್ರಭಾತೇ ಮಧುರಾನ್ನೇನ ಮಿಥುನಂ ಭೋಜ್ಯ ಭಕ್ತಿತಃ ।
ಕ್ಷಮಾಪ್ಯಾಂತೇ ನಮಸ್ಕೃತ್ಯ ಸರ್ವಸ್ವಾರಫಲಂ ಲಭೇತ್ ॥ ೧೩ ॥

ಪುನರೇತ್ತಿಥೋ ಮಾಘೇ ಕೃಷ್ಣಪಕ್ಷೇ ಶುಚಿವ್ರತಾ ।
ಆರ್ಯಾಂ ನಾಮ್ನಾ ಪ್ರಪೂಜ್ಯಾಥ ಖಾದ್ಯಕಾನಿ ನಿವೇದಯೇತ್ ॥ ೧೪ ॥

---

೧೧. ಇದೇ ರೀತಿ ಪುಷ್ಯ ಕೃಷ್ಣ ತೃತೀಯೆಯಲ್ಲಿ "ಪಾರ್ವತೀ" ಎಂಬ ನಾಮವನ್ನು ಹೇಳಿ ಪೂಜಿಸಿ, ಅನ್ನ ಚಕ್ಕುಲಿ ಇವುಗಳನ್ನು ನಿವೇದನ ಮಾಡಬೇಕು. ಆದಿನ ರಾತ್ರಿ ಗೋಮಯ ಪ್ರಾಶನಮಾಡಿ, ಮರುದಿನ ಪ್ರಾತಃಕಾಲದಲ್ಲಿ ವಿವಿಧ ಭೋಜ್ಯಪದಾರ್ಥಗಳಿಂದ ಬ್ರಾಹ್ಮಣ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು. ಇವರಿಂದ ಅಶ್ವಮೇಧ ಯಾಗಮಾಡಿದಷ್ಟು ಫಲ ಪ್ರಾಪ್ತಿಯಾಗುವುದು.

೧೨. ಮಾಘ ಶುಕ್ಲ ತೃತೀಯೆಯಲ್ಲೂ ಉಪವಾಸವಾಗಿದ್ದು "ಸುರನಾಯಿಕಾ" ಎಂಬನಾಮವನ್ನು ಹೇಳಿ ದೇವಿಯನ್ನು ಪೂಜಿಸಿ, ಬಿಲ್ವಖಂಡವನ್ನು ನಿವೇದನಮಾಡಬೇಕು.

೧೩. ಅನಂತರ ರಾತ್ರಿಯಲ್ಲಿ ಕುಶೋದಕವನ್ನು ಪ್ರಾಶನಮಾಡಿ ಜಿತೇಂದ್ರಿಯತೆಯಿಂದ ಶಯನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ಭಕ್ತಿಪೂರ್ವಕವಾಗಿ ಮಧುರಾನ್ನದಿಂದ ವಿಪ್ರದಂಪತಿಗಳಿಗೆ ಭೋಜನಮಾಡಿಸಿ ಕೊನೆಗೆ ನಮಸ್ಕಾರ ಪೂರ್ವಕವಾಗಿ ಅಪರಾಧಕ್ಷಮೆಯನ್ನು ಬೇಡಿಕೊಳ್ಳಬೇಕು. ಈರೀತಿ ಆಚರಿಸುವುದರಿಂದ ಸರ್ವಸ್ವಾರ ಯಾಗದ ಫಲವು ಲಭಿಸುವುದು.

೧೪. ಪುನಃ ಮಾಘಬಹುಳದಲ್ಲಿ ಶುಚಿರ್ಭೂತಳೂ ನಿಯಮವುಳ್ಳವಳೂ ಆಗಿ "ಆರ್ಯಾ" ಎಂಬ ನಾಮವನ್ನುಚ್ಚರಿಸಿ ಶಾಸ್ತ್ರರೀತಿಯಲ್ಲಿ ದೇವೀಪೂಜೆಯನ್ನುಮಾಡಿ ಅನಂತರ ಖಾದ್ಯಪದಾರ್ಥಗಳನ್ನು ನಿವೇದಿಸಬೇಕು.

**ಮಧು ಪ್ರಾಶ್ಯ ಸ್ವಪೇದ್ರಾತ್ರೌ ಕಾಮಕ್ರೋಧವಿವರ್ಜಿತಾ ।**
**ಮಿಥುನಂ ಭೋಜಯಿತ್ವಾ ತು ವಾಜಪೇಯಫಲಂ ಲಭೇತ್ ॥ ೧೫ ॥**

**ಏವಂ ವೈ ಫಾಲ್ಗುನೇ ಮಾಸಿ ಸೋಪವಾಸಾ ಶುಚಿವ್ರತಾ ।**
**ಭದ್ರಾಂ ನಾಮ ಪ್ರಪೂಜ್ಯಾಥ ಕಾಂಸಾರಂ ವಿನಿವೇದಯೇತ್ ॥ ೧೬ ॥**

**ಸುಪ್ರಾಶ್ಯ ಶರ್ಕರಾಂ ಚಾಥ ಸ್ವಪ್ಯಾದ್ರಾತ್ರೌ ವಿಮತ್ಸರಾ ।**
**ಪ್ರಭಾತೇ ಮಿಥುನಂ ಭೋಜ್ಯಂ ಸೌತ್ರಾಮಣಿಫಲಂ ಲಭೇತ್ ॥ ೧೭ ॥**

**ಪುನಃ ಕೃಷ್ಣತೃತೀಯಾಯಾಂ ಫಾಲ್ಗುನಸ್ಯೈವ ಭಾರತ ।**
**ವಿಶಾಲಾಕ್ಷೀಂ ಸಮಭ್ಯರ್ಚ್ಯ ಪೂರಿಕಾಂ ವಿನಿವೇದಯೇತ್ ॥ ೧೮ ॥**

---

೧೫. ಆದಿನ ರಾತ್ರಿ ಮಧುಪ್ರಾಶನೆಮಾಡಿ ಕಾಮಕ್ರೋಧಾದ್ಯರಿಷಡ್ವರ್ಗ ಗಳನ್ನು ಜಯಿಸಿ ಶಯನಮಾಡಬೇಕು. ಮರುದಿನ ದಂಪತಿಗಳಿಗೆ ಭೋಜನ ವನ್ನು ಮಾಡಿಸಬೇಕು. ಇದರಿಂದ ವಾಜಪೇಯ ಯಾಗಮಾಡಿದಷ್ಟು ಪುಣ್ಯವು ಲಭಿಸುವುದು.

೧೬. ಇದೇರೀತಿ ಫಾಲ್ಗುಣಮಾಸದ ಶುಕ್ಲಪಕ್ಷದಲ್ಲೂ, ಪರಿಶುದ್ಧವಾದ ಆಚಾರವುಳ್ಳವಳಾಗಿ ಉಪವಾಸದಿಂದಿದ್ದು "ಭದ್ರಾ" ಎಂಬ ನಾಮವನ್ನುಚ್ಚರಿಸಿ ದೇವೀಪೂಜೆಯನ್ನು ಮಾಡಿ, ಅನಂತರ ಕಾಂಸಾರವೆಂಬ ಭಕ್ಷ್ಯವಿಶೇಷವನ್ನು ಸಮರ್ಪಿಸಬೇಕು.

೧೭. ಆದಿನ ರಾತ್ರಿ ಶರ್ಕರಾಪ್ರಾಶನೆಮಾಡಿ ಅನಂತರ ಮಾತ್ಸರ್ಯಾದಿ ದೋಷರಹಿತಳಾಗಿ ಭೂಶಯನಮಾಡಬೇಕು. ಆಮೇಲೆ ಪ್ರಾತಃಕಾಲ ವಿಪ್ರ ದಂಪತಿಗಳಿಗೆ ಭೋಜನಮಾಡಿಸಬೇಕು. ಇದರಿಂದ ಸೌತ್ರಾಮಣಿ ಎಂಬ ಯಾಗ ಮಾಡಿದಷ್ಟು ಫಲವು ಬರುವುದು.

೧೮. ಅಯ್ಯಾ ಯುಧಿಷ್ಠಿರನೇ ! ಫಾಲ್ಗುಣ ಬಹುಳ ತೃತೀಯೆಯಲ್ಲಿ "ವಿಶಾಲಾಕ್ಷೀ" ಎಂಬ ನಾಮವನ್ನುಚ್ಚರಿಸಿ ದೇವಿಯ ಪೂಜೆಮಾಡಿ ಪೂರಿ ಯನ್ನು ನೈವೇದ್ಯಮಾಡಬೇಕು.

ಸೋದಕಾಂಸ್ತಂಡುಲಾನ್ಭುಕ್ತ್ವಾ ಸ್ವಪ್ಯಾದ್ಭೂಮೌ ಮನಸ್ವಿನೀ ।
ಭೋಜಯೇನ್ಮಿಥುನಂ ಪ್ರಾತರಗ್ನಿಷ್ಟೋಮಫಲಂ ಲಭೇತ್ ॥ ೧೯ ॥

ಚೈತ್ರಸ್ಯಾದಿತೃತೀಯಾಯಾಂ ಶುಚಿರ್ಭೂತ್ವಾ ಜಿತೇಂದ್ರಿಯಾ ।
ಶ್ರಿಯಂ ದೇವೀಂ ಯಜೇದ್ಭಕ್ತ್ಯಾ ವಟಕಾನ್ವಿನಿವೇದಯೇತ್ ॥ ೨೦ ॥

ಬಿಲ್ವಪತ್ರಂ ತತಃ ಪ್ರಾಶ್ಯ ಸ್ವಪ್ಯಾದ್ಧ್ಯಾನಪರಾಯಣಾ ।
ಪ್ರಾತರುತ್ಥಾಯ ಸದ್ಭಕ್ತ್ಯಾ ಮಿಥುನಂ ಪೂಜಯೇತ್ಸುಧೀಃ ।
ಪ್ರಣಿಪತ್ಯ ಕ್ಷಮಾಪ್ಯೈವಂ ರಾಜಸೂಯಫಲಂ ಲಭೇತ್ ॥ ೨೧ ॥

ಪುನಃ ಕೃಷ್ಣತೃತೀಯಾಯಾಂ ಚೈತ್ರೇ ಸಮ್ಯಗುಪೋಷಿತಾ ।
ಕಾಲೀಂ ನಾಮ ಸಮಭ್ಯರ್ಚ್ಯ ಪಿಷ್ಟಂ ಪ್ರಾಶ್ಯ ಸ್ವಪೇನ್ನಿಶಿ ॥ ೨೨ ॥

---

೧೯. ಆದಿನ ರಾತ್ರಿಯಲ್ಲಿ ಜಲಸಹಿತವಾದ ತಂಡುಲವನ್ನು ಪ್ರಾಶನಮಾಡಿ ಸ್ಥಿರಚಿತ್ತಳಾಗಿ ಭೂಶಯನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ವಿಪ್ರ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಅಗ್ನಿಷ್ಟೋಮ ಯಾಗ ಮಾಡಿದಷ್ಟು ಫಲವು ಲಭಿಸುವುದು.

೨೦. ಚೈತ್ರ ಶುದ್ಧ ತೃತೀಯೆಯಲ್ಲಿ ಶುಚಿಯಾಗಿ ಸಕಲೇಂದ್ರಿಯಗಳನ್ನೂ ನಿಗ್ರಹಿಸಿ "ಶ್ರೀ" ಎಂಬ ನಾಮದಿಂದ ದೇವಿಯನ್ನು ಭಕ್ತಿಯಿಂದ ಪೂಜಿಸಿ, ಉದ್ದಿನ ವಡೆಯುನ್ನು ದೇವಿಗೆನಿವೇದನ ಮಾಡಬೇಕು.

೨೧. ಅನಂತರ ಆದಿನ ರಾತ್ರಿ ಬಿಲ್ವಪತ್ರ ಪ್ರಾಶನೆಮಾಡಿ, ದೇವೀಧ್ಯಾನ ತತ್ಪರಳಾಗಿ ಭೂಶಯನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ಭಕ್ತಿ ಪೂರ್ವಕವಾಗಿ ದಂಪತಿ ಭೋಜನಮಾಡಿಸಿ ನಮಸ್ಕಾರ ಪೂರ್ವಕವಾಗಿ ಅಪರಾಧ ಕ್ಷಮಾಪಣೆ ಪ್ರಾರ್ಥಿಸಿ ತಮಗೆ "ಆಯಾಸವುಂಟುಮಾಡಿದೆನು" ಎಂದು ಉಪಚಾರವಚನವನ್ನು ಹೇಳಬೇಕು. ಈರೀತಿ ಮಾಡುವುದರಿಂದ ರಾಜಸೂಯ ಯಾಗ್ಯಮಾಡಿದಷ್ಟು ಫಲವು ಲಭಿಸುವುದು.

೨೨. ಚೈತ್ರ ಬಹುಳ ತೃತೀಯೆಯಲ್ಲಿಯೂ ಉಪವಾಸಮಾಡಿ "ಕಾಲೀ" ಎಂಬ ನಾಮವನ್ನು ಹೇಳಿ ದೇವಿಯನ್ನು ಚೆನ್ನಾಗಿ ಅರ್ಚಿಸಿ, ಆದಿನ ರಾತ್ರಿ ಹಿಟ್ಟನ್ನು ಪ್ರಾಶನೆಮಾಡಿ ಶಯನಮಾಡಬೇಕು.

**ಪೂಪಕಾನಿ ನಿವೇದ್ಯಾಥ ಕುರ್ಯಾದ್ರಾತ್ರೌ ಪ್ರಜಾಗರಂ ।**
**ಮಿಥುನಾನಿ ಚ ಸಂಭೋಜ್ಯ ಅತಿರಾತ್ರಫಲಂ ಭವೇತ್ ॥ ೨೩ ॥**

**ಏವಂ ವೈಶಾಖಮಾಸೇ ತು ಸೋಪವಾಸಾ ಜಿತೇಂದ್ರಿಯಾ ।**
**ಪೂಜಯೇಚ್ಚಂಡಿಕಾಂ ದೇವೀಂ ಮಧುಕಾನಿ ನಿವೇದಯೇತ್ ॥ ೨೪ ॥**

**ಶ್ರೀಖಂಡಂ ಚಂದನಂ ಲಿಪ್ತ್ವಾ ಸ್ವಪ್ಯಾದ್ದೇವ್ಯಗ್ರತೋ ಭುವಿ ।**
**ಭೋಜಯಿತ್ವಾ ಚ ದಾಂಪತ್ಯಂ ಚಾಂದ್ರಾಯಣಫಲಂ ಲಭೇತ್ ॥ ೨೫ ॥**

**ತಥಾ ಕೃಷ್ಣತೃತೀಯಾಯಾಂ ಸೋಪವಾಸಾ ವಿಮತ್ಸರಾ ।**
**ಪೂಜಯೇತ್ಕಾಲರಾತ್ರಿಂ ತು ಗಂಧಪುಷ್ಪೈಃ ಸದೀಪಕೈಃ ॥ ೨೬ ॥**

---

೨೩. ಪೂಜಾಸಂಭಾರವನ್ನು ಸಿದ್ಧಪಡಿಸಿ ವಿಧಿಪ್ರಕಾರ ಅರ್ಚಿಸಿ, ಅಪೂಪವನ್ನು ಮಾಡಿಸಿ ನಿವೇದನ ಮಾಡಬೇಕು. ಅನಂತರ ಆರಾತ್ರಿ ಜಾಗರಣವನ್ನೂ ಮಾಡಬಹುದು. ಮರುದಿನ ಬೆಳಗ್ಯೆ ದಂಪತಿ ಭೋಜನ ಮಾಡಿಸಬೇಕು. ಈ ವ್ರತದಿಂದ ಅತಿರಾತ್ರಿ ಎಂಬ ಯಜ್ಞಮಾಡಿದಷ್ಟು ಫಲಪ್ರಾಪ್ತಿಯಾಗುವುದು.

೨೪. ಇದೇರೀತಿ ವೈಶಾಖಶುದ್ಧ ತೃತೀಯೆಯಲ್ಲಿ ನಿರಾಹಾರದಿಂದಿದ್ದು ಸಕಲೇಂದ್ರಿಯಗಳನ್ನೂ ನಿಗ್ರಹಿಸಿ "ಚಂಡಿಕ" ದೇವಿಯನ್ನು ಪೂಜಿಸಿ, ಅತಿ ಮಧುರವಾದ ಮಿಠಾಯಿಯನ್ನು ನೈವೇದ್ಯಮಾಡಬೇಕು.

೨೫. ರಾತ್ರಿಯಲ್ಲಿ ಶ್ರೀ ಗಂಧವನ್ನು ಲೇಪಿಸಿಕೊಂಡು ಶ್ರೀ ದೇವೀಮಂಟಪದ ಇದಿರುಭಾಗದಲ್ಲೇ ಭೂಮಿಯಲ್ಲಿ ಶಯನಮಾಡಬೇಕು. ಅನಂತರ ಪ್ರಾತಃಕಾಲದಲ್ಲಿ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಕೃಚ್ಛ್ರ ಚಾಂದ್ರಾಯಣಾದಿ ವ್ರತಾಚರಣದ ಫಲವು ಲಭಿಸುವುದು.

೨೬. ಇದೇರೀತಿ ವೈಶಾಖ ಬಹುಳ ತೃತೀಯೆಯಲ್ಲಿ ಮಾತ್ಸರ್ಯಾದಿ ದೋಷರಹಿತಳಾಗಿ ನಿರಾಹಾರದಿಂದಿದ್ದು "ಕಾಲರಾತ್ರಿ" ನಾಮದಿಂದ ದೇವಿಯನ್ನು ಗಂಧ, ಪುಷ್ಪ, ಧೂಪ ದೀಪಾದಿಗಳಿಂದ ಅರ್ಚಿಸಬೇಕು. ಪಕ್ವಮಾಡಿದ ಅಲಸಂದೆಯನ್ನು ದೇವಿಗೆ ನಿವೇದಿಸಬೇಕು.

ಸುಪಕ್ವಂ ಯಾವಕಂ ದತ್ವಾ ತಿಲಾನ್ಪುಂಜನ್ ಸ್ವಪೇನ್ನಿಶಿ ।
ಪ್ರಭಾತೇ ಮಿಥುನಂ ಭೋಜ್ಯಮತಿಕೃಚ್ಛ್ರಫಲಂ ಲಭೇತ್ ॥ ೨೭ ॥

ಜ್ಯೇಷ್ಠೇ ಸಿತತೃತೀಯಾಯಾಂ ಹ್ಯುಪವಾಸಕೃತಾಂ ವರಾ ।
ಶುಭಾಂ ದೇವೀಂ ಸಮಭ್ಯರ್ಚ್ಯ ಆಮ್ರಾಣಿ ವಿನಿವೇದಯೇತ್ ।
ಸಂಪ್ರಾಶ್ಯಾಮಲಕಂ ರಾತ್ರೌ ಗೌರೀಂ ಧ್ಯಾತ್ವಾ ಸುಖಂ ಸ್ವಪೇತ್ ॥ ೨೮ ॥

ತತಃ ಪ್ರಾತಃ ಸಮುತ್ಥಾಯ ದಂಪತೀ ರೂಪಶಾಲಿನೌ ।
ಭೋಜಯಿತ್ವಾ ವಿಧಾನೇನ ತೀರ್ಥಯಾತ್ರಾಫಲಂ ಲಭೇತ್ ॥ ೨೯ ॥

ಪುನಃ ಕೃಷ್ಣತೃತೀಯಾಯಾಂ ಸೋಪವಾಸಾ ಸುವಾಸಿನೀ ।
ಸ್ಕಂದಮಾತೇತಿ ಸಂಪೂಜ್ಯ ಇಡಾಂ ತು ವಿನಿವೇದಯೇತ್ ॥ ೩೦ ॥

---

೨೭. ಆದಿನ ರಾತ್ರಿ ತಿಲಪ್ರಾಶನೆಮಾಡಿ ಶಯನಮಾಡಬೇಕು. ಮರುದಿನ ಪ್ರಾತಃಕಾಲ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು. ಹೀಗೆ ಮಾಡಿದರೆ ಅತಿಕೃಚ್ಛ್ರವ್ರತಾಚರಣೆಯಿಂದ ಲಭಿಸುವ ಫಲವು ಬರುವುದು.

೨೮. ಜ್ಯೇಷ್ಠಶುಕ್ಲ ತೃತೀಯೆಯಲ್ಲಿ ನಿರಾಹಾರಳಾಗಿ " ಶುಭಾ " ಎಂಬ ನಾಮದಿಂದ ದೇವಿಯನ್ನರ್ಚಿಸಿ ಮಾವಿನಹಣ್ಣುಗಳನ್ನು ನೈವೇದ್ಯಮಾಡಬೇಕು. ಆದಿನ ರಾತ್ರಿ ನೆಲ್ಲಿಯಕಾಯನ್ನು ತಿಂದು, ಗೌರೀಧ್ಯಾನತತ್ಪರಳಾಗಿ ಸುಖವಾಗಿ ಶಯನಮಾಡಬೇಕು.

೨೯. ಮರುದಿನ ಪ್ರಾತಃಕಾಲದಲ್ಲೆದ್ದು ವರ್ಚಸ್ವಿಗಳಾದ ದಂಪತಿಗಳನ್ನು ಆಹ್ವಾನಿಸಿ ಅವರಿಗೆ ವಿಧಿವತ್ತಾಗಿ ಭೋಜನ ಮಾಡಿಸಬೇಕು. ಇದರಿಂದ ಸಕಲ ತೀರ್ಥಯಾತ್ರೆ ಮಾಡಿದುದರಿಂದ ಲಭಿಸುವ ಪುಣ್ಯ ಲಭಿಸುವುದು.

೩೦. ಅದೇ ಜ್ಯೇಷ್ಠಕೃಷ್ಣ ತೃತೀಯೆಯಲ್ಲಿ ವ್ರತಾನುಷ್ಠಾನಮಾಡುವ ಸುವಾಸಿನಿಯು ನಿರಾಹಾರದಿಂದ ಇದ್ದು, "ಸ್ಕಂಧಮಾತಾ'' ಎಂಬ ನಾಮಧೇಯದಿಂದ ದೇವಿಯನ್ನು ಪೂಜಿಸಿ ಪುರೋಡಾಶವನ್ನು ನಿವೇದಿಸಬೇಕು.

ಪ್ರಾಶಯೇತ್ಪಂಚಗವ್ಯಂ ಚ ಸ್ವಪ್ಯಾದ್ದೇವ್ಯಗ್ರತಸ್ತತಃ ।
ಪ್ರಭಾತೇ ಮಿಥುನಂ ಭೋಜ್ಯಂ ಕನ್ಯಾದಾನಫಲಂ ಲಭೇತ್ ॥ ೩೦ ॥

ಆಷಾಢಮಾಸೇ ಸಂಪ್ರಾಪ್ತೇ ಪೂಜಯೇಚ್ಚ ಯಶೋಧನಾಂ ।
ಕರಂಜಕಂ ಚ ನೈವೇದ್ಯಂ ಗೋಶೃಂಗಾಂಭಃ ಪಿಬೇನ್ನಿಶಿ ।
ಪ್ರಭಾತೇ ಮಿಥುನಂ ಭೋಜ್ಯಂ ಕನ್ಯಾದಾನಫಲಂ ಲಭೇತ್ ॥ ೩೨ ॥

ತಥಾ ಕೃಷ್ಣತೃತೀಯಾಯಾಂ ಕೂಷ್ಮಾಂಡೀಂ ಶಕ್ತಿತೋ ಯಜೇತ್ ।
ಸಕ್ತೂನ್ಗುಡಾಜ್ಯಸಂಯುಕ್ತಾನ್ಪರತೋ ವಿನಿವೇದಯೇತ್ ॥ ೩೩ ॥

ಕುಶೋದಕಂ ಚ ಸಂಪ್ರಾಶ್ಯ ಸ್ವಪ್ಯಾದ್ರಾತ್ರೌ ಜಿತೇನ್ದ್ರಿಯಾ ।
ಪ್ರಭಾತೇ ಮಿಥುನಂ ಭೋಜ್ಯಂ ಗೋಸಹಸ್ರಫಲಂ ಲಭೇತ್ ॥ ೩೪ ॥

---

೩೧. ಅನಂತರ ಆದಿನ ರಾತ್ರಿ ಪಂಚಗವ್ಯ ಪ್ರಾಶನಮಾಡಿ ದೇವಿಯ ಪುರೋಭಾಗದಲ್ಲಿ ಶಯನಮಾಡಬೇಕು. ಮರುದಿನ ಪ್ರಾತಃಕಾಲ ಶಕ್ತ್ಯನುಸಾರ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಕನ್ಯಾದಾನಮಾಡಿದ ಫಲ ಲಭ್ಯವಾಗುವುದು.

೩೨. ಆಷಾಢ ಶುಕ್ಲ ತೃತೀಯೆಯಲ್ಲಿ "ಯಶೋಧನಾ" ಎಂಬ ನಾಮದಿಂದ ದೇವಿಯನ್ನು ಅರ್ಚಿಸಿ, ಕರಂಜಕ ಎಂಬ ಫಲವಿಶೇಷವನ್ನು ಸಮರ್ಪಣೆ ಮಾಡಿ, ಆದಿನ ರಾತ್ರಿ ಗೋಶೃಂಗೋದಕವನ್ನು ಪ್ರಾಶನಮಾಡಿ ಮಲಗಬೇಕು. ಹಾಗೆಯೇ ಮರುದಿನ ಪ್ರಾತಃಕಾಲ ವಿಪ್ರ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಕನ್ಯಾದಾತೃವಿಗೆ ಬರುವಷ್ಟು ಪುಣ್ಯವು ಬರುವುದು.

೩೩. ಹಾಗೆಯೇ ಆಷಾಢಕೃಷ್ಣ ತೃತೀಯೆಯಲ್ಲೂ "ಕೂಷ್ಮಾಂಡೀ" ನಾಮದಿಂದ ದೇವಿಯನ್ನು ಸ್ವಶಕ್ತ್ಯನುಸಾರ ಪೂಜಿಸಿ ಹಿಟ್ಟಿಗೆ ಬೆಲ್ಲ ಮತ್ತು ತುಪ್ಪ ಇವನ್ನು ಮಿಶ್ರಣಮಾಡಿ ನೈವೇದ್ಯಮಾಡಬೇಕು.

೩೪. ಆದಿನ ರಾತ್ರಿಯಲ್ಲಿ ದರ್ಭೋದಕ ಪ್ರಾಶನಮಾಡಿ ಇಂದ್ರಿಯ ನಿಗ್ರಹಿಯಾಗಿ ನಿದ್ರಿಸಬೇಕು. ಮರುದಿನ ಪ್ರಾತಃಕಾಲದಲ್ಲಿ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಸಹಸ್ರ ಗೋದಾನ ಮಾಡಿದಷ್ಟು ಫಲವು ಲಭಿಸುವುದು.

**ಶ್ರಾವಣೇ ಸೋಽಪವಾಸಾ ಚ ಚಂಡಾಂ ಘಂಟಾಂ ಪ್ರಪೂಜಯೇತ್ ।**
**ಕುಲ್ಮಾಷಾಸ್ತತ್ರ ನೈವೇದ್ಯಂ ಪಿಬೇತ್ಪುಷ್ಪೋದಕಂ ಪುನಃ ॥ ೩೫ ॥**

**ಪ್ರಭಾತೇ ಶಕ್ತಿತೋ ದದ್ಯಾದ್ಭೋಜನಂ ಮಿಥುನಸ್ಯ ತು ।**
**ಪ್ರಾಪ್ನೋತ್ಯಭಯದಾನಸ್ಯ ಫಲಂ ನೈವಾತ್ರ ಸಂಶಯಃ ॥ ೩೬ ॥**

**ತದ್ವತ್ಕೃಷ್ಣತೃತೀಯಾಯಾಂ ರುದ್ರಾಣೀಂ ನಾಮಭಿರ್ಯಜೇತ್ ।**
**ಸಿದ್ಧಪಿಂಡಾನಿ ದಿವ್ಯಾನಿ ನೈವೇದ್ಯಂ ದಾಪಯೇತ್ತಥಾ ॥ ೩೭ ॥**

**ಪಿಣ್ಯಾಕಂ ಪ್ರಾಶಯಿತ್ವಾ ತು ಸ್ವಪ್ಯಾದ್ರಾತ್ರೌ ವಿಮತ್ಸರಾ ।**
**ಸಂಪೂಜ್ಯ ದ್ವಿಜದಾಂಪತ್ಯಮಿಷ್ಟಾಪೂರ್ತಫಲಂ ಲಭೇತ್ ॥ ೩೮ ॥**

---

೩೫. ಶ್ರಾವಣಶುದ್ಧ ತೃತೀಯೆಯಲ್ಲಿ ಉಪವಾಸವಿದ್ದು "ಚಂಡಘಂಟಾ" ನಾಮದಿಂದ ದೇವಿಯನ್ನು ಆರಾಧಿಸಿ ಅಲಸಂದೆಯಕಾಳನ್ನು ನಿವೇದಿಸಬೇಕು. ಅನಂತರ ಆದಿನ ರಾತ್ರಿ ಪುಷ್ಪೋದಕವನ್ನು ಪ್ರಾಶನೆ ಮಾಡತಕ್ಕದು.

೩೬. ಮರುದಿನ ಬೆಳಗ್ಗೆ ಸ್ವಶಕ್ತ್ಯನುಸಾರವಾಗಿ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು. ಈರೀತಿ ಆಚರಿಸುವುದರಿಂದ ಭೀತರಿಗೆ ಅಭಯಪ್ರದಾನ ಮಾಡುವುದರಿಂದ ಬರುವಷ್ಟು ಪುಣ್ಯವು ಲಭಿಸುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೩೭. ಹೀಗೆಯೇ ಶ್ರಾವಣ ಬಹುಳ ತೃತೀಯೆಯಲ್ಲೂ "ರುದ್ರಾಣೀ" ನಾಮದಿಂದ ದೇವಿಯನ್ನು ಅರ್ಚಿಸಿ, ಉತ್ತಮವಾದ ಸಿದ್ಧಪಿಂಡಗಳನ್ನು ನೈವೇದ್ಯ ಮಾಡಬೇಕು.

೩೮. ಆದಿನ ರಾತ್ರಿ ಹಿಂಡಿಯನ್ನು ಪ್ರಾಶನಮಾಡಿ ಮಾತ್ಸರ್ಯಾದಿ ದೋಷರಹಿತಳಾಗಿ ಶಯನ ಮಾಡಬೇಕು. ಅನಂತರ ಪ್ರಾತಃಕಾಲದಲ್ಲಿ ಬ್ರಾಹ್ಮಣ ದಂಪತಿಗಳನ್ನು ಆಹ್ವಾನಿಸಿ ಪೂಜೆಮಾಡಬೇಕು. ಇದರಿಂದ ಇಷ್ಟಾಪೂರ್ತ ಕರ್ಮಗಳನ್ನಾಚರಿಸಿದಷ್ಟು ಫಲ ಲಭಿಸುವುದು.

(ಅಗ್ನಿಹೋತ್ರಸ್ತಪಸ್ಸತ್ಯಂ ವೇದಾನಾಂ ಚಾನುಪಾಲನಂ ।
ಆತಿಥ್ಯಂ ವೈಶ್ವದೇವಂಚ ಇಷ್ಟಮಿತ್ಯಭಿಧೀಯತೇ ॥

ಎಂಬ ವಚನಾನುಸಾರವಾಗಿ ಇಷ್ಟ ಎಂದರೆ ಅಗ್ನಿಹೋತ್ರಾದಿ ಕರ್ಮವೆಂದು ತಿಳಿಯಬೇಕು.

ಭಾದ್ರೇ ಶುಕ್ಲತೃತೀಯಾಯಾಂ ಪೂಜಯೇತ ಹಿಮಾದ್ರಿಜಾಂ ।
ಗೋಧೂಮಾನ್ನಂ ನಿವೇದ್ಯೈವ ಲೇಪಯೇಚ್ಚನ್ದನಂ ಸಿತಂ ॥ ೩೯ ॥

ಗಂಧೋದಕಂ ತತಃ ಪ್ರಾಶ್ಯ ಸಖೀಭಿಃ ಸಹಿತಾ ಸ್ವಪೇತ್ ।
ಪ್ರಭಾತೇ ಮಿಥುನಂ ಭೋಜ್ಯಂ ಮಾರ್ಗಪಾಲೀಶತಂ ಲಭೇತ್ ॥ ೪೦ ॥

ತದ್ವತ್ಕೃಷ್ಣತೃತೀಯಾಯಾಂ ದುರ್ಗಾಂ ದೇವೀಂ ಸಮರ್ಚಯೇತ್ ।
ದದ್ಯಾತ್ತ್ರಿಷ್ಟಫಲಾನ್ದಿವ್ಯಾನ್ಗುಡಾಜ್ಯಪರಿಪೂರಿತಾನ್ ॥ ೪೧ ॥

---

ವಾಪೀಕೂಪ ತಡಾಗಾದಿ ದೇವತಾಯತನಾನಿಚ ।
ಅನ್ನಪ್ರದಾನಮಾರಾಮಃ ಪೂರ್ತಮಿತ್ಯಭಿಧೀಯತೇ ॥

ಎಂಬ ವಾಕ್ಯದಂತೆ ಸರ್ವಜನೋಪಕಾರಕ್ಕಾಗಿ ಭಾವಿ ಮೊದಲಾದುವುಗಳನ್ನು ಕಟ್ಟಿಸುವುದನ್ನು ಪೂರ್ತ ಎಂದು ತಿಳಿಯಬೇಕು.)

೩೯. ಭಾದ್ರಪದ ಶುಕ್ಲ ತೃತೀಯೆಯಲ್ಲಿ "ಹಿಮಾದ್ರಿಜಾ" ಎಂಬ ದೇವೀ ನಾಮವನ್ನು ಹೇಳಿ ಅರ್ಚಿಸಿ, ಗೋಧಿಯ ಅನ್ನವನ್ನು ನೈವೇದ್ಯವಾಗಿ ಸಮರ್ಪಿಸಿ ಶ್ರೀ ಗಂಧವನ್ನು ದೇವಿಗೆ ಲೇಪಿಸಬೇಕು.

೪೦. ಅನಂತರ ಆದಿನ ರಾತ್ರಿ ಗಂಧೋದಕವನ್ನು ಪ್ರಾಶನಮಾಡಿ ಸಖೀ ಸಹಿತಳಾಗಿ ಶಯನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ನೂರುಸಲ ಮಾರ್ಗಪಾಲೀ ವ್ರತ ಮಾಡಿದ್ದರಿಂದ ಬರುವಷ್ಟು ಪುಣ್ಯವು ಲಭ್ಯವಾಗುವುದು.

೪೧. ಭಾದ್ರಪದ ಕೃಷ್ಣ ತೃತೀಯೆಯಲ್ಲೂ ಅದೇ ರೀತಿಯಿಂದ "ದುರ್ಗಾ" ಎಂಬ ನಾಮವನ್ನು ಹೇಳಿ ಅರ್ಚಿಸಬೇಕು. ಬೆಲ್ಲ ಹಿಟ್ಟು ಮತ್ತು ತುಪ್ಪ ಇವುಗಳನ್ನು ಮಿಶ್ರಮಾಡಿ ಪಾಕಮಾಡಿ (ತಂಬಿಟ್ಟು) ನೈವೇದ್ಯವನ್ನರ್ಪಿಸಬೇಕಲ್ಲದೆ ಪೂರ್ಣಫಲ ಸಮರ್ಪಣೆ ಮಾಡಬೇಕು.

ಪ್ರಾಶಯಿತ್ವಾ ತು ಗೋಮೂತ್ರಂ ಸ್ವಪ್ಯಾಚ್ಛಾಂತೇನ ಚೇತಸಾ ।
ಪ್ರಾತಸ್ತು ಮಿಥುನಂ ಭೋಜ್ಯಂ ಸದಾ ಸತ್ರಫಲಂ ಲಭೇತ್ ॥ ೪೨ ॥

ಮಾಸಿ ಚಾಶ್ವಯುಜೇ ಭಕ್ತ್ಯಾ ದೇವೀಂ ನಾರಾಯಣೀಂ ಯಜೇತ್ ।
ಸೋಪವಾಸಾ ಖಂಡಪೂಪಾನ್ನೈವೇದ್ಯಂ ಪರಿಕಲ್ಪಯೇತ್ ॥ ೪೩ ॥

ಪ್ರಾಶಯೇಚ್ಚಂದನಂ ರಕ್ತಂ ಸ್ವಪ್ಯಾಚ್ಚ ಗತಮತ್ಸರಾ ।
ಪ್ರಭಾತೇ ಮಿಥುನಂ ಭೋಜ್ಯಮಗ್ನಿಹೋತ್ರಫಲಂ ಲಭೇತ್ ॥ ೪೪ ॥

ತಥಾ ಕೃಷ್ಣತೃತೀಯಾಯಾಂ ಸ್ವಸ್ತಿ ನಾಮ ಪ್ರಪೂಜಯೇತ್ ।
ಶಾಲ್ಯೋದನಂ ಗುಡೋಪೇತಂ ನೈವೇದ್ಯಂ ನಿರ್ವಪೇತ್ತತಃ ॥ ೪೫ ॥

---

೪೨. ಅನಂತರ ರಾತ್ರಿ ಗೋಮೂತ್ರ ಪ್ರಾಶನೆಮಾಡಿ ಶಾಂತಚಿತ್ತದಿಂದ ಶಯನಮಾಡಬೇಕು. ಬೆಳಗ್ಗೆ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಯಾವಾಗಲೂ ಅನ್ನಸತ್ರವನ್ನು ಸ್ಥಾಪಿಸಿದ್ದರಿಂದ ಬರುವಷ್ಟು ಪುಣ್ಯವು ಲಭ್ಯವಾಗುವುದು.

೪೩. ಆಶ್ವಯುಜ ಶುಕ್ಲ ತೃತೀಯೆಯಲ್ಲಿ ನಿರಾಹಾರವಾಗಿದ್ದು "ನಾರಾಯಣೀ" ನಾಮದಿಂದ ದೇವಿಯನ್ನು ಭಕ್ತಿಯುಕ್ತಳಾಗಿ ಪೂಜಿಸಿ, ಅಪೂಪಖಂಡಗಳನ್ನು (ಹಾಲುಬಾಯಿ) ನಿವೇದನ ಮಾಡಬೇಕು.

೪೪. ಆದಿನ ರಾತ್ರಿ ರಕ್ತಚಂದನವನ್ನು ಪ್ರಾಶನಮಾಡಿ ಮಾತ್ಸರ್ಯಾದಿ ದೋಷರಹಿತಳಾಗಿ ಶಯನಮಾಡಬೇಕು. ಮರುದಿನ ಬೆಳಗ್ಗೆ ದಂಪತಿ ಭೋಜನವನ್ನು ಮಾಡಿಸತಕ್ಕುದ್ದು. ಈರೀತಿ ಮಾಡುವುದರಿಂದ ಅಗ್ನಿಹೋತ್ರ ಮಾಡಿದಷ್ಟು ಪುಣ್ಯವು ಲಭಿಸುವುದು.

೪೫. ಹಾಗೆಯೇ ಆಶ್ವಯುಜ ಬಹುಳ ತೃತೀಯೆಯಲ್ಲೂ ಸ್ವಸ್ತಿ ಎಂಬ ನಾಮವನ್ನುಚ್ಚರಿಸಿ ದೇವಿಯನ್ನು ಅರ್ಚಿಸಬೇಕು. ಅನಂತರ ಬೆಲ್ಲಮಿಶ್ರವಾದ ಶಾಲ್ಯನ್ನವನ್ನು ನಿವೇದಿಸಬೇಕು.

**ಕುಸುಂಭಬೀಜಾನ್ಸಂಪ್ರಾಶ್ಯ ತ್ಯಕ್ತ್ವಾ ಕಾಮಂ ಸ್ವಪೇನ್ನಿಶಿ ।**
**ಸಂಭೋಜ್ಯ ಮಿಥುನಂ ಪ್ರಾತರ್ಗವಾಹ್ನಿಕಫಲಂ ಲಭೇತ್ ॥ ೪೬ ॥**

**ಕಾರ್ತಿಕಸ್ಯ ತೃತೀಯಾಯಾಂ ಸ್ವಾಹಾನಾಮ್ನೀಂ ಪ್ರಪೂಜಯೇತ್ ।**
**ಕ್ಷೀರಂ ಖಂಡಘೃತೋಪೇತಂ ನೈವೇದ್ಯಂ ದಾಪಯೇಚ್ಚ ತಾಂ ॥ ೪೭ ॥**

**ಸ್ವಪ್ಯಾದ್ರಾತ್ರೌ ಜಿತಕ್ರೋಧಾ ಪ್ರಾಶ್ಯ ಕುಂಕುಮಕೇಶರಾನ್ ।**
**ಪ್ರಭಾತೇ ಮಿಥುನಂ ಭೋಜ್ಯಮೇಕಭಕ್ತಫಲಂ ಲಭೇತ್ ॥ ೪೮ ॥**

**ತಥಾ ಕೃಷ್ಣತೃತೀಯಾಯಾಂ ಸ್ವಧಾನಾಮ್ನೀಂ ಪ್ರಪೂಜಯೇತ್ ।**
**ಮುದ್ಗೌದನಂ ನಿವೇದ್ಯಾಥ ಘೃತಂ ಪ್ರಾಶ್ಯ ಸ್ವಪೇನ್ನಿಶಿ ॥ ೪೯ ॥**

---

೪೬. ಆದಿನ ರಾತ್ರಿ ಕುಸುಂಭೆ ಬೀಜವನ್ನು ಪ್ರಾಶನೆಮಾಡಿ ಕಾಮವಿಕಾರ ವರ್ಜಿತಳಾಗಿ ಶಯನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ದಂಪತಿಗಳಿಗೆ ಭೋಜನವನ್ನು ಮಾಡಿಸಬೇಕು. ಇದರಿಂದ ಪರ್ಯಾಪ್ತವಾದ ಗೋಗ್ರಾಸವನ್ನು ದಾನಮಾಡಿದಷ್ಟು ಫಲವು ಲಭಿಸುವುದು.

೪೭. ಕಾರ್ತೀಕಶುದ್ಧ ತೃತೀಯೆಯಲ್ಲಿ " ಸ್ವಾಹಾ " ನಾಮದಿಂದ ದೇವಿಯನ್ನರ್ಚಿಸಿ ಹಾಲು, ಗಟ್ಟಿಯಾದತುಪ್ಪ, ಇವುಗಳನ್ನು ದೇವಿಗೆ ಸಮರ್ಪಣೆ ಮಾಡಬೇಕು.

೪೮. ರಾತ್ರಿಯಲ್ಲಿ ಕುಂಕುಮಕೇಸರಿಯನ್ನು ಪ್ರಾಶನೆಮಾಡಿ ಜಿತೇಂದ್ರಿಯಳಾಗಿ ಶಯನಮಾಡಬೇಕು. ಮರುದಿನ ಪ್ರಾತಃಕಾಲದಲ್ಲಿ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ಏಕಭುಕ್ತ ವ್ರತಾನುಷ್ಠಾನ ಮಾಡಿದಷ್ಟು ಪುಣ್ಯವು ಲಭಿಸುವುದು.

೪೯. ಹಾಗೆಯೇ ಕಾರ್ತೀಕ ಬಹುಳ ತೃತೀಯೆಯಲ್ಲೂ " ಸ್ವಧಾ " ಎಂಬ ನಾಮದಿಂದ ದೇವಿಯನ್ನು ಪೂಜಿಸಿ ಮುದ್ಗೌದನ (ಹುಗ್ಗಿ) ಅನ್ನ ಸಮರ್ಪಿಸಿ ಅನಂತರ ರಾತ್ರಿಯಲ್ಲಿ ಘೃತಪ್ರಾಶನೆಮಾಡಿ ಶಯನಮಾಡಬೇಕು.

ಪ್ರಾತಃ ಸಂಭೋಜ್ಯ ಮಿಥುನಂ ನಕ್ತವ್ರತಫಲಂ ಲಭೇತ್ ।
ಏವಂ ಸಂವತ್ಸರಂ ಕೃತ್ವಾ ಮುಕ್ತಪಾಪಾ ಶುಚಿರ್ಭವೇತ್ ॥ ೫೦ ॥

ಶುಕ್ಲಪಕ್ಷೇ ತೃತೀಯಾಯಾಂ ಸೋಪವಾಸಾ ನಿರಾಮಯಾ ।
ವಿಜ್ಞಾಯ ಚ ವ್ರತಂ ಭಕ್ತ್ಯಾ ಉಮಾಂ ಶಾಸ್ತ್ರಾರ್ಥಬೋಧಕೈಃ ॥ ೫೧ ॥

ಮಂಡಲಂ ಚ ತತೋ ಲಿಖ್ಯ ನವನಾಭಂ ವರಪ್ರದಂ ।
ಸೌವರ್ಣಂ ಕಾರಯೇದ್ದೇವಮುಮಯಾ ಸಹಿತಂ ಪ್ರಭುಂ ॥ ೫೨ ॥

ತಾಭ್ಯಾಂ ನೇತ್ರೇಷು ದಾತವ್ಯಂ ಮೌಕ್ತಿಕಂ ನೀಲಮೇವ ಚ ।
ಪ್ರವಾಲಮೋಷ್ಠಯೋರ್ದದ್ಯಾತ್ಕರ್ಣಯೋಃ ರತ್ನಕುಂಡಲೇ ॥ ೫೩ ॥

---

೫೦. ಮರುದಿನ ಪ್ರಾತಃಕಾಲದಲ್ಲಿ ನಿಯಮನಿರತರಾದ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದರಿಂದ ನಕ್ತವ್ರತ ಮಾಡಿದಷ್ಟು ಫಲವು ಲಭಿಸು ವುದು. ಒಂದುವರ್ಷ ಈರೀತಿ ವ್ರತವನ್ನು ಆಚರಿಸಿದವಳು ಸಮಸ್ತಪಾಪ ಗಳಿಂದಲೂ ಮುಕ್ತಳಾಗಿ ಶುಚಿಯಾಗುವಳು.

೫೧. ಹೀಗೆ ಒಂದು ವರ್ಷವಾದ ಮೇಲೆ ಪುನಃ ಮಾರ್ಗಶೀರ್ಷ ಶುಕ್ಲ ತೃತೀಯೆಯಲ್ಲಿ ನಿರಾಹಾರಳಾಗಿ ಏಕಾಗ್ರತೆಯಿಂದ ಶಾಸ್ತ್ರಾರ್ಥಪ್ರವಚನಸಮ ರ್ಥರಾದ ಬ್ರಾಹ್ಮಣರ ಮೂಲಕ ಶ್ರೀ ಉಮಾದೇವಿಯ ಸ್ವರೂಪವನ್ನು ಭಕ್ತಿ ಪೂರ್ವಕವಾಗಿ ಕೇಳಿ ತಿಳಿದುಕೊಳ್ಳಬೇಕು.

೫೨. ಅನಂತರ ಇಷ್ಟಾರ್ಥಪ್ರದವೂ ನವದಳಯುತವೂ ಆದ ಒಂದು ಮಂಡಲವನ್ನು ರಚಿಸಬೇಕು. ಬಂಗಾರದಿಂದ ಶ್ರೀ ಉಮಾಮಹೇಶ್ವರ ಪ್ರತಿಮೆ ಯನ್ನು ಮಾಡಿಸಬೇಕು.

೫೩. ಆ ಉಮಾಮಹೇಶ್ವರ ಪ್ರತಿಮೆಗಳ ಕಣ್ಣಿನ ಸ್ಥಾನದಲ್ಲಿ ಮುತ್ತು, ನೀಲಮಣಿ ಇವುಗಳನ್ನು ಜೋಡಿಸಬೇಕು. ತುಟಿಯ ಸ್ಥಾನದಲ್ಲಿ ಹವಳವನ್ನು ಇಡಬೇಕು. ಕಿವಿಗಳಿಗೆ ರತ್ನಕುಂಡಲವನ್ನು ಇಡಬೇಕು.

**ಉಪವೀತಂ ತು ದೇವಸ್ಯ ದೇವ್ಯಾ ಹಾರಂ ತಥೋರಸಿ ।**
**ರಕ್ತವಸ್ತ್ರಧರಾಂ ದೇವೀಂ ಸಿತವಸ್ತ್ರಂ ಮಹೇಶ್ವರಂ ॥ ೫೪ ॥**

**ಚತುಃಸಮೇನ ವಾಲಭ್ಯ ಪುಷ್ಪೈರ್ಧೂಪೈರಥಾರ್ಚಯೇತ್ ।**
**ಮಂಡಲೇ ಪೂಜಯಿತ್ವಾ ಚ ಹೋಮಂ ಕುರ್ಯಾತ್ತತೋ ಗುರೋಃ ॥**

**ತತೋಽಪರಾಜಿತಾಂ ನಾಮ ದೇವೀಂ ತತ್ರೈವ ಪೂಜಯೇತ್ ।**
**ಮೃತ್ಸ್ನಾಂ ಸಂಪ್ರಾಶಯಿತ್ವಾ ಚ ರಾತ್ರೌ ಕುರ್ಯಾತ್ಪ್ರಜಾಗರಂ ॥ ೫೬ ॥**

**ಗೀತವಾದ್ಯೋತ್ಸವೈರ್ಹೃದ್ಯೈರ್ವೀಣಾಮಂಗಲಪಾಠಕೈಃ ।**
**ರಾತ್ರಿಮೇವಂ ಜಪೇದ್ಭಕ್ತ್ಯಾ ಯಾವದುದ್ಗಚ್ಛತೇ ರವಿಃ ॥ ೫೭ ॥**

**ತೂಲೀ ಗಂಡಕಸಂಯುಕ್ತೇ ಪರ್ಯಂಕೇಽತ್ಯಂತ ಶೋಭಿತೇ ।**
**ಉದ್ಧೃತ್ಯ ಮಂಡಲಾದ್ದೇವಂ ಪರ್ಯಂಕೋಪರಿ ವಿನ್ಯಸೇತ್ ॥ ೫೮ ॥**

---

೫೪. ಶ್ರೀ ಪರಮೇಶ್ವರನಿಗೆ ಉಪವೀತವನ್ನು ಧರಿಸಬೇಕು. ಶ್ರೀ ಉಮಾ ದೇವಿಯ ವಕ್ಷಸ್ಥಳದಲ್ಲಿ ಹಾರವನ್ನು ಹಾಕಿರಬೇಕು. ದೇವಿಗೆ ರಕ್ತವಸ್ತ್ರವನ್ನೂ ಮಹಾದೇವನಿಗೆ ಬಿಳಿಯ ವಸ್ತ್ರವನ್ನೂ ಉಡಿಸಬೇಕು.

೫೫. ಅನಂತರ ಗಂಧಾದಿಗಳನ್ನು ಲೇಪನಮಾಡಿ ಪುಷ್ಪ ಧೂಪ ದೀಪಾದಿಗಳಿಂದ ಅರ್ಚಿಸಬೇಕು. ಪೂರ್ವೋಕ್ತವಾದ ಮಂಡಲದಲ್ಲಿ ದೇವರನ್ನು ಇಟ್ಟು ಪೂಜಿಸಿ ಅನಂತರ ಆಚಾರ್ಯರಿಂದ ಹೋಮ ಮಾಡಿಸಬೇಕು.

೫೬. ಅನಂತರ "ಅಪರಾಜಿತಾ" ಎಂಬ ನಾಮಕಳಾದ ಶ್ರೀ ದೇವಿಯನ್ನು ಅದೇ ಮಂಡಲದಲ್ಲಿ ಪೂಜಿಸಬೇಕು. ಆ ದಿನ ರಾತ್ರಿ ಮೃತ್ತಿಕೆಯನ್ನು ಪ್ರಾಶನೆಮಾಡಿ ಜಾಗರಣೆಯನ್ನಾಚರಿಸಬೇಕು.

೫೭. ವಾದ್ಯ, ಉತ್ಸವ ಮೊದಲಾದುವುಗಳಿಂದಲೂ, ಮನೋಹರವಾದ ಸಂಗೀತ, ವೀಣಾವಾದನಗಳಿಂದಲೂ, ಮಂಗಲಪದ್ಯಪಠನಗಳಿಂದಲೂ ಭಕ್ತಿಪೂರ್ವಕವಾಗಿ ರಾತ್ರಿಯೆಲ್ಲಾ ದೇವೀಧ್ಯಾನಪರಳಾಗಿ ಜಾಗರಣೆ ಮಾಡಬೇಕು.

೫೮. ಅನಂತರ ಸೂರ್ಯೋದಯವಾದ ಮೇಲೆ ಮಂಡಲದಲ್ಲಿ ಸ್ಥಾಪಿಸಿರುವ ಶ್ರೀ ಉಮಾಮಹೇಶ್ವರನ ಪ್ರತಿಮೆಯನ್ನು ಖಡ್ಗಮೃಗಾದಿ ಬೊಂಬೆಗಳಿಂದ ಅಲಂಕೃತವಾದ ಮಂಚದ ಮೇಲೆ ಹತ್ತಿಯ ಹಾಸಿಗೆಯಲ್ಲಿ ಎತ್ತಿ ಇರಿಸಬೇಕು.

ವಿತಾನಧ್ವಜಮಾಲಾಲಿಕಿಂಕಿಣೀದರ್ಪಣಾನ್ವಿತಂ ।
ಪುಷ್ಪಮಂಟಪಿಕಾಚ್ಛನ್ನಂ ಧೂಪಗುಗ್ಗುಲುವಾಸಿತಂ ॥ ೫೯ ॥

ತಸ್ಯಾಗ್ರೇ ಭೋಜಯೇದ್ಭಕ್ತ್ಯಾ ಸ್ವಶಕ್ತ್ಯಾ ಮಿಥುನಾನಿ ಚ ।
ಪ್ರೀಣಯೇದ್ಭಕ್ಷ್ಯಭೋಜ್ಯೈಶ್ಚ ಪಕ್ವಾನ್ನೈರ್ಮಧುರೈಃ ಶುಭೈಃ ॥ ೬೦ ॥

ತತೋ ದತ್ವಾಽಕ್ಷತಾನ್ಹಸ್ತೇ ತಾಂಬೂಲಂ ವಿನಿವೇದಯೇತ್ ।
ಪ್ರೀಯತಾಂ ಮೇ ಉಮಾಕಾಂತಃ ಪಾರ್ವತ್ಯಾ ಸಹಿತಃ ಶಿವಃ ॥ ೬೧ ॥

ಉಚ್ಛಿಷ್ಟಂ ಶೋಧಯಿತ್ವಾ ತು ಪುನಃ ಪ್ರೋಕ್ಷ್ಯ ಸಮಂತತಃ ।
ರಕ್ತವರ್ಣಾಂ ಸುಶೀಲಾಂ ಚ ಸುರೂಪಾಂ ಸುಪಯಸ್ವಿನೀಂ ॥ ೬೨ ॥

---

೫೯. ಆ ಮಂಚದ ಮೇಲ್ಭಾಗದಲ್ಲಿ ಮೇಲ್ಕಟ್ಟು ಧ್ವಜ ಇತ್ಯಾದಿಗಳಿಂದ ಅಲಂಕರಿಸಬೇಕು. ಮತ್ತು ಮಂಚಕ್ಕೆ ಕಿರುಗೆಜ್ಜೆಗಳನ್ನು ಕಟ್ಟಿ ಕನ್ನಡಿಯನ್ನಿಟ್ಟು. ಪುಷ್ಪಮಾಲೆಗಳಿಂದ ಶೃಂಗರಿಸಬೇಕು. ಧೂಪ, ಗುಗ್ಗುಲು ಇತ್ಯಾದಿಗಳನ್ನು ಹತ್ತಿಸಿ ಸುವಾಸನೆಯಾಗಿರುವಂತೆ ಮಾಡಬೇಕು.

೬೦. ಈ ಮಂಚಸ್ಥರಾದ ಶ್ರೀ ಉಮಾಮಹೇಶ್ವರರ ಪುರೋಭಾಗದಲ್ಲಿ ತಮ್ಮ ಶಕ್ತಿಯಿದ್ದಷ್ಟರಮಟ್ಟಿಗೆ ವೆಚ್ಚಮಾಡಿ ಪವಿತ್ರವಾದ ಮಧುರಾನ್ನ, ಭಕ್ಷ್ಯ, ಭೋಜ್ಯ ಇವುಗಳಿಂದ ಅನೇಕ ದಂಪತಿಗಳಿಗೆ ಭಕ್ತಿಯಿಂದ ಭೋಜನವನ್ನು ಮಾಡಿಸಿ ತೃಪ್ತಿಪಡಿಸಬೇಕು.

೬೧. ಅನಂತರ ಆ ದಂಪತಿಗಳಿಗೆ ತಾಂಬೂಲವನ್ನು ಕೊಟ್ಟು, "ಪಾರ್ವತೀ ಸಹಿತನಾದ ಶ್ರೀ ಪರಮೇಶ್ವರನು ಸುಪ್ರೀತನಾಗಿ ನನ್ನನ್ನು ಅನುಗ್ರಹಿಸಲಿ" ಎಂದು ಪ್ರಾರ್ಥಿಸಿ ಆ ದಂಪತಿಗಳ ಕೈಗೆ ಮಂತ್ರಾಕ್ಷತೆಯನ್ನು ಕೊಟ್ಟು ಅವರ ಆಶೀರ್ವಾದವನ್ನು ಪಡೆಯಬೇಕು.

೬೨-೬೪. ಆ ಮೇಲೆ ದಂಪತಿಗಳು ಭೋಜನಮಾಡಿದ ಎಡೆಯನ್ನು ಎತ್ತಿಹಾಕಿ ಪುನಃ ಆ ಸ್ಥಳದ ಸುತ್ತಲೂ ಪ್ರೋಕ್ಷಣೆಮಾಡಿ ಸ್ಥಳ ಶುದ್ಧಿಮಾಡಬೇಕು. ಅನಂತರ ರಕ್ತವರ್ಣವುಳ್ಳದ್ದೂ, ಒಳ್ಳೆಯ ಸ್ವಭಾವವುಳ್ಳದ್ದೂ, ಸಾಧುವೂ ಸುರೂಪವೂ, ಹೆಚ್ಚು ಹಾಲನ್ನು ಕೊಡುವುದೂ ಆದ ಹಸುವನ್ನು ತಂದು, ಅದರ ಕೊಂಬುಗಳಿಗೆ ಸುವರ್ಣದ ಅಣಸು ಗೊರಸುಗಳಿಗೆ ರಜತ ಖುರ ಇವುಗಳನ್ನು

ಶೃಂಗಾಭ್ಯಾಂ ದತ್ತಕನಕಾಂ ರಾಜತಖುರಸಂಯುತಾಂ ।
ಕಾಂಸ್ಯದೋಹನಕೋಪೇತಾಂ ರಕ್ತವಸ್ತ್ರಾವಗುಂಠಿತಾಂ ॥ ೬೩ ॥

ಘಂಟಾಭರಣಶೋಭಾಢ್ಯಾಂ ದೇವದೇವ್ಯಗ್ರಸಂಸ್ಥಿತಾಂ ।
ಪಾದುಕೋಪಾನಹಚ್ಛತ್ರಭೋಜ್ಯಭಾಜನಸಂಯುತಾಂ ।
ತ್ರಿಧಾ ಪ್ರದಕ್ಷಿಣೀಕೃತ್ಯ ಗುರೋಃ ಸರ್ವಂ ನಿವೇದಯೇತ್ ॥ ೬೪ ॥

ಉಮಾಮಹೇಶ್ವರಂ ದೇವಮವಿಯೋಗಂ ಸುರಾರ್ಚಿತಂ ।
ಅವ್ಯವಚ್ಛೇದಭೂತಂ ಚ ಸುಪ್ರೀತಂ ತದಿಹಾಸ್ತು ಮೇ ॥ ೬೫ ॥

ಪ್ರಣಮ್ಯ ಶಿರಸಾ ಭೂಮೌ ಕ್ಷಮಸ್ವೇತಿ ಗುರುಂ ವದೇತ್ ।
ಏವಂ ಸಮಾಪ್ಯತೇ ದೇವ್ಯಾ ಅನಂತರ್ಯವ್ರತೋದ್ಯಮಂ ।
ಯಃ ಪ್ರಕುರ್ಯಾತ್ಪುಮಾನ್ಸ್ತ್ರೀ ವಾ ತಸ್ಯ ಪುಣ್ಯಫಲಂ ಶೃಣು ॥ ೬೬ ॥

---

ತೊಡಿಸಿ, ರಕ್ತವಸ್ತ್ರವನ್ನು ಪಸುವಿಗೆ ಹೊದ್ದಿಸಿ, ಕತ್ತಿಗೆ ಘಂಟೆಯನ್ನು ಕಟ್ಟಿ, ಇತರ ಆಭರಣಗಳಿಂದ ಅಲಂಕರಿಸಿ, ಹಾಲುಕರೆಯುವ ಕಂಚಿನ ಪಾತ್ರೆಯ ಸಮೇತ ದೇವರ ಇದಿರಿನಲ್ಲಿ ಆ ಹಸುವನ್ನು ನಿಲ್ಲಿಸಿ, ಪಾದುಕೆ, ಛತ್ರಿ, ಊಟದ ಬಟ್ಟಲು ಈ ಎಲ್ಲ ಪದಾರ್ಥಗಳ ಸಹಿತವಾಗಿ ಮೂರುಸಲ ಅದಕ್ಕೆ ಪ್ರದಕ್ಷಿಣೆ ಮಾಡಿ ಅವೆಲ್ಲವನ್ನೂ ಆಚಾರ್ಯನಿಗೆ ಸಮರ್ಪಿಸಬೇಕು.

೬೫. ಉಮಾಮಹೇಶ್ವರಂ ದೇವಮವಿಯೋಗಂ ಸುರಾರ್ಚಿತಂ ।
ಅವ್ಯವಚ್ಛೇದ ಭೂತಂಚ ಸುಪ್ರೀತಂತದಿಹಾಸ್ತು ಮೇ ॥

ಎಂದು ಪ್ರಾರ್ಥಿಸಬೇಕು. (ಉಮಾದೇವಿಯಿಂದ ಯಾವಾಗಲೂ ವಿಯುಕ್ತನಾಗದೇ ಅರ್ಧನಾರೀಶ್ವರ ಎಂದು ಪ್ರಸಿದ್ಧನಾದ ಶ್ರೀ ಉಮಾಮಹೇಶ್ವರದೇವನು ನನ್ನ ವಿಷಯದಲ್ಲಿ ಸುಪ್ರೀತನಾಗಲಿ ಎಂಬುದೇ ಮಂತ್ರಾರ್ಥ).

೬೬. ಈ ರೀತಿ ಪ್ರಾರ್ಥಿಸಿ ಗುರುವಿಗೆ ಸಾಷ್ಟಾಂಗ ಪ್ರಣಾಮಮಾಡಿ ಅಪರಾಧ ಕ್ಷಮೆಯನ್ನು ಬೇಡಬೇಕು. ಅಯ್ಯಾ ಯುಧಿಷ್ಠಿರ ! ಈ ಅನಂತರ್ಯ ವ್ರತವನ್ನು ಪ್ರಾರಂಭಮಾಡಿ ಈರೀತಿ ಮಾಡಿದರೆ ಸಮಾಪ್ತಿಯಾಗುವುದು. ಈ ವ್ರತವನ್ನು ಪುರುಷನೇ ಆಗಲಿ ಅಥವಾ ಸ್ತ್ರೀಯೇ ಆಗಲಿ ಯಥಾವಿಧಿಯಾಗಿ ಮಾಡುವುದರಿಂದ ಲಭಿಸುವ ಪುಣ್ಯಫಲವನ್ನು ಹೇಳುತ್ತೇನೆ ಶ್ರವಣಮಾಡು.

ಗನ್ಧರ್ವಯಕ್ಷಲೋಕಾಂಶ್ಚ ವಿದ್ಯಾಧರಮಹೋರಗಾನ್ ।
ಋಷಿಸಿದ್ಧಾಮರಂ ಬ್ರಾಹ್ಮಂ ವಿಷ್ಣುಲೋಕಂ ಸನಾತನಂ ॥ ೬೭ ॥

ಭುಕ್ತ್ವಾ ಭೋಗಾನಶೇಷಾಂಶ್ಚ ಏಕವಿಂಶತ್ಕುಲಾನ್ವಿತಃ ।
ರತ್ನಯಾನೇ ಸಮಾರೂಢೋ ಗುಹ್ಯಾಪ್ಸರಸಂವೃತಃ ॥ ೬೮ ॥

ದೇವವಿದ್ಯಾಧರೈರ್ಯಕ್ಷೈರ್ವೃತೋ ಯಾತಿ ಶಿವಾಲಯಂ ।
ತತ್ರ ಭುಕ್ತ್ವಾ ಮಹಾಭೋಗಾನ್ಸಭುಂಕ್ತೇ ಶಿವವದ್ಬಹೂನ್ ॥ ೬೯ ॥

ಭುಕ್ತ್ವಾ ಭೋಗಾನ್ಯದಾ ಭೂತಃ ಕದಾಚಿತ್ತಪಸಃ ಕ್ಷಯಾತ್ ।
ಪೃಥಿವ್ಯಾಂ ತು ಸಮಾಗಮ್ಯ ಭವೇತ್ಸಕಲಭೂಮಿಪಃ ॥ ೭೦ ॥

---

೬೭–೬೯. ಪುರುಷನು ಈ ವ್ರತವನ್ನಾಚರಿಸಿದರೆ ಸಕಲ ಭೋಗವನ್ನನು ಭವಿಸುವುದಲ್ಲದೆ ಅವನ ವಂಶಸ್ಥರೂ ಇಪ್ಪತ್ತೊಂದು ತಲೆಮಾರಿನ ಪರ್ಯಂತ ಸಕಲ ಭೋಗಕ್ಕೂ ಪಾತ್ರರಾಗುವರು. ಅಲ್ಲದೆ ಮುತ್ತು ರತ್ನಗಳಿಂದ ಅಲಂಕೃತ ವಾದ ಯಾನದಲ್ಲಿ ಕುಳಿತು ಕಿನ್ನರರು, ಅಪ್ಸರರು ಇವರ ಸಮೇತನೂ, ಮುತ್ತು ದೇವತೆಗಳು ವಿದ್ಯಾಧರರು ಯಕ್ಷರು ದೇವರ್ಷಿಗಳು ಸಿದ್ಧರು ದೇವತೆಗಳು ಇವರು ಗಳಿಂದ ಕೂಡಿದವನೂ, ಗಂಧರ್ವಲೋಕ ಯಕ್ಷಲೋಕ ವಿದ್ಯಾಧರಲೋಕ ಪಾತಾಳಲೋಕ ಮತ್ತು ನಾಗಲೋಕ ದೇವಲೋಕ ಬ್ರಹ್ಮಲೋಕ ಮತ್ತು ಸನಾತನ ವಾದ ವಿಷ್ಣುಲೋಕ ಈ ಲೋಕಗಳಿಗೆಲ್ಲಾ ಹೋಗಿ ಅಲ್ಲಿನ ಭೋಗಗಳನ್ನನು ಭವಿಸಿ ಕ್ರಮೇಣ ಶಿವಲೋಕಕ್ಕೆ ಹೋಗುವನು. ಮುತ್ತು ಆ ಶಿವಲೋಕದಲ್ಲೂ ಸಹ ಪರಶಿವನಂತೆಯೇ ಮಹಾಭೋಗಗಳನ್ನನುಭವಿಸುವನು.

೭೦. ಈರೀತಿ ಅಲ್ಲಿ ಸಕಲ ಭೋಗಗಳನ್ನನುಭವಿಸಿದ ಮೇಲೆ ಕಾಲಕ್ರಮ ದಲ್ಲಿ ಆ ಪುಣ್ಯ ಕ್ಷೀಣವಾದಾಗ ಭೂಲೋಕದಲ್ಲಿ ಜನಿಸಿ ಸಮಸ್ತರಾಜರಿಗೂ ಅಧಿರಾಜ (ಚಕ್ರವರ್ತಿ) ಆಗುವನು.

ಸ್ತ್ರೀ ವಾ ಸಮಾಚರೇದ್ಯಾ ತು ಮಹಾದೇವೀ ತು ಜಾಯತೇ ।
ಅನಂತರ್ಯಾವ್ಯವಚ್ಛಿನ್ನಾನ್ಭೋಗಾನ್ದೇವೀ ಉಮಾ ಯಥಾ ।
ತ್ರೈಲೋಕ್ಯಪತಿರುದ್ರೇಣ ಸಾ ಭುಂಕ್ತೇ ಸಹಿತಾ ತಥಾ ॥ ೭೧ ॥

ಮನುರ್ದೇವ್ಯಾ ಯಥಾಮಹ್ಯಾ ಶಚ್ಯಾ ಶಕ್ರೋ ಯಥಾಸುಖಂ ।
ನೈರಂತರ್ಯಂ ಯಥಾ ಸೌಖ್ಯಂ ಸಾ ಭುಂಕ್ತೇ ಪತಿನಾ ಸಹ ॥ ೭೨ ॥

ಮುನೇರರುಂಧತೀ ಯದ್ವದ್ವಿಷ್ಣೋರ್ಲಕ್ಷ್ಮೀರ್ಹೃದಿ ಸ್ಥಿತಾ ।
ತಥಾ ತಯೋರ್ಮಹತ್ಸೌಖ್ಯಂ ನೈರಂತರ್ಯಂ ಹಿ ಜಾಯತೇ ॥ ೭೩ ॥

ಸಾವಿತ್ರೀ ಬ್ರಹ್ಮಣೋ ಯದ್ವದ್ಗಂಗಾ ತೋಯನಿಧೇರ್ಯಥಾ ।
ಅವ್ಯವಚ್ಛಿನ್ನಯೋಃ ಪ್ರೀತಿಸ್ತಥಾ ಜನ್ಮನಿಜನ್ಮನಿ ॥ ೭೪ ॥

---

೭೧. ಸ್ತ್ರೀಯು ಈ ವ್ರತವನ್ನಾಚರಿಸಿದರೆ ಮಹಾರಾಣಿಯಾಗಿ ಜನಿಸುವಳು. ಶ್ರೀ ಉಮಾದೇವಿಯು ತನ್ನ ಪತಿಯನ್ನು ಎಂದೂ ಅಗಲದೆ ತ್ರಿಲೋಕಾಧಿಪತಿಯಾದ ಪರಶಿವನ ಪತ್ನಿಯಾಗಿದ್ದು ಆ ತ್ರಿಲೋಕೇಶ್ವರನ ಜತೆಯಲ್ಲಿ ಅಖಿಲ ಭೋಗಗಳನ್ನನುಭವಿಸಿದಂತೆಯೇ ಇವಳೂ ತನ್ನ ಪತಿಯಾದ ಚಕ್ರವರ್ತಿಯೊಡನೆ ಸಕಲ ಭೋಗಗಳನ್ನೂ ಅನುಭವಿಸುವಳು.

೭೨. ಭೂದೇವಿಯು ಮನುಚಕ್ರವರ್ತಿಯಿಂದ ಹೇಗೆ ನಿರಂತರ ಸೌಖ್ಯವನ್ನನುಭವಿಸಿದಳೋ, ಶಚೀದೇವಿಯು ಸ್ವರ್ಗಾಧೀಶನಾದ ಇಂದ್ರನೊಡನೆ ಹೇಗೆ ಸದಾ ಸಕಲಸುಖವನ್ನನುಭವಿಸಿದಳೋ ಹಾಗೆಯೇ ಈ ಸ್ತ್ರೀಯೂ ತನ್ನ ಪತಿಯಾದ ಮಂಡಲೇಶ್ವರನೊಡನೆ ನಿರಂತರವಾದ ಸಕಲ ಸೌಖ್ಯಗಳನ್ನೂ ಅನುಭವಿಸುವಳು.

೭೩. ಅರುಂಧತೀ ವಸಿಷ್ಠರಿಗೆ ಅನ್ಯೋನ್ಯತೆ ಇರುವ ಹಾಗೂ, ಸ್ವವಕ್ಷವಾಸಿನಿಯಾದ ಶ್ರೀ ಲಕ್ಷ್ಮೀದೇವಿಯೊಡನೆ ಶ್ರೀ ಮಹಾವಿಷ್ಣುವಿಗೆ ಪ್ರೀತಿ ಇರುವ ಹಾಗೂ, ಆ ದಂಪತಿಗಳಿಗೆ ಅನ್ಯೋನ್ಯವಾಗಿ ನಿರಂತರವಾದ ಸುಖವು ಲಭಿಸುವುದು.

೭೪. ಮತ್ತು ಸರಸ್ವತೀದೇವಿ ಬ್ರಹ್ಮ ಇವರಿಗೆ ಪ್ರೇಮವಿರುವಂತೆಯೂ, ಗಂಗಾಸಾಗರಗಳಿಗೆ ಅನ್ಯೋನ್ಯತೆ ಇರುವಂತೆಯೂ, ಈ ದಂಪತಿಗಳಿಗೂ ಜನ್ಮಜನ್ಮಾಂತರದಲ್ಲೂ ಅವಿಚ್ಛಿನ್ನವಾದ ಪ್ರೀತಿಯುಂಟಾಗುತ್ತದೆ.

ಅಥ ಜನ್ಮನ್ಯಹೋನ್ಯಸ್ಮಿನ್ವ್ರತಮೇತತ್ಕೃತಂ ಭವೇತ್ ।
ತೇನೈವ ಪತಿನಾ ಸಾರ್ಧಂ ನ ವಿಯೋಗಮುಪೈತಿ ಸಾ ॥ ೭೫ ॥

ಯೋಜನಾಯುತಸಾಹಸ್ರೇ ಸುರೂಪಾ ಮಂಡಲೇ ಭವೇತ್ ।
ಅರ್ಥಾಢ್ಯಾ ಸುಭಗಾ ಸಾಧ್ವೀ ಪುತ್ರಪೌತ್ರೈರಲಂಕೃತಾ ॥ ೭೬ ॥

ಏತತ್ತೇ ನಿಖಿಲಂ ಪ್ರೋಕ್ತಮಾನಂತರ್ಯವ್ರತಂ ಮಯಾ ।
ಭಕ್ತಾಯ ಸುವಿನೀತಾಯ ಕಥಿತವ್ಯಂ ನ ಚಾನ್ಯಥಾ ॥ ೭೭ ॥

ಏಷಾ ವಿಶೇಷವಿಹಿತಾಭಿಹಿತಾ ತೃತೀಯಾ ।
ಯಾನಂತರೀತ್ಯವಿಧವಾಭಿರುದೀರಿತೋಚ್ಚೈಃ ।

---

೭೫. ಮತ್ತು ಆ ನಾರಿಯು ಮುಂದಿನ ಇನ್ನೊಂದು ಜನ್ಮದಲ್ಲಿ ಈ ವ್ರತವನ್ನು ಪುನಃ ಆಚರಿಸಿದರೆ ಅವಳು ಆ ಹಿಂದಿನ ಪತಿಯಿಂದ ಯಾವಾಗಲೂ ವಿಯೋಗವನ್ನು ಹೊಂದುವುದಿಲ್ಲ.

೭೬. ಮತ್ತು ಈರೀತಿ ಪುನಃ ವ್ರತಾಚರಣ ಮಾಡಿದರೆ ಅವಳು ಹತ್ತು ಸಹಸ್ರಯೋಜನ ವಿಸ್ತಾರವುಳ್ಳ ಈ ಭೂಮಂಡಲದಲ್ಲಿ ಸರ್ವಾಂಗ ಸುಂದರಿಯೂ ಧನಿಕಳೂ, ಸೌಭಾಗ್ಯವತಿಯೂ, ಪತಿವ್ರತಾಶಿರೋಮಣಿಯೂ, ಪುತ್ರಪೌತ್ರಾದಿಗಳಿಂದ ಕೂಡಿದವಳೂ ಆಗುತ್ತಾಳೆ.

೭೭. ಅಯ್ಯಾ ಯುಧಿಷ್ಠಿರನೇ ! ಭಕ್ತನೂ ವಿನೀತನೂ ಆದ ನಿನಗೆ ಈ ಅನಂತರ್ಯ ವ್ರತವನ್ನು ಸಾಂಗೋಪಾಂಗವಾಗಿ ಹೇಳಿದ್ದೇನೆ. ಭಕ್ತಿವಿನಯಾದಿ ಗುಣರಹಿತನಿಗೆ ಈ ವ್ರತೋಪದೇಶಮಾಡಬಾರದು.

೭೮. ಸುಮಂಗಲಿಯರಾದ ಸ್ತ್ರೀಯರು ಅನಂತರ್ಯವ್ರತವೆಂದು ಉಚ್ಚೈರ್ಘೋಷಣೆ ಮಾಡುವುದೂ (ಅಂದರೆ ಅವರ ಇಷ್ಟಾರ್ಥದಾಯಕವಾಗಿ ಅವರಿಂದ ಹೊಗಳಲ್ಪಡುವದೂ) ಈ ಶಾಸ್ತ್ರದಲ್ಲಿ ವಿಶೇಷವಾಗಿ ವಿಧಿಸಲ್ಪಡುವದೂ ಆದ ಈ ಅನಂತರ್ಯ ವ್ರತವನ್ನು ನಿನಗೆ ಹೇಳಿದ್ದಾಯಿತು. ಹಿಂದೆ ಹೇಳಿದಂತೆ ನಿರಾಹಾರವಾಗಿದ್ದು ಪ್ರತಿಪಕ್ಷದ ತೃತೀಯಾ ತಿಥಿಯಲ್ಲೂ ಈ ವ್ರತವನ್ನಾಚರಿಸುವ ಸುಮಂಗ

ಏತಾಮುಪೋಷ್ಯ ವಿಧಿವತ್ಪ್ರತಿಪಕ್ಷಯೋಗಾ ।
ನ್ನೈವಾಂತರಂ ಸುತಸುಹೃತ್ಸ್ವಜನ್ನೈರುಪೈತಿ ॥ ೭೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೆ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಅನಂತರ ತೃತೀಯಾವ್ರತ ವರ್ಣನಂ
ನಾಮ ಏಕೋನತ್ರಿಂಶತ್ತಮೋಽಧ್ಯಾಯಃ.



ಲಿಯು ಪುತ್ರ, ಮಿತ್ರ, ಪೌತ್ರ ಮತ್ತು ಸ್ವಜನ ಇವರ ವಿಯೋಗವನ್ನು ಎಂದೂ ಅನುಭವಿಸುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅನಂತರ
ತೃತೀಯಾ ವ್ರತವರ್ಣನೆಯೆಂಬ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಿಂಶತ್ತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಬಹುನಾತ್ರ ಕಿಮುಕ್ತೇನ ಕಿಂ ಬಹ್ವಕ್ಷರಮಾಲಯಾ ।
ವೈಶಾಖಸ್ಯ ಸಿತಾಮೇಕಾಂ ತೃತೀಯಾಂ ಶೃಣು ಪಾಂಡವ ॥ ೧ ॥

ಸ್ನಾನಂ ದಾನಂ ಜಪೋಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ಯದಸ್ಯಾಂ ಕ್ರಿಯತೇ ಕಿಂಚಿತ್ಸರ್ವಂ ಸ್ಯಾತ್ತದಿಹಾಕ್ಷಯಂ ॥ ೨ ॥

ಆದೌ ಕೃತಯುಗಸ್ಯೇಯಂ ಯುಗಾದಿಸ್ತೇನ ಕಥ್ಯತೇ ।
ಸರ್ವಪಾಪಪ್ರಶಮನೀ ಸರ್ವಸೌಖ್ಯಪ್ರದಾಯಿನೀ ॥ ೩ ॥

---

## ಮೂವತ್ತನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ—ಎಲೈ ಪಾಂಡುಪುತ್ರನೇ! ಬಹು ಅಕ್ಷರಾಡಂಬರ ಯುಕ್ತವಾದ ಅನೇಕ ಮಾತುಗಳನ್ನಾಡಿ ಪ್ರಯೋಜನವೇನು? ವೈಶಾಖ ಮಾಸದ ಶುಕ್ಲಪಕ್ಷ ತೃತೀಯೆಯ ಮಾಹಾತ್ಮ್ಯವನ್ನು ಹೇಳುತ್ತೇನೆ ಕೇಳು.

೨. ಈ ವೈಶಾಖ ಶುದ್ಧ ತೃತೀಯೆಯಲ್ಲಿ ಆಚರಿಸಿದ ಸ್ನಾನವೂ, ಕೊಟ್ಟ ದಾನವೂ, ಮಾಡಿದ ಜಪ, ಪಿತೃತರ್ಪಣ ಇತ್ಯಾದಿಯಾದ ಇತರ ಯಾವ ವಿಹಿತ ಕರ್ಮಗಳೂ ಯತ್ಕಿಂಚಿತ್ ಆದರೂ ಅವೆಲ್ಲವೂ ಈ ತಿಥಿ ಪ್ರಭಾವದಿಂದಲೇ ಅಕ್ಷಯವಾಗುವುದು.

೩. ಈ ತಿಥಿಯು ಕೃತಯುಗದ ಪ್ರಾರಂಭದ ತಿಥಿಯು. ಅದರಿಂದ ಈ ಮಾಸದ ಈ ತಿಥಿಯನ್ನು ಕೃತಯುಗಾದಿಯೆಂದು ಪ್ರಾಜ್ಞರು ಹೇಳುತ್ತಾರೆ. ಈ ದಿನವು ಸರ್ವಪಾಪ ನಾಶಕವೂ, ಸರ್ವಸೌಖ್ಯಪ್ರದಾಯಕವೂ ಆಗಿದೆ.

ಶಾಕಲೇ ನಗರೇ ಕಶ್ಚಿದ್ಧರ್ಮನಾಮಾಭವದ್ವಣಿಕ್ ।
ಪ್ರಿಯಂವದಃ ಸತ್ಯರತೋ ದೇವಬ್ರಾಹ್ಮಣಪೂಜಕಃ ॥ ೪ ॥

ತೇನ ಶ್ರುತಂ ವಾಚ್ಯಮಾನಂ ತೃತೀಯಾ ರೋಹಿಣೀ ಪುರಾ ।
ಯದಾ ಸ್ಯಾದ್ಬುಧಸಂಯುಕ್ತಾ ತದಾ ಸಾ ಚ ಮಹಾಫಲಾ ॥ ೫ ॥

ತಸ್ಯಾಂ ಯದ್ದೀಯತೇ ಕಿಂಚಿತ್ತತ್ಸರ್ವಂ ಚಾಕ್ಷಯಂ ಭವೇತ್ ।
ಇತಿ ಕೃತ್ವಾ ಸ ಗಂಗಾಯಾಂ ಸಂತರ್ಪ್ಯ ಪಿತೃದೇವತಾಃ ॥ ೬ ॥

ಗೃಹಮಾಗತ್ಯ ಕರಕಾನ್ಸಾನ್ನಾನುದಕ ಸಂಯುತಾನ್ ।
ಅಂಬುಪೂರ್ಣಾನ್ಗೃಹೇ ಕುಂಭಾನ್ಕ್ರಮಾನ್ನಿಃಶೇಷತಸ್ತದಾ ॥ ೭ ॥

---

೪. ಪೂರ್ವದಲ್ಲಿ ಶಾಕಲವೆಂಬ ನಗರಿಯಲ್ಲಿ ಧರ್ಮ ಎಂಬ ಹೆಸರಿನ ಒಬ್ಬ ವೈಶ್ಯನು (ವ್ಯಾಪಾರಿಯು) ಇದ್ದನು. ಅವನು ಪ್ರಿಯವಾದಿಯೂ, ಸತ್ಯ ವ್ರತನೂ ದೇವಬ್ರಾಹ್ಮಣ ಪೂಜಾತತ್ಪರನೂ ಆಗಿದ್ದನು.

೫. ಅವನು ಕದಾಚಿತ್ ವೈಶಾಖ ಶುದ್ಧ ತೃತೀಯೆಯು ರೋಹಿಣೀ ನಕ್ಷತ್ರಯುತವಾಗಿಯೂ ಬುಧಯೋಗವುಳ್ಳದ್ದಾಗಿಯೂ ಸಂಭವಿಸಿದರೆ ಆಗ ಆ ದಿನವು ಮಹಾಫಲಪ್ರದವು ಅಂದರೆ ಮಹಾಪುಣ್ಯದಿನ ಎಂದು ಯಾರೋ ಪೂರ್ವಕಾಲದಲ್ಲಿ ಹೇಳಿವದುದನ್ನು ಕೇಳಿದ್ದನು.

೬. ಮತ್ತು ಆ ದಿನದಲ್ಲಿ ಯಾವುದನ್ನೇ ಆಗಲಿ ಸ್ವಲ್ಪ ದಾನಮಾಡಿದರೂ ಅದರಿಂದ ಮಹಾಫಲವು ಲಭಿಸುವುದು. ಮತ್ತು ಅಕ್ಷಯಫಲವನ್ನು ಕೊಡುವುದು ಎಂಬ ವಿಚಾರವನ್ನು ಕೇಳಿ ಅವನು ಆದಿನ ಗಂಗಾಸ್ನಾನಮಾಡಿ ಆ ಗಂಗೆ ಯಲ್ಲಿಯೇ ಪಿತೃದೇವತೆಗಳಿಗೆ ತರ್ಪಣಮಾಡಿದನು.

೭. ಅನಂತರ ಮನೆಗೆ ಬಂದು ಉದಕಪೂರಿತವಾದ ಕಮಂಡಲು ಅನ್ನ, ಜಲಪೂರ್ಣವಾದ ಕುಂಭ, ಮೊದಲಾದ ಸಮಸ್ತವನ್ನೂ ಮನೆಯಲ್ಲಿ ಏನೂ ಉಳಿಯದಂತೆ ಕ್ರಮವಾಗಿ ದಾನಮಾಡಿದನು.

ಯವಗೋಧೂಮಚಣಕಸಕ್ತುದಧ್ಯೋದನಂ ತಥಾ ।
ಇಕ್ಷುಕ್ಷೀರವಿಕಾರಾಂಶ್ಚ ಸಹಿರಣ್ಯಾಂಶ್ಚ ಶಕ್ತಿತಃ ॥ ೮ ॥

ಶುಚಿಃ ಶುದ್ಧೇನ ಮನಸಾ ಬ್ರಾಹ್ಮಣೇಭ್ಯೋ ದದೌ ವಣಿಕ್ ।
ಭಾರ್ಯಯಾ ನಾರ್ಯಮಾಣೋಽಪಿ ಕುಟುಂಬಾಸಕ್ತಚಿಂತಯಾ ॥ ೯ ॥

ತಾವತ್ಸ ಚ ಸ್ಥಿತಃ ಸತ್ವೇ ಮತ್ವಾ ಸರ್ವಂ ವಿನಶ್ವರಂ ।
ಧರ್ಮಾರ್ಥಕಾಮಶಕ್ತಸ್ತು ಕಾಲೇನ ಬಹುನಾ ತತಃ ॥ ೧೦ ॥

ಜಗಾಮ ಪಂಚತ್ವಮಸೌ ವಾಸುದೇವಂ ಸ್ಮರನ್ಮುಹುಃ ।
ತತಃ ಸ ಕ್ಷತ್ರಿಯೋ ಜಾತಃ ಕುಶಾವತ್ಯಾಂ ನರೇಶ್ವರಃ ॥ ೧೧ ॥

ಬಭೂವ ಚಾಕ್ಷಯಾ ತಸ್ಯ ಸಮ್ಮದ್ಧಿರ್ಧರ್ಮನಿರ್ಜಿತಾ ।
ಇಯಾಜ ಸ ಮಹಾಯಜ್ಞೈಃ ಸಮಾಪ್ತವರದಕ್ಷಿಣೈಃ ॥ ೧೨ ॥

---

೮-೯. ಸ್ವಕುಟುಂಬ ಪೋಷಣೆಯಲ್ಲಿ ಆಸಕ್ತಳಾದ ಅವನ ಹೆಂಡತಿಯು ಬೇಡವೆಂದು ನಿಷೇಧಿಸಿದರೂ ಸ್ವಶಕ್ತ್ಯನುಸಾರವಾಗಿ ಭತ್ತ, ಗೋಧಿ, ಕಡಲೆ ಹಿಟ್ಟು, ಮೊಸರನ್ನ, ಕಬ್ಬು, ಬೆಲ್ಲ ಮತ್ತು ಸುವರ್ಣ ಇವುಗಳನ್ನೆಲ್ಲಾ, ಶುಚಿ ರ್ಭೂತರೂ ಶುದ್ಧಮನಸ್ಕರೂ ಆದ ಬ್ರಾಹ್ಮಣರಿಗೆ ದಾನಮಾಡಿದನು.

೧೦. ಆ ವೈಶ್ಯನು ಸತ್ವಗುಣವು ಅಷ್ಟು ಹೆಚ್ಚಾಗಿದ್ದವನಲ್ಲ. ಇರಬೇಕಾದಷ್ಟು ಜ್ಞಾನವುಳ್ಳವನಾಗಿದ್ದುದಲ್ಲದೆ ಗೃಹಪಿತ್ರಾದಿ ಸರ್ವಭೋಗ್ಯ ವಸ್ತುವೂ ನಶ್ವರವೆಂದು ತಿಳಿದಿದ್ದನು. ಅದೂ ಅಲ್ಲದೆ ಧರ್ಮಾರ್ಥಕಾಮಗಳೆಂಬ ಮೂರು ತ್ರಿವರ್ಗ ಗಳನ್ನೂ ಸಾಧಿಸಿದ್ದನು.

೧೧. ಹೀಗೆ ಬಹುದಿನ ಕಳೆದ ಮೇಲೆ ಉತ್ಕ್ರಮಣಕಾಲವೊದಗಲು ಅವನು ಶ್ರೀ ವಾಸುದೇವನನ್ನು ಸ್ಮರಿಸುತ್ತಾ ಮೃತಿಹೊಂದಿದನು. ಅನಂತರ ಮುಂದಿನ ಜನ್ಮದಲ್ಲಿ ಕ್ಷತ್ರಿಯನಾಗಿ ಹುಟ್ಟಿ "ಕುಶಾವತೀ" ಎಂಬ ನಗರಕ್ಕೆ ಭೂಪತಿಯಾದನು.

೧೨. ಆಗಲೂ ಅವನಿಗೆ ತನ್ನ ಧರ್ಮಾನುಷ್ಠಾನದ ನಿಮಿತ್ತವಾಗಿ ಅಕ್ಷಯ ವಾದ ಸಂಪತ್ತು ಇರುತ್ತಿತ್ತು. ಆ ಸಂಪತ್ತಿನಿಂದ ಅವನು ಬಹು ದಕ್ಷಿಣಾಕವಾದ ಮಹಾಯಾಗಗಳನ್ನು ಮಾಡಿ ಪೂರೈಸಿದನು.

**ದದೌ ಗೋಭೂಹಿರಣ್ಯಾದಿ ದಾನಾನ್ಯಸ್ಯಾಮಹರ್ನಿಶಂ ।**
**ಬುಭುಜೇ ಕಾಮತೋ ಭೋಗಾನ್ದೀನಾರ್ತಾಂಸ್ತರ್ಪಯಂಜನಾನ್ ॥ ೧೩ ॥**

**ತಥಾಪ್ಯಕ್ಷಯಮೇವಾಸ್ಯ ಕ್ಷಯಂ ಯಾತಿ ನ ತದ್ಧನಂ ।**
**ಶ್ರದ್ಧಾಪೂರ್ವಂ ತೃತೀಯಾಯಾಂ ಯದ್ದತ್ತಂ ವಿಭವಂ ವಿನಾ ॥ ೧೪ ॥**

**ಏತದ್ವ್ರತಂ ಮಯಾಖ್ಯಾತಂ ಶ್ರೂಯತಾಮತ್ರ ಯೋ ವಿಧಿಃ ।**
**ಉದಕುಂಭಾನ್ಸಕರಕಾನ್ಸಾನ್ನಸರ್ವರಸೈರ್ಯುತಾನ್ ॥ ೧೫ ॥**

**ಗ್ರೈಷ್ಮಿಕಂ ಸರ್ವಮೇವಾತ್ರ ಸಸ್ಯದಾನಂ ಪ್ರಶಸ್ಯತೇ ।**
**ಛತ್ರೋಪಾನತ್ಪ್ರದಾನಂ ಚ ಗೋಭೂಕಾಂಚನವಾಸಸಾಂ ॥ ೧೬ ॥**

---

೧೩. ಆ ಜನ್ಮದಲ್ಲೂ ಈ ತೃತೀಯಾ ತಿಥಿಯಲ್ಲಿ ಆ ರಾಜನು ಹಗಲೂ ರಾತ್ರಿ ಎಂಬ ಭೇಧವಿಲ್ಲದೆ ಗೋದಾನ, ಭೂಧಾನ, ಹಿರಣ್ಯದಾನ ಇತ್ಯಾದಿ ದಾನಗಳನ್ನು ಮಾಡಿದನು. ಮತ್ತು ಸ್ವೇಚ್ಛಾನುಸಾರವಾಗಿ ತಾನೂ ಸಹ ಭೋಗವನ್ನನುಭವಿಸಿ, ದರಿದ್ರರು ದುಃಖಿತರು ಇವರುಗಳಿಗೆ ಧನಸಹಾಯಮಾಡಿ ಸಂತೋಷಪಡಿಸುತ್ತಿದ್ದನು.

೧೪. ಇಷ್ಟು ದಾನಮಾಡಿದರೂ ಅವನ ಸಂಪತ್ತು ಅಕ್ಷಯವಾಗಿಯೇ ಇತ್ತು. ಹಿಂದೆ ಹೇಳಿದ ತೃತೀಯಾತಿಥಿಯಲ್ಲಿ ತನ್ನ ಯತ್ಕಿಂಚಿತ್ ಸಂಪತ್ತೆಲ್ಲ ವನ್ನೂ ಶ್ರದ್ಧಾಪೂರ್ವಕವಾಗಿ ನಿಃಶೇಷವಾಗಿ ದಾನಮಾಡಿದುದೇ ಇದಕ್ಕೆ ಕಾರಣ.

೧೫. ಅಯ್ಯಾ ಯುಧಿಷ್ಠಿರನೇ ! ಈ ತಿಥಿಯ ಮಹಿಮೆಯನ್ನು ನಾನು ನಿನಗೆ ಹೇಳಿದೆನು. ಈ ವ್ರತಾನುಷ್ಠಾನ ಕ್ರಮವನ್ನು ಈಗ ಹೇಳುತ್ತೇನೆ ಕೇಳು. ಈ ವ್ರತದ ಅಂಗವಾಗಿ ಉದಕುಂಭ, ಕಮಂಡಲು ಇತ್ಯಾದಿಗಳನ್ನು ದಾನಮಾಡ ಬೇಕು. ಅನುಷ್ಠಾತೃವು ಶುದ್ಧೋದಕದಿಂದ ಸ್ನಾನಮಾಡಬೇಕು.

೧೬. ಮತ್ತು ಈ ವ್ರತದಲ್ಲಿ ಗ್ರೀಷ್ಮಋತುವಿನಲ್ಲಿ ಸಿಕ್ಕುವ ಎಲ್ಲಾ ಫಲ ಸಸ್ಯಾದಿಗಳನ್ನೂ ದಾನಮಾಡುವುದು ಪ್ರಶಸ್ತ. ಛತ್ರಿ, ಪಾದುಕೆ, ಗೋವು, ಭೂಮಿ, ಕಾಂಚನ, ವಸ್ತ್ರ ಮೊದಲಾದುವುಗಳನ್ನು ಈ ಅಕ್ಷಯ ತೃತೀಯೆಯಲ್ಲಿ ದಾನಮಾಡುವುದರಿಂದ ಅತಿ ಪುಣ್ಯವುಂಟು.

ಯದ್ಯದಿಷ್ಟತಮಂ ಚಾನ್ಯತ್ತದ್ದೇಯಮವಿಶಂಕಯಾ ।
ಏತತ್ತೇ ಸರ್ವಮಾಖ್ಯಾತಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೭ ॥

ಅನಾಖ್ಯೇಯಂ ನ ಮೇ ಕಿಂಚಿದಸ್ತಿ ಸ್ವಸ್ತ್ಯಸ್ತು ತೇಽನಘ ॥ ೧೮ ॥

ಅಸ್ಯಾಂ ತಿಥೌ ಕ್ಷಯಮುಪೈತಿ ಹುತಂ ನ ದತ್ತಂ ।
ತೇನಾಕ್ಷಯಾ ಚ ಮುನಿಭಿಃ ಕಥಿತಾ ತೃತೀಯಾ ।
ಉದ್ದಿಶ್ಯ ಯತ್ಸುರಪಿತ್ರ್ಯಾನ್ಕ್ರಿಯತೇ ಮನುಷ್ಯೈ ।
ಸ್ತಚ್ಚಾಕ್ಷಯಂ ಭವತಿ ಭಾರತ ಸರ್ವಮೇವ ॥ ೧೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇಽಕ್ಷಯ್ಯ ತೃತೀಯಾವ್ರತ ವರ್ಣನಂ
ನಾಮ ತ್ರಿಂಶತ್ತಮೋಽಧ್ಯಾಯಃ.

---

೧೭. ಮತ್ತು ತನಗೆ ಯಾವಯಾವುದು ಇಷ್ಟತಮವಾಗಿದೆಯೋ ಆ ವಸ್ತುಗಳನ್ನು ನಿಸ್ಸಂದೇಹವಾಗಿ ದಾನಮಾಡಬಹುದು. ಎಲೈ ಧರ್ಮರಾಜನೇ ! ನಾನು ನಿನಗೆ ಅನುಷ್ಠಾನಕ್ರಮವನ್ನು ಸಂಪೂರ್ಣವಾಗಿ ಹೇಳಿದ್ದಾಯಿತು, ಇನ್ನೇನನ್ನು ಪ್ರಶ್ನಿಸಬೇಕೆಂದಿರುವೆ ?

೧೮. ಏತಕ್ಕೆಂದರೆ ನಿನಗೆ ಹೇಳಬಾರದೆಂಬುದು ನಿನ್ನ ವಿಷಯದಲ್ಲಿ ಒಂದೂ ಇಲ್ಲ. ಎಲೈ ನಿಷ್ಕಲ್ಮಷಹೃದಯನೇ ನಿನಗೆ ಮಂಗಳವಾಗಲಿ !

೧೯. ಅಯ್ಯಾ ಭರತಕುಲೋತ್ಪನ್ನನೇ ! ಈ ವೈಶಾಖಶುದ್ಧ ತೃತೀಯೆಯಲ್ಲಿ ಮಾಡಿದ ಹೋಮ, ಕೊಟ್ಟದಾನ, ಇವುಗಳು ಅಕ್ಷಯವಾಗುತ್ತವೆ ಯಾದುದರಿಂದ ಮುನಿಗಳು ಈ ತಿಥಿಯನ್ನು ಅಕ್ಷಯ ತೃತೀಯೆಯೆಂದು ಹೇಳುವರು. ಆದ್ದರಿಂದ ಈ ದಿನದಲ್ಲಿ ದೇವತೆಗಳು ಮತ್ತು ಪಿತೃಗಳನ್ನುದ್ದೇಶಿಸಿ ಮನುಷ್ಯರು ಯಾವ ಕರ್ಮವನ್ನು ಮಾಡಿದರೂ ಅವೆಲ್ಲಾ ಅಕ್ಷಯವಾಗಿಯೇ ಪರಿಣಮಿಸುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಅಕ್ಷಯತೃತೀಯಾ
ವ್ರತವರ್ಣನೆ ಎಂಬ ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕತ್ರಿಂಶೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

**ರೂಪಸೌಭಾಗ್ಯಸುಖದಂ ನರನಾರೀಜನಪ್ರಿಯಂ ।**
**ಪಾಪಾಪಹಂ ಬಹುಫಲಂ ಸುಕರಂ ಸೂಪವಾಸಕಂ ॥ ೧ ॥**

**ಬುದ್ಧಿವೃದ್ಧಿಕರಂ ಸ್ವರ್ಗ್ಯಂ ಯಶಸ್ಯಂ ಸರ್ವಕಾಮದಂ ।**
**ತನ್ಮೇವದ ವ್ರತಂ ಕಿಂಚಿದ್ಯದಿ ತುಷ್ಟೋಽಸಿ ಮಾಧವ ॥ ೨ ॥**

॥ ಶ್ರೀ ಕೃಷ್ಣ ಉವಾಚ ॥

**ಶೃಣು ಪಾರ್ಥ ಪರಂ ಗುಹ್ಯಂ ಯನ್ಮಯಾ ಕಥಿತಂ ನ ಚ ।**
**ಪುರಾ ತವ ವನಸ್ಥಸ್ಯ ತದದ್ಯ ಪ್ರವದಾಮ್ಯಹಂ ॥ ೩ ॥**

---

### ಮೂವತ್ತೊಂದನೆಯ ಅಧ್ಯಾಯ

೧–೨. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಶ್ರೀ ಕೃಷ್ಣನೇ ! ನೀನು ನನ್ನಲ್ಲಿ ಸುಪ್ರಸನ್ನನಾಗಿದ್ದರೆ ಸೌಂದರ್ಯ, ಸೌಭಾಗ್ಯ, ಸುಖ, ಇವುಗಳನ್ನು ಕೊಡುವುದೂ, ಗಂಡಸರು ಹೆಂಗಸರು ಎಲ್ಲರಿಗೂ ಪ್ರಿಯವೂ, ಸರ್ವಪಾಪನಾಶಕವೂ, ಬಹು ಫಲದಾಯಕವೂ, ಸುಕರವಾದ ಉಪವಾಸ ನಿಯಮವುಳ್ಳುದಾಗಿ ಸುಖವಾಗಿ ಆಚರಿಸಲು ಸಾಧ್ಯವಾದುದೂ, ಸಂಪತ್ಸಮೃದ್ಧಿಕರವಾದುದೂ, ಸ್ವರ್ಗದಾಯಕವೂ ಯಶಃಪ್ರದವೂ ಸರ್ವಕಾಮಾವಾಪ್ತಿ ಸಾಧುವೂ ಆಗಿರುವ ಒಂದು ವ್ರತವನ್ನು ನನಗೆ ಉಪದೇಶಿಸು ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ ! ಹಿಂದೆ ನೀನು ವನವಾಸದಲ್ಲಿರುವಾಗ ನಿನಗೆ ತಿಳಿಸಿಲ್ಲದುದೂ, ಪರಮಗುಹ್ಯವೂ ಆದ ಒಂದು ವ್ರತವನ್ನು ಈಗ ನಾನು ನಿನಗೆ ಹೇಳುವೆನು ಕೇಳು.

ಶಿವಯೋರತಿಸಂಹರ್ಷಾದ್ರಕ್ತಬಿಂದುಶ್ಚ್ಯುತಃ ಕ್ಷಿತೌ ।
ಮೇದಿನ್ಯಾ ಸ ಪ್ರಯತ್ನೇನ ವಿಧೃತೋ ಧೃತಿಯುಕ್ತಯಾ ॥ ೪ ॥

ತಸ್ಮಾಜ್ಜಾತಃ ಕುಮಾರೋಽಸೌ ರಕ್ತೋ ರಕ್ತಸಮುದ್ಭವಃ ।
ಅಂಗಂ ಪ್ರಸಿದ್ಧಮೇವೇಹಾಂಗಾರಕೋ ವೇಗ ಉಚ್ಯತೇ ॥ ೫ ॥

ಶಿವಾಂಗಾದ್ರಭಸಾಜ್ಜಾತಸ್ತೇನಾಂಗಾರಕ ಉಚ್ಯತೇ ।
ಅಂಗಸ್ಥೋಽಗಾಂರಕಾಂತಿಶ್ಚ ಅಂಗಪ್ರತ್ಯಂಗಸಂಭವಃ ॥ ೬ ॥

ಸೌಭಾಗ್ಯಾರೋಗ್ಯಕೃದ್ಯಸ್ಮಾತ್ತಸ್ಮಾದಂಗಾರಕಃ ಸ್ಮೃತಃ ।
ಭಕ್ತ್ಯಾ ಚತುರ್ಥ್ಯಾಂ ನಕ್ತೇನ ಯಸ್ತು ಶ್ರದ್ಧಾಸಮನ್ವಿತಃ ॥ ೭ ॥

---

೪. ಪೂರ್ವದಲ್ಲಿ ಶ್ರೀ ಉಮಾಮಹೇಶ್ವರರಿಗೆ ಸಂತೋಷವು ಅತ್ಯುದ್ರಿಕ್ತವಾಗಿ ಅವರ ಶೋಣಿತವು ಭೂಮಿಯಲ್ಲಿ ಜಾರಿಬಿದ್ದಿತು. ಆಗ ಭೂದೇವಿಯು ಅತಿ ಧೈರ್ಯಯುಕ್ತಳಾಗಿ ಆ ಶೋಣಿತವನ್ನು ಪ್ರಯತ್ನಪೂರ್ವಕವಾಗಿ ಧರಿಸಿದಳು.

೫. ಅನಂತರ ಶ್ರೀ ಪಾರ್ವತೀ ಪರಮೇಶ್ವರರ ರಕ್ತದಿಂದ ಆ ಭೂದೇವಿಯಲ್ಲಿ ರಕ್ತವರ್ಣದ ಒಬ್ಬ ಕುಮಾರನು ಜನಿಸಿದನು. ಆದ್ದರಿಂದ ಆ ಕುಮಾರನಿಗೆ ' ಅಂಗಾರಕ ' ' ವೇಗ ' ಎಂಬ ಈ ಹೆಸರುಗಳು ಲೋಕದಲ್ಲಿ ಪ್ರಸಿದ್ಧವಾಗಿವೆ.

೬. ಆ ಹೆಸರುಗಳಲ್ಲಿ ವೇಗ ಎಂಬುದು ಶಿವಾಂಗಗಳಿಂದ ಅತಿ ರಭಸವಾಗಿ ಚ್ಯುತವಾದ ರಕ್ತಬಿಂದುವಿನಿಂದ ಜನಿಸಿದ ಕಾರಣ ಅಶ್ಯೈಘ್ರ್ಯನಿಮಿತ್ತವಾಗಿ ಬಂದುದಾಗಿದೆ. ಆ ಮಗುವಿಗೆ ಜನನ ಕಾರಣವಾದ ಅಂಗಪ್ರತ್ಯಂಗಗಳು ಇದ್ದದ್ದರಿಂದಲೂ, ಮತ್ತು ಬೆಂಕಿಯಂತೆ ಕಾಂತಿಯುಳ್ಳದ್ದಾದ್ದರಿಂದಲೂ ' ಅಂಗಾರಕ ' ಎಂಬ ಹೆಸರು ಬರುತ್ತದೆ.

೭. ಭಕ್ತರಿಗೆ ಸೌಭಾಗ್ಯ ಆರೋಗ್ಯಾದಿ ಫಲಗಳನ್ನು ಕೊಡುವನಾದುದರಿಂದ ಅಂಗಾರಕ ಎಂಬ ಹೆಸರು ಉಕ್ತವಾಗಿದೆ. ಆದುದರಿಂದ ಚತುರ್ಥೀತಿಥಿಯಲ್ಲಿ ಭಕ್ತಿಶ್ರದ್ಧಾಸಹಿತವಾಗಿ ನಕ್ತವನ್ನಾಚರಿಸಿ ಅಂಗಾರಕನನ್ನು ಆರಾಧಿಸಬೇಕು.

ತಂ ಪೂಜಯತಿ ಯತ್ನೇನ ನಾರೀ ವಾ್ಯನನ್ಯಮಾನಸಾ ।
ತಸ್ಯ ತುಷ್ಟಃ ಪ್ರಯಚ್ಛೇತ್ಸ ಯತ್ತ್ವಯಾ ಸಮುದಾಹೃತಂ ।
ರೂಪಂ ಸೌಭಾಗ್ಯಸಂಪನ್ನಂ ನರನಾರೀಮನೋಹರಂ　　　॥ ೮ ॥

॥ ಯುಧಿಷ್ಠಿರ ಉವಾಚ ॥

ಏತಸ್ಮೇ ವದ ದೇವೇಶ ಅಂಗಾರಕವಿಧಿಂ ಶುಭಂ ।
ಸಹೋಮ ಮಂತ್ರಸಂಸ್ಥಾನಂ ಸಾಧಿವಾಸವಿಧಾನತಃ　　　॥ ೯ ॥

॥ ಶ್ರೀ ಕೃಷ್ಣ ಉವಾಚ ॥

ಪೂರ್ವಂ ತು ಕೃತಸಂಕಲ್ಪಃ ಸ್ನಾನಂ ಕೃತ್ವಾ ಬಹಿರ್ಜಲೇ ।
ಸ್ನಾನಾರ್ಥಂ ಮೃತ್ತಿಕಾಂ ಮಂತ್ರೈರ್ಗೃಹ್ಣೀಯಾದಂಭಸಿ ಸ್ಥಿತಃ　॥ ೧೦ ॥

ತ್ವಂ ಮೃದೇ ವಂದಿತಾ ಪೂರ್ವಂ ಕೃಷ್ಣೇನೋದ್ಧರತಾ ಕಿಲ ।
ತೇನ ಮೇ ದಹ ಪಾಪೌಘಂ ಯನ್ಮಯಾ ಪೂರ್ವಸಂಚಿತಂ　　॥ ೧೧ ॥

---

೮. ಗಂಡಸಾಗಲಿ ಅಥವಾ ಹೆಂಗಸಾಗಲಿ ಏಕಾಗ್ರತೆಯಿಂದ ಈ ಅಂಗಾರಕನನ್ನು ಪ್ರಯತ್ನಪೂರ್ವಕವಾಗಿ ಆರಾಧಿಸಿದರೆ ಅವರ ವಿಷಯದಲ್ಲಿ ಅವನು ಸುಪ್ರೀತನಾಗಿ ಆ ಪುರುಷರಿಗೂ ಮತ್ತು ಸ್ತ್ರೀಯರಿಗೂ ಮನೋಹಾರಿಯಾದ ಸೌಂದರ್ಯ ಸೌಭಾಗ್ಯರೂಪವಾದ ಫಲಗಳನ್ನು ಕೊಡುವನು ಎಂದನು.

೯. ಯುಧಿಷ್ಠಿರನು ಹೇಳುತ್ತಾನೆ—ಎಲೈ ಶ್ರೀ ಕೃಷ್ಣನೇ ! ಈ ಅಂಗಾರಕನ ಪ್ರಾಣಪ್ರತಿಷ್ಠಾಪನಾದಿ ಆರಾಧನ ವಿಧಿಯನ್ನೂ ಹೋಮವಿಧಾನವನ್ನೂ ಮತ್ತು ಆ ಹೋಮಕ್ಕೆ ಉಪಯುಕ್ತವಾದ ಮಂತ್ರಗಳನ್ನೂ ನನಗೆ ಉಪದೇಶ ಮಾಡು ಎಂದನು.

೧೦. ಶ್ರೀ ಕೃಷ್ಣನು ಹೇಳುತ್ತಾನೆ—ಮೊದಲು ಸ್ನಾನಾರ್ಥವಾಗಿ ಸಂಕಲ್ಪ ಮಾಡಿ ಜಲಾಶಯದ ಹೊರಗೆ ತಂದು ಇಟ್ಟ ಜಲದಿಂದ ಸ್ನಾನಮಾಡಿ, ಅನಂತರ ನೀರಿನೊಳಗೆ ನಿಂತು ಸ್ನಾನಾರ್ಥವಾದ ಮೃತ್ತಿಕೆಯನ್ನು ಮಂತ್ರಪೂರ್ವಕವಾಗಿ ತೆಗೆಯಬೇಕು.

೧೧. ತ್ವಂ ಮೃದೇವಂ ದಿವಾಪೂರ್ವಂ ಕೃಷ್ಣೇನೋದ್ಧರತಾ ಕಿಲ ।
ತೇನ ಮೇ ದಹಪಾಪೌಘಂ ಯನ್ಮಯಾ ಪೂರ್ವಸಂಚಿತಂ ॥

ಇಮಂ ಮಂತ್ರಂ ಪಠನ್ಪಾರ್ಥ ಆದಿತ್ಯಾಯ ಪ್ರದರ್ಶಯೇತ್ ।
ಆದಿತ್ಯರಶ್ಮಿಸಂತಪ್ತಾಂ ಗಂಗಾಜಲಕಣೋಕ್ಷಿತಾಂ ॥ ೧೨ ॥

ತಾಂ ಮೃದಂ ಶಿರಸಿ ಪ್ರಾರ್ಥ್ಯ ಪೂರ್ವಂ ದತ್ವಾಂಗಸಂಧಿಷು ।
ತತಃ ಸ್ನಾನಂ ಪ್ರಕುರ್ವೀತ ಮಂತ್ರೇಣಾನ್ತರ್ಜಲೇಪುನಃ ॥ ೧೩ ॥

ತ್ವಮಾಪೋ ಯೋನಿಃ ಸರ್ವೇಷಾಂ ದೈತ್ಯದಾನವರಕ್ಷಸಾಂ ।
ಸ್ವೇದಜೋದ್ಭಿಜ್ಜಯೋನೀನಾಂ ರಸಾನಾಂ ಪತಯೇ ನಮಃ ॥ ೧೪ ॥

---

ಎಲೈ ಮೃತ್ತಿಕೆಯೇ ! ನೀನು ಪೂರ್ವದಲ್ಲಿ ಸಮುದ್ರ ಜಲದಲ್ಲಿ ಮುಳುಗಿರುವಾಗ ವರಾಹರೂಪಿಯಾದ ಶ್ರೀ ಕೃಷ್ಣನು ನಿನ್ನನ್ನು ಎತ್ತುವುದಕ್ಕೆ ಮೊದಲು ನಮಸ್ಕರಿಸಿರುವನು. ಅಂತಹ ಶ್ರೀ ಕೃಷ್ಣನಿಂದ ನಮಸ್ಕೃತಳಾದ ನೀನು ನನ್ನ ಪೂರ್ವ ಸಂಚಿತ ಪಾಪರಾಶಿಯನ್ನು ಭಸ್ಮಮಾಡು.

೧೨. ಈ ಮಂತ್ರವನ್ನು ಹೇಳಿಕೊಂಡು ತೆಗೆದಂಥ ಮೃತ್ತಿಕೆಯನ್ನು ಆದಿತ್ಯನಿಗೆ ತೋರಿಸಬೇಕು. ಸೂರ್ಯರಶ್ಮಿಯಿಂದ ಬಿಸಿಯಾಗಿಯೂ ಗಂಗಾಜಲ ಕಣಗಳಿಂದ ಪ್ರೋಕ್ಷಿತವಾಗಿಯೂ ಇರುವ ಆ ಮೃತ್ತಿಕೆಯನ್ನು,

೧೩. ಪ್ರಾರ್ಥನಾಪೂರ್ವಕವಾಗಿ ಮೊದಲು ಸ್ವಲ್ಪವನ್ನು ಶಿರಸ್ಸಿನಲ್ಲಿ ಧಾರಣೆಮಾಡಿ ಅನಂತರ ಪ್ರತ್ಯಂಗ ಸಂಧಿಗಳಲ್ಲೂ ಹಚ್ಚಿಕೊಂಡು ಜಲಾಶಯದಲ್ಲಿ ಪುನಃ ಅವಗಾಹನ ಸ್ನಾನವನ್ನು ಮಾಡಬೇಕು.

೧೪. ತ್ವಮಾಪೋಯೋನಿಃ ಸರ್ವೇಷಾಂ ದೈತ್ಯದಾನವ ರಕ್ಷಸಾಂ ।
ಸ್ವೇದ ಜೋದ್ಭಿಜ್ಜಯೋನೀನಾಂ ರಸಾನಾಂ ಪತಯೇ ನಮಃ ॥

ಎಂಬ ಮಂತ್ರವನ್ನು ಪಠಿಸಿ ಸ್ನಾನಮಾಡಬೇಕು. (ಓ ಜಲವೇ ! ನೀನು ದೈತ್ಯರು ದಾನವರು ರಾಕ್ಷಸರು ಇವರಿಗೂ ಇತರ ಎಲ್ಲಾ ಪ್ರಾಣಿಗಳಿಗೂ ಕಾರಣಳು. ಮತ್ತು ಬೆವರಿನಿಂದ ಹುಟ್ಟಿ ಸ್ವೇದಜ ಎಂದು ಕರೆಯಲ್ಪಡುವ ನೊಣ ಮೊದಲಾದುವುಗಳಿಗೂ, ಭೂಮಿಯನ್ನು ಭೇದಿಸಿ ಅಂಕುರಿಸಿ ಬೆಳೆದು ಉದ್ಭಿಜ್ಜವೆಂದು ವ್ಯವಹರಿಸಲ್ಪಡುವ ವೃಕ್ಷಾದಿಗಳಿಗೂ, ನೀನೇ ಕಾರಣಳು ” ಎಂದು ಇದರ ಸಾರಾಂಶ).

ಸ್ನಾತೋಽಹಂ ಸರ್ವತೀರ್ಥೇಷು ಸರ್ವಪ್ರಸ್ರವಣೇಷು ಚ ।
ನದೀಷು ದೇವಖಾತೇಷು ಸ್ನಾನಂ ತೇಷು ಚ ಮೇ ಭವೇತ್ ॥ ೧೫ ॥

ಧ್ಯಾಯನ್ನ್ಯನಿಮಮಂ ಮಂತ್ರಂ ತತಃ ಸ್ನಾನಂ ಸಮಾಚರೇತ್ ।
ತತಃ ಸ್ನಾತ್ವಾ ಶುಚಿರ್ಭೂತ್ವಾ ಗೃಹಮಾಗತ್ಯ ನ ಸ್ಪೃಶೇತ್ ।
ನ ಜಲ್ಪೇಚ್ಚ ನ ವೀಕ್ಷೇತ ಕ್ವಚಿತ್ಪಾಪಿಷ್ಠಮೇವ ಹಿ ॥ ೧೬ ॥

ದೂರ್ವಾಶ್ವತ್ಥೌ ಶಮೀಂ ಸ್ಪೃಷ್ಟ್ವಾ ಗಾಂ ಚ ಮಂತ್ರೇಣ ಮಂತ್ರವಿತ್ ।
ದೂರ್ವಾಮುಷ್ಯಸ್ಯ ಮಂತ್ರೇಣ ಯುತೇನ ಸಮುಪಸ್ಥಿತಾಂ ॥ ೧೭ ॥

---

೧೫. ಸ್ನಾತೋಽಹಂ ಸರ್ವತೀರ್ಥೇಷು ಸರ್ವಪ್ರಸ್ರವಣೇಷು ಚ ।
ನದೀಷು ದೇವಖಾತೇಷು ಸ್ನಾನಂತೇ ಷುಚಮೆಭವೇತ್ ॥

ಎಂಬ ಮತ್ತೊಂದು ಮಂತ್ರವನ್ನೂ ಹೇಳಬೇಕು. (ನಾನು ಸರ್ವತೀರ್ಥಗಳಲ್ಲೂ ಗಿರಿನಿರ್ಝರಗಳಲ್ಲೂ ನದಿಗಳಲ್ಲೂ ದೇವತೆಗಳಿಂದ ಅಗೆಸಲ್ಪಟ್ಟು ತಯಾರಾದ ಪುಣ್ಯ ತಟಾಕಾದಿಗಳಲ್ಲೂ ಸ್ನಾನಮಾಡಿರುವೆನು. ಈಗ ನಿನ್ನಲ್ಲಿ ಮಾಡಿದ ಸ್ನಾನವು ಆ ತೀರ್ಥಾದಿಗಳಲ್ಲಿ ಮಾಡಿದ ಸ್ನಾನ ಸದೃಶವಾಗಲಿ ಅಂತಹ ರಸಾಧಿಪತಿಯಾದ ನಿನಗೆ ನಮಿಸುವೆನು ಎಂಬುದೇ ಇದರ ತಾತ್ಪರ್ಯ).

೧೬. ಈ ಮಂತ್ರವನ್ನು ಗಟ್ಟಿಯಾಗಿ ಹೇಳಿ ಮಂತ್ರಾರ್ಥವನ್ನು ಧ್ಯಾನಿಸಿ ಅನಂತರ ಸ್ನಾನಮಾಡತಕ್ಕದ್ದು. ಈರೀತಿ ಸ್ನಾನದಿಂದ ಶುಚಿಯಾದ ಮೇಲೆ ಮನೆಗೆ ಬಂದು ಪಾಪಿಯ ಸಂದರ್ಶನ, ಸ್ಪರ್ಶನ, ಸಂಭಾಷಣ, ಇವನ್ನು ಯಾವಾಗಲೂ ತ್ಯಜಿಸಬೇಕು.

೧೭. ಅನಂತರ ಮಂತ್ರಜ್ಞನಾದವನು ಗರಿಕೆ, ಅಶ್ವತ್ಥ ಶಮೀ, ಮತ್ತು ಹಸು ಇವುಗಳನ್ನು ಈ ಮುಂದೆ ಹೇಳಿರುವ ಮಂತ್ರಗಳಿಂದ ಸ್ಪರ್ಶಮಾಡಬೇಕು. ಉಪಸ್ಥಿತವಾದ ದೂರ್ವೆಯನ್ನು ಈ ಮುಂದೆ ಹೇಳುವ ಮಂತ್ರವನ್ನು ಪಠಿಸಿ ಸ್ಪರ್ಶಮಾಡಬೇಕು.

ತ್ವಂ ದೂರ್ವೇಽಮೃತಜನ್ಮಾಸಿ ಸರ್ವದೇವೈಶ್ಚ ವಂದಿತಾ ।
ವಂದಿತಾದಹ ತತ್ಸರ್ವಂ ಯನ್ಮಯಾ ದುಷ್ಕೃತಂ ಕೃತಂ ॥ ೧೮ ॥

(ಇತಿ ದೂರ್ವಾಮಂತ್ರಃ)

ಪವಿತ್ರಾಣಾಂ ಪವಿತ್ರಂ ತ್ವಂ ಕಾಶ್ಯಪೀ ಪಠ್ಯಸೇ ಶ್ರುತೌ ।
ಶಮೀ ಶಮಯ ತತ್ಪಾಪಂ ಯನ್ಮಯಾ ದುರನುಷ್ಠಿತಂ ॥ ೧೯ ॥

(ಇತಿ ಶಮೀಮಂತ್ರಃ)

ಆಶ್ವತ್ಥಮಂಗಂ ಲಭತೇ ಪುಂತ್ರಮೋತಂ ನಿಬೋಧ ಮೇ ।
ಆಕ್ಷಿಸ್ಪಂದಂ ಭುಜಸ್ಪಂದಂ ದುಸ್ವಪ್ನಂ ದುರ್ವಿಚಿಂತಿತಂ ।
ಶತ್ರೂಣಾಂ ಚ ಸಮುತ್ಥಾನಮಶ್ವತ್ಥ ಶಮಯಸ್ವ ಮೇ ॥ ೨೦ ॥

---

೧೮. ತ್ವಂ ದೂರ್ವೇಽಮೃತಜನ್ಮಾಸಿ ಸರ್ವದೇವೈಶ್ಚ ವಂದಿತಾ ।
ವಂದಿತಾ ದಹ ತತ್ಸರ್ವಂ ಯನ್ಮಯಾ ದುಷ್ಕೃತಂ ಕೃತಂ ॥

ಇದು ದೂರ್ವಾಸ್ಪರ್ಶ ಮಂತ್ರ. (ಎಲೆ ಗರಿಕೆಯೇ ನೀನು ಅಮೃತೋದ್ಭೂತಳು ಮತ್ತು ಸರ್ವದೇವ ನಮಸ್ಕೃತಳು, ನನ್ನಿಂದಲೂ ನೀನು ನಮಸ್ಕೃತಳಾಗಿ ನಾನು ಪೂರ್ವದಲ್ಲಿ ಮಾಡಿದ ದುಷ್ಕೃತ್ಯಗಳ ಪಾಪಗಳೆಲ್ಲವನ್ನೂ ನಾಶಮಾಡು ಎಂಬುದು ಈ ಮಂತ್ರದ ಅರ್ಥ.)

೧೯. ಪವಿತ್ರಾಣಾಂ ಪವಿತ್ರಂ ತ್ವಂ ಕಾಶ್ಯಪೀ ಪಠ್ಯಸೇ ಶ್ರುತೌ ।
ಶಮೀ ಶಮಯ ತತ್ಪಾಪಂ ಯನ್ಮಯಾದುರನುಷ್ಠಿತಂ ॥

ಇದು ಶಮೀಸ್ಪರ್ಶಮಂತ್ರ. ಶುದ್ಧಳಾದ ಶಮಿಯೇ ! ನೀನು ಪವಿತ್ರವಾದ ವಸ್ತುಗಳಲ್ಲೆಲ್ಲಾ ಪಾವನೆಯು. ವೇದದಲ್ಲಿ ನಿನ್ನನ್ನು ಕಾಶ್ಯಪೀ ಎಂದು ಹೇಳಿದೆ. ಕಶ್ಯಪ ಪ್ರಜಾಪತಿಯಿಂದ ಜನಿಸಿದ ಕಾರಣ ಈ ಹೆಸರು. ಇಂಥ ನೀನು ನನ್ನ ಎಲ್ಲಾ ಪಾಪವನ್ನೂ ನಾಶಮಾಡು ಎಂದು ಮಂತ್ರಾರ್ಥ.

೨೦. ಅಯ್ಯಾ ಯುಧಿಷ್ಠಿರನೇ ! ಅನಂತರ ಅಶ್ವತ್ಥವೃಕ್ಷದ ಒಂದು ಅಂಗವನ್ನು ಸ್ಪರ್ಶಮಾಡಬೇಕು. ಅದಕ್ಕೆ ಮಂತ್ರವನ್ನು ಹೇಳುವೆನು ಕೇಳು.

ಅಕ್ಷಿಸ್ಪಂದಂ ಭುಜಸ್ಪಂದಂ ದುಃಸ್ವಪ್ನಂ ದುರ್ವಿಚಿಂತಿತಮ್ ।
ಶತ್ರೂಣಾಂ ಚ ಸಮುತ್ಥಾನಂ ಅಶ್ವತ್ಥ ಶಮಯಸ್ವ ಮೇ ॥

ಇದು ಅಶ್ವತ್ಥಸ್ಪರ್ಶಮಂತ್ರ (ಎಲೈ ಅಶ್ವತ್ಥವೇ ! ನನ್ನ ಕಣ್ಣು ಹಾರುವುದು, ಬಾಹುಚಲನೆಯುಂಟಾಗುವುದು. ದುಃಸ್ವಪ್ನ ದರ್ಶನ ಇವುಗಳ ಸೂಚನೆ

(ಇತ್ಯಶ್ವತ್ಥಮಂತ್ರಃ)

**ಗಾಂ ದದ್ಯಾತ್ತು ತತೋ ದೇವೀಂ ಸವತ್ಸಾಂ ಸಪ್ರದಕ್ಷಿಣಾಂ ।**
**ಸಮಾಲಭ್ಯ ತು ಮಂತ್ರೇಣ ಮಂತ್ರಮೇತಮುದೀರಯೇತ್ ॥ ೨೧ ॥**

**ಸರ್ವದೇವಮಯೇ ದೇವಿ ದೈವತೈಸ್ತ್ವಂ ಸುಪೂಜಿತಾ ।**
**ತಸ್ಮಾತ್ಸ್ಪೃಶಾಮಿ ವಂದಾಮಿ ವಂದಿತಾ ಪಾಪಹಾ ಭವ ॥ ೨೨ ॥**

(ಗೋಮಂತ್ರಃ)

**ಏವಂ ಮಂತ್ರಂ ಪಠನ್ ಪಾರ್ಥ ಭಕ್ತಿಭಾವೇನ ಭಾವಿತಃ ।**
**ಪ್ರದಕ್ಷಿಣಾಂ ಯಃ ಕುರುತೇ ಗಾಂ ಸ್ಪೃಷ್ಟ್ವಾ ವರವರ್ಣಿಸೀಂ ॥ ೨೩ ॥**

---

ಯಿಂದ ಮುಂದೆ ಒದಗುವ ಅನಿಷ್ಟಫಲಗಳನ್ನೂ ನನ್ನ ಶತ್ರುಗಳ ಏಳಿಗೆಯನ್ನೂ ಶಮನಮಾಡು. ಎಂದು ಈ ಮಂತ್ರಾರ್ಥ.

೨೧. ಅನಂತರ ಕರುವಿನೊಡಗೂಡಿದ ಗೋಮಾತೆಗೆ ಪ್ರದಕ್ಷಿಣೆ ಮಾಡಿ ಮುಂದೆ ಹೇಳುವ ಮಂತ್ರವನ್ನು ಪಠಿಸಿ ಸ್ಪರ್ಶನಮಾಡಿ ದಾನಮಾಡಬೇಕು.

೨೨. ಸರ್ವದೇವಮಯೇ ದೇವೀ ದೇವತೈಸ್ತ್ವಂ ಸುಪೂಜಿತಾ ।
ತಸ್ಮಾತ್ ಸ್ಪೃಶಾಮಿ ವಂದಾಮಿ ವಂದಿತಾ ಪಾಪಹಾಭವ ॥

ಎಂಬುದು ಗೋಸ್ಪರ್ಶಮಂತ್ರ. (ಎಲೌ ದೇವಿಯೇ ನೀನು ಸರ್ವದೇವತಾ ಸ್ವರೂಪಿಣಿಯು; ಸರ್ವದೇವತೆಗಳಿಂದಲೂ ಚೆನ್ನಾಗಿ ಅರ್ಚಿಸಲ್ಪಟ್ಟವಳು; ಇಂತಹ ನಿನ್ನನ್ನು ನಾನು ಸ್ಪರ್ಶನಮಾಡಿ ನಮಸ್ಕರಿಸುವೆನು. ನನ್ನಿಂದ ನಮಸ್ಕೃತಳಾದ ನೀನು ನನ್ನ ಸರ್ವಪಾಪನಾಶಕಳಾಗಿರು ಎಂದು ಈ ಮಂತ್ರದ ಅರ್ಥ.)

೨೩. ಎಲೈ ಕುಂತೀಪುತ್ರನೇ ! ಯಾವನು ಈರೀತಿ ಭಕ್ತಿಪೂರ್ವಕವಾಗಿ ಮಂತ್ರಪಠನಮಾಡಿ, ಸ್ಥಿರವಾದ ಪುಣ್ಯದಿಂದ ಪೂಜ್ಯಳಾವ ಗೋಮಾತೆಯನ್ನು ಸ್ಪರ್ಶಮಾಡಿ, ಪ್ರದಕ್ಷಿಣಮಾಡಿ ಬರುವನೋ, ಅವನಿಗೆ ಭೂಪ್ರದಕ್ಷಿಣೆ ಮಾಡಿದಷ್ಟು ಫಲ ಲಭಿಸುವುದರಲ್ಲಿ ಸಂಶಯವಿಲ್ಲ.

ಪ್ರದಕ್ಷಿಣೀಕೃತಾ ತೇನ ಪೃಥಿವೀ ನಾತ್ರ ಸಂಶಯಃ ।
ಏವಂ ಮೌನೇನ ಚಾಗತ್ಯ ವಂದ್ಯಾನ್ಸಂದ್ಯ ಗೃಹಂ ವ್ರಜೇತ್ ॥ ೨೪ ॥

ಪ್ರಕ್ಷಾಲ್ಯ ಚ ಮೃದಾ ಪಾದೌ ಆಹಿತಾಗ್ನಿಗೃಹಂ ವಿಶೇತ್ ।
ಹೋಮಂ ತತ್ರ ಪ್ರಕುರ್ವೀತ ಏಭಿರ್ಮಂತ್ರೈಃ ಪದೈರ್ವರೈಃ ॥ ೨೫ ॥

ಶರ್ವಾಯ ಶರ್ವಪುತ್ರಾಯ ಪಾರ್ವತ್ಯಾ ಗೋಃಸುತಾಯ ಚ ।
ಕುಜಾಯ ಲೋಹಿತಾಂಗಾಯ ಗ್ರಹೇಶಾಂಗಾರಕಾಯ ಚ ।
ಭೂಯೋ ಭೂಯೋಯಮಾಹುತ್ಯಾ ಹುತ್ವಾಹುತ್ವಾಜುಹೋತಿ ವೈ ॥೨೬॥

ಓಂಕಾರಪೂರ್ವಕೈರ್ಮಂತ್ರೈಃ ಸ್ವಾಹಾಕಾರಾಂತಯೋಜಿತೈಃ ।
ಅಷ್ಟೋತ್ತರಶತಂ ಪಾರ್ಥ ಅರ್ಧಮರ್ಧಾರ್ಧಮೇವ ಚ ॥ ೨೭ ॥

---

೨೪. ಈರೀತಿ ನಮಸ್ಕಾರಕ್ಕೆ ಯೋಗ್ಯವಾದ ಪವಿತ್ರವಾದ ಈ ವಸ್ತುಗಳಿಗೆ ನಮಸ್ಕಾರಮಾಡಿ ಇತರರ ಜತೆಯಲ್ಲಿ ಸಂಭಾಷಣೆಮಾಡದೆ ಮೌನವಾಗಿ ಮನೆಗೆ ಬರಬೇಕು.

೨೫. ಅನಂತರ ಮೃತ್ತಿಕೆಯನ್ನು ಹಚ್ಚಿ ಪಾದಪ್ರಕ್ಷಾಳನೆಮಾಡಿ ಅಗ್ನಿ ಪ್ರತಿಷ್ಠೆಯನ್ನು ಮಾಡಿರುವ ಯಾಗಶಾಲೆಯಲ್ಲಿ ಪ್ರವೇಶಮಾಡಿ ಈ ಮುಂದೆ ಹೇಳುವ ಶ್ರೇಷ್ಠ ನಾಮಮಂತ್ರಗಳಿಂದ ಅಲ್ಲಿ ಹೋಮಮಾಡಬೇಕು.

೨೬. ಓಂ ಶರ್ವಾಯಸ್ವಾಹಾ ಶರ್ವಪುತ್ರಾಯಸ್ವಾಹಾ ಪಾರ್ವತೀ ಸುತಾಯ, ಗೋಸುತಾಯ, ಕುಜಾಯ, ಲೋಹಿತಾಂಗಾಯ, ಗೃಹೇಶಾಯ ಅಂಗಾರಕಾಯ, ಈ ನಾಮಮಂತ್ರಪೂರ್ವಕವಾಗಿ ಪುನಃಪುನಃ ಆಹುತಿಗಳನ್ನು ಹೋಮಮಾಡಬೇಕು.

೨೭. ಎಲೈ ಕುಂತೀಪುತ್ರನೇ ! ಈ ನಾಮಮಂತ್ರಗಳ ಆದಿಯಲ್ಲಿ ಓಂ ಕಾರವನ್ನೂ ಕೊನೆಯಲ್ಲಿ ಸ್ವಾಹಾಪದವನ್ನೂ ಸೇರಿಸಿ ನೂರೆಂಟು ಸಂಖ್ಯೆ ಯಿಂದಲೋ ಅಥವಾ ಅದರರ್ಧದಷ್ಟು ಸಂಖ್ಯೆಯಿಂದಲೋ ಅಗ್ನಿಯಲ್ಲಿ ಹೋಮ ಮಾಡಬೇಕು.

ಏಭಿರ್ಮಂತ್ರಪದೈರ್ಭಕ್ತ್ಯಾ ಶಕ್ತ್ಯಾ ವಾ ಕಾಮಮೇವ ವಾ ।
ಸಮಿದ್ಭಿಃ ಖಾದಿರೀಭಿಶ್ಚ ಘೃತದುಗ್ಧೈಸ್ತಿಲೈರ್ಯವೈಃ ॥ ೨೮ ॥

ಭಕ್ಷ್ಯೈರ್ನಾನಾವಿಧೈರನ್ಯೈಃ ಶಕ್ತ್ಯಾ ವಾ ಮಂತ್ರವಿದ್ವಶೀ ।
ಹುತ್ವಾಹುತೀಸ್ತತಃ ಪಾರ್ಥ ದೇವಂ ಸಂಸ್ಥಾಪಯೇತ್ಕ್ಷಿತೌ ॥ ೨೯ ॥

ಸ್ಥಾಪನಂ ಕೇಚಿದಿಚ್ಛಂತಿ ಸಗುಡೇ ತಾಮ್ರಭಾಜನೇ ।
ಸೌವರ್ಣಂ ರಕ್ತವರ್ಣಂ ಚ ಶಕ್ತ್ಯಾ ದಾರುಮಯಂ ತಥಾ ॥ ೩೦ ॥

ಕೃಷ್ಣಾಗುರುಮಯಂ ಚೈವ ಶ್ರೀಖಂಡಘಟಿತಂ ಪುನಃ ।
ಸೌವರ್ಣಪಾತ್ರೇ ರೌಪ್ಯೇ ವಾ ಅರ್ಚ್ಯ ಕುಂಕುಮಕೇಸರೈಃ ॥ ೩೧ ॥

---

೨೮. ಅಥವಾ ಸ್ವಶಕ್ತ್ಯಾನುಸಾರವಾಗಿ ಇತರ ನಾನಾವಿಧದ ಭಕ್ಷ್ಯಗಳನ್ನೂ ತಯಾರಿಸಿ, ತನ್ನ ಇಷ್ಟಬಂದಷ್ಟು ಆಹುತಿಯನ್ನು ಭಕ್ತಿಪೂರ್ವಕವಾಗಿ ಈ ಹಿಂದೆ ಹೇಳಿದ ಮಂತ್ರಪೂರ್ವಕವಾಗಿ ಖಾದಿರ (ಕಗ್ಗಲಿ) ಸಮಿತ್ತು, ತುಪ್ಪ, ಹಾಲು, ಎಳ್ಳು, ಮತ್ತು ಭತ್ತ ಈ ದ್ರವ್ಯಗಳಿಂದ ಹೋಮಮಾಡಬೇಕು.

೨೯. ಎಲೈ ಧರ್ಮರಾಜನೇ ! ಮತ್ತು ಸ್ವಶಕ್ತ್ಯಾನುಸಾರವಾಗಿ ಇತರ ನಾನಾವಿಧ ಭಕ್ಷ್ಯಭೋಜ್ಯಗಳನ್ನು ತಯಾರಿಸಿ ಅವುಗಳಿಂದಲೂ ಭಕ್ತಿಪೂರ್ವಕವಾಗಿ ಜಿತೇಂದ್ರಿಯತೆಯಿಂದ ಮಂತ್ರಸಹಿತ ಹೋಮಮಾಡಿ ಅನಂತರ ಆ ದೇವನನ್ನು ಭೂಮಿಯಲ್ಲಿ ಸ್ಥಾಪನೆಮಾಡಬೇಕು.

೩೦. ಬೆಲ್ಲ ಸಹಿತವಾದ ತಾಮ್ರದ ಪಾತ್ರೆಯಲ್ಲಿ ದೇವತಾಸ್ಥಾಪನ ಮಾಡಬೇಕೆಂದು ಕೆಲವರ ಅಭಿಪ್ರಾಯ. ಕೆಂಪಗಿರುವ ಶುದ್ಧ ಭಂಗಾರದಿಂದ ದೇವತಾ ಪ್ರತಿಮೆಯನ್ನು ತಯಾರಿಸಬೇಕು.

೩೧. ಅಥವಾ ಸ್ವಶಕ್ತ್ಯಾನುಸಾರವಾಗಿ ಮರದ ಪ್ರತಿಮೆಯನ್ನಾದರೂ ಮಾಡಿಸಬಹುದು. ಅದರಲ್ಲೂ ಕೃಷ್ಣಾಗರು, ಶ್ರೀಗಂಧ ಈ ವೃಕ್ಷದಿಂದ ಪ್ರತಿಮೆಯನ್ನು ಮಾಡಿಸಿ ಅನಂತರ ಸುವರ್ಣಪಾತ್ರೆಯಲ್ಲೋ ಬೆಳ್ಳಿಯ ಪಾತ್ರೆಯಲ್ಲಿಯೋ ಇರಿಸಿ ಕುಂಕುಮಕೇಸರಿಯಿಂದ ಲೇಪಿಸಬೇಕು.

ಆನ್ಯೈರಾಲೋಹಿತೈಃ ಪಾರ್ಥ ಪುಷ್ಪೈರ್ವಸ್ತ್ರೈಃ ಫಲೈಃ ಶುಭೈಃ ।
ರಾಜನ್ರತ್ನೈಶ್ಚ ವಿವಿಧೈರರ್ಥವಾನ್ಭಕ್ತಿತೋऽರ್ಚಯೇತ್ ॥ ೩೨ ॥

ಯಾವದ್ಧಿ ಶಕ್ಯತೇ ಚಿತ್ತಂ ವಿತ್ತವಾನ್ಭಕ್ತಿಭಾವಿತಃ ।
ತಾವದ್ಧಿ ವರ್ಧತೇ ಪುಣ್ಯಂ ದಾತುಃ ಶತಸಹಸ್ರಿಕಂ ॥ ೩೩ ॥

ಕಿಂಚಿತ್ತಾಮ್ರಮಯೇ ಪಾತ್ರೇ ವಂಶಜೇ ಮೃನ್ಮಯೇऽಪಿ ವಾ ।
ಪೂಜಯಂತಿ ನರಾ ರಕ್ತೈಃ ಪುಷ್ಪೈಃ ಕುಂಕುಮಕೇಸರೈಃ ॥ ೩೪ ॥

ಓಂ ಅಂಗಾರಕಾಯ ನಮಃ ಶಿರಸಿ
ಓಂ ಕುಜಾಯ ನಮಃ ವದನೇ
ಓಂ ಭೌಮಾಯ ನಮಃ ಸ್ಕಂಧಯೋಃ
ಓಂ ಮಂಗಲಾಯ ನಮಃ ಬಾಹ್ವೋಃ
ಓಂ ರಕ್ತಾಯ ನಮಃ ಉರಸಿ
ಓಂ ಲೋಹಿತಾಂಗಾಯ ನಮಃ ಕಟ್ಯಾಂ

---

೩೨. ಅಯ್ಯಾ ಧರ್ಮರಾಜನೇ ! ಮತ್ತು ಇತರ ರಕ್ತಪುಷ್ಪಗಳಿಂದಲೂ, ವಸ್ತ್ರಗಳಿಂದಲೂ, ಶುಭಫಲಗಳಿಂದಲೂ, ಅರ್ಚಿಸಬೇಕು. ವ್ರತಿಯು ಧನಿಕನಾದರೆ ಭಕ್ತಿಪೂರ್ವಕವಾಗಿ ವಿವಿಧ ರತ್ನಗಳಿಂದ ಅರ್ಚಿಸಬಹುದು.

೩೩. ಧನವಂತನು ಭಕ್ತಿಯುಕ್ತವಾಗಿ ಉದಾರವಾದ ಮನಸ್ಸನ್ನು ಮಾಡಿ ಎಷ್ಟೆಷ್ಟು ಹೆಚ್ಚಾಗಿ ಪೂಜಿಸುವನೋ ಅಷ್ಟು ಶತಸಹಸ್ರ ಸಂಖ್ಯೆಯಲ್ಲಿ ಆ ವ್ರತಿಗೆ ಪುಣ್ಯಫಲವು ವೃದ್ಧಿಯಾಗುವುದು.

೩೪. ಬಡವರು ತಾಮ್ರದ ಪಾತ್ರೆಯಲ್ಲೋ ಅಥವಾ ಬಿದಿರಿನ ಕುಕ್ಕೆ, ಮಣ್ಣು, ಎಲೆ ಇವುಗಳಿಂದ ಮಾಡಿದ। ಪಾತ್ರೆಯಲ್ಲಿ ದೇವರನ್ನಿರಿಸಿ ರಕ್ತಪುಷ್ಪ, ಕುಂಕುಮಕೇಸರಿ ಇವುಗಳಿಂದ ಪೂಜಿಸುವರು. ಓಂ ಅಂಗಾರಕಾಯ ನಮಃ ಎಂದು ದೇವರ ಶಿರಸ್ಸಿನಲ್ಲಿ ಪೂಜಿಸಬೇಕು. ಓಂ ಕುಜಾಯ ನಮಃ ಎಂದು ಮುಖದಲ್ಲಿಯೂ, ಓಂ ಭೌಮಾಯ ನಮಃ ಎಂದು ಸ್ಕಂಧಗಳಲ್ಲೂ ಓಂ ಮಂಗಲಾಯ ನಮಃ ಎಂದು ತೋಳುಗಳಲ್ಲಿಯೂ ಓಂ ರಕ್ತಾಯ ನಮಃ ಎಂದು ಎದೆಯಲ್ಲಿಯೂ ಓಂ ಲೋಹಿತಾಂಗಾಯ ನಮಃ ಎಂದು ಸೊಂಟದಲ್ಲಿಯೂ ಓಂ

ಓಂ ಆರಾಯ ನಮಃ ಜಂಘಯೋಃ
ಓಂ ಮಹೀಧರಾಯ ನಮಃ ಪಾದಯೋಃ
ಏಷಾಷ್ಟ ಪುಷ್ಪಿಕಾ

ಪುರುಷಾಕೃತಿಂ ಕೃತಃ ಪಾತ್ರೇ ಕುಜಂ ಮಂತ್ರೈಃ ಸಮರ್ಚಯೇತ್ ।
ಗುಗ್ಗುಲಂ ಘೃತಸಂಯುಕ್ತಂ ಕೃಷ್ಣಾಗರುಸಮನ್ವಿತಂ ।
ಧೂಪಂ ಸದ್ರವ್ಯಜಂ ವಾಪಿ ದದ್ಯಾತ್ತತ್ರ ಸಮಾಧಿನಾ ॥ ೩೫ ॥

ಹೋಮಂ ಕುರ್ವೀತ ಪೂರ್ವೋಕ್ತೈರ್ಮಂತ್ರೈರ್ಮಂಗಲ ಸಂಜ್ಞಿತೈಃ ।
ಏವಂ ಪ್ರಣಮ್ಯ ದೇವೇಶಂ ಬ್ರಾಹ್ಮಣಾಯ ನಿವೇದಯೇತ್ ॥ ೩೬ ॥

ನಿಷ್ಪಾವಕಂ ಭೋಜನಂ ವಾ ದದ್ಯಾಚ್ಛಕ್ತ್ಯಾ ಸದಕ್ಷಿಣಂ ।
ವಿತ್ತಶಾಠ್ಯಂ ಹಿ ಕುರ್ವಾಣೋ ನ ಮುಖ್ಯಫಲಭಾಗ್ಭವೇತ್ ॥ ೩೭ ॥

---

ಆರಾಯ ನಮಃ ಎಂದು ಮೊಣಕಾಲುಗಳಲ್ಲಿಯೂ ಓಂ ಮಹೀಧರಾಯ ನಮಃ ಎಂದು ಕಾಲುಗಳಲ್ಲಿಯೂ ಈ ಎಂಟು ನಾಮಗಳಿಂದ ಅಂಗಗಳನ್ನು ಪೂಜೆ ಮಾಡತಕ್ಕದ್ದು.

೩೫. ಪುರಾಷಾಕಾರವಾಗಿ ನಿರ್ಮಿಸಿದ ಅಂಗಾರಕನ ವಿಗ್ರಹವನ್ನು ಪಾತ್ರೆಯಲ್ಲಿಟ್ಟು ಈ ಮಂತ್ರಪೂರ್ವಕವಾಗಿ ಅರ್ಚಿಸಿ ಅನಂತರ ಘೃತಯುಕ್ತವಾದ ಕೃಷ್ಣಾಗರು, ಗುಗ್ಗುಲ ಈ ಧೂಪಗಳನ್ನು ಏಕಾಗ್ರತೆಯಿಂದ ಸಮರ್ಪಿಸಬೇಕು.

೩೬. ಪೂರ್ವೋಕ್ತವಾದ ಅಂಗಾರಕ ಗ್ರಹವಾಚಕಗಳಾದ ನಾಮಮಂತ್ರಗಳಿಂದ ಹೋಮಮಾಡಿ ಅನಂತರ ಆ ದೇವೇಶನನ್ನು ನಮಸ್ಕರಿಸಿ ಆ ಪ್ರತಿಮೆಯನ್ನು ಬ್ರಾಹ್ಮಣನಿಗೆ ಅರ್ಪಿಸಬೇಕು.

೩೭. ಮತ್ತು ಸಾಧ್ಯವಾದರೆ ಕುಜಗ್ರಹಕ್ಕೆ ಉಕ್ತವಾದ ಧಾನ್ಯವನ್ನು ದಾನಮಾಡಿ ದಕ್ಷಿಣೆಕೊಟ್ಟು ಭೋಜನ ಮಾಡಿಸಬೇಕು. ಧನಾಶಾಯುಕ್ತನಾಗಿ ಲೋಭದಿಂದ ವಿಧಿವತ್ತಾಗಿ ಈ ವ್ರತವನ್ನು ಮಾಡದಿರುವವನು ಇದರ ಮುಖ್ಯ ಫಲವನ್ನು ಹೊಂದಲಾರನು.

**ಪಶ್ಚಾದ್ಭುಂಜೀತ ಮೌನೇನ ಭೂಮಿಂ ಕೃತ್ವಾ ತು ಭಾಜನಂ ।**
**ಮಂತ್ರೇಣಾನೇನ ಚಾಲಭ್ಯ ತನ್ನಿಬೋಧ ಮಯೋದಿತಂ ॥ ೩೮ ॥**

**ಸರ್ವೌಷಧಿರಸಾವಾಸೇ ಸರ್ವದಾ ಸರ್ವದಾಯಿನಿ ।**
**ತ್ವತ್ತಲೇ ಭೋಕ್ತುಕಾಮೋಽಹಂ ತದ್ಭುಕ್ತಮಮೃತಂ ಭವೇತ್ ॥ ೩೯ ॥**

**॥ ಯುಧಿಷ್ಠಿರ ಉವಾಚ ॥**

**ಅಂಗಾರಕೇಣ ಸಂಯುಕ್ತಾ ಚತುರ್ಥೀ ನಕ್ತಭೋಜನೈಃ ।**
**ಉಪೋಷ್ಯ ಕತಿಮಾತ್ರಾ ಸಾ ಕಿಮೇಕಾ ವದ ಯಾದವ ॥ ೪೦ ॥**

---

೩೮. ಅನಂತರ ಭೂಮಿಯನ್ನು ಭೋಜನ ಪಾತ್ರೆಯನ್ನಾಗಿ ಮಾಡಿಕೊಂಡು (ನೆಲದ ಮೇಲೆಯೇ ಬಡಿಸಿಕೊಂಡು) ಮೌನವಾಗಿ ಭೋಜನ ಮಾಡಬೇಕು. ಆಗ ಈ ಮುಂದೆ ಹೇಳುವ ಮಂತ್ರದಿಂದ ಭೂಮಿಯನ್ನು ಸ್ಪರ್ಶ ಮಾಡಬೇಕು. ಆ ಮಂತ್ರವನ್ನು ಹೇಳುತ್ತೇನೆ ಕೇಳು.

೩೯. " ಸರ್ವೌಷಧಿರಸಾವಾಸೇ ಸರ್ವದಾ ಸರ್ವದಾಯಿನೀ ।
ತ್ವತ್ತಲೇ ಭೋಕ್ತುಕಾಮೋಹಂ ತದ್ಭುಕ್ತಮಮೃತಂ ಭವೇತ್ ॥

ಎಲೌ ಭೂದೇವಿಯೇ, ನೀನು ಸರ್ವ ಓಷಧಿಗಳಲ್ಲಿ ಇರುವ ರಸಗಳಿಗೂ ಆವಾಸ ಸ್ಥಾನ. ಮತ್ತು ಎಲ್ಲಾ ಕಾಲದಲ್ಲೂ ಎಲ್ಲವನ್ನೂ ಕೊಡುವವಳು. ಅಂತಹ ಭೂತಳದಲ್ಲಿ ನಾನು ಭೋಜನಮಾಡಲು ಅಭಿಲಾಷೆಯುಳ್ಳವನಾಗಿರುತ್ತೇನೆ. ನಾನು ಭುಂಜಿಸಿದ ಪದಾರ್ಥವು ಅಮೃತತುಲ್ಯವಾಗಲಿ'' ಎಂಬುದು ಈ ಮಂತ್ರದ ಅರ್ಥ.

೪೦. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಯದುಕುಲೋತ್ಪನ್ನನೇ! ಉಪವಾಸ ವ್ರತದಿಂದಿದ್ದು ನಕ್ತಭೋಜನ ಪೂರ್ವಕವಾಗಿ ಕುಜವಾರಯುತವಾದ ಈ ಚತುರ್ಥೀವ್ರತವನ್ನು ಎಷ್ಟುಸಲ ಮಾಡಬೇಕು ? ಅಥವಾ ಒಂದಾವೃತ್ತಿ ಮಾಡಿದರೆ ಸಾಕೇ ? ಈ ವಿಷಯವನ್ನು ಹೇಳು ಎಂದನು.

॥ ಶ್ರೀ ಕೃಷ್ಣ ಉವಾಚ ॥

**ಚತುರ್ಥೀ ಚ ಚತುರ್ಥೀ ಚ ಯದಾಂಗಾರಕಸಂಯುತಾ ।**
**ಉಪೋಷ್ಯ ತತ್ರ ತತ್ರೈವ ಪ್ರದೇಯೋ ವಿಧಿನಾ ಕುಜಃ ।**
**ವಿತ್ತಹೀನಾಃ ಪ್ರತೀಕ್ಷಂತೇ ಯಾವದ್ವಿತ್ತೋಪಲಂಭನಂ ॥ ೪೧ ॥**

**ಚತುರ್ಥ್ಯಾಂ ಚ ಚ ತುರ್ಥ್ಯಾಂಚ ವಿಧಾನಂ ಶೃಣು ಪಾಂಡವ ।**
**ಸೌವರ್ಣಪಾತ್ರೇ ಕೃತ್ವಾ ತು ಅಂಗಾರಕಮಕೃತ್ರಿಮಂ ।**
**ದಶಸೌವರ್ಣಿಕಂ ಮುಖ್ಯಂ ದಶಾರ್ಧಾರ್ಧಮಥಾಪಿ ವಾ ॥ ೪೨ ॥**

**ವಿಂಶತ್ಪಲಾನಿ ಪಾತ್ರಾಣಿ ವಿಂಶತ್ಯರ್ಧಪಲಾನಿ ಚ ।**
**ವಿಂಶತ್ಕರ್ಷಾಣಿ ವಾ ಪಾರ್ಥ ಅತೋ ನ್ಯೂನಂ ನ ಕಾರಯೇತ್ ॥ ೪೩ ॥**

---

೪೧. ಶ್ರೀ ಕೃಷ್ಣನು ಹೇಳುತ್ತಾನೆ—ಧನವಿಲ್ಲದೆ ದರಿದ್ರರಾಗಿರುವವರು. ಧನಪ್ರಾಪ್ತಿಯಾಗುವವರೆಗೆ ಯಾವಾಗ ಯಾವಾಗ ಚತುರ್ಥೀತಿಥಿಯು ಮಂಗಳ ವಾರ ಸಹಿತವಾಗಿ ಬರುವುದೋ ಆಗ ಆ ದಿನದಲ್ಲಿ ಉಪವಾಸಮಾಡಿ ಅಂಗಾರಕ ಗ್ರಹವನ್ನು ವಿಧ್ಯುಕ್ತರೀತಿಯಲ್ಲಿ ಪೂಜಿಸಿ ದಾನಮಾಡಬಹುದು.

೪೨. ಅಯ್ಯಾ ಕುಂತೀಪುತ್ರನೇ ! ಆ ಪ್ರತಿಚತುರ್ಥೀ ತಿಥಿಯಲ್ಲೂ ಪೂಜಾನುಷ್ಠಾನ ಕ್ರಮವನ್ನು ಹೇಳುತ್ತೇನೆ ಶ್ರವಣಮಾಡು. ಕೃತ್ರಿಮವಿಲ್ಲದೆ ನಿಷ್ಕಲ್ಮಷವಾದ ಮನಸ್ಸಿನಿಂದ ಅಂಗಾರಕ ಪ್ರತಿಮೆಯನ್ನು ಸುವರ್ಣಪಾತ್ರೆಯಲ್ಲಿ ಇರಿಸಿ ಪೂಜಿಸಬೇಕು. ಆ ಸುವರ್ಣ ಪ್ರತಿಮೆಯು ಅನುಕೂಲ ಚನ್ನಾಗಿದ್ದರೆ ಹತ್ತು ಹಣ ತೂಕವುಳ್ಳದ್ದಾಗಿರಬೇಕು. ಅಷ್ಟಕ್ಕೆ ಸಾಧ್ಯವಿಲ್ಲದಿದ್ದರೆ ಅವರರ್ಧ ವಾದ ಐದು ಹಣ ಸುವರ್ಣ ತೂಕವುಳ್ಳದ್ದಾಗಿರಬಹುದು. ಅದೂ ಸಾಧ್ಯವಿಲ್ಲ ದಿದ್ದರೆ ಕೊನೆಯಪಕ್ಷ ಅದರರ್ಧ ಎಂದರೆ ಎರಡೂವರೆ ಹಣ ತೂಕದ್ದಾದರೂ ಆಗಬೇಕು.

೪೩. ಅಯ್ಯಾ ಕುಂತೀಪುತ್ರನೇ ! ಅಂಗಾರಕ ಪ್ರತಿಮೆಯನ್ನು ಇಡುವ ಸುವರ್ಣ ಪಾತ್ರೆಯು ಇಪ್ಪತ್ತುಪಲಂ ತೂಕವುಳ್ಳದೋ ಅಥವಾ ಅವರ ಅರ್ಧ ಎಂದರೆ ಹತ್ತುಪಲಂ ತೂಕವುಳ್ಳದೋ ಅಷ್ಟೂ ಇಲ್ಲವಾದರೆ ಇಪ್ಪತ್ತುಕರ್ಷ ತೂಕ ವುಳ್ಳದ್ದೋ ಆಗಿರಬೇಕು. ಇದಕ್ಕೂ ಕಡಿಮೆತೂಕದ ಪಾತ್ರೆಯನ್ನು ಮಾಡಿಸ ಬಾರದು.

ಪ್ರತಿಷ್ಠಾಪ್ಯ ಕುಜಂ ಮಂತ್ರೈರ್ವಸ್ತ್ರೈಸ್ಸಂಪರಿವೇಷ್ಟಿತಂ ।
ಪುಷ್ಪಮಂಡಪಿಕಾಂ ಕೃತ್ವಾ ದಿವ್ಯಂ ಸದ್ಧೂಪಧೂಪಿತಾಂ ॥ ೪೪ ॥

ತತ್ರ ಸಂಪೂಜಯೇದ್ದೇವಂ ಪೂರ್ವಮಂತ್ರೈರ್ವಿಧಾನತಃ ।
ಭಕ್ತ್ಯಾ ಭೋಜ್ಯೈರನೇಕೈಶ್ಚ ಫಲೈರತ್ನೈಶ್ಚ ಸಾಗರೈಃ ॥ ೪೫ ॥

ವಸ್ತ್ರೈಃ ಪ್ರಾವರಣೈರ್ಯಾನೈಃ ಶಯ್ಯೋಪಾನದ್ವರಾಸನೈಃ ।
ಛತ್ರೈಃ ಪುಷ್ಪೈರ್ಗಂಧವರೈಃ ಶಕ್ತ್ಯಾ ವಿತ್ತಾನುಸಾರತಃ ॥ ೪೬ ॥

ತತೋ ವಿಪ್ರಂ ಪರೀಕ್ಷೇತ ವ್ರತಶೌಚಸಮನ್ವಿತಂ ।
ವೇದಾಧ್ಯಯನಸಂಪನ್ನಂ ಶಾಸ್ತ್ರಜ್ಞಂ ನಿರಹಂಕೃತಿಂ ॥ ೪೭ ॥

ಅಂಗಾರಕವಿಧಿಂ ಯಶ್ಚ ಸಮ್ಯಗ್ಜಾನಾತಿ ಶಾಸ್ತ್ರತಃ ।
ಆಹ್ವಾನವಿಧಿಮಂತ್ರಾಶ್ಚ ಹೋಮಾರ್ಚನವಿಸರ್ಜನಂ ॥ ೪೮ ॥

---

೪೪. ಆ ಪಾತ್ರೆಯಲ್ಲಿ ಮಂತ್ರಪೂರ್ವಕವಾಗಿ ಅಂಗಾರಕ ಪ್ರತಿಮೆಯನ್ನು ಪ್ರತಿಷ್ಠಿಸಿ ವಸ್ತ್ರಗಳನ್ನು ಹೊದ್ದಿಸಬೇಕು. ಮತ್ತು ದಿವ್ಯವಾದ ಪುಷ್ಪಮಂಟಪವನ್ನು ರಚಿಸಿ ಅಲ್ಲಿ ಉತ್ತಮವಾದ ಧೂಪವನ್ನು ಹತ್ತಿಸಬೇಕು.

೪೫. ಆ ಮಂಟಪದಲ್ಲಿ ಪೂರ್ವೋಕ್ತನಾಮ ಮಂತ್ರಗಳಿಂದ ಶಾಸ್ತ್ರಪ್ರಕಾರವಾಗಿ ಅಂಗಾರಕನನ್ನು ಪೂಜಿಸಿ ಭಕ್ತಿಯಿಂದ ಅನೇಕವಿಧವಾದ ಭೋಜ್ಯ, ಫಲ, ಇವುಗಳನ್ನು ನಿವೇದಿಸಿ ರತ್ನಾದಿಗಳನ್ನು ಸಮರ್ಪಿಸಬೇಕು.

೪೬. ಮತ್ತು ತನ್ನ ದ್ರವ್ಯಸಂಪತ್ತಿಗನುಗುಣವಾಗಿ ಹೊದಿಸುವ ವಸ್ತ್ರ ವಾಹನ, ಹಾಸಿಗೆ, ಪಾದುಕೆ, ಉತ್ತಮಪೀಠ, ಛತ್ರಿ, ಪುಷ್ಪ, ಶ್ರೇಷ್ಠಗಂಧ ಇವುಗಳಿಂದ ಶಕ್ತ್ಯನುಸಾರವಾಗಿ ಅರ್ಚಿಸಬೇಕು.

೪೭–೪೮. ಅನಂತರ ವ್ರತನಿಯಮಪರನೂ, ಬಾಹ್ಯಾಭ್ಯಂತರ ಪರಿಶುದ್ಧನೂ, ವೇದಾಧ್ಯಯನಸಂಪನ್ನನೂ, ಶಾಸ್ತ್ರಜ್ಞನೂ, ನಿರಹಂಕಾರಿಯೂ, ಶಾಸ್ತ್ರವನ್ನು ಓದಿ ಅಂಗಾರಕ ಗ್ರಹಾರಾಧನ ವಿಧಿಯನ್ನು ಯಥಾ ಶಾಸ್ತ್ರವಾಗಿ ಚೆನ್ನಾಗಿ ತಿಳಿದವನೂ ಅಂಗಾರಕ ಪ್ರಾಣಪ್ರತಿಷ್ಠಾಪನ, ಹೋಮ, ಅರ್ಚನೆ, ದೇವತಾವಿಸರ್ಜನೆ, ಇವುಗಳ ವಿಧಾನವನ್ನು ತಿಳಿದವನೂ ಆಗಿರುವ ಬ್ರಾಹ್ಮಣನನ್ನು ಹುಡುಕಿ ಆಹ್ವಾನಮಾಡಬೇಕು.

ಸಂಪೂಜ್ಯ ವಸ್ತ್ರಾಭರಣೈಸ್ತಸ್ಮೈ ದೇಯಃ ಕುಜೋತ್ತಮಃ ।
ಯಥಾ ಶ್ರುತೋ ಯಥಾ ಜ್ಞಾತಸ್ತಥಾ ಭಕ್ತ್ಯಾ ಹ್ಯುಪೋಷಿತಃ ॥ ೪೯ ॥

ವಿತ್ತಸಾರೇಣ ತುಷ್ಯ ತ್ವಂ ಮಮ ಭೌಮ ಭವೋದ್ಭವ ।
ಪಠನ್ನಿಮಂ ಮಂತ್ರವರಂ ಬ್ರಾಹ್ಮಣಾಯ ನಿವೇದಯೇತ್ ।
ಬ್ರಾಹ್ಮಣಶ್ಚಾಪ್ಯಸೌ ವಿದ್ವಾನ್ಮಂತ್ರಮೇತಮುದಾಹರೇತ್ ॥ ೫೦ ॥

ಮಂಗಲಂ ಪ್ರತಿಗೃಹ್ಣಾಮಿ ಉಭಯೋರಸ್ತು ಮಂಗಲಂ ।
ದಾತೃ ಪ್ರತಿಗ್ರಾಹಕಯೋಃ ಕ್ಷೇಮಾರೋಗ್ಯಂ ಭವತ್ವಿತಿ ॥ ೫೧ ॥

ಇತಿ ಪ್ರತಿಗ್ರಾಹಕ ಮಂತ್ರಃ

---

೪೯. ಅನಂತರ ಆ ಬ್ರಾಹ್ಮಣನಿಗೆ ವಸ್ತ್ರ ಮತ್ತು ಆಭರಣಾದಿಗಳನ್ನು ಸಮರ್ಪಿಸಿ ಪೂಜೆಮಾಡಿ ತಾನು ಕೇಳಿದ್ದಕ್ಕೂ ತಿಳಿದುಕೊಂಡುದ್ದಕ್ಕೂ ವಿರೋಧ ವಿಲ್ಲದೆ ಅದೇ ರೀತಿಯಾಗಿ ಉಪವಾಸಮಾಡಿ ಭಕ್ತಿಯಿಂದ ಆ ಕುಜಪ್ರತಿಮೆ ಯನ್ನು ದಾನಮಾಡಬೇಕು.

೫೦. ಹೀಗೆ ದಾನಮಾಡುವಾಗ “ ವಿತ್ತ ಸಾರೇಣ ತುಷ್ಯತ್ವಂ ಮಮ ಭೌಮ ಭವೋದ್ಭವಃ ” ಎಂದು ಮಂತ್ರವನ್ನು ಹೇಳಿ ಬ್ರಾಹ್ಮಣನಿಗೆ ಅರ್ಪಿಸ ಬೇಕು. (ಸ್ವಾಮಿ ಅಂಗಾರಕನೇ ! ನನ್ನ ವಿತ್ತಸಾರವಾದ ಈ ದಾನದಿಂದ ಈಶ್ವರೋತ್ಪನ್ನನಾದ ನೀನು ನನಗೆ ಪ್ರೀತನಾಗು ಎಂಬುದು ದಾನಮಂತ್ರದ ಅರ್ಥ). ಅನಂತರ ಪ್ರಾಜ್ಞನಾದ ಪ್ರತಿಗ್ರಹೀತೃ ಬ್ರಾಹ್ಮಣನು ಈ ಮುಂದೆ ಹೇಳುವ ಪ್ರತಿವಚನ ಮಂತ್ರವನ್ನು ಪಠಿಸಬೇಕು.

೫೧. ಮಂಗಲಂ ಪ್ರತಿಗೃಹ್ಣಾಮಿ ಉಭಯೋರಥ್ತು ಮಂಗಲಂ ।
ಧಾತೃಪ್ರತಿಗ್ರಾಹಕಯೋಃ ಕ್ಷೇಮಾರೋಗ್ಯಂ ಭವತ್ವಿತಿ ॥

ಇದು ಪ್ರತಿಗೃಹೀತೃವು ಹೇಳುವ ಮಂತ್ರ. (ಮಂಗಲಗ್ರಹ ಪ್ರತಿಮೆಯನ್ನು ನಾನು ಪ್ರತಿಗ್ರಹಿಸುವೆನು. ಇದರಿಂದ ದಾತೃ, ಪ್ರತಿಗೃಹೀತೃ, ಇಬ್ಬರಿಗೂ, ಮಂಗಲ, ಕ್ಷೇಮ, ಆರೋಗ್ಯ ಈ ಫಲಗಳು ಲಭಿಸಲೆಂದು ಪ್ರಾರ್ಥಿಸುತ್ತೇನೆ ಎಂದು ಈ ಮಂತ್ರಾರ್ಥ).

ಏವಂ ಚತುರ್ಥೀ ಸಂಪ್ರಾಪ್ತೇ ಧನಪ್ರಾಪ್ತಿರ್ನ ವಿದ್ಯತೇ ।
ತದಾ ಮಂತ್ರಾರ್ಚನಪರಃ ಪುನರೇತಾಂ ಸಮಾಚರೇತ್ ॥ ೫೨ ॥

ಆಶರೀರನಿಪಾತಾದ್ವಾ ಯಥೋಕ್ತಫಲಭಾಗ್ಭವೇತ್ ।
ಅಲ್ಪವಿತ್ತೋ ಯಥಾ ಶಕ್ತ್ಯಾ ಸರ್ವಮೇತತ್ಸಮಾಚರೇತ್ ॥ ೫೩ ॥

ಅಂಗಾರಕೇಣ ಸಂಯುಕ್ತಾಂ ವಾಸ್ರಾಂ ತಿಲಶರಾವಿಕಾಂ ।
ಅನೇನ ವಿಧಿನಾ ದತ್ವಾ ಯಥೋಕ್ತಫಲಭಾಗ್ಭವೇತ್ ॥ ೫೪ ॥

ಏವಂ ಚತುರ್ಥೀಂ ಯೋ ಭಕ್ತ್ಯಾ ಕುಜಯುಕ್ತಾಮುಪೋಷಯೇತ್ ।
ತಸ್ಯ ಪುಣ್ಯಫಲಂ ಯಚ್ಚ ತನ್ನಿಬೋಧ ಯುಧಿಷ್ಠಿರ ॥ ೫೫ ॥

---

೫೨. ಈರೀತಿ ಮಂಗಲವಾರಯುಕ್ತ ಚತುರ್ಥಿವ್ರತವನ್ನು ಒಂದುಸಲ ಆಚರಿಸಿದರೂ ಫಲ ಲಭಿಸುವುದು. ಧನಾರ್ಥಿಗೆ ಒಡನೆ ಧನಪ್ರಾಪ್ತಿಯಾಗದಿರುವ ಸಂದರ್ಭದಲ್ಲಿ ಪುನಃ ಮಂಗಳವಾರ ಸಹಿತವಾದ ಚತುರ್ಥೀ ತಿಥಿ ಒದಗಿವಾಗ ಮಂತ್ರಪೂರ್ವಕವಾಗಿ ಈ ವ್ರತವನ್ನಾಚರಿಸಬೇಕು.

೫೩. ಕೊನೆಗೆ ಆಮರಣಾಂತವಾಗಿ ಈ ವ್ರತವನ್ನಾಚರಿಸಿದರೆ ಇದರ ಸಂಪೂರ್ಣ ಫಲವು ಲಭಿಸುವುದು. ಅಲ್ಪ ಧನವುಳ್ಳವನು ತನ್ನ ಶಕ್ತ್ಯಾನುಸಾರ ವಾಗಿ ಈ ವ್ರತಾನುಷ್ಠಾನ ಕ್ರಮವನ್ನನುಸರಿಸಿ ಎಲ್ಲವನ್ನೂ ಆಚರಿಸಬೇಕು.

೫೪. ಅಂತಹ ದರಿದ್ರನು ಅಂಗಾರಕ ಪ್ರತಿಮೆಯನ್ನು ತಿಲಪೂರಿತವಾದ ಶರಾವದಲ್ಲಿ ಇಟ್ಟು ಪೂರ್ವೋಕ್ತ ಪ್ರಕಾರವಾಗಿ ದಾನಮಾಡಿದರೆ ಅಂತಹ ವನಿಗೂ ಸಹ ಯಥೋಕ್ತ ಫಲವು ಲಭಿಸುವುದು.

೫೫. ಅಯ್ಯಾ ಯುಧಿಷ್ಠಿರನೇ ಕುಜವಾರಯುಕ್ತ ಚತುರ್ಥೀ ತಿಥಿಯಲ್ಲಿ ಆಚರಿಸಬೇಕಾದ ಈ ವ್ರತವನ್ನು ಹಿಂದೆ ಹೇಳಿದಂತೆ ಭಕ್ತಿಪೂರ್ವಕವಾಗಿ ಆಚರಿ ಸಿದವನಿಗೆ ಲಭಿಸುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

ಇಹ ಸ್ಥಿತ್ವಾ ಚಿರಂ ಕಾಲಂ ಪುತ್ರಪೌತ್ರಶ್ರಿಯಾ ವೃತಃ ।
ದೇಹಾವಸಾನೇ ದಿವ್ಯಾಂಜಾ ದಿವ್ಯಗಂಧಾನುಲೇಪನಃ ॥ ೫೬ ॥

ದಿವ್ಯನಾರೀಗಣವೃತೋ ವಿಮಾನವರಮಾಸ್ಥಿತಃ ।
ಯಾತಿ ದೇವಪುರಂ ಹೃಷ್ಟೋ ದೇವೈಃ ಸಹಾಭಿನಂದಿತಃ ॥ ೫೭ ॥

ಸ ತತ್ರ ರಮತೇ ಕಾಲಂ ದೇವೈಃ ಸಹ ಸುರೇಶವತ್ ।
ಚತುರ್ಯುಗಾನಿ ಷಟ್‌ತ್ರಿಂಶತ್ತತಃ ಕಾಲಾಂತರೇ ಪುನಃ ॥ ೫೮ ॥

ಇಹ ಚಾಗತ್ಯ ರಾಜಾಸೌ ಕುಲೇ ಮಹತಿ ಜಾಯತೇ ।
ರೂಪವಾನ್ಧನವಾನ್ವಾಗ್ಮೀ ದಾನಶೀಲೋ ದಯಾಪರಃ ॥ ೫೯ ॥

ನಾರೀ ಚ ರೂಪಸಂಪನ್ನಾ ಸುಭಗಾ ಜಾತಿಸಂಯುತಾ ।
ಪುತ್ರಪೌತ್ರೈಃ ಪರಿವೃತಾ ಭರ್ತ್ರಾ ಸಹ ರಮೇಚ್ಚಿರಂ ॥ ೬೦ ॥

---

೫೬. ಈ ವ್ರತಾನುಷ್ಠಾನ ಮಾಡಿದವನು ಈ ಲೋಕದಲ್ಲಿ ಪುತ್ರ, ಪೌತ್ರ, ಸಂಪತ್ತು ಇವುಗಳಿಂದ ಸಮೃದ್ಧನಾಗಿ ಬಹುಕಾಲ ಸುಖವಾಗಿ ಬಾಳುತ್ತಾನೆ.

೫೭. ದೇಹಾವಸಾನದಲ್ಲಿ ದಿವ್ಯತೇಜೋಯುತನಾಗಿಯೂ, ದಿವ್ಯ ಗಂಧಾನುಲಿಪ್ತನಾಗಿಯೂ, ದಿವ್ಯ ನಾರೀವೃಂದ ಪರಿವೃತನಾಗಿಯೂ, ದಿವ್ಯ ವಿಮಾನಾರೂಢನಾಗಿಯೂ, ದೇವತೆಗಳಿಂದ ಅಭಿನಂದಿತನಾಗಿಯೂ, ದೇವತೆಗಳ ಸಂಗಡ ಸಂತೋಷದಿಂದ ದೇವಲೋಕಕ್ಕೆ ಹೋಗುವನು.

೫೮. ಅವನು ಆ ದೇವಲೋಕದಲ್ಲಿ ದೇವತೆಗಳ ಜೊತೆಯಲ್ಲಿ ಇಂದ್ರನಂತೆಯೇ ಚತುರ್ಯುಗಗಳು ಮೂವತ್ತಾರು ಸಾರಿ ಕಳೆಯುವವರೆಗೆ ಸುಖವಾಗಿ ಕ್ರೀಡಿಸುವನು.

೫೯. ಕಾಲಾಂತರದಲ್ಲಿ ಅವನು ಪುನಃ ಈ ಭೂಲೋಕಕ್ಕೆ ಬಂದು ಮಹಾರಾಜ ವಂಶದಲ್ಲಿ ಜನಿಸುವನು. ಆಗ ಅವನು ಸುರೂಪಿಯೂ, ಧನ್ಯನೂ, ಧನವಂತನೂ, ವಾಗ್ಮಿಯೂ, ದಾನಶೀಲನೂ, ದಯಾಳುವೂ ಆಗುತ್ತಾನೆ.

೬೦. ನಾರಿಯು ಈ ವ್ರತವನ್ನಾಚರಿಸಿದರೆ ಸುಂದರಿಯೂ ಸೌಭಾಗ್ಯವತಿಯೂ, ಕುಲೀನಳೂ, ಪುತ್ರ ಪೌತ್ರ ಪರಿವೃತೆಯೂ ಆಗಿ ಬಹುಕಾಲ ಈ ಲೋಕದಲ್ಲಿ ತನ್ನ ಪತಿಯ ಜತೆಯಲ್ಲಿ ಕ್ರೀಡಿಸುವಳು.

ರಮಿತ್ವಾ ಸುಚಿರಂ ಕಾಲಂ ಪುನಃ ಸ್ವರ್ಗಗತಿಂ ಲಭೇತ್ ।
ಏಷ ತೇ ಕಥಿತೋ ರಾಜನ್ ಸರಹಸ್ಯೋ ವಿಧಿಸ್ತಥಾ ।
ದುರ್ಲಭೋ ಯೋ ಮನುಷ್ಯಾಣಾಂ ದೇವಾನಾಂ ಭದ್ರಮಸ್ತು ತೇ॥ ೬೧ ॥

ಅಂಗಾರಕೇಣ ಸಹಿತಾ ತು ಸಿತಾ ಚತುರ್ಥೀ ।
ಶಸ್ತಾ ಸುರಾರ್ಚನವಿಧೌ ಪಿತೃಪಿಂಡದಾನೇ ।
ತಸ್ಯಾಂ ಕುಜಂ ಕುರುಕುಲೋದ್ವಹ ಯೇಽರ್ಚಯಂತಿ ।
ಭೂಮೌ ಭವಂತಿ ಬಹುಮಂಗಲಭಾಜನಾಸ್ತೇ ॥ ೬೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಚತುರ್ಥೀವ್ರತೇ ಅಂಗಾರಕ
ಚತುರ್ಥೀ ವ್ರತವರ್ಣನಂ ನಾಮೈಕತ್ರಿಂಶತ್ತಮೋಽಧ್ಯಾಯಃ.

---

೬೧. ಈರೀತಿ ಬಹುಕಾಲ ಐಹಿಕ ಸುಖವನ್ನನುಭವಿಸಿ ಪುನಃ ಸ್ವರ್ಗವನ್ನು ಪಡೆಯುವಳು. ಅಯ್ಯಾ ರಾಜಾಧಿರಾಜನೇ ! ಮನುಷ್ಯರಿಗೂ, ದೇವತೆಗಳಿಗೂ, ದುರ್ಲಭವಾದ ಈ ವ್ರತ ವಿಧಿಯನ್ನು ಸಾಂಗವಾಗಿ ನಾನು ನಿನಗೆ ಹೇಳಿದೆನು. ಇನ್ನು ನಿನಗೆ ಮಂಗಳವಾಗಲಿ.

೬೨. ಅಯ್ಯಾ ಕುರುಕುಲೋತ್ತಂಸನಾದ ಯುಧಿಷ್ಠಿರನೇ ! ಮಂಗಳವಾರದಿಂದ ಕೂಡಿದ ಶುಕ್ಲಪಕ್ಷ ಚತುರ್ಥಿಯು ದೇವತಾರ್ಚನೆ, ಪಿತೃಪಿಂಡಪ್ರದಾನ ಇತ್ಯಾದಿ ಕರ್ಮಗಳಿಗೆ ಪ್ರಶಸ್ತವಾದುದು. ಅದರಲ್ಲೂ ಮಂತ್ರೋಕ್ತ ವಿಧಿನಿಯಮದಿಂದ ಮಾಡಿದರೆ ಅತಿಪ್ರಶಸ್ತವೆನಿಸುವುದು. ಈ ತಿಥಿಯಲ್ಲಿ ಯಾರು ಅಂಗಾರಕ ಗ್ರಹಾರಾಧನೆಯನ್ನು ಮಾಡುವರೋ ಅಂತಹ ಮಹಾತ್ಮರು ಭೂಲೋಕದಲ್ಲಿ ಸದ್ವಿನಯರೂ ಪ್ರೀತಿಪಾತ್ರರೂ ಆಗಿ ಅನೇಕ ಮಂಗಳಗಳನ್ನು ಹೊಂದುತ್ತಾ ಸ್ವಾಮಿಯ ಮನ್ನಣೆಯನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಂಗಾರಕ
ಶುಕ್ಲ ಚತುರ್ಥೀ ವ್ರತ ವರ್ಣನೆ ( ಮಹಾತ್ಮೆ ) ಯೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಾತ್ರಿಂಶತ್ತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯನ್ನ ಸಿದ್ಧ್ಯಂತಿ ಕರ್ಮಾಣಿ ಪ್ರಾರಬ್ಧಾನಿ ನರೋತ್ತಮೈಃ ।
ತತ್ಕೇನ ಕಾರಣೇನೈತತ್ಪೃಷ್ಟೋ ಮೇ ಬ್ರೂಹಿ ಮಾಧವ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ವಿನಾಯಕೋಽರ್ಥ ಸಿದ್ಧ್ಯರ್ಥಂ ಲೋಕಸ್ಯ ವಿನಿಯೋಜಿತಃ ।
ಗಣಾನಾಮಾಧಿಪತ್ಯೇ ಚ ರುದ್ರೇಣ ಬ್ರಹ್ಮಣಾ ತಥಾ ॥ ೨ ॥

---

### ಮೂವತ್ತೆರಡನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಕೃಷ್ಣನೇ ! ಮಹಾಶಕ್ತಿ ಸಂಪನ್ನರಾದ ಉತ್ತಮಜನರಿಗೂ ಲೋಕದಲ್ಲಿ ಪ್ರಾರಬ್ಧಕಾರ್ಯಸಿದ್ಧಿಯು ಆಗದೇ ಇರುವ ಸಂಭವ ಎಷ್ಟೋ ಇದೆಯಷ್ಟೆ ಅದು ಯಾವ ಪ್ರತಿಬಂಧಕದಿಂದ ಹಾಗಾಗುವುದೆಂಬುದನ್ನು ಹೇಳು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಲೋಕದಲ್ಲಿ ಶ್ರೀ ವರಸಿದ್ಧಿವಿನಾಯಕನನ್ನು ಜನರ ಕಾರ್ಯಸಿದ್ಧಿಕಾರಣನನ್ನಾಗಿಯೂ, ಪ್ರಮಥಗಣಗಳಿಗೆ ಅಧಿಪತಿಯನ್ನಾಗಿಯೂ ಈಶ್ವರ ಮತ್ತು ಬ್ರಹ್ಮ ಇವರು ನಿಯಮಿಸಿರುತ್ತಾರೆ. ಅವನಿಗೆ ಕೋಪವುಂಟಾದರೆ ಕಾರ್ಯಸಿದ್ಧಿಯಾಗುವುದಿಲ್ಲ.

ತೇನೋಪಸೃಷ್ಟೋ ಯಸ್ತಸ್ಯ ಲಕ್ಷಣಾನಿ ನಿಬೋಧತ ।
ಸ್ವಪ್ನೇಽವಗಾಹತೇಽತ್ಯರ್ಥಂ ಜಲಂ ಮುಂಡಾಂಶ್ಚ ಪಶ್ಯತಿ ॥ ೩ ॥

ಕಾಷಾಯವಾಸಸಶ್ಚೈವ ಕ್ರವ್ಯಾದಾಂಶ್ಚಾಧಿರೋಹತಿ ।
ಅಂತ್ಯಜೈರ್ಗರ್ಧಭೈರುಷ್ಟ್ರೈಃ ಸಹೈಕತ್ರಾವತಿಷ್ಠತೇ ॥ ೪ ॥

ವ್ರಜಮಾನಸ್ತಥಾತ್ಮಾನಂ ಮನ್ಯತೇ ತು ಗತಂ ಪರೈಃ ।
ವಿಮನಾ ವಿಫಲಾರಂಭಃ ಸಸೀದತ್ಯನಿಮಿತ್ತತಃ ॥ ೫ ॥

ಪಾತಕೀ ವಿಹೀನಚ್ಛಾಯೋ ಮ್ಲಾನತ್ವಹೇತುಲಕ್ಷಣಃ ।
ಕರಭಾರೂಢಮಾತ್ಮಾನಂ ಮಹಿಷಗಂಖರಗಂ ತಥಾ ॥ ೬ ॥

---

೩. ಆ ವಿನಾಯಕನ ಕೋಪರೂಪ ಪ್ರತಿಬಂಧಕಗಳೊದಗಿವೆ ಎಂಬುವನ್ನು ತಿಳಿದುಕೊಳ್ಳುವುದಕ್ಕೆ ಒದಗುವ ಸೂಚನೆಗಳನ್ನು ಹೇಳುತ್ತೇನೆ ಶ್ರವಣ ಮಾಡು. ಗಣೇಶನಿಂದ ಕಾರ್ಯಸಿದ್ಧಿಗೆ ಪ್ರತಿಬಂಧಕ ಹೊಂದಿದ ಪುರುಷನು ಅಗಾಧಜಲದಲ್ಲಿ ತಾನು ಮುಳುಗಿದ ಹಾಗೆ ಸ್ವಪ್ನ ಕಾಣುವನು ಅಥವಾ ಸ್ವಪ್ನದಲ್ಲಿ ಸನ್ಯಾಸಿಯ ದರ್ಶನವನ್ನು ಮಾಡುವನು.

೪. ಮತ್ತು ಆ ಸನ್ಯಾಸಿಯು ಸ್ವಪ್ನದಲ್ಲಿ ಕಾಷಾಯವಸ್ತ್ರಧಾರಿಯಾಗಿ ಕಾಣಿಸಿಕೊಳ್ಳುವನು. ತಾನು ಮಾಂಸಾಹಾರಿಯಾದ ಕ್ರೂರ ಮೃಗಾರೂಢನಾಗಿದ್ದೇನೆಯಲ್ಲಾ ಎಂದು ನೋಡುತ್ತಾನೆ. ಹಾಗೂ ಅಂತ್ಯಜರಾದ ಚಂಡಾಲರು, ಕತ್ತೆಗಳು, ಒಂಟೆಗಳು, ಇವುಗಳ ಜತೆಯಲ್ಲಿ ತಾನೂ ಸೇರಿ ಒಂದೇ ಕಡೆಯಲ್ಲಿ ಇರುವ ಹಾಗೂ ಸ್ವಪ್ನ ಕಾಣುವನು.

೫. ಮತ್ತು ಜಾಗ್ರತ್ಕಾಲದಲ್ಲಿ ಇತರರು ಹೋಗುತ್ತಿರುವಾಗ ತನ್ನಲ್ಲಿ ಗಮನವಿಲ್ಲವೆಂದೂ, ವಿಕತ್ರಸ್ಥಿತಿ ಇರುವ ಕಾಲದಲ್ಲಿ ತಾನು ಹೋಗುತ್ತಿದ್ದೇನೆ ಎಂದೂ ಭ್ರಾಂತಿಯುಳ್ಳವನಾಗುತ್ತಾನೆ. ಈ ಹಿಂದೆ ಹೇಳಿವ ದುಃಖ ಸ್ವಪ್ನಾದಿ ಸೂಚನೆಗಳಿರುವವನು ಯಾವ ಕಾರ್ಯಾರಂಭಮಾಡಿದರೂ ಅದರ ಫಲವು ಲಭಿಸದೆ ವಿಮನಸ್ಕನಾಗಿ ವ್ಯಥೆಪಡುತ್ತಾನೆ.

೬. ಮತ್ತು ಸ್ವಪ್ನದಲ್ಲಿ ತನ್ನನ್ನು ಮಹಾಪಾತಕಿಯನ್ನಾಗಿಯೂ ನಿಸ್ತೇಜಸ್ಕನನ್ನಾಗಿಯೂ, ಅತ್ಯಾಯಾಸದ ಲಕ್ಷಣವಿರುವವನನ್ನಾಗಿಯೂ, ತಾನು ಕತ್ತೆ, ಕೋಣ ಇವುಗಳ ಮೇಲೆ ಹತ್ತಿ ಕುಳಿತುಕೊಂಡಿರುವಂತೆಯೂ ಸ್ವಪ್ನದಲ್ಲಿ ಕಾಣುವನು.

ಯಾತುಧಾನಾಶ್ರಿತಂ ಯಾನಂ ಶ್ಮಶಾನಸ್ಯಾಂತಿಕಂ ನೃಪ ।
ವೀಕ್ಷೇತ ಕುರುಶಾರ್ದೂಲ ಸ್ವಪ್ನಾಂತೇ ನಾತ್ರ ಸಂಶಯಃ ।
ತೈಲಾದ್ರ್ರ್ರಮಾತ್ರಂ ಸ್ವಂ ದೇಹಂ ಕರವೀರವಿಭೂಷಿತಂ ॥ ೭ ॥

ತೇನೋಪಸೃಷ್ಟೋ ಲಭತೇ ನ ರಾಜ್ಯಂ ರಾಜನಂದನಃ ।
ಕುಮಾರೀ ನ ಚ ಭರ್ತಾರಮಪತ್ಯಂ ಗರ್ಭಮಂಗನಾ ॥ ೮ ॥

ಆಚಾರ್ಯತ್ವಂ ಶ್ರೋತ್ರಿಯಶ್ಚ ನ ಶಿಷ್ಯೋಽಧ್ಯಯನಂ ತಥಾ ।
ವಣಿಗ್ಲಾಭಂ ನ ಚಾಪ್ನೋತಿ ಕೃಷಿಂ ಚೈವ ಕೃಷೀವಲಃ ॥ ೯ ॥

---

೭. ಅಯ್ಯಾ ಕುರುವಂಶ ನೃಪೋತ್ತಮನೇ ! ಕೇಳು ಈ ವಿನಾಯಕನ ಉಪದ್ರವವಿರುವ ಮನುಷ್ಯನು ಸ್ವಪ್ನದಲ್ಲಿ ತನ್ನ ಶರೀರಕ್ಕೆ ಸಂಪೂರ್ಣವಾಗಿ ತೈಲವನ್ನು ಹಚ್ಚಿ ಒದ್ದೆಮಾಡಿಕೊಂಡು, ಕರವೀರಪುಷ್ಪ ಮಾಲಿಕೆಯನ್ನು ಧರಿಸಿ, ರಾಕ್ಷಸರಿಂದ ಎಳೆಯಲ್ಪಡುವ ಯಾನವನ್ನು ಹತ್ತಿಕೊಂಡು, ಸ್ಮಶಾನಕ್ಕೆ ಹೋಗಿ ಸ್ಮಶಾನಭೂಮಿ ದರ್ಶನವನ್ನು ಮಾಡುವನು. ವಿನಾಯಕೋಪದ್ರವ ವಿರುವವನಿಗೇ ಇಂಥ ಸ್ವಪ್ನದರ್ಶನವಾಗುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

೮. ಆ ಗಣೇಶನ ಕೋಪಕ್ಕೆ ಪಾತ್ರನಾದವನು ರಾಜಪುತ್ರನಾಗಿದ್ದರೆ ರಾಜ್ಯವನ್ನು ಪಡೆಯಲಾರನು, ಕನ್ನಿಕೆಯು ಯೋಗ್ಯಪತಿಯನ್ನು ಹೊಂದುವುದಿಲ್ಲ. ಸ್ತ್ರೀಯು ಸಂತಾನವನ್ನೂ ಮತ್ತು ಅದಕ್ಕೆ ಕಾರಣವಾದ ಗರ್ಭವನ್ನೂ ಧರಿಸುವುದಿಲ್ಲ.

೯. ಹಾಗೆಯೇ ಶಾಸ್ತ್ರಾಧ್ಯಯನಮಾಡಿದ ಶ್ರೋತ್ರಿಯ ಬ್ರಾಹ್ಮಣನು ಆಚಾರ್ಯತ್ವವನ್ನು ಅಂದರೆ ಅಧ್ಯಾಪಕ ಪದವಿಯನ್ನು ಹೊಂದುವುದಿಲ್ಲ. ಹೀಗೆ ಈ ಗಣೇಶನ ಪ್ರತಿಬಂಧದಿಂದಲೇ ಓದುವ ವಿದ್ಯಾರ್ಥಿಗೆ ಅಧ್ಯಯನಶ್ರಮವು ಫಲ ದಾಯಕವಾಗುವುದಿಲ್ಲ. ವ್ಯಾಪಾರಿಗೆ ತನ್ನ ಕ್ರಯ, ವಿಕ್ರಯ ರೂಪವಾದ ಕೆಲಸಕ್ಕೆ ಸರಿಯಾದ ಲಾಭವು ಬರುವುದಿಲ್ಲ. ವ್ಯವಸಾಯಗಾರನಾದ ಒಕ್ಕಲಿಗನಿಗೆ ಕೃಷಿಯು ಫಲಪ್ರದವಾಗುವುದಿಲ್ಲ.

ಸ್ನಪನಂ ತಸ್ಯ ಕರ್ತವ್ಯಂ ಪುಣ್ಯೇಹ್ನಿ ವಿಧಿಪೂರ್ವಕಂ ।
ಗೌರಸರ್ಷಪಕಲ್ಕೇನ ವಸ್ತ್ರೇಣಾಚ್ಛಾದಿತಸ್ಯ ತು ॥ ೧೦ ॥

ಸರ್ವೌಷಧ್ಯೈಃ ಸರ್ವಗಂಧೈರ್ವಿಲಿಪ್ತಶಿರಸಸ್ತಥಾ ।
ಶುಕ್ಲಪಕ್ಷೇ ಚತುರ್ಥ್ಯಾಂ ತು ವಾರೇ ವಾ ಧಿಷಣಸ್ಯ ತು ॥ ೧೧ ॥

ಪುಷ್ಯೇ ಚ ವೀರನಕ್ಷತ್ರೇ ತಸ್ಯೈವ ಪುರತೋ ನೃಪ ।
ಭದ್ರಾಸನೋಪವಿಷ್ಟಸ್ಯ ಸ್ವಸ್ತಿವಾಚ್ಯಾ ದ್ವಿಜೈಃ ಶುಭೈಃ ॥ ೧೨ ॥

ಚತ್ವಾರ ಋಗ್ಯಜುಸ್ಸಾಮಾಥರ್ವಣಪ್ರವಣಾಸ್ತತಃ ।
ವ್ಯೋಮಕೇಶಂ ತು ಸಂಪೂಜ್ಯ ಪಾರ್ವತೀಂ ಭೂಮಿಜಂ ತಥಾ ॥ ೧೩ ॥

---

೧೦. ಈರೀತಿ ಗಣೇಶನ ವೈಮುಖ್ಯದಿಂದ ಕಾರ್ಯಸಿದ್ಧಿಯಾಗದೆ ಇರುವಾಗ ಅವನ ಕೋಪಶಾಂತಿಗೂ, ಪ್ರಸಾದಸಂಪಾದನೆಗೂ, ಬಿಳಿಯ ಸಾಸುವೆಯ ಪುಡಿಯನ್ನು ಹಾಕಿದ ವಸ್ತ್ರವನ್ನು ಶ್ರೀ ಗಣೇಶನಿಗೆ ಹೊದ್ದಿಸಿ, ಶಾಸ್ತ್ರಪ್ರಕಾರವಾಗಿ ಪುಣ್ಯದಿವಸದಲ್ಲಿ ಅವನಿಗೆ ಅಭಿಷೇಕವನ್ನು ಮಾಡಬೇಕು.

೧೧. ಈ ಅಭಿಷೇಕವನ್ನು ಶುಕ್ಲಪಕ್ಷ ಚತುರ್ಥಿಯಲ್ಲಾಗಲಿ ಬೃಹಸ್ಪತಿ ವಾರದಲ್ಲಾಗಲಿ, ಮಾಡಬಹುದು. ಸರ್ವೌಷಧ ಮತ್ತು ಸರ್ವವಿಧ ಗಂಧ ಇವುಗಳನ್ನು ದೇವನ ಶಿರಸ್ಸಿನಲ್ಲಿ ಲೇಪನಮಾಡಬೇಕು.

೧೨. ಅಭಿಷೇಕವು ಪುಷ್ಯವೆಂಬ ವೀರ್ಯವತ್ತಾದ ನಕ್ಷತ್ರದಲ್ಲಿ ಶ್ರೇಷ್ಠ ಭದ್ರಾಸನದಲ್ಲಿ ಶ್ರೀ ಗಣೇಶನನ್ನು ಪ್ರತಿಷ್ಠಾಪಿಸಿ, ಆ ದೇವನ ಪುರೋಭಾಗವಲ್ಲಿ ಸದಾಚಾರಸಂಪನ್ನರಾಗಿ ಮಂಗಳಕರರಾದ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಂತ್ರಗಳನ್ನು ಹೇಳಿಸಬೇಕು.

೧೩. ಆ ಸ್ವಸ್ತಿ ಮಂತ್ರಗಳನ್ನು ಹೇಳುವುದಕ್ಕೆ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳಲ್ಲಿ ಪರಿಶ್ರಮಪಡೆದು ಪಾಂಡಿತ್ಯವನ್ನು ಹೊಂದಿದ ನಾಲ್ಕುಜನ ಶ್ರೋತ್ರಿಯರಿರಬೇಕು. ಸ್ವಸ್ತಿವಾಚನಾನಂತರ ಈಶ್ವರ ಪಾರ್ವತಿ ಮತ್ತು ಅಂಗಾರಕ ಇವರನ್ನು ಪೂಜಿಸಬೇಕು.

ಕೃಷ್ಣಸ್ಯ ಪಿತರಂ ಚಾಥ ಅವತಾರಂ ಸಿತಂ ತಥಾ ।
ಧಿಷಣಂ ಸೂರ್ಯಪುತ್ರಂ ಚ ಕೋಣಂ ಲಕ್ಷ್ಮೀಂ ಚ ಭಾರತ ॥ ೧೪ ॥

ವಿಧುಂತುದಂ ಬಾಹುಲೇಯಂ ನಂದಕಸ್ಯ ಚ ಧಾರಿಣಂ ।
ಅಶ್ವಸ್ಥಾನಾದ್ಗಜಸ್ಥಾನಾದ್ವಲ್ಮೀಕಾತ್ಸಂಗಮಾದ್ಧ್ರದಾತ್ ।
ಮೃತ್ತಿಕಾಂ ರೋಚನಾಂ ರತ್ನಂ ಗುಗ್ಗುಲುಂ ಚಾಪ್ಸು ನಿಕ್ಷಿಪೇತ್ ॥ ೧೫ ॥

ಯದಾಹೃತಂ ಹ್ಯೇಕವರ್ಣೈಶ್ಚತುರ್ಭಿಃ ಕಲಶೈರ್ಹ್ರದಾತ್ ।
ಚರ್ಮಣ್ಯಾನಡುಹೇ ರಕ್ತೇ ಸ್ಥಾಪ್ಯ ಭದ್ರಾಸನಂ ತಥಾ ॥ ೧೬ ॥

ಸಹಸ್ರಾಕ್ಷಂ ಶತಧಾರಮೃಷಿಭಿಃ ಪಾವನಂ ಕೃತಂ ।
ತೇನ ತ್ವಾಮಭಿಷಿಂಚಾಮಿ ಪಾವಮಾನ್ಯಃ ಪುನಂತು ಮೇ ॥ ೧೭ ॥

---

೧೪. ಅಯ್ಯಾ ಯುಧಿಷ್ಠಿರ! ಅನಂತರ ಶ್ರೀಕೃಷ್ಣನ ತಂದೆಯಾದ ವಸುದೇವನನ್ನೂ ಮತ್ತು ಸೂರ್ಯ, ಬೃಹಸ್ಪತಿ, ಶನೈಶ್ಚರ, ಆಯುಧ, ಲಕ್ಷ್ಮೀ, ರಾಹು, ಬಲರಾಮ, ನಂದಕವೆಂಬ ಖಡ್ಗವನ್ನು ಧರಿಸಿದ ಶ್ರೀ ಮಹಾವಿಷ್ಣು ಇವರನ್ನೂ ಪೂಜಿಸಬೇಕು.

೧೫. ಮತ್ತು ಕುದುರೆಕಟ್ಟುವಸ್ಥಳ, ಆನೆಕಟ್ಟುವಸ್ಥಳ ಮತ್ತು ಹುತ್ತ, ನದೀ ಸಂಗಮ, ಹೊಳೆಯಮಡು, ಈ ಪ್ರದೇಶಗಳ ಮೃತ್ತಿಕೆಯನ್ನೂ ಗೋರೋಚನ, ರತ್ನ, ಗುಗ್ಗುಲು, ಧೂಪ ಇವುಗಳನ್ನೂ ಅಭಿಷೇಕದ ಕಲಶದ ನೀರಿನಲ್ಲಿ ಹಾಕಬೇಕು.

೧೬. ಆ ಅಭಿಷೇಕಾರ್ಥವಾಗಿ ಒಂದೇ ಬಣ್ಣದ್ದೂ, ಒಂದೇ ಆಕಾರ ವುಳ್ಳದ್ದೂ ಆದ ನಾಲ್ಕು ಕಲಶಗಳು ಇರಬೇಕು. ಈ ನಾಲ್ಕು ಕಲಶಗಳಲ್ಲಿಯೂ ಜಲಾಶಯದಿಂದ ಅಭಿಷೇಕ ಜಲವನ್ನು ತುಂಬಿಸಿ ತರಬೇಕು. ಕೆಂಪಾದ ಎತ್ತಿನ ಚರ್ಮದಮೇಲೆ ಭದ್ರಾಸನವನ್ನಿರಿಸಿ ಶ್ರೀ ಗಣೇಶನನ್ನು ಆ ಭದ್ರಾಸನದಲ್ಲಿ ಸ್ಥಾಪಿಸಬೇಕು.

೧೭. " ಸಹಸ್ರಾಕ್ಷಂ ಶತಧಾರಮೃಷಿಭಿಃ ಪಾವನಂ ಕೃತಂ ।
ತೇನತ್ವಾಮಭಿಷಿಂಚಾಮಿ ಪಾವಮಾನ್ಯಃ ಪುನಂತುಮೇ ॥

ಎಂಬ ಮಂತ್ರವನ್ನು ಹೇಳಿ ಅಭಿಷೇಕ ಮಾಡಬೇಕು. (ವೇದಮಂತ್ರಗಳಿಂದ ಅಭಿಮಂತ್ರಿಸಿ ಪವಿತ್ರವೆನಿಸಿಕೊಂಡು ಸಾವಿರಾರು ರಂಧ್ರಗಳಿಂದ ಅನೇಕ ಧಾರೆ ಯಾಗಿ ಬೀಳುವ ಈ ಜಲದಿಂದ ನಿನಗೆ ಅಭಿಷೇಕ ಮಾಡುವೆನು. ಈ ಪವಿತ್ರ ವಾದ ತುಂತುರುಗಳು ನನ್ನನ್ನು ಪವಿತ್ರ (ಪಾವನ) ಮಾಡಲಿ ಎಂದು ಮಂತ್ರಾರ್ಥ.

ಓಂ ಭಗಂ ತೇ ವರುಣೋ ರಾಜಾ ಭಗಂ ಸೂರ್ಯೋ ಬೃಹಸ್ಪತಿಃ ।
ಭಗಮಿಂದ್ರಶ್ಚ ವಾಯುಶ್ಚ ಭಗಂ ಸಪ್ತರ್ಷಯೋ ದದುಃ ॥ ೧೮ ॥

ಯತ್ತೇ ಕೇಶೇಷು ದೌರ್ಭಾಗ್ಯಂ ಸೀಮಂತೇ ಯಚ್ಚ ಮೂರ್ಧನಿ ।
ಲಲಾಟೇ ಕರ್ಣಯೋರಕ್ಷ್ಣೋರಾಪಸ್ತದ್ಘ್ನಂತು ಸರ್ವದಾ ॥ ೧೯ ॥

ಸ್ನಾತಸ್ಯ ಸಾರ್ಷಪಂ ತೈಲಂ ಸ್ರುವೇಣೌದುಂಬರೇಣ ತು ।
ಜುಹುಯಾನ್ಮೂರ್ಧ್ನಿ ಶಕಲಾನ್ಸವ್ಯೇನ ಪ್ರತಿಗೃಹ್ಯ ಚ ॥ ೨೦ ॥

ಮಿತಶ್ಚ ಸಮ್ಮಿತಶ್ಚೈವ ತಥಾ ಶಾಲಕಟಂಕಟೌ ।
ಕೂಷ್ಮಾಂಡೋ ರಾಜಪುತ್ರಶ್ಚೇತ್ಯಂತೇ ಸ್ವಾಹಾಸಮನ್ವಿತೈಃ ॥ ೨೧ ॥

---

೧೮. " ಓಂ ಭಗಂತೇ ವರುಣೋ ರಾಜಾಭಗಂ ಸೂರ್ಯೋಬೃಹಸ್ಪತಿಃ ।
ಭಗಮಿಂದ್ರಶ್ಚ ವಾಯುಶ್ಚ ಭಗಂ ಸಪ್ತರ್ಷಯೋ ದದುಃ ॥

ಈ ಮಂತ್ರದಿಂದ ಒಮ್ಮೆ ಅಭಿಷೇಕ ಮಾಡಬೇಕು. (ನಿನಗೆ ವರುಣನು ರಾಜನು ಸೂರ್ಯ, ಬೃಹಸ್ಪತಿ, ಇಂದ್ರ, ವಾಯು ಮತ್ತು ಸಪ್ತರ್ಷಿಗಳು ಷಡ್ಗುಣೈಶ್ವರ್ಯ ಗಳನ್ನು ಕೊಡಲಿ ಎಂದು ಮಂತ್ರದ ಅರ್ಥ.)

೧೯. ಯತ್ತೇಕೇಶೇಷು ದೌರ್ಭಾಗ್ಯಂ ಸೀಮಂತೇಯಚ್ಚಮೂರ್ಧನಿ ।
ಲಲಾಟೇ ಕರ್ಣಯೋರಕ್ಷ್ಣೋ ರಾಪಸ್ತದ್ಘ್ನಂತು ಸರ್ವದಾ ॥

ಈ ಮಂತ್ರವನ್ನು ಹೇಳಿ ಮತ್ತೆ ಅಭಿಷೇಕ ಮಾಡಬೇಕು. (ನಿನ್ನ ಕೇಶ, ಬೈತಲೆ, ಶಿರಸ್ಸು, ಲಲಾಟ, ಕಿವಿಗಳು, ನೇತ್ರಗಳು, ಇವುಗಳಲ್ಲಿರುವ ವೈರೂಪ್ಯವನ್ನು ಈ ಅಭಿಷೇಕ ಜಲಗಳು ಸದಾ ನಾಶಪಡಿಸಲಿ ಎಂಬುದೇ ಈ ಮಂತ್ರದ ಅರ್ಥ.)

೨೦. ಸ್ವಾಮಿಗೆ ಅಭಿಷೇಕವಾದ ಮೇಲೆ ಅಗ್ನಿಯ ಸಮೀಪಕ್ಕೆ ಬಂದು ಅತ್ತಿಯಮರದಿಂದ ತಯಾರಿಸಿದ ಸ್ರುವದಲ್ಲಿ (ಸೌಟು) ಸಾಸುವೆಯ ಎಣ್ಣೆಯನ್ನು ತುಂಬಿ ಆ ಸ್ರುವವನ್ನು ಬಲಗೈಯಲ್ಲಿ ಹಿಡಿದುಕೊಂಡು ಆ ಸ್ರುವದ ಮೇಲೆ ಔದುಂಬರ ಶಕಲಗಳನ್ನು (ಅತ್ತಿ ಸಮಿತ್ತು) ಇಟ್ಟು ಹೋಮಮಾಡಬೇಕು.

೨೧. ಮಿತ, ಸಂಮಿತ, ಶಾಲಕ, ಟಂಕಟ, ಕೂಷ್ಮಾಂಡ, ರಾಜ, ಪುತ್ರ ಈ ನಾಮಗಳ ಕೊನೆಯಲ್ಲಿ ' ಸ್ವಾಹಾ ' ಎಂಬ ಪದವನ್ನು ಸೇರಿಸಿ ಹೋಮ ಮಾಡಬೇಕು. ಎಂದರೆ ' ಮಿತಾಯಸ್ವಾಹಾ ' ಇತ್ಯಾದಿಯಾಗಿ ಹೇಳಿ ಹೋಮ ಮಾಡಬೇಕು.

ನಾಮಭಿರ್ಬಲಿಮಂತ್ರೈಶ್ಚ ನಮಸ್ಕಾರಸಮನ್ವಿತೈಃ ।
ದದ್ಯಾಚ್ಚತುಷ್ಪಥೇ ಶೂರ್ಪೇ ಕುಶಾನಾಸ್ತೀರ್ಯ ಸರ್ವತಃ ॥ ೨೨ ॥

ಕೃತಾಕೃತಾಂಸ್ತಂಡುಲಾಂಶ್ಚ ಪಲಲೌದನಮೇವ ಚ ।
ಮತ್ಸ್ಯಾನ್ಪಕ್ವಾಂಶ್ಚ ತಥಾ ಮಾಂಸಮೇತಾವದೇವ ತು ॥ ೨೩ ॥

ಪುಷ್ಪಾನ್ವಿತಂ ಸುಗಂಧಂ ಚ ಸುರಾಂ ಚ ತ್ರಿವಿಧಾಮಪಿ ।
ಮೂಲಕಂ ಪೂರಿಕಾಪೂಪಾಂಸ್ತಥೈವೋಂಡೇರಕಸ್ರಜಃ ॥ ೨೪ ॥

ದಧ್ಯನ್ನಂ ಪಾಯಸಂ ಚೈವ ಗುಡಮೇಿಶ್ರಿತಮೋದಕಂ ।
ವಿನಾಯಕಸ್ಯ ಜನನೀಮುಪತಿಷ್ಠೇತ್ತಥಾಂಬಿಕಾಂ ॥ ೨೫ ॥

---

೨೨. ಈ ಹಿಂದೆ ಹೇಳಿದ ನಾಮಪದಗಳ ಮೇಲೆ ' ನಮಃ ' ಎಂಬ ಪದವನ್ನು ಜೋಡಿಸಿ ನಾಲ್ಕು ರಸ್ತೆಗಳು ಕೂಡಿದ ಚತುಷ್ಪಥದಲ್ಲಿ ಒಂದು ಹೊಸ ಮೊರದ ಒಳಗೆ ದರ್ಭೆಗಳನ್ನು ಹರಡಿ (ಮಿತಾಯನಮಃ ಇತ್ಯಾದಿ) ಬಲಿ ಮಂತ್ರಗಳನ್ನು ಹೇಳಿ ಸುತ್ತಲೂ ಬಲಿಪ್ರದಾನ ಮಾಡಬೇಕು.

೨೩. ಮತ್ತು ಕೃತ್ರಿಮ ಅಕೃತಿಮತಂಡುಲ, ಮಾಂಸ, ಅನ್ನ, ಪಾಕ ಮಾಡದೇ ಅಪಕ್ವವಾದ ಮೀನು ಈ ವಸ್ತುಗಳನ್ನು ಚತುಷ್ಪಥದಲ್ಲಿ ಬಲಿಪ್ರದಾನಕ್ಕೆ ಉಪಯೋಗಿಸಬೇಕು.

೨೪–೨೫. ಮತ್ತು ಅಲ್ಲಿ ಪುಷ್ಪ, ಸುಗಂಧಧೂಪಗಳನ್ನರ್ಪಿಸಿ ಪೈಷ್ಟಿಕಾದಿ ಮೂರು ತರಹ ಮದ್ಯ, ಗೆಡ್ಡೆಗೆಣಸು, ಪೂರಿ, ದೋಸೆ, ಕರವೀರಪುಷ್ಪಮಾಲೆ ಮತ್ತು ಮೊಸರನ್ನ, ಪಾಯಸ, ಬೆಲ್ಲ ಮಿಶ್ರಣಮಾಡಿದ ಮೋದಕ ಇವುಗಳನ್ನೂ ಬಲಿಪ್ರದಾನ ಕಾಲದಲ್ಲಿ ಉಪಯೋಗಿಸಬೇಕು. ಈ ಪ್ರಕಾರ ಬಲಿಪ್ರದಾನಮಾಡಿ ಅನಂತರ ಗರಿಕೆ, ಸಾಸುವೆ, ಮತ್ತು ಪುಷ್ಪ, ಇವುಗಳನ್ನು ಸೇರಿಸಿ ಅಂಜಲಿಯಿಂದ ಅರ್ಘ್ಯಕೊಟ್ಟು ಅನಂತರ ವಿನಾಯಕನ ಮಾತೆಯಾದ ಶ್ರೀ ಪಾರ್ವತಿಯನ್ನು ಪೂಜಿಸಿ,

ದೂರ್ವಾಸರ್ಷಪಪುಷ್ಪಾಣಾಂ ದತ್ವಾರ್ಘ್ಯಂ ಪೂರ್ಣಮಂಜಲಿಂ ।
ರೂಪಂ ದೇಹಿ ಜಯಂ ದೇಹಿ ಭಗಂ ಭವತಿ ದೇಹಿ ಮೇ ।
ಪುತ್ರಾನ್ದೇಹಿ ಧನಂ ದೇಹಿ ಸರ್ವಾನ್ಕಾಮಾಂಶ್ಚ ದೇಹಿ ಮೇ ॥ ೨೬ ॥

ಪ್ರಬಲಂ ಕುರು ಮೇ ದೇವಿ ಬಲವಿಖ್ಯಾತಿಸಂಭವಂ ।
ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ।
ಭೋಜಯೇದ್ಬ್ರಾಹ್ಮಣಾನ್ದದ್ಯಾದ್ವಸ್ತ್ರಯುಗ್ಮಂ ಗುರೋರಪಿ ॥ ೨೭ ॥

ಏವಂ ವಿನಾಯಕಂ ಪೂಜ್ಯ ಗ್ರಹಾಂಶ್ಚೈವ ವಿಧಾನತಃ ।
ಕರ್ಮಣಾಂ ಫಲಮಾಪ್ನೋತಿ ಶ್ರಿಯಂ ಪ್ರಾಪ್ನೋತ್ಯನುತ್ತಮಾಂ ॥ ೨೮ ॥

ಆದಿತ್ಯಸ್ಯ ಸದಾ ಪೂಜಾಂ ತಿಲಕಂ ಸ್ವಾಮಿನಸ್ತಥಾ ।
ಮಹಾಗಣಪತೇಶ್ಚೈವ ಕುರ್ವನ್ಸಿದ್ಧಿಮವಾಪ್ನುಯಾತ್ ॥ ೨೯ ॥

---

೨೬. ರೂಪಂದೇಹಿ ಜಯಂದೇಹಿ ಭಗಂಭವತಿ ದೇಹಿಮೇ ।
ಪುತ್ರಾನ್‌ದೇಹಿ ಧನಂದೇಹಿ ಸರ್ವಾನ್ ಕಾಮಾಂಶ್ಚದೇಹಿಮೇ ।
ಪ್ರಬಲಂ ಕುರುಮೇ ದೇವೀ ಬಲವಿಖ್ಯಾತಿ ಸಂಭವಂ ॥

ಎಂಬದಾಗಿ ಪ್ರಾರ್ಥನಾ ಮಂತ್ರ ಹೇಳಬೇಕು. (ಎಲೈ ದೇವಿಯೇ ನೀನು ನನಗೆ ಸೌಂದರ್ಯ, ಜಯ, ಐಶ್ವರ್ಯ, ಪುತ್ರ, ವಿತ್ತ, ಮತ್ತು ಸರ್ವಾಭೀಷ್ಟಸಿದ್ಧಿ ಇವುಗಳನ್ನು ದಯಪಾಲಿಸು.

೨೭. ಮತ್ತು ಶರೀರಶಕ್ತಿ, ಕೀರ್ತಿ, ಇವುಗಳನ್ನು ಕೊಟ್ಟು ನನ್ನನ್ನು ಪ್ರಬಲ ಪುರುಷನನ್ನಾಗಿಮಾಡು ಎಂಬುದೇ ಮಂತ್ರಾರ್ಥ.) ಅನಂತರ ಬಿಳಿಯ ಬಟ್ಟೆಯನ್ನುಟ್ಟು ಬಿಳೀ ಪುಷ್ಪಮಾಲೆಯನ್ನು ಧರಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಒಂದು ಜೊತೆ ಪಂಚೆಯನ್ನು ಗುರುವಿಗೆ ಕೊಡಬೇಕು.

೨೮. ಈರೀತಿ ಶಾಸ್ತ್ರಪ್ರಕಾರವಾಗಿ ವಿನಾಯಕನನ್ನೂ ನವಗ್ರಹಗಳನ್ನೂ ಪೂಜೆಮಾಡಿದವನು ಆ ಕರ್ಮದ ಸಂಪೂರ್ಣ ಫಲವನ್ನು ಪಡೆಯುವುದಲ್ಲದೆ ನಿರತಿಶಯವಾದ ಸಂಪತ್ತನ್ನೂ ಹೊಂದುವನು.

೨೯ ಸದಾ ಸೂರ್ಯಾರಾಧನೆ ಮಾಡುವವನೂ, ಕುಮಾರಸ್ವಾಮಿಗೆ ಸ್ವರ್ಣಾದಿನಿರ್ಮಿತವಾದ ತಿಲಕವನ್ನು ಸಮರ್ಪಿಸುವವನೂ, ಮಹಾಗಣಪತಿಯ ಪೂಜೆಯನ್ನು ಮಾಡುವವನೂ ನಿರಂತರವಾಗಿ ಕಾರ್ಯಸಿದ್ಧಿಯನ್ನು ಹೊಂದುವನು.

ವೈನಾಯಕಂ ವಿನಯಸತ್ವವತಾಂ ನರಾಣಾಂ ।
ಸ್ನಾನಂ ಪ್ರಶಸ್ತಮಿಹ ವಿಘ್ನವಿನಾಶಕಾರಿ ।
ಕುರ್ವಂತಿ ಯೇ ವಿಧಿವದತ್ರ ಭವಂತಿ ತೇಷಾಂ ।
ಕಾರ್ಯಾಣ್ಯಭೀಷ್ಟಫಲದಾನಿ ನ ಸಂಶಯೋಽತ್ರ ॥ ೩೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವಿನಾಯಕ ಸ್ನಪನ ಚತುರ್ಥೀವ್ರತಂ ನಾಮ ದ್ವಾತ್ರಿಂಶತ್ತಮೋಽಧ್ಯಾಯಃ.



---

೩೦. ವಿನಯ ಮತ್ತು ಮನೋಬಲವುಳ್ಳ ಯಾವ ಸತ್ಪುರುಷರು ವಿಘ್ನ ವಿನಾಶಹೇತುವಾಗಿಯೂ, ಅತಿಪ್ರಶಸ್ತವಾಗಿಯೂ ಇರುವ ಶ್ರೀ ವಿನಾಯಕಾಭಿಷೇಕವನ್ನು ಶಾಸ್ತ್ರಪ್ರಕಾರವಾಗಿ ಮಾಡುವರೋ ಅಂತಹವರು ಈ ಲೋಕದಲ್ಲಿ ತಾವು ಪ್ರಾರಂಭಿಸಿದ ಕಾರ್ಯಸಿದ್ಧಿರೂಪವಾದ ಅಭೀಷ್ಟಫಲವನ್ನು ಹೊಂದುವರು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವಿನಾಯಕನ ಸ್ನಪನಚತುರ್ಥೀ ವ್ರತ ಮಹಾತ್ಮ್ಯೆಯೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಯಸ್ತ್ರಿಂಶತ್ತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಅಥಾವಿಘ್ನಕರಂ ರಾಜನ್ಕಥಯಾಮಿ ವ್ರತಂ ತವ ।
ಯೇನ ಸಮ್ಯಕ್ಕೃತೇನೇಹ ನ ವಿಘ್ನಮುಪಜಾಯತೇ ॥ ೧ ॥

ಚತುರ್ಥ್ಯಾಂ ಫಾಲ್ಗುನೇ ಮಾಸಿ ಗೃಹೀತವ್ಯಂ ವ್ರತಂ ತ್ವಿದಂ ।
ನಕ್ತಾಹಾರೇಣ ರಾಜೇಂದ್ರ ತಿಲಾನ್ನಂ ಪಾರಣಂ ಸ್ಮೃತಂ ॥ ೨ ॥

ತದೇವ ವಹ್ನೌ ಹೋತವ್ಯಂ ಬ್ರಾಹ್ಮಣಾಯ ಚ ತದ್ಭವೇತ್ ॥ ೩ ॥

---

### ಮೂವತ್ತಮೂರನೆಯ ಅಧ್ಯಾಯ

೧. ಎಲೈ ಧರ್ಮರಾಜನೇ ! ಯಾವ ವ್ರತವನ್ನು ವಿಧಿವತ್ತಾಗಿ ಆಚರಿಸಿದರೆ ಈ ಲೋಕದಲ್ಲಿ ಆರಂಭಿಸಿದ ಕಾರ್ಯಗಳಿಗೆ ವಿಘ್ನವು ಬರುವುದಿಲ್ಲವೋ, ಅಂತಹ ವಿಘ್ನಪರಿಹಾರಕವಾದ ಮತ್ತೊಂದು ವ್ರತವನ್ನು ನಿನಗೆ ಹೇಳುತ್ತೇನೆ. ಶ್ರವಣಮಾಡು.

೨. ಎಲೈ ರಾಜೇಂದ್ರ ! ಫಾಲ್ಗುಣಮಾಸದ ಚತುರ್ಥೀದಿನ ನಕ್ತಾಹಾರಿಯಾಗಿ ಈ ವ್ರತವನ್ನು ಆಚರಿಸಬೇಕು. ಪಾರಣೆಗೆ ತಿಲಾನ್ನವನ್ನು ಉಪಯೋಗಿಸಬೇಕು.

೩. ಹಾಗೆಯೇ ತಿಲಾನ್ನವನ್ನೇ ಹೋಮ ದ್ರವ್ಯವನ್ನಾಗಿಮಾಡಿ ಅಗ್ನಿಯಲ್ಲಿ ಹೋಮ ಮಾಡಬೇಕು. ಬ್ರಾಹ್ಮಣ ಭೋಜನಕ್ಕೂ ಈ ತಿಲಾನ್ನವನ್ನೇ ಉಪಯೋಗಿಸಬೇಕು.

ಶೂರಾಯ ವೀರಾಯ ಗಜಾನನಾಯ ।
ಲಂಬೋದರಾಯ್ಯೈಕರದಾಯ ಚೈವ ।
ಏವಂ ತು ಸಂಪೂಜ್ಯ ಪುನಶ್ಚ ಹೋಮಂ ।
ಕುರ್ಯಾದ್ವ್ರತೀ ವಿಘ್ನವಿನಾಶಹೇತೋಃ ॥ ೪ ॥

ಚಾತುರ್ಮಾಸ್ಯಾಂ ವ್ರತಂ ಚೈವ ಕೃತ್ವೇತ್ಥಂ ಪಂಚಮೇ ತಥಾ ।
ಸೌವರ್ಣಂ ಗಜವಕ್ತ್ರಂ ತು ಕೃತ್ವಾ ವಿಪ್ರಾಯ ದಾಪಯೇತ್ ॥ ೫ ॥

ತಾಮ್ರಪಾತ್ರೈಃ ಪಾಯಸಭೃತೈಶ್ಚತುರ್ಭಿಸ್ಸಹಿತಂ ನೃಪ ।
ಪಂಚಮೇನ ತಿಲೈಸ್ಸಾರ್ಧಂ ಗಣೇಶಾಧಿಷ್ಠಿತೇನ ಚ ॥ ೬ ॥

ಮೃನ್ಮಯಾನ್ಯಪಿ ಪಾತ್ರಾಣಿ ವಿತ್ತಹೀನಸ್ತು ಕಾರಯೇತ್ ।
ಹೇರಂಬಂ ರಾಜತಂ ತದ್ವದ್ವಿಧಿನಾನೇನ ದಾಪಯೇತ್ ॥ ೭ ॥

---

೪. ಈ ವ್ರತವನ್ನಾಚರಿಸುವವನು ಸಮಸ್ತಕಾರ್ಯಗಳ ವಿಘ್ನನಿವಾರಣೆಗಾಗಿ, ಶೂರಾಯನಮಃ, ವೀರಾಯ, ಗಜಾನನಾಯ, ಲಂಬೋದರಾಯ, ಏಕದಂತಾಯ, ಎಂಬ ನಾಮ ಮಂತ್ರಗಳಿಂದ ಅರ್ಚಿಸಿ ಅದೇ ಮಂತ್ರಗಳಿಂದ ಪುನಃ ಹೋಮವನ್ನು ಮಾಡಬೇಕು.

೫. ಈ ಪ್ರಕಾರ ನಾಲ್ಕು ತಿಂಗಳು ಈ ವ್ರತವನ್ನು ಮಾಡಿ ಐದನೆಯ ತಿಂಗಳಿನಲ್ಲಿ ವ್ರತವನ್ನಾಚರಿಸಿದ ಬಳಿಕ ಭಂಗಾರದ ಶ್ರೀ ವಿನಾಯಕನ ಪ್ರತಿಮೆಯನ್ನು ಮಾಡಿಸಿ ಬ್ರಾಹ್ಮಣನಿಗೆ ದಾನಮಾಡಬೇಕು.

೬. ಓ ರಾಜನೇ ! ಆಗ ನಾಲ್ಕು ತಾಮ್ರಪಾತ್ರೆಗಳಲ್ಲಿ ಪಾಯಸವನ್ನು ತುಂಬಿಸಿ ಅವುಗಳನ್ನೂ, ಐದನೆಯ ತಾಮ್ರ ಪಾತ್ರೆಯಲ್ಲಿ ಎಳ್ಳನ್ನೂ ತುಂಬಿಸಿ ಅದರ ಮೇಲೆ ಗಣೇಶನ ಹಿರಣ್ಯ ಪ್ರತಿಮೆಯನ್ನಿಟ್ಟು ದಾನಮಾಡಬೇಕು.

೭. ಅಷ್ಟು ದ್ರವ್ಯಸಂಪತ್ತಿಲ್ಲದವನು ಈ ವ್ರತದ ಕೊನೆಯಲ್ಲಿ ಮಣ್ಣಿನ ಪಾತ್ರೆಗಳನ್ನು ತರಿಸಿ ಹಿಂದೆ ಹೇಳಿದಂತೆಯೇ ನಾಲ್ಕು ಪಾತ್ರೆಗಳಲ್ಲಿ ಪಾಯಸವನ್ನು ತುಂಬಿಸಿ ಐದನೆಯ ಪಾತ್ರೆಯಲ್ಲಿ ಎಳ್ಳನ್ನು ತುಂಬಿ ಬೆಳ್ಳಿಯ ಶ್ರೀ ಗಣೇಶನ ಪ್ರತಿಮೆಯನ್ನು ಅದರಲ್ಲಿಟ್ಟು ಹಿಂದೆ ಹೇಳಿದ ಕ್ರಮದಂತೆಯೇ ದಾನಮಾಡಬೇಕು. ಈ ಕ್ರಮದಿಂದ ಈ ವ್ರತವನ್ನು ಮಾಡಿದವನಿಗೆ ಸಮಸ್ತ ಕಾರ್ಯಗಳಲ್ಲೂ ವಿಘ್ನ ನಿವಾರಣೆಯಾಗುವುದು.

ಇತ್ಥಂ ವ್ರತಮಿದಂ ಕೃತ್ವಾ ಸರ್ವವಿಘ್ನೈಃ ಪ್ರಮುಚ್ಯತೇ ।
ಹಯಮೇಧಸ್ಯ ವಿಘ್ನೇ ತು ಸಂಜಾತೇ ಸಗರಃ ಪುರಾ ।
ಏತದೇವ ವ್ರತಂ ಚೀರ್ತ್ವಾ ಪುನರಶ್ವಂ ಪ್ರಲಬ್ಧವಾನ್ ॥ ೮ ॥

ತಥಾ ರುದ್ರೇಣ ದೇವೇನ ತ್ರಿಪುರಂ ನಿಘ್ನತಾ ಪುರಾ ।
ಏತದೇವ ಕೃತಂ ಯಸ್ಮಾತ್ತ್ರಿಪುರಸ್ತೇನ ಘಾತಿತಃ ॥ ೯ ॥

ಮಯಾ ಸಮುದ್ರಂ ವಿಶತಾ ಏತದೇವ ವ್ರತಂ ಕೃತಂ ।
ತೇನಾದ್ರಿದ್ರುಮಸಂಯುಕ್ತಾ ಪೃಥಿವೀ ಪುನರುದ್ಧೃತಾ ॥ ೧೦ ॥

ಅನ್ಯೈರಪಿ ಮಹೀಪಾಲೈರೇತದೇವ ಕೃತಂ ಪುರಾ ।
ತಪೋಽರ್ಥಿಭಿರ್ಯಜ್ಞಸಿದ್ಧ್ಯೈ ನಿರ್ವಿಘ್ನಂ ಸ್ಯಾತ್ಪರಂತಪ ॥ ೧೧ ॥

---

೮. ಪೂರ್ವದಲ್ಲಿ ಸಗರಚಕ್ರವರ್ತಿಯು ಅಶ್ವಮೇಧಯಾಗ ಮಾಡುವಾಗ ಯಜ್ಞದ ಕುದುರೆಯು ಇಂದ್ರನಿಂದ ಅಪಹರಿಸಲ್ಪಟ್ಟು ಯಾಗಕ್ಕೆ ವಿಘ್ನವು ಒದಗಿತು. ಆಗ ಈ ವ್ರತವನ್ನೇ ಆಚರಿಸಿ ಪುನಃ ಯಜ್ಞಾಶ್ವವನ್ನು ಪಡೆದನು.

೯. ಹಾಗೆಯೇ ಪೂರ್ವದಲ್ಲಿ ತ್ರಿಪುರಸಂಹಾರ ಕಾರ್ಯದಲ್ಲಿ ಉದ್ಯುಕ್ತನಾದ ಶ್ರೀ ಪರಮೇಶ್ವರನೂ ಈ ವ್ರತವನ್ನು ಅನುಷ್ಠಾನಮಾಡಿ ನಿರ್ವಿಘ್ನದಿಂದ ತ್ರಿಪುರಾಸುರ ಸಂಹಾರವನ್ನು ಮಾಡಿದನು.

೧೦. ಪರ್ವತ ಮತ್ತು ವೃಕ್ಷಾದಿಗಳ ಸಹಿತವಾದ ಈ ಭೂಮಿಯು ಪೂರ್ವದಲ್ಲಿ ಸಮುದ್ರದಲ್ಲಿ ಮುಳುಗಿದಾಗ ಆ ಸಮುದ್ರದಲ್ಲಿಳಿದು ಭೂಮಿಯನ್ನು ಮೇಲಕ್ಕೆತ್ತಿ ಪುನರುದ್ಧಾರಮಾಡುವ ಕಾರ್ಯದಲ್ಲಿ ಪ್ರವರ್ತಿಸುವಾಗ ನಾನೂ ಸಹ ಈ ವ್ರತವನ್ನೇ ಆಚರಿಸಿ ಆ ಕೆಲಸವನ್ನು ನೆರವೇರಿಸಿದೆನು.

೧೧. ಅಯ್ಯಾ ಶತ್ರುತಾಪತನಾದ ಯುಧಿಷ್ಠಿರನೇ ! ಪೂರ್ವದಲ್ಲಿ ಇತರ ರಾಜರೂ ಕೂಡ ತಮ್ಮ ಕಾರ್ಯಸಿದ್ಧಿಗಾಗಿ ಈ ವ್ರತವನ್ನೇ ಆಚರಿಸಿದ್ದರು. ಫಲಾಭಿಲಾಷೆಯಿಂದ ತಪಸ್ಸನ್ನು ಆಚರಿಸುವವರು ನಿರ್ವಿಘ್ನವಾಗಿ ತಮ್ಮ ತಪ ಸಿದ್ಧಿಯಾಗಲೆಂಬ ಉದ್ದೇಶದಿಂದಲೂ, ತಾವು ಮಾಡುವ ಮಹಾಯಜ್ಞಸಿದ್ಧ್ಯ ರ್ಥವಾಗಿಯೂ, ಈ ವ್ರತವನ್ನು ಆಚರಿಸಿದರು. ಅದರಿಂದ ಅವರಿಗೆ ಆ ಕಾರ್ಯ ಗಳಲ್ಲಿ ನಿರ್ವಿಘ್ನದಿಂದ ಕಾರ್ಯಸಿದ್ಧಿಯಾಗಿದೆ.

ಅನೇನ ಕೃತಮಾತ್ರೇಣ ಸರ್ವವಿಘ್ನೈಃ ಪ್ರಮುಚ್ಯತೇ ।
ಮೃತೋ ರುದ್ರಪುರಂ ಯಾತಿ ವರಾಹವಚನಂ ಯಥಾ ॥ ೧೨ ॥

ವಿಘ್ನಾನಿ ತಸ್ಯ ನ ಭವಂತಿ ಗೃಹೇ ಕದಾಚಿ ।
ದ್ಧರ್ಮಾರ್ಥಕಾಮ ಸುಖಸಿದ್ಧಿ ವಿಘಾತಕಾನಿ ।
ಯಃ ಸಪ್ತಮೀಂದುಶಕಲಾಕೃತಿಕೈಕದಂತಂ ।
ವಿಘ್ನೇಶಮರ್ಚಯತಿ ನಕ್ತಕೃತೀ ಚತುರ್ಥ್ಯಾಂ ॥ ೧೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವಿನಾಯಕ ಚತುರ್ಥೀವ್ರತಂ ನಾಮ ತ್ರಯಸ್ತ್ರಿಂಶತ್ತಮೋಽಧ್ಯಾಯಃ.

ಇತಿ ಚತುರ್ಥೀಕಲ್ಪಃ ಸಮಾಪ್ತಃ.



---

೧೨. ಈ ವ್ರತಾನುಷ್ಠಾನ ಮಾತ್ರದಿಂದ ಸರ್ವವಿಘ್ನಗಳೂ ನಿವಾರಣೆಯಾಗುವುವು. ದೇಹಾಂತದಲ್ಲಿ ಅವನು ಶಿವಲೋಕವನ್ನು ಪಡೆಯುವನು ಎಂದು ವರಾಹಸ್ವಾಮಿಯ ವಚನವಿದೆ.

೧೩. ಯಾವಾತನು ಚತುರ್ಥೀದಿನ ನಕ್ತಭೋಜನ ಸಂಕಲ್ಪ ಪೂರ್ವಕವಾಗಿ ಸಪ್ತಮೀ ಚಂದ್ರನೋಪಾದಿಯಲ್ಲಿ ವಕ್ರವಾದ ಏಕದಂತವುಳ್ಳ ವಿಘ್ನೇಶನನ್ನು ಅರ್ಚಿಸಿ ಈ ವ್ರತವನ್ನಾಚರಿಸುವನೋ ಅಂತಹವನ ಮನೆಯಲ್ಲಿ ಧರ್ಮಾರ್ಥ ಕಾಮ ಈ ತ್ರಿವರ್ಗಗಳ ಸಿದ್ಧಿಗೂ ಮತ್ತು ಇತರ ಸುಖಲಾಭಗಳಿಗೂ ವಿಘಾತಕಗಳಾದ ವಿಘ್ನಗಳು ಯಾವಾಗಲೂ ಬರುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವಿನಾಯಕಚತುರ್ಥೀ ವ್ರತ ವರ್ಣನೆಯೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.

ಇಲ್ಲಿಗೆ ಚತುರ್ಥೀ ಕಲ್ಪವು ಸಮಾಪ್ತಿ.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುಸ್ತ್ರಿಂಶತ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಶಾಂತಿವ್ರತಂ ಪ್ರವಕ್ಷ್ಯಾಮಿ ಶೃಣುಷ್ವೈಕಮನಾಧುನಾ ।
ಯೇನ ಚೀರ್ಣೇನ ಶಾಂತಿಃ ಸ್ಯಾತ್ಸರ್ವದಾ ಗೃಹಮೇಧಿನಾಂ ॥ ೧ ॥

ಪಂಚಮ್ಯಾಂ ಶುಕ್ಲಪಕ್ಷಸ್ಯ ಕಾರ್ತಿಕೇ ಮಾಸಿ ಪಾರ್ಥಿವ ।
ಆರಭ್ಯ ವರ್ಷಮೇಕಂ ತು ಹ್ಯಶ್ನೀಯಾದಾಮ್ಲವರ್ಜಿತಂ ॥ ೨ ॥

---

## ಮೂವತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ! ಈಗ ಶಾಂತಿ ಫಲದಾಯಕವಾದ ಶಾಂತಿವ್ರತಗಳನ್ನು ಹೇಳುತ್ತೇನೆ. ಸಾವಧಾನದಿಂದ ಶ್ರವಣ ಮಾಡು. ಅ ಶಾಂತಿ ವ್ರತಾಚರಣೆಯಿಂದ ಗೃಹಸ್ಥರಿಗೆ ಸರ್ವದಾ ಶಾಂತಿಯು ಲಭಿಸುವುದು.

೨. ಅಯ್ಯಾ ರಾಜನೇ ! ಕಾರ್ತಿಕಮಾಸದ ಶುಕ್ಲಪಕ್ಷ ಪಂಚಮಿಯಲ್ಲಿ ಪ್ರಾರಂಭಮಾಡಿ ಒಂದುವರ್ಷ ಪೂರ್ತಿ ಹುಳಿಯನ್ನು ಸೇವಿಸುವುದನ್ನು (ಆಮ್ಲರಸ) ವರ್ಜಿಸಬೇಕು. (ಎಂದರೆ ಹುಣಿಸೇಹಣ್ಣನ್ನು ಭೋಜನ ಪದಾರ್ಥ ಗಳಿಗೆ ಹಾಕಬಾರದು).

ನಕ್ತಂ ದೇವಂ ಚ ಸಂಪೂಜ್ಯ ಹರಿಂ ಶೇಷೋಪರಿ ಸ್ಥಿತಂ ।
ಅನಂತಾಯೇತಿ ಪಾದೌ ತು ಧೃತರಾಷ್ಟ್ರಾಯ ವೈ ಕಟಿಂ ॥ ೩ ॥

ಉದರಂ ತಕ್ಷಕಾಯೇತಿ ಉರಃ ಕರ್ಕೋಟಕಾಯ ಚ ।
ಪದ್ಮಾಯ ಕರ್ಣೌ ಸಂಪೂಜ್ಯ ಮಹಾಪದ್ಮಾಯ ದೋರ್ಯುಗಂ ॥ ೪ ॥

ಶಂಖಪಾಲಾಯ ವಕ್ಷಸ್ತು ಕುಲಿಕಾಯೇತಿ ವೈ ಶಿರಃ ।
ಏವಂ ವಿಷ್ಣುಂ ಸರ್ವಗತಂ ಪೃಥಗೇವ ಪ್ರಪೂಜಯೇತ್ ॥ ೫ ॥

ಕ್ಷೀರೇಣ ಸ್ನಪನಂ ಕುರ್ಯಾದ್ಧರಿಮುದ್ದಿಶ್ಯ ವಾಗ್ಯತಃ ।
ತದಗ್ರೇ ಹೋಮಯೇತ್ಕ್ಷೀರಂ ತಿಲೈಃ ಸಹ ವಿಚಕ್ಷಣಃ ॥ ೬ ॥

---

೩. ಆದಿನ ರಾತ್ರಿಯಲ್ಲಿ ಶೇಷಶಾಯಿಯಾದ ಶ್ರೀ ಮಹಾವಿಷ್ಣುವನ್ನು ಅರ್ಚಿಬೇಕು. ಪೂಜಾಕಾಲದಲ್ಲಿ ಅನಂತಾಯ ನಮಃ ಎಂದು ಶ್ರೀ ಮಹಾ ವಿಷ್ಣುವಿನ ಪಾದಗಳಲ್ಲಿಯೂ, ಧೃತರಾಷ್ಟ್ರಾಯ ನಮಃ ಎಂದು ಸೊಂಟದಲ್ಲಿಯೂ ಪೂಜಿಸಬೇಕು.

೪ ಮತ್ತು ತಕ್ಷಕಾಯ ನಮಃ ಎದು ಉದರದಲ್ಲೂ, ಕರ್ಕೋಟಕಾಯ ನಮಃ ಎಂದು ಎದೆಯಲ್ಲಿಯೂ, ಪದ್ಮಾಯ ನಮಃ ಎಂದು ಕಿವಿಗಳಲ್ಲಿಯೂ, ಮಹಾಪದ್ಮಾಯ ನಮಃ ಎಂದು ಬಾಹುಗಳಲ್ಲಿಯೂ ಅರ್ಚಿಸಬೇಕು.

೫. ಶಂಖಪಾಲಾಯ ನಮಃ ಎಂದು ವಕ್ಷಸ್ಥಳವನ್ನೂ, ಕುಲಿಕಾಯ ನಮಃ ಎಂದು ಶಿರಸ್ಸನ್ನೂ ಈ ರೀತಿಯಲ್ಲಿ ಸರ್ವವ್ಯಾಪಕನಾದ ಶ್ರೀ ಮಹಾ ವಿಷ್ಣುವನ್ನು ಪ್ರತ್ಯಂಗಗಳಲ್ಲೂ ಪೃಥಕ್ಕಾಗಿ ಪೂಜೆಮಾಡಬೇಕು.

೬. ಕರ್ತನು ಪೂಜಾವಿಧಿಯನ್ನರಿತ ಪಂಡಿತನಾಗಿದ್ದರೆ ಮೌನಿಯಾಗಿ ಶ್ರೀ ಹರಿಯನ್ನುದ್ದೇಶಿಸಿ ಕ್ಷೀರಾಭಿಷೇಕವನ್ನು ಮಾಡಬೇಕು. ಮತ್ತು ಆ ಜೀವನ ಪುರೋಭಾಗದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ ತಿಲಮಿಶ್ರಿತವಾದ ಕ್ಷೀರವನ್ನು ಹವಿಸ್ಸನ್ನಾಗಿ ಹೋಮ ಮಾಡಬೇಕು.

ಏವಂ ಸಂವತ್ಸರಸ್ಯಾಂತೇ ಕುರ್ಯಾದ್ಬ್ರಾಹ್ಮಣಭೋಜನಂ ।
ಅಚ್ಯುತಂ ಕಾಂಚನಂ ಕೃತ್ವಾ ಸುವರ್ಣಂ ತು ವಿಚಕ್ಷಣಃ ॥ ೭ ॥

ಗಾಂ ಸವತ್ಸಾಂ ವಸ್ತ್ರಯುಗಂ ಕಾಂಸ್ಯಪಾತ್ರಂ ಸಪಾಯಸಂ ।
ಹಿರಣ್ಯಂ ಚ ಯಥಾಶಕ್ತಿ ಬ್ರಾಹ್ಮಣಾಯೋಪಪಾದಯೇತ್ ॥ ೮ ॥

ಏವಂ ಯಃ ಕುರುತೇ ಭಕ್ತ್ಯಾ ವ್ರತಮೇತನ್ನರಾಧಿಪ ।
ತಸ್ಯ ಶಾಂತಿರ್ಭವೇನ್ನಿತ್ಯಂ ನಾಗಾನಾಮಭಯಂ ತಥಾ ॥ ೯ ॥

ಶೇಷಾಹಿಭೋಗಶಯನಸ್ಥಮಯೋನಿಸೂತಿಂ ।
ಸಂಪೂಜ್ಯ ಯಜ್ಞಪುರುಷಂ ಪತಗೇಂದ್ರನಾಥಂ ।

---

೭. ಪಂಡಿತನಾದವನು ಈರೀತಿ ಒಂದುವರ್ಷದವರೆಗೆ ವ್ರತವನ್ನು ಮಾಡಿ ವರ್ಷಾಂತದಲ್ಲಿ ಬ್ರಾಹ್ಮಣರಿಗೆ ಭೋಜನಮಾಡಿಸಿ, ಭಂಗಾರದಿಂದ ಮಾಡಿಸಿದ ಶ್ರೀ ಮಹಾವಿಷ್ಣುವಿನ ಪ್ರತಿಮೆಯನ್ನು ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನ ಮಾಡಬೇಕು.

೮. ಮತ್ತು ಎಳಗರುವಿನಿಂದ ಸಹಿತವಾಗಿರುವ ಹಾಲುಕೊಡುವ ಹಸು ಎರಡು ಬಟ್ಟೆಗಳು, ಪಾಯಸದಿಂದ ಪೂರಿತವಾದ ಕಂಚಿನಪಾತ್ರೆ, ಹಿರಣ್ಯ ಇವುಗಳನ್ನೂ ಯಥಾಶಕ್ತಿ ಆ ಬ್ರಾಹ್ಮಣನಿಗೆ ದಾನಮಾಡಬೇಕು.

೯. ಅಯ್ಯಾ ರಾಜನೇ ! ಭಕ್ತಿಪೂರ್ವಕವಾಗಿ ಪೂರ್ವೋಕ್ತ ಪ್ರಕಾರ ಈ ವ್ರತವನ್ನು ಆಚರಿಸಿದವನಿಗೆ ಸದಾ ಶಾಂತಿಯು ಲಭಿಸುವುದಲ್ಲದೆ ಸರ್ಪ ಭೀತಿಯೂ ನಿವಾರಣೆಯಾಗುವುದು.

೧೦. ಯಾರು ಶುಕ್ಲಪಕ್ಷದ ಪಂಚಮೀ ತಿಥಿಯಲ್ಲಿ ಶೇಷಶಾಯಿಯೂ, ಅಯೋನಿಜನೂ, ಸಕಲಯಜ್ಞಾಭಿಮಾನಿಯೂ, (ಯಜ್ಞಭೋಕ್ತೃವೂ) ಗರುಡ ವಾಹನನೂ ಆಗಿ ಇರುವ ಶ್ರೀ ಮಹಾವಿಷ್ಣುವಿಗೆ ಮಧುರ ಭಕ್ಷ್ಯಾದಿಗಳನ್ನು

ಯೇ ಪೂಜಯಂತಿ ಮಧುರೈಃ ಸಿತಪಂಚಮೀಷು ।
ತೇಷಾಂ ನ ನಾಗಜನಿತಂ ಭಯಮಭ್ಯುಪೈತಿ　　　　॥ ೧೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣಯುಧಿಷ್ಠಿರ ಸಂವಾದೇ ಶಾಂತಿವ್ರತಂ ನಾಮಚತುಸ್ತ್ರಿಂಶತ್ತಮೋಽಧ್ಯಾಯ.



---

ಸಮರ್ಪಿಸಿ ಅರ್ಚಿಸಿ ಈ ವ್ರತವನ್ನಾಚರಿಸುವವರೋ ಅಂಥವರಿಗೆ ಯಾವಾಗಲೂ ಸರ್ಪಭಯವು ಸಂಭವಿಸುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದ ಶಾಂತಿವ್ರತವರ್ಣನೆ ಎಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚತ್ರಿಂಶತ್ತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಮಧುರಾ ಭಾರತೀಕೇನ ವ್ರತೇನ ಮಧುಸೂದನ ।
ತಥೈವ ಜನಸೌಭಾಗ್ಯಮತಿವಿದ್ಯಾಸು ಕೌಶಲಂ । ॥ ೧ ॥

ಅಭೇದಶ್ಚಾಪಿ ದಂಪತ್ಯೋಸ್ತಥಾ ಬಂಧುಜನೇನ ಚ ।
ಆಯುಶ್ಚ ವಿಪುಲಂ ಪುಂಸಾಂ ಜಾಯತೇ ಕೇನ ಕೇಶವ ॥ ೨ ॥

---

## ಮೂವತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಶ್ರೀ ಕೃಷ್ಣಪರಮಾತ್ಮನೇ ! ಯಾವ ವ್ರತಾಚರಣದಿಂದ ವಾಜ್ಮಾಧುರ್ಯವು ಲಭಿಸುವುದು. ಮತ್ತು ಜನ ಸೌಭಾಗ್ಯ ಮತ್ತು ಗಣ್ಯವಾದ ವಿದ್ಯೆ ಇವುಗಳಲ್ಲಿ ಅತಿಪ್ರಾವೀಣ್ಯತೆಯು ಲಭಿಸುವುದು.

೨. ಎಲೈ ಕೇಶವನೇ ! ದಂಪತಿಗಳಿಗೆ ವಿಯೋಗದುಃಖವು ತೊಲಗಿ ಅನ್ಯೋನ್ಯತೆ, ಹಾಗೆಯೇ ಬಂಧು ಜನಗಳಿಗೆ ಅವಿಯೋಗ, ಪುರುಷರಿಗೆ ದೀರ್ಘಾಯಸ್ಸು ಈ ಫಲಗಳೆಲ್ಲಾ ಯಾವ ವ್ರತಾಚರಣೆಯಿಂದ ಪ್ರಾಪ್ತವಾಗುವುದು ? ಎಂದನು.

॥ ಶ್ರೀ ಕೃಷ್ಣ ಉವಾಚ ॥

ಸಮ್ಯಕ್ಪೃಷ್ಟಸ್ತ್ವಯಾ ರಾಜಞ್ಛೃಣು ಸಾರಸ್ವತಂ ವ್ರತಂ ।
ಯಸ್ಯ ಸಂಕೀರ್ತನಾದೇವ ತುಷ್ಯತೀಹ ಸರಸ್ವತೀ ॥ ೩ ॥

ಯೋಽಯಂ ಭಕ್ತಃ ಪುಮಾನ್ಕುರ್ಯಾದೇತದ್ವ್ರತಮನುತ್ತಮಮ್ ।
ತದ್ವತ್ಸರಾದೌ ಸಂಪೂಜ್ಯ ತಂ ವಿಪ್ರೇಣ ಸಮಾಚರೇತ್ ॥ ೪ ॥

ಅಥ ಚಾದಿತ್ಯವಾರೇಣ ಗ್ರಹತಾರಾಬಲೇನ ಚ ।
ಪಾಯಸಂ ಭೋಜಯಿತ್ವಾ ಚ ಕುರ್ಯಾದ್ಬ್ರಾಹ್ಮಣವಾಚನಂ ॥ ೫ ॥

ಶುಕ್ಲವಸ್ತ್ರಾಣಿ ದದ್ಯಾಚ್ಚ ಸಹಿರಣ್ಯಾನಿ ಶಕ್ತಿತಃ ।
ಗಾಯತ್ರೀಂ ಪೂಜಯೇದ್ಭಕ್ತ್ಯಾ ಶುಕ್ಲಮಾಲ್ಯಾನುಲೇಪನೈಃ ।
ಏಭಿರ್ಮಂತ್ರಪದೈಃ ಪಶ್ಚಾತ್ಪೂರ್ವಂ ಕೃತ್ವಾ ಕೃತಾಂಜಲಿಃ ॥ ೬ ॥

---

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ! ನೀನು ಒಳ್ಳೆಯ ಪ್ರಶ್ನೆಯನ್ನೇ ಮಾಡಿದೆ. ಅದಕ್ಕಾಗಿ ಸಾರಸ್ವತವೆಂಬ ವ್ರತವನ್ನು ಹೇಳುತ್ತೇನೆ ಶ್ರವಣಮಾಡು. ಆ ವ್ರತದ ನಾಮಸಂಕೀರ್ತನೆ ಮಾಡಿದರೂ ಸರಸ್ವತಿಯು ಈ ಭೂಲೋಕದಲ್ಲಿ ಸುಪ್ರೀತಳಾಗುವಳು.

೪. ಆದುದರಿಂದ ಭಕ್ತನಾದವನು ಅತ್ಯುತ್ತಮವಾದ ಈ ವ್ರತವನ್ನಾ ಚರಿಸತಕ್ಕದು.

೫. ಆದಿತ್ಯವಾರದಲ್ಲಾಗಲಿ ಅಥವಾ ಗ್ರಹಬಲ ಚಂದ್ರತಾರಾಬಲ ವಿರುವ ಕಾಲದಲ್ಲಿಯಾಗಲಿ, ಬ್ರಾಹ್ಮಣನಿಗೆ ಪಾಯಸವನ್ನು ಭೋಜನಮಾಡಿಸಿ ಈ ವ್ರತವನ್ನು ಅವನ ಮುಖದಿಂದ ವಾಚನಮಾಡಿಸಬೇಕು.

೬. ಅನಂತರ ಸ್ವಶಕ್ತಿಗನುಸಾರವಾಗಿ ಶುಭ್ರವಸ್ತ್ರಗಳನ್ನು ಹಿರಣ್ಯ ಸಹಿತ ವಾಗಿ ಆ ವಾಚಕ ಬ್ರಾಹ್ಮಣನಿಗೆ ದಾನಮಾಡಬೇಕು. ಅನಂತರ ಭಕ್ತಿಪೂರ್ವಕ ವಾಗಿ ಗಾಯತ್ರೀದೇವಿಗೆ ಶುಕ್ಲಮಾಲ್ಯ ಮತ್ತು ಸುಗಂಧಾನುಲೇಪನ ಇತ್ಯಾದಿ ಗಳಿಂದ ಪೂಜೆಮಾಡಿ ಮುಂದೆ ಹೇಳುವ ಮಂತ್ರಗಳನ್ನು ಉಚ್ಚರಿಸುತ್ತಾ ಕೈಜೋಡಿಸಿ ಪ್ರಾರ್ಥಿಸಬೇಕು.

**ಯಥಾ ತು ದೇವಿ ಭಗವಾನ್ಬ್ರಹ್ಮಾ ಲೋಕಪಿತಾಮಹಃ ।**
**ತ್ವಾಂ ಪರಿತ್ಯಜ್ಯ ನೋ ತಿಷ್ಠೇತ್ತಥಾ ಭವ ವರಪ್ರದಾ ॥ ೭ ॥**

**ವೇದಶಾಸ್ತ್ರಾಣಿ ಸರ್ವಾಣಿ ನೃತ್ಯಗೀತಾದಿಕಂ ಚ ಯತ್ ।**
**ವಾಹಿತಂ ಯತ್ತ್ವಯಾ ದೇವಿ ತಥಾ ಮೇ ಸಂತು ಸಿದ್ಧಯಃ ॥ ೮ ॥**

**ಲಕ್ಷ್ಮೀರ್ಮೇಧಾ ವರಾ ರಿಷ್ಟಿರ್ಗೌರೀ ತುಷ್ಟಿಃ ಪ್ರಭಾ ಮತಿಃ ।**
**ಏತಾಭಿಃ ಪಾಹಿ ತನುಭಿರಷ್ಟಾಭಿರ್ಮಾಂ ಸರಸ್ವತಿ ॥ ೯ ॥**

---

೭. ಯಥಾತು ದೇವಿ ಭಗವಾನ್ ಬ್ರಹ್ಮಾಲೋಕ ಪಿತಾಮಹಃ ।
ತ್ವಾಂ ಪರಿತ್ಯಜ್ಯ ನೋ ತಿಷ್ಠೇತ್ ತಥಾಭವ ವರಪ್ರದಾ ॥

ಎಂಬುದು ಪ್ರಾರ್ಥನಾ ಮಂತ್ರ.

ಎಲೌ ಸರಸ್ವತೀದೇವೀಯೇ ! ಪೂಜ್ಯನಾಗಿಯೂ, ಸರ್ವಲೋಕ ಪಿತಾಮಹನಾಗಿಯೂ ಇರುವ ಬ್ರಹ್ಮನು ಯಾವಾಗಲೂ ನಿನ್ನನ್ನಗಲದೆ ಇರುವ ಹಾಗೆ ನನಗೂ ನಿನ್ನ ಸಾನ್ನಿಧ್ಯವು ಸದಾ ಇರುವಂತೆ ಕರುಣಿಸು ಎಂದು ಈ ಮಂತ್ರದ ಅರ್ಥ.

೮. ವೇದ ಶಾಸ್ತ್ರಾಣಿ ಸರ್ವಾಣಿ ನೃತ್ಯಗೀತಾದಿ ಕಂಚಯೇತ್ ।
ವಾಹಿತಂ ಯತ್ತ್ವಯಾದೇವಿ ತಥಾಮೇ ಸಂತುಸಿದ್ಧಯಃ ॥

ಎಂದು ಉಚ್ಚರಿಸಿ ಪ್ರಾರ್ಥಿಸಬೇಕು. ಎಲೌ ವಿದ್ಯಾದೇವಿಯೇ ! ನೀನು ಯಾವ ಸಮಸ್ತ ವೇದ ಮತ್ತು ಶಾಸ್ತ್ರಗಳನ್ನೂ ಇತರ ನೃತ್ಯ ಗೀತಾದಿ ವಿದ್ಯೆಗಳನ್ನೂ ಧರಿಸಿರುವೆಯೋ ಆ ವಿದ್ಯಾಲಾಭವು ನನಗೂ ಆಗಲಿ ಎಂದು ಮಂತ್ರಾರ್ಥ.

೯. ಲಕ್ಷ್ಮೀರ್ಮೇಧಾವರಾರಿಷ್ಟಿರ್ಗೌರೀ ತುಷ್ಟಿಃ ಪ್ರಭಾಮತಿಃ ।
ಏತಾಭಿಃ ಪಾಹಿ ತನುಭಿರಷ್ಟಾಭಿರ್ಮಾಂ ಸರಸ್ವತಿ ॥

ಇದು ಮತ್ತೊಂದು ಪ್ರಾರ್ಥನಾ ಮಂತ್ರ. ಇದರ ಅರ್ಥವೇನೆಂದರೆ—ಲಕ್ಷ್ಮೀ, ಮೇಧಾ, ವರಾ, ರಿಷ್ಟಿ, ಗೌರೀ, ತುಷ್ಟಿ, ಪ್ರಭಾ, ಮತಿ, ಎಂಬ ನಿನ್ನ ಶರೀರದ ಅಷ್ಟಾಂಶಗಳಿಂದ ನನ್ನನ್ನು ರಕ್ಷಿಸು.

ಏವಂ ಸಂಪೂಜ್ಯ ಗಾಯತ್ರೀಂ ವೀಣಾಕ್ಷಮಣಿಧಾರಿಣೀಂ ।
ಶುಕ್ಲಪಕ್ಷೇऽಕ್ಷತೈರ್ಭಕ್ತ್ಯಾ ಸಕಮಂಡಲುಪುಸ್ತಕಾಂ ॥ ೧೦ ॥

ಮೌನವ್ರತೇನ ಭುಂಜೀತ ಸಾಯಂ ಪ್ರಾತಶ್ಚ ಧರ್ಮವಿತ್ ।
ಪಂಚಮ್ಯಾಂ ಪ್ರತಿಪಕ್ಷೇ ಚ ಪೂಜಯಿತ್ವಾ ಸುವಾಸಿನೀಃ ॥ ೧೧ ॥

ತಿಲೈಶ್ಚ ತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ।
ಕ್ಷೀರಂ ತಥಾ ಹಿರಣ್ಯಂ ಚ ಗಾಯತ್ರೀ ಪ್ರೀಯತಾಮಿತಿ ॥ ೧೨ ॥

ಸಂಧ್ಯಾಯಾಂ ಚ ತತೋ ಮೌನಂ ತದ್ವ್ರತಂ ತು ಸಮಾಚರೇತ್ ।
ನಾಂತರಾ ಭೋಜನಂ ಕುರ್ಯಾದ್ಯಾವನ್ಮಾಸಾಸ್ತ್ರಯೋದಶ ॥ ೧೩ ॥

ಸಮಾಪ್ತೇ ತು ವ್ರತೇ ದದ್ಯಾದ್ಭೋಜನಂ ಶುಕ್ಲತಂಡುಲೈಃ ।
ಪೂರ್ಣಂ ಸುವಸ್ತ್ರಯುಗ್ಮಂ ಚ ಗಾಂ ಚ ವಿಪ್ರಾಯ ಭೋಜನಂ ॥ ೧೪ ॥

---

೧೦. ವೀಣೆ, ಜಪಸರ, ಕಮಂಡಲು, ಪುಸ್ತಕ ಇವುಗಳನ್ನು ಧರಿಸಿದ ಶ್ರೀ ಗಾಯತ್ರೀದೇವಿಯನ್ನು ಶುಕ್ಲಪಕ್ಷ ಪಂಚಮಿಯಲ್ಲಿ ಭಕ್ತಿಪೂರ್ವಕವಾಗಿ ಮಂತ್ರಾಕ್ಷತೆಗಳಿಂದ ಅರ್ಚಿಸಬೇಕು.

೧೧. ಧರ್ಮಜ್ಞನಾದವನು ಈರೀತಿ ಅರ್ಚಿಸಿ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಮೌನವಾಗಿ ಭುಂಜಿಸಬೇಕು. ಪ್ರತಿಪಕ್ಷದ ಪಂಚಮೀ ತಿಥಿಯಲ್ಲೂ ಭಕ್ತಿಪೂರ್ವಕವಾಗಿ ಮಂತ್ರಾಕ್ಷತೆಗಳಿಂದ ಸುವಾಸಿನಿಯರನ್ನು ಪೂಜಿಸಬೇಕು.

೧೨. ಗಾಯತ್ರೀ ಪ್ರೀಯತಾಂ ಎಂಬ ಮಂತ್ರವನ್ನು ಹೇಳಿ ಶ್ರೀ ಗಾಯತ್ರೀ ಪ್ರೀತ್ಯರ್ಥವಾಗಿ ತಿಲ, ಒಂದುಸೇರು ಅಕ್ಕಿ, ತುಪ್ಪ ಸಹಿತವಾದ ಪಾತ್ರೆ, ಹಾಲು ಮತ್ತು ಸುವರ್ಣ ಇವುಗಳನ್ನು ಅವರಿಗೆ ದಾನಮಾಡಬೇಕು.

೧೩. ಹೀಗೆಯೇ ಸಂಧ್ಯಾಕಾಲದಲ್ಲಿಯೂ ಮೌನವಾಗಿ ಈ ವ್ರತವನ್ನಾಚರಿಸಬೇಕು. ವ್ರತಾರಂಭದಲ್ಲಿ ಭೋಜನ ಮಾಡಿದವನು ಒಂದುವರ್ಷ ಕಳೆದು ಹದಿಮೂರನೇ ತಿಂಗಳಿನವರೆಗೂ ಮಧ್ಯೆ ಭೋಜನ ಮಾಡಬಾರದು.

೧೪. ಈ ವ್ರತ ಸಮಾಪ್ತಿಯಾದ ಮೇಲೆ ಬಿಳಿಯ ಅಕ್ಕಿಯಿಂದ ಅನ್ನವನ್ನು ಮಾಡಿ ಬ್ರಾಹ್ಮಣನಿಗೆ ಭೋಜನಮಾಡಿಸಿ, ಗೋವು ಮತ್ತು ವಸ್ತ್ರಯುಗ್ಮ ಇವುಗಳನ್ನು ದಾನಮಾಡಿ, ತಾನೂ ಭೋಜನ ಮಾಡಬೇಕು.

ದೇವ್ಯೈ ವಿತಾನಂ ಘಂಟಾಂ ಚ ಸಿತನೇತ್ರಂ ಪಟಾನ್ವಿತಂ ।
ಚಂದನಂ ವಸ್ತ್ರಯುಗ್ಮಂ ಚ ದಧ್ಯನ್ನಂ ಶಿಖರೈರ್ಯುತಂ ॥ ೧೫ ॥

ತಥೋಪದೇಷ್ಟಾರಮಪಿ ಭಕ್ತ್ಯಾ ಸಂಪೂಜಯೇದ್ಗುರುಂ ।
ವಿತ್ತಶಾಠ್ಯೇನ ರಹಿತೋ ವಸ್ತ್ರಮಾಲ್ಯಾನುಲೇಪನೈಃ ॥ ೧೬ ॥

ಅನೇನ ವಿಧಿನಾ ಯಸ್ತು ಕುರ್ಯಾತ್ಸಾರಸ್ವತಂ ವ್ರತಂ ।
ವಿದ್ಯಾವಾನರ್ಥಯುಕ್ತಶ್ಚ ರಕ್ತಕಂಠಶ್ಚ ಜಾಯತೇ ॥ ೧೭ ॥

ಸರಸ್ವತ್ಯಾಃ ಪ್ರಸಾದೇನ ವ್ಯಾಸವತ್ತು ಕವಿರ್ಭವೇತ್ ।
ನಾರೀ ವಾ ಕುರುತೇ ಯಾ ತು ಸಾಽಪಿ ತತ್ಫಲಭಾಗಿನೀ ॥ ೧೮ ॥

ಬ್ರಹ್ಮಲೋಕೇ ವಸೇತ್ತಾವದ್ಯಾವತ್ಕಲ್ಪಾಯುತತ್ರಯಂ ।
ಸಾರಸ್ವತಂ ವ್ರತಂ ಯಸ್ತು ಶೃಣುಯಾದಪಿ ಯಃ ಪಠೇತ್ ।
ವಿದ್ಯಾಧರಪುರೇ ಸೋಽಪಿ ವಸೇತ್ಕಲ್ಪಾಯುತತ್ರಯಂ ॥ ೧೯ ॥

---

೧೫. ಶ್ರೀದೇವೀ ಪ್ರೀತ್ಯರ್ಥವಾಗಿ ಆಗ ಮೇಲ್ಕಟ್ಟು, ಉತ್ತರೀಯ, ಘಂಟೆ, ಸೂಕ್ಷ್ಮವಾದ ಬಟ್ಟೆ, ಚಂದನ, ವಸ್ತ್ರಯುಗ್ಮ ಮತ್ತು ದಧ್ಯನ್ನ ಇವುಗಳನ್ನೆಲ್ಲಾ ಸಮರ್ಪಿಸಬೇಕು.

೧೬. ಈ ವ್ರತೋಪದೇಷ್ಟ್ರುವಾದ ಗುರುವಿಗೂ ಲೋಭ ಮಾಡದೆ ಅದೇ ರೀತಿಯಾಗಿ ಭಕ್ತಿಪೂರ್ವಕವಾಗಿ ವಸ್ತ್ರಮಾಲ್ಯ ಅನುಲೇಪನಾದಿಗಳನ್ನು ಕೊಟ್ಟು ಪೂಜೆ ಮಾಡಬೇಕು.

೧೭. ಈರೀತಿಯಾಗಿ ಈ ಸಾರಸ್ವತ ವ್ರತವನ್ನು ಆಚರಿಸಿದ ಪುರುಷನು ವಿದ್ಯಾವಂತನೂ, ಧನವಂತನೂ, ಇಂಪಾದ ಕಂಠವುಳ್ಳವನೂ ಆಗುವನು.

೧೮. ಮತ್ತು ಅವನು ಸರಸ್ವತಿಯ ಅನುಗ್ರಹಕ್ಕೆ ಪಾತ್ರನಾಗಿ ಶ್ರೀ ವೇದವ್ಯಾಸರಂತೆಯೇ ಮಹಾಕವಿಯಾಗುತ್ತಾನೆ. ಹೆಂಗಸರು ಈ ವ್ರತವನ್ನಾಚರಿಸಿದರೆ ಅವರೂ ಈ ಫಲಭಾಗಿನಿಯರಾಗುತ್ತಾರೆ. ಮತ್ತು ಮೂರು ಅಯುತಕಲ್ಪಗಳ ಕಾಲ ಬ್ರಹ್ಮಲೋಕ ನಿವಾಸಿಯಾಗುವರು.

೧೯. ಈ ಸಾರಸ್ವತ ವ್ರತವನ್ನು ಶ್ರವಣಮಾಡುವವನೂ, ಪಠಿಸುವವನೂ ಮೂರು ಅಯುತ ಕಲ್ಪಗಳಕಾಲ ವಿದ್ಯಾಧರಪುರದಲ್ಲಿ ವಾಸಿಸುತ್ತಾನೆ.

ಸಂವತ್ಸರಂ ವ್ರತವರೇಣ ಸರಸ್ವತೀಂ ಯೇ ।
ಸಂಪೂಜಯಂತಿ ಜಗತೋ ಜನನೀಂ ಜನಿತ್ರೀಂ ।
ವಿದ್ಯಾವದಾತಹೃದಯಾ ಮಧುರಸ್ವರಾಸ್ತೇ ।
ರೂಪಾನ್ವಿತಾ ಬಹುಕಲಾಕುಶಲಾ ಭವಂತಿ ॥ ೨೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಸರಸ್ವತೀವ್ರತ ನಿರೂಪಣಂ ನಾಮ
ಪಂಚತ್ರಿಂಶತ್ತಮೋಽಧ್ಯಾಯಃ.



---

೨೦. ಈ ವ್ರತಾಚರಣೆಯಿಂದ ಒಂದು ವರ್ಷವವರೆಗೆ ಲೋಕಮಾತೆಯಾಗಿಯೂ, ಸಮಸ್ತ ಫಲದಾಯಿನಿಯಾಗಿಯೂ ಇರುವ ಶ್ರೀ ಸರಸ್ವತಿಯನ್ನು ಯಾರು ಪೂಜಿಸುವರೋ ಅಂಥವರು ವಿದ್ಯಾಸಂಸ್ಕೃತಿಯುಳ್ಳವರೂ, ಮಧುರವಾದ ಕಂಠವುಳ್ಳವರೂ, ಸೌಂದರ್ಯಸಂಪನ್ನರೂ, ಬಹು ಕಲಾಪ್ರವೀಣರೂ ಆಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಸಾರಸ್ವತ ವ್ರತ
ವರ್ಣನೆ ಎಂಬ ಮೂವತ್ತೈದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಟ್‌ತ್ರಿಂಶತ್ತಮೋಽಧ್ಯಾಯಃ

---

**॥ ಶ್ರೀ ಕೃಷ್ಣ ಉವಾಚ ॥**

**ಪಂಚಮೀ ದಯಿತಾ ರಾಜನ್ನಾಗಾನಂದ ವಿವರ್ಧನೀ ।**
**ಪಂಚಮ್ಯಾಂ ಕಿಲ ನಾಗಾನಾಂ ಭವತೀತ್ಯುತ್ಸವೋ ಮಹಾನ್ ॥ ೧ ॥**

**ವಾಸುಕಿಸ್ತಕ್ಷಕಶ್ಚೈವ ಕಾಲಿಕೋ ಮಣಿಭದ್ರಕಃ ।**
**ಧೃತರಾಷ್ಟ್ರೋ ರೈವತಶ್ಚ ಕರ್ಕೋಟಕಧನಂಜಯೌ ॥ ೨ ॥**

---

### ಮೂವತ್ತಾರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಪಂಚಮಿತಿಥಿಯು ನಾಗಗಳಿಗೆ ಪ್ರೀತಿಪಾತ್ರವಾದುದರಿಂದ ನಾಗ (ಸರ್ಪ) ಗಳಿಗೆ ಆನಂದವರ್ಧಕವಾಗಿದೆ. ಸರ್ಪಗಳಿಗೆ ಪಂಚಮಿಯು ಮಹೋತ್ಸವದ ದಿವಸವಾಗಿದೆ.

೨. ಜೀವಿಸುವ ಪ್ರಾಣಿಗಳಿಗೆ ಪ್ರಾಣವಾಯು ಸಂಬಂಧವಿರುವವರೆಗೆ ವಾಸುಕಿ, ತಕ್ಷಕ, ಕಾಲಿಯ, ಮಣಿಭದ್ರಕ, ಧೃತರಾಷ್ಟ್ರ, ರೈವತ, ಕರ್ಕೋಟಕ ಮತ್ತು ಧನಂಜಯ ಈ ನಾಗಗಳು ಪೂಜಿತಗಳಾಗಿ ಅಭಯದಾನ ಮಾಡುವುವು.

ಏತೇ ಪ್ರಯಚ್ಛಂತ್ಯಭಯಂ ಪ್ರಾಣಿನಾಂ ಪ್ರಾಣಜೀವಿನಾಂ ।
ಪಂಚಮ್ಯಾಂ ಸ್ನಪಯಂತೀಹ ನಾಗಾನ್ಕ್ಷೀರೇಣ ಯೇ ನರಾಃ ।
ತೇಷಾಂ ಕುಲೇ ಪ್ರಯಚ್ಛಂತಿ ಅಭಯಂ ಪ್ರಾಣಿನಾಂ ಸದಾ ॥ ೩ ॥

ಶಪ್ತಾ ನಾಗಾ ಯದಾ ಮಾತ್ರಾ ದಹ್ಯಮಾನಾ ದಿವಾನಿಶಂ ।
ನಿರ್ವಾಪಿತಾ ಗವಾಂ ಕ್ಷೀರೈಸ್ತತಃ ಪ್ರಭೃತಿ ವಲ್ಲಭಾಃ ॥ ೪ ॥

॥ ಯುಧಿಷ್ಠಿರ ಉವಾಚ ॥

ಮಾತ್ರಾ ಶಪ್ತಾಃ ಕಥಂ ನಾಗಾಃ ಕಿಮುದ್ದಿಶ್ಯ ಚ ಕಾರಣಂ ।
ಕಥಂ ವಾ ತಸ್ಯ ಶಾಪಸ್ಯ ವಿನಾಶೋಽಭೂಜ್ಜನಾರ್ದನ ॥ ೫ ॥

॥ ಶ್ರೀ ಕೃಷ್ಣ ಉವಾಚ ॥

ಉಚ್ಚೈಃಶ್ರವಾಶ್ವರಾಜಶ್ಚ ಶ್ವೇತವರ್ಣೋಽಮೃತೋದ್ಭವಃ ।
ತಂ ದೃಷ್ಟ್ವಾ ಚಾಬ್ರವೀತ್ಕದ್ರೂರ್ನಾಗಾನಾಂ ಜನನೀ ಸ್ವಸಾಂ ॥ ೬ ॥

---

೩. ಈ ಭೂಲೋಕದಲ್ಲಿ ಶಿಲಾನಿರ್ಮಿತವಾದ ನಾಗ ಪ್ರತಿಮೆಗಳಿಗೆ ಪಂಚಮಿಯ ದಿನ ಹಾಲಿನ ಅಭಿಷೇಕವನ್ನು ಮಾಡಿದ ಮನುಷ್ಯರ ವಂಶದಲ್ಲಿ ಹುಟ್ಟಿದ ಎಲ್ಲಾ ಜನರಿಗೂ ಸದಾ ಈ ನಾಗರು ಅಭಯದಾನ ಮಾಡುವರು.

೪. ಹಿಂದೆ ಸರ್ಪಗಳು ತಮ್ಮ ತಾಯಿಯಿಂದ ಶಪಿಸಲ್ಪಟ್ಟವರಾಗಿ ಆ ಶಾಪಾಗ್ನಿಯಿಂದ ಹಗಲೂ, ರಾತ್ರಿಯೂ ಸುಡಿಸಿಕೊಳ್ಳುತ್ತಿರುವಾಗ ಪಸುಗಳ ಹಾಲಿನಿಂದ ಅಭಿಷಿಕ್ತಗಳಾಗಿ ಆ ಶಾಪಶಾಂತಿಯನ್ನು ಪಡೆದುವು. ಅದು ಮೊದಲ್ಗೊಂಡು ಹಾಲು ಸರ್ಪಗಳ ಪ್ರೀತಿಗೆ ಪಾತ್ರವಾಯಿತು.

೫. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಜನಾರ್ದನನೇ ! ನಾಗ ಮಾತೆಯು ತನ್ನ ಮಕ್ಕಳಾದ ಸರ್ಪಗಳನ್ನು ಹೇಗೆ ಶಪಿಸಿದಳು ? ಶಪಿಸಲು ಕಾರಣವೇನು ? ಅನಂತರ ಆ ಶಾಪನಿವೃತ್ತಿಯು ಹೇಗಾಯಿತು ? ಎಂದನು.

೬. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಪೂರ್ವದಲ್ಲಿ ಅಮೃತಕ್ಕಾಗಿ ಕ್ಷೀರಾಬ್ಧಿಯನ್ನು ಕಡೆಯುವಾಗ ಅಮೃತದ ಜತೆಯಲ್ಲಿ ಉಚ್ಚೈಃಶ್ರವವೆಂಬ ಬಿಳಿಯ ಬಣ್ಣದ ಶ್ರೇಷ್ಠವಾದ ಕುದುರೆ ಜನಿಸಿತು. ಕದಾಚಿತ್ ನಾಗಮಾತೆಯಾದ ಕದ್ರುವು ಆ ಉಚ್ಚೈಃಶ್ರವವೆಂಬ ಅಶ್ವರತ್ನವನ್ನು ನೋಡಿ ತನ್ನ ತಂಗಿಯನ್ನು ಕರೆದು ಹೀಗೆ ಹೇಳಿದಳು.

ಅಶ್ವರತ್ನಮಿದಂ ಶ್ವೇತಂ ಪಶ್ಯ ಪಶ್ಯಾಮೃತೋದ್ಭವಂ ।
ಕೃಷ್ಣಾಂಶ್ಚ ವೀಕ್ಷಸೇ ಬಾಲಾನ್ಸರ್ವಶ್ವೇತಾನುತಾದ್ಯ ವೈ ॥ ೭ ॥

॥ ವಿನತೋವಾಚ ॥

ಸರ್ವಶ್ವೇತೋ ಹಯವರೋ ನಾಯಂ ಕೃಷ್ಣೋ ನ ಲೋಹಿತಃ ।
ಕಥಂ ತ್ವಂ ವೀಕ್ಷಸೇ ಕೃಷ್ಣಂ ವಿನತೋವಾಚ ತಾಂ ಸ್ವಸಾಂ ॥ ೮ ॥

॥ ಕದ್ರೂರುವಾಚ ॥

ವೀಕ್ಷೇಽಹಮೇಕನಯನಾ ಕೃಷ್ಣಬಾಲಸಮನ್ವಿತಂ ।
ದ್ವಿನೇತ್ರಾ ಚ ತ್ವಂ ವಿನತೇ ನ ಪಶ್ಯಸಿ ಪಣಂ ಕುರು ॥ ೯ ॥

॥ ವಿನತೋವಾಚ ॥

ಅಹಂ ದಾಸೀ ಭವಿತ್ರೀ ತೇ ಕೃಷ್ಣಕೇಶೇ ಪ್ರದರ್ಶಿತೇ ।
ಸ ಚೇದ್ದರ್ಶಯಸೇ ಕದ್ರು ಮಮ ದಾಸೀ ಭವಿಷ್ಯಸಿ ॥ ೧೦ ॥

---

೭. ಎಲೌ ಸಹೋದರಿ ! ಸಮುದ್ರ ಮಥನಕಾಲದಲ್ಲಿ ಆವಿರ್ಭೂತವಾದ ಈ ಅಶ್ವರತ್ನವನ್ನು ನೋಡು ನೋಡು. ಈ ಕುದುರೆಯ ಎಲ್ಲಾ ಅವಯವಗಳೂ ಬಿಳುಪಾಗಿ ಬಾಲ ಮಾತ್ರ ಕಪ್ಪಾಗಿ ಕಾಣುವುದಿಲ್ಲವೇ ? ಅಥವಾ ಈ ದರ್ಶನ ವೇಳೆಯಲ್ಲಿ ಸರ್ವಾಂಗಗಳಲ್ಲೂ ಬಿಳುಪಾಗಿ ಕಾಣುತ್ತದೆಯೋ ಎಂದಳು.

೮. ವಿನತೆಯು ಹೇಳುತ್ತಾಳೆ—ಶ್ರೇಷ್ಠವಾದ ಈ ಕುದುರೆಯು ಸರ್ವಾಂಗ ಗಳಲ್ಲೂ ಬಿಳುಪಾಗಿದೆ. ಇದರಲ್ಲಿ ಕಪ್ಪು ಲೇಶಮಾತ್ರವೂ ಇಲ್ಲ. ಕೆಂಪೂ ಇಲ್ಲ. ಆದಾಗ್ಯೂ ಬಾಲದಲ್ಲಿ ಕಪ್ಪು ಇರುವುದು ನಿನಗೆ ಹೇಗೆ ಕಂಡಿತು ? ಎಂದಳು.

೯. ಕದ್ರುವು ಹೇಳುತ್ತಾಳೆ—ಎಲೌ ವಿನತೆಯೇ ! ನನಗೆ ಒಂದೇ ಕಣ್ಣಿದ್ದರೂ ಈ ಕುದುರೆಯು ಕಪ್ಪು ಬಾಲವುಳ್ಳದ್ದೆಂದು ಯಥಾರ್ಥವಾಗಿ ನೋಡಿದೆನು. ನಿನಗೆ ಎರಡು ಕಣ್ಣಿದ್ದರೂ ಈ ವಿಷಯವನ್ನು ನೋಡಿ ತಿಳಿದುಕೊಳ್ಳಲಾರೆಯಲ್ಲಾ ! ಈ ವಿಷಯದಲ್ಲಿ ಪಂಥ ಕಟ್ಟೋಣವೇ ? ಎಂದಳು.

೧೦. ವಿನತೆಯು ಹೇಳುತ್ತಾಳೆ—ಎಲೌ ಕದ್ರುವೇ ! ನೀನು ಈ ಕುದುರೆಯ ಬಾಲದಲ್ಲಿ ಕಪ್ಪು ಕೂದಲನ್ನು ತೋರಿಸಿದರೆ ನಾನು ಜೀವಾವಧಿ ನಿನ್ನ ದಾಸಿಯಾಗಿರುವೆನು. ಆ ರೀತಿ ತೋರಿಸದೆ ಹೋದ ಪಕ್ಷದಲ್ಲಿ ನೀನು ನನಗೆ ದಾಸಿಯಾಗಿರಬೇಕು ಎಂದಳು.

ಏವಂ ತೇ ವಿಪಣಂ ಕೃತ್ವಾ ಗತೇ ಕ್ರೋಧಸಮನ್ವಿತೇ ।
ಸುಷುಪ್ತೇ ಪ್ರಾಜ್ಯದೋಷೇ ತು ಕದ್ರೂರ್ಜಿಹ್ಮಮಚಿಂತಯತ್ ॥ ೧೧ ॥

ಆಹೂಯ ಪುತ್ರಾನ್ಪ್ರೋವಾಚ ಬಾಲಾ ಭೂತ್ವಾ ಹಯೋತ್ತಮೇ ।
ತಿಷ್ಠಧ್ವಂ ವಿಪಣಂ ಜೇಷ್ಯೇ ವಿನತಾಂ ಜಯಗೃದ್ಧಿನೀಂ ॥ ೧೨ ॥

ಪ್ರೋಚುಸ್ತೇ ಜಿಹ್ಮಬುದ್ಧಿಂ ತಾಂ ನಾಗಾಃ ಕದ್ರೂಂ ವಿಗೃಹ್ಯ ಚ ।
ಅಧರ್ಮ ಏಷ ತು ಮಹಾನ್ಕರಿಷ್ಯಾಮೋ ನ ತೇ ವಚಃ ॥ ೧೩ ॥

ಅಶಪನ್ಮ್ರುಷಿತಾ ಕದ್ರೂಃ ಪಾವಕೋ ವಃ ಪ್ರಧಕ್ಷ್ಯತಿ ।
ಗತೇ ಬಹುತಿಥೇ ಕಾಲೇ ಪಾಂಡವೋ ಜನಮೇಜಯಃ ।
ಸರ್ಪಸತ್ರಂ ಸ ಕರ್ತಾ ವೈ ಭೂಮಾವನ್ಯೈಃ ಸುದುಷ್ಕರಂ ॥ ೧೪ ॥

---

೧೧. ಈ ರೀತಿಯಾಗಿ ಆ ಸವತಿಯರು ಶಪಥಮಾಡಿ ಪರಸ್ಪರ ಕ್ರೋಧದಿಂದ ಕೂಡಿ ತಮ್ಮ ತಮ್ಮ ನಿವಾಸಕ್ಕೆ ಹೊರಟುಹೋದರು. ಅವರಲ್ಲಿ ಕದ್ರುವೆಂಬ ನಾಗಮಾತೆಯು ರಾತ್ರಿಯಲ್ಲಿ ಪಶ್ಚಾದ್ಭಾಗ ಕಳೆದು ಎಲ್ಲರೂ ಗಾಢನಿದ್ರಾವಶರಾಗಿರಲು ಚಿಂತಾಯುಕ್ತಳಾದ ಕದ್ರುವು ನಿದ್ರೆಬಾರದೆ ಯೋಚಿಸುತ್ತಿರುವಾಗ ಮೋಸಮಾಡಬೇಕೆಂದು ದುರಾಲೋಚನೆ ಮಾಡಿದಳು.

೧೨. ಅನಂತರ ಅವಳು ತನ್ನ ಮಕ್ಕಳಾದ ಸರ್ಪಗಳನ್ನು ಕರೆದು ಎಲೈ ಪುತ್ರರೇ! ನೀವು ಉಚ್ಚೈಃಶ್ರವಸೆಂಬ ಶ್ರೇಷ್ಠವಾದ ಕುದುರೆಯ ಬಾಲವನ್ನು ಸುತ್ತಿ ಹಾಕಿ ಬಾಲದ ಆಕಾರದಿಂದಿರಬೇಕು. ನೀವು ಹಾಗೆ ಮಾಡಿದರೆ ಈ ಪಂಥದಲ್ಲಿ ಜಯದಾಶೆಯುಳ್ಳವಳಾಗಿರುವ ವಿನತೆಯನ್ನು ನಾನು ಗೆಲ್ಲುವೆನು ಎಂದಳು.

೧೩. ಈರೀತಿ ಮೋಸಮಾಡಬೇಕೆಂದು ಹೇಳಿದ ಮಾತೆಯಾದ ಕದ್ರುವಿನ ಮಾತನ್ನು ಕೇಳಿ, ಆ ಸರ್ಪಗಳು ಅವಳ ದುರಭಿಪ್ರಾಯವನ್ನು ದೂಷಿಸಿ, ಇದು ಮಹಾ ಅನ್ಯಾಯ, ಅಧರ್ಮದ ಕೆಲಸವಾದುದರಿಂದ ನಿನ್ನ ಮಾತನ್ನು ನಾವು ನಡೆಸಲಾರವು ಎಂದು ಉತ್ತರ ಹೇಳಿದುವು. ಈ ನಿರಾಕರಣವಚನವನ್ನು ಕೇಳಿ ಕದ್ರುವು ಕೋಪಗೊಂಡವಳಾಗಿ 'ನಿಮ್ಮನ್ನು ಅಗ್ನಿಯು ದಹನಮಾಡಲಿ' ಎಂದು ಶಪಿಸಿದಳು.

೧೪. ಮುಂದೆ ಕೆಲವುಕಾಲ ಕಳೆದಮೇಲೆ ಪಾಂಡುಚಕ್ರವರ್ತಿಯ ವಂಶದಲ್ಲಿ ಜನಮೇಜಯನೆಂಬ ರಾಜನು ಜನಿಸುವನು. ಅವನು ಭೂಲೋಕದಲ್ಲಿ ಇತರರು ಯಾರಿಂದಲೂ ಮಾಡಲಶಕ್ಯವಾದ ಸರ್ಪಯಾಗವನ್ನು ಮಾಡುವನು.

ತಸ್ಮಿನ್ಸತ್ರೇ ಚ ತಿಗ್ಮಾಂಶುಃ ಪಾವಕೋ ಭಕ್ಷಯಿಷ್ಯತಿ ।
ಏವಂ ಶಪ್ತ್ವಾ ತದಾ ಕದ್ರೂಃ ಪ್ರತ್ಯುವಾಚ ನ ಕಿಂಚನ ॥ ೧೫ ॥

ಮಾತ್ರಾ ಶಪ್ತಸ್ತದಾ ನಾಗಃ ಕರ್ತವ್ಯಂ ನಾನ್ವಪದ್ಯತ ।
ವಾಸುಕಿರ್ದುಃಖಸಂತಪ್ತಃ ಪಪಾತ ಭುವಿ ಮೂರ್ಛಿತಃ ॥ ೧೬ ॥

ವಾಸುಕಿಂ ದುಃಖಿತಂ ದೃಷ್ಟ್ವಾ ಬ್ರಹ್ಮಾ ಪ್ರೋವಾಚ ಸಾಂತ್ವಯನ್ ।
ಮಾಶುಚೋ ವಾಸುಕೇಽತ್ಯರ್ಥಂ ಶೃಣು ಮದ್ವಚನಂ ಪರಂ ॥ ೧೭ ॥

ಯಾಯಾವರಕುಲೇ ಜಾತೋ ಜರತ್ಕಾರುರಿತಿ ದ್ವಿಜಃ ।
ಭವಿಷ್ಯತಿ ಮಹಾತೇಜಾಸ್ತಸ್ಮಿನ್ಕಾಲೇ ತಪೋನಿಧಿಃ ॥ ೧೮ ॥

ಭಗಿನೀಂ ಚ ಜರತ್ಕಾರುಂ ತಸ್ಯ ತ್ವಂ ಪ್ರತಿದಾಸ್ಯಸಿ ।
ಭವಿತಾ ತಸ್ಯ ಪುತ್ರೋಽಸಾವಾಸ್ತೀಕ ಇತಿ ವಿಶ್ರುತಃ ॥ ೧೯ ॥

---

೧೫. ಅವನು ಮಾಡುವ ಆ ಸರ್ಪಯಾಗದಲ್ಲಿ ಕಠೋರವಾದ ಜ್ವಾಲೆಯುಳ್ಳ ಅಗ್ನಿಯು ನಿಮ್ಮನ್ನು ಭಕ್ಷಿಸುವನು ಎಂದು ಆ ಕದ್ರುವು ಶಾಪಕೊಟ್ಟು ಸುಮ್ಮನಾದಳು.

೧೬. ಆಗ ಈರೀತಿಯ ಮಾತೃಶಾಪ ವಚನವನ್ನು ಕೇಳಿ ಎದೆಗುಂದಿದ ವಾಸುಕಿ ಎಂಬ ಸರ್ಪರಾಜನು ಅಧಿಕವಾಗಿ ಸಂತಾಪ ಹೊಂದಿ, ಏನು ಮಾಡಬೇಕೆಂದು ತೋಚದೆ ಪ್ರಜ್ಞೆ ತಪ್ಪಿ ಭೂಮಿಯಲ್ಲಿ ಬಿದ್ದನು.

೧೭. ಈರೀತಿ ದುಃಖಿತನಾದ ವಾಸುಕಿಯನ್ನು ಬ್ರಹ್ಮನು ನೋಡಿ, ಸಮಾಧಾನ ವಚನವನ್ನು ಹೇಳುತ್ತಾ "ಎಲೈ ಸರ್ಪರಾಜನೇ ! ಅಷ್ಟು ಅಧಿಕವಾಗಿ ದುಃಖಿಸಬೇಡ ನನ್ನ ಮಾತನ್ನು ಕೇಳು.

೧೮. ಜನಮೇಜಯನ ಸರ್ಪಯಾಗ ಕಾಲದಲ್ಲಿ ಯಾಯಾವರನೆಂಬ ಬ್ರಾಹ್ಮಣನ ವಂಶದಲ್ಲಿ ಜರತ್ಕಾರು ಎಂಬ ಹೆಸರಿನಿಂದ ಪ್ರಸಿದ್ಧನಾದ ಬ್ರಾಹ್ಮಣನು ಜನಿಸಿ ತಪೋನಿಧಿಯೂ ಮಹಾತೇಜಸ್ವಿಯೂ ಆಗಿರುವನು.

೧೯. ಜರತ್ಕಾರು ಎಂಬ ಆ ತಪಸ್ವಿ ಬ್ರಾಹ್ಮಣನಿಗೆ ನಿನ್ನ ಭಗಿನಿಯಾದ ಜರತ್ಕಾರುವನ್ನು ಪಾಣಿಗ್ರಹಣ ಮಾಡಿಕೊಡು. ಅವಳಲ್ಲಿ ಆ ಬ್ರಾಹ್ಮಣನಿಂದ ಆಸ್ತೀಕನೆಂದು ಪ್ರಸಿದ್ಧನಾದ ಪುರುಷನೊಬ್ಬನು ಜನಿಸುವನು.

ಸ ತತ್ಸತ್ರಂ ಪ್ರವೃದ್ಧಂ ವೈ ನಾಗಾನಾಂ ಭಯದಂ ಮಹತ್ ।
ನಿಷೇಧಯಿಷ್ಯತಿ ಮುನಿರ್ವಾಗ್ಭಿಃ ಸಂಪೂಜ್ಯ ಪಾರ್ಥಿವಂ ॥ ೨೦ ॥

ತದಿಯಂ ಭಗಿನೀ ನಾಗ ರೂಪೌದಾರ್ಯಗುಣಾನ್ವಿತಾ ।
ಜರತ್ಕಾರುರ್ಜರತ್ಕಾರೋಃ ಪ್ರದೇಯಾ ಹ್ಯವಿಚಾರತಃ ॥ ೨೧ ॥

ಯದಾಸೌ ಪ್ರಾರ್ಥ್ಯತೇಽರಣ್ಯೇ ಯತ್ಕಿಂಚಿತ್ಪ್ರವದಿಷ್ಯತಿ ।
ತತ್ಕರ್ತವ್ಯಮಶೇಷೇಣ ಇಚ್ಛೇಚ್ಛ್ರೇಯಸ್ತಥಾತ್ಮನಃ ॥ ೨೨ ॥

ಪಿತಾಮಹವಚಃ ಶ್ರುತ್ವಾ ವಾಸುಕಿಃ ಪ್ರಣಿಪತ್ಯ ಚ ।
ತಥಾಕರೋದ್ಯಥಾ ಚೋಕ್ತಂ ಯತ್ನಂ ಪರಮಮಾಸ್ಥಿತಃ ॥ ೨೩ ॥

---

೨೦. ಸರ್ಪಗಳಿಗೆ ಭಯದಾಯಕವೆನಿಸಿದ ಆ ಸರ್ಪಯಾಗವನ್ನು ಪ್ರಾರಂಭಿಸಿದಾಗ ಆ ಆಸ್ತಿಕನೆಂಬ ಋಷಿಪುತ್ರನು ಯಾಗಕರ್ತೃವಾದ ಶ್ರೀ ಜನಮೇಜಯ ಮಹಾರಾಜನಿಗೆ ಗೌರವಯುಕ್ತವಾದ ವಚನಗಳನ್ನು ಹೇಳಿ, ಸರ್ಪಕುಲದ ವಿನಾಶ ರೂಪವಾದ ಅನರ್ಥವನ್ನು ತಪ್ಪಿಸುವನು.

೨೧. ಎಲೈ ವಾಸುಕೀ ! ನೀನು ಸೌಂದರ್ಯ ಔದಾರ್ಯಾದಿ ಗುಣಗಳಿಂದೊಪ್ಪುವ ನಿನ್ನ ತಂಗಿಯಾದ ಜರತ್ಕಾರುವನ್ನು ಯಾವ ವಿಚಾರವನ್ನೂ ಮಾಡದೆ ಆ ಜರತ್ಕಾರು ಬ್ರಾಹ್ಮಣನಿಗೆ ದಾನಮಾಡು.

೨೨. ಅರಣ್ಯನಿವಾಸಿಯಾದ ಜರತ್ಕಾರುವಿನ ಬಳಿಗೆ ಹೋಗಿ ಆ ಅರಣ್ಯದಲ್ಲಿ ಭಗಿನಿಯ ವಿವಾಹಕ್ಕಾಗಿ ಅವನನ್ನು ನೀನು ಪ್ರಾರ್ಥನೆಮಾಡಿದಾಗ ಅವನು ನಿನಗೆ ಯಾವ ಕಾರ್ಯವನ್ನು ಹೇಳುತ್ತಾನೋ ಅದನ್ನೆಲ್ಲಾ ನೀನು ಅಂಗೀಕರಿಸಿ ಪೂರ್ತಮಾಡಬೇಕು. ಹಾಗೆಮಾಡಿದರೆ ನಿನ್ನ ಶ್ರೇಯಸ್ಸನ್ನು ಸಾಧಿಸಲು ಅನುಕೂಲವಾಗುವುದು ” ಎಂದು ಹೇಳಿದನು.

೨೩. ಅನಂತರ ವಾಸುಕಿಯು ಬ್ರಹ್ಮನ ಈ ಮಾತನ್ನು ಕೇಳಿ ಅವನಿಗೆ ನಮಸ್ಕಾರಮಾಡಿ, ಬಳಿಕ ಮಹಾಪ್ರಯತ್ನದಿಂದ ಬ್ರಹ್ಮನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು.

ತಚ್ಛ್ರುತ್ವಾ ಪನ್ನಗಾಃ ಸರ್ವೇ ಪ್ರಹರ್ಷೋತ್ಫುಲ್ಲಲೋಚನಾಃ ।
ಪುನರ್ಜಾತಮಿವಾತ್ಮಾನಂ ಮೇನಿರೇ ಭುಜಗೋತ್ತಮಾಃ ॥ ೨೪ ॥

ಆಪ್ಲವೇ ತು ನಿಮಗ್ನಾನಾಂ ಘೋರೇ ಯಜ್ಞಾಗ್ನಿಸಾಗರೇ ।
ಆಸ್ತೀಕಸ್ತತ್ರ ಭವಿತಾ ಪ್ಲವಭೂತೋಽಭಯಪ್ರದಃ ॥ ೨೫ ॥

ಶ್ರುತ್ವಾ ಸ ಜಾಗ್ನಿರಾಜಾನಾವೃತ್ವಿಜಸ್ತದನಂತರಂ ।
ನಿವರ್ತಯಿಷ್ಯತಿ ಕ್ರತುಂ ನಾಗಾನಾಂ ಮೋಹನಂ ಪರಂ ॥ ೨೬ ॥

ಪಂಚಮ್ಯಾಂ ತಚ್ಚ ಭವಿತಾ ಬ್ರಹ್ಮಾ ಪ್ರೋವಾಚ ಲೇಲಿಹಾನ್ ।
ತಸ್ಮಾದಿಯಂ ಮಹಾರಾಜ ಪಂಚಮೀ ದಯಿತಾ ಶುಭಾ ॥ ೨೭ ॥

---

೨೪. ಮತ್ತು ಬ್ರಹ್ಮನು ಆಡಿದ ಮಾತನ್ನು ಕೇಳಿ ಸರ್ಪಜಾತಿಯಲ್ಲಿ ಜನಿಸಿದ ಎಲ್ಲಾ ಉತ್ತಮ ಸರ್ಪಗಳೂ ಸಂತೋಷದಿಂದ ವಿಕಸಿತವಾದ ನಯನವುಳ್ಳವಾಗಿ ತಾವುಗಳು ಒಂದುಸಲ ಸತ್ತು ಪುನಃ ಹುಟ್ಟಿದೆವು ಎಂದು ತಿಳಿದುಕೊಂಡುವು.

೨೫. ಘೋರವಾದ ಸರ್ಪಯಜ್ಞವೆಂಬ ಮಹಾಸಮುದ್ರದಲ್ಲಿ ಮುಳುಗಿ ಯಾವ ದೋಣಿಯ ಸಹಾಯವೂ ಇಲ್ಲದೆ ಭಯಪೀಡಿತರಾಗಿದ್ದ ಸರ್ಪಗಳಿಗೆ ಆ ಸಾಗರದಲ್ಲಿ ಆಸ್ತೀಕನು ದೋಣಿಯ ರೂಪನಾಗಿದ್ದು ಅವುಗಳಿಗೆ ಅಭಯ ಪ್ರದಾನಮಾಡುವನು.

೨೬. ಸರ್ಪಗಳಿಗೆ ಮಹಾದುಃಖದಾಯಕವಾದ ಸರ್ಪಯಜ್ಞವು ನಡೆಯುವುದೆಂಬ ವಾರ್ತೆಯನ್ನು ಕೇಳಿದೊಡನೆಯೇ ಆ ಆಸ್ತೀಕನು ಅಲ್ಲಿಗೆ ಬಂದು ಅಗ್ನಿ, ಮತ್ತು ಯಾಗದ ದೀಕ್ಷಿತನಾದ ಜನಮೇಜಯರಾಜ, ಇವರನ್ನು ನಿಷೇಧಿಸುವನಲ್ಲದೆ ಯಾಗವು ಮುಂದೆ ಸಾಗದಹಾಗೆ ಯಜ್ಞದ ಋತ್ವಿಜರನ್ನೂ ತಡೆಯುವನು.

೨೭. ಅಯ್ಯಾ ಮಹಾರಾಜನೇ ! ಮೊದಲೇ ತಿಳಿಸಿದಂತೆ ಬ್ರಹ್ಮನು ಸರ್ಪಗಳಿಗೆ ಅಭಯಪ್ರದಾನವನ್ನು ಈ ಪಂಚಮೀ ತಿಥಿಯಲ್ಲಿ ಮಾಡಿದನು. ಆದುದರಿಂದ ಈ ಪಂಚಮೀ ತಿಥಿಯು ಸರ್ಪಗಳ ಪ್ರೀತಿಗೆ ಪಾತ್ರವಾಗಿ ಶುಭ ತಿಥಿ ಎಂದು ಹೇಳಿಸಿಕೊಂಡಿದೆ.

ನಾಗಾನಾಂ ಹರ್ಷಜನನೀ ದತ್ತಾ ವೈ ಬ್ರಹ್ಮಣಾ ಪುರಾ ।
ದತ್ವಾ ತು ಭೋಜನಂ ಪೂರ್ವಂ ಬ್ರಾಹ್ಮಣಾನಾಂ ತು ಕಾಮತಃ ॥ ೨೮ ॥

ವಿಸೃಜ್ಯ ನಾಗಾಃ ಪ್ರೀಯಂತಾಂ ಯೇ ಕೇಚಿತ್ಪೃಥಿವೀತಲೇ ।
ಹಿಮಾಚಲೇ ಯೇ ವಸಂತಿ ಯೇಽಂತರಿಕ್ಷೇ ದಿವಿ ಸ್ಥಿತಾಃ ॥ ೨೯ ॥

ಯೇ ನದೀಷು ಮಹಾನಾಗಾಃ ಯೇ ಸರಃಸ್ವಭಿಗಾಮಿನಃ ।
ಯೇ ವಾಪೀಷು ತಡಾಗೇಷು ತೇಷು ಸರ್ವೇಷು ವೈ ನಮಃ ॥ ೩೦ ॥

ನಾಗಾನ್ವಿಪ್ರಾಂಶ್ಚ ಸಂಪೂಜ್ಯ ವಿಸೃಜ್ಯ ಚ ಯಥಾರ್ಥತಃ ।
ತತಃ ಪಶ್ಚಾಚ್ಚ ಭುಂಜೀಯಾತ್ಸಹ ಭೃತ್ಯೈರ್ನರಾಧಿಪ ॥ ೩೧ ॥

ಪೂರ್ವಂ ಮಧುರಮಶ್ನೀಯಾತ್ಸ್ವೇಚ್ಛಯಾ ತದನಂತರಂ ।
ಏವಂ ನಿಯಮಯುಕ್ತಸ್ಯ ಯತ್ಫಲಂ ತನ್ನಿಬೋಧ ಮೇ ॥ ೩೨ ॥

---

೨೮. ಪೂರ್ವದಲ್ಲಿ ಬ್ರಹ್ಮನು ಈ ತಿಥಿಯಲ್ಲಿ ನಾಗಗಳಿಗೆ ಅಭಯವನ್ನು ಸೂಚಿಸಿ ಹರ್ಷವನ್ನುಂಟುಮಾಡಿದುದರಿಂದ ಈ ಪಂಚಮೀ ತಿಥಿಯು ಸರ್ಪಗಳಿಗೆ ಹರ್ಷಜನಕವಾಗಿದೆ. ಆದ್ದರಿಂದ ಈ ದಿನದಲ್ಲಿ ಯಥೇಷ್ಟವಾಗಿ ಬ್ರಾಹ್ಮಣ ಭೋಜನ ಮಾಡಿಸಬೇಕು.

೨೯-೩೦. ಭೂತಲ ನಿವಾಸಿಗಳಾದ ನಾಗಗಳು, ಹಿಮಾಚಲ ನಿವಾಸಿಗಳಾದ ನಾಗಗಳು, ಮತ್ತು ಅಂತರಿಕ್ಷ ನಿವಾಸಿಗಳಾದ ನಾಗಗಳು, ಲೋಕ ನದೀ ಕಟಾಕ ಭಾವಿ ಇತ್ಯಾದಿಗಳಲ್ಲಿ ವಾಸವಾಗಿರುವ ನಾಗಗಳು, ಅವೆಲ್ಲವೂ ಈ ಬ್ರಾಹ್ಮಣ ಭೋಜನದಿಂದ ತೃಪ್ತಿಪಡಲಿ ಎಂದೂ ಆ ಸರ್ಪಗಳಿಗೆಲ್ಲಾ ನನ್ನ ಅನಂತ ನಮಸ್ಕಾರಗಳಿರಲಿ ಎಂದೂ ಪ್ರಾರ್ಥಿಸಬೇಕು.

೩೧. ಅಯ್ಯಾ ರಾಜನೇ ! ನಾಗರಿಗೂ ಬ್ರಾಹ್ಮಣರಿಗೂ ಪೂಜೆಮಾಡಿ ದೇವತಾವಿಸರ್ಜನೆಯನ್ನು ಮಾಡಿ, ಬ್ರಾಹ್ಮಣರನ್ನು ಮನೆಗೆ ಕಳುಹಿಸಿ ಅನಂತರ ಸಕಲರ ಅಪ್ಪಣೆಪಡೆದು ತನ್ನ ಭೃತ್ಯಪರಿವಾರದೊಂದಿಗೆ ಭೋಜನ ಮಾಡಬೇಕು.

೩೨ ಭೋಜನಕಾಲದಲ್ಲಿ ಮೊದಲು ಮಧುರಪದಾರ್ಥಗಳನ್ನು ಭುಂಜಿಸಿ ಅನಂತರ ಇಚ್ಛಾನುಸಾರವಾಗಿ ಭೋಜನ ಮಾಡಬಹುದು. ಈರೀತಿ ನಿಯಮ ಪೂರ್ವಕವಾಗಿ ಈ ವ್ರತವನ್ನಾಚರಿಸುವವನಿಗೆ ಫಲಗಳನ್ನು ಹೇಳುತ್ತೇನೆ ಕೇಳು.

ಮೃತೋ ನಾಗಪುರಂ ಯಾತಿ ಪೂಜ್ಯಮಾನೋಽಪ್ಸರೋಗಣೈಃ ।
ವಿಮಾನವರಮಾರೂಢೋ ರಮತೇ ಕಾಲಮೀಪ್ಸಿತಂ ॥ ೩೩ ॥

ಇಹ ಚಾಗತ್ಯ ರಾಜಾಽಸೌ ಸರ್ವರಾಜವರೋ ಭವೇತ್ ।
ಸರ್ವರತ್ನಸಮೃದ್ಧಶ್ಚ ವಾಹನಾಢ್ಯಶ್ಚ ಜಾಯತೇ ॥ ೩೪ ॥

ಪಂಚಜನ್ಮನ್ಯಸೌ ರಾಜಾ ದ್ವಾಪರೇ ದ್ವಾಪರೇ ಭವೇತ್ ।
ಆಧಿವ್ಯಾಧಿವಿನಿರ್ಮುಕ್ತಃ ಪತ್ನೀಪುತ್ರಸಹಾಯವಾನ್ ।
ತಸ್ಮಾತ್ಪೂಜ್ಯಾಶ್ಚ ನಾಗಾಶ್ಚ ಘೃತಕ್ಷೀರಾದಿನಾ ಸದಾ ॥ ೩೫ ॥

॥ ಯುಧಿಷ್ಠಿರ ಉವಾಚ ॥

ದಶಂತಿ ಯಂ ನರಂ ಕೃಷ್ಣ ನಾಗಾಃ ಕ್ರೋಧಸಮನ್ವಿತಾಃ ।
ಭವೇತ್ಕಿಂ ತಸ್ಯ ದಷ್ಟಸ್ಯ ವಿಸ್ತರಾದ್ಬ್ರೂಹಿ ಮಾಂ ಹರೇ ॥ ೩೬ ॥

---

೩೩. ಈ ವ್ರತಾನುಷ್ಠಾನಮಾಡಿದವನು ಮೃತಿಹೊಂದಿದ ಮೇಲೆ ಅತ್ಯುತ್ತಮವಾದ ವಿಮಾನಾರೂಢನಾಗಿ ಅಪ್ಸರ ಸಮುದಾಯದಿಂದ ಮನ್ನಣೆಯನ್ನು ಪಡೆಯುತ್ತ ನಾಗಲೋಕಕ್ಕೆ ಹೋಗಿ ಅಲ್ಲಿ ತನ್ನ ಇಷ್ಟ ಬಂದಷ್ಟುಕಾಲ ಕ್ರೀಡಿಸುತ್ತಿರುವನು.

೩೪. ಅನಂತರ ಈ ಭೂಲೋಕಕ್ಕೆ ಬಂದು ರಾಜಾಧಿರಾಜನಾಗುವುದಲ್ಲದೆ ಸರ್ವರತ್ನ ಸಮೃದ್ಧನೂ ಸರ್ವವಿಧವಾಹನಸಮನ್ವಿತನೂ ಆಗುವನು.

೩೫. ಮತ್ತು ಈ ವ್ರತವನ್ನಾಚರಿಸಿದವನು ಪ್ರತಿ ದ್ವಾಪರಯುಗದಲ್ಲೂ ಐದು ಜನ್ಮದಲ್ಲಿ ರಾಜನಾಗಿ ಜನಿಸಿ ಆಧಿವ್ಯಾಧಿ ರಹಿತನೂ ಪತ್ನೀ ಪುತ್ರಾದಿ ಯುತನೂ ಆಗಿರುವನು. ಆದುದರಿಂದ ಯಾವಾಗಲೂ ಸರ್ಪಗಳಿಗೆ (ಹುತ್ತಕ್ಕೆ) ತುಪ್ಪ, ಹಾಲು ಮೊದಲಾದುವುಗಳನ್ನು ಎರೆದು ಪೂಜೆ ಮಾಡಬೇಕು.

೩೬. ಯುಧಿಷ್ಠಿರನು ಹೇಳುತ್ತಾನೆ—ಎಲೈ ಶ್ರೀ ಕೃಷ್ಣನೇ ! ಸರ್ಪಗಳು ಕೋಪದಿಂದ ಯಾವ ಮನುಷ್ಯನನ್ನು ಕಚ್ಚುವುವೋ ಆ ಸರ್ಪ ಕಚ್ಚಿದ ಮನುಷ್ಯನಿಗೆ ಮುಂದಿನ ಜನ್ಮ ಏನಾಗುವುದು ಎಂಬುದನ್ನು ವಿಸ್ತಾರವಾಗಿ ಹೇಳು ಎಂದನು.

॥ ಶ್ರೀ ಕೃಷ್ಣ ಉವಾಚ ॥

ನಾಗದಷ್ಟೋ ನರೋ ರಾಜನ್ಪ್ರಾಪ್ಯ ಮೃತ್ಯುಂ ವ್ರಜತ್ಯಧಃ ।
ಅಧೋ ಗತ್ವಾ ಭವೇತ್ಸರ್ಪೋ ನಿರ್ವಿಷೋ ನಾತ್ರ ಸಂಶಯಃ ॥ ೩೭ ॥

॥ ಯುಧಿಷ್ಠಿರ ಉವಾಚ ॥

ನಾಗದಷ್ಟಃ ಪಿತಾ ಯಸ್ಯ ಮಾತಾ ಭ್ರಾತಾ ಸುಹೃತ್ಸುತಃ ।
ಸ್ವಸಾ ವಾ ದುಹಿತಾ ಭಾರ್ಯಾ ಕಿಂ ಕರ್ತವ್ಯಂ ವದಸ್ವ ಮೇ ॥ ೩೮ ॥

ಮೋಕ್ಷಾಯ ತಸ್ಯ ಗೋವಿಂದ ದಾನಂ ವ್ರತಮುಪೋಷಿತಂ ।
ಬ್ರೂಹಿ ಮೇ ಯದುಶಾರ್ದೂಲ ಯೇನ ಸ್ವರ್ಗತಿಮಾಪ್ನುಯಾತ್ ॥ ೩೯ ॥

॥ ಶ್ರೀ ಕೃಷ್ಣ ಉವಾಚ ॥

ಉಪೋಷ್ಯಾ ಪಂಚಮೀ ರಾಜನ್ನಾಗಾನಾಂ ತುಷ್ಟಿವರ್ಧಿನೀ ।
ವರ್ಷಮೇಕಂ ತು ರಾಜೇಂದ್ರ ವಿಧಾನಂ ಶೃಣು ಯಾದೃಶಂ ॥ ೪೦ ॥

---

೩೭. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಸರ್ಪ ಕಚ್ಚಿದ ಮನುಷ್ಯರು ಮರಣಹೊಂದಿ ಅಧೋಲೋಕಕ್ಕೆ ಹೋಗುವರು. ಈರೀತಿ ಅಧೋ ಲೋಕಕ್ಕೆ ಹೋಗಿ ವಿಷವಿಲ್ಲದ ಸರ್ಪವಾಗಿ ಜನಿಸುವರು. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

೩೮. ಯುಧಿಷ್ಠಿರನು ಕೇಳುತ್ತಾನೆ—ಸ್ವಾಮಿ ಗೋವಿಂದನೇ ! ಯಾವ ನೊಬ್ಬನ ತಂದೆ, ಸಹೋದರ, ತಾಯಿ, ಮಿತ್ರ, ಪುತ್ರ, ತಂಗಿ, ಮಗಳು, ಹೆಂಡತಿ ಇವರುಗಳಲ್ಲಿ ಯಾರಿಗಾದರೂ ಸರ್ಪವು ಕಚ್ಚಿದರೆ ಅವನು ಅವರ ಉದ್ಧಾರಕ್ಕಾಗಿ ಯಾವ ಕೆಲಸವನ್ನು ಮಾಡಬೇಕೆಂಬುದನ್ನು ನನಗೆ ಹೇಳು.

೩೯. ಅಯ್ಯಾ ಯದುಶ್ರೇಷ್ಠನೇ ! ಆ ಸರ್ಪದಷ್ಟ ಪುರುಷನಿಗೆ ನಾಗ ಜನ್ಮದಿಂದ ಮೋಕ್ಷ ದೊರೆತು ಸ್ವರ್ಗಲೋಕ ಪ್ರಾಪ್ತಿಯಾಗುವುದಕ್ಕಾಗಿ ಯಾವ ದಾನ, ಯಾವ ವ್ರತಾನುಷ್ಠಾನ ಉಪವಾಸಾದಿಗಳು ಇವುಗಳನ್ನು ಮಾಡ ಬೇಕೆಂಬುದನ್ನು ನನಗೆ ಹೇಳು ಎಂದನು.

೪೦. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಸರ್ಪದಷ್ಟ ಪುರುಷನಿಗೆ ಸದ್ಗತಿಯಾಗಬೇಕಾದರೆ ಸರ್ಪಗಳಿಗೆ ಸಂತೋಷವರ್ಧಕವಾಗುವಂತೆ ಒಂದು ವರ್ಷದವರೆಗೆ ಪ್ರತಿ ಪಂಚಮಿ ತಿಥಿಯಲ್ಲೂ ಉಪವಾಸ ಮಾಡಬೇಕು. ಅದಕ್ಕೆ ಯಾವ ವಿಧಾನವು ವಿಹಿತವಾಗಿದೆಯೋ ಅದನ್ನು ಹೇಳುತ್ತೇನೆ ಕೇಳು.

ಮಾಸೇ ಭಾದ್ರಪದೇ ಯಾ ತು ಶುಕ್ಲಪಕ್ಷೇ ಮಹೀಪತೇ ।
ಸಾ ಚ ಪುಣ್ಯತಮಾ ಪ್ರೋಕ್ತಾ ಗ್ರಾಹ್ಯಾ ಸದ್ಗತಿಕಾಮ್ಯಯಾ ॥ ೪೧ ॥

ಜ್ಞೇಯಾ ದ್ವಾದಶವರ್ಷಾಂತೇ ಪಂಚಮ್ಯೋ ಭರತರ್ಷಭ ।
ಚತುರ್ಥ್ಯಾಮೇಕಭಕ್ತಂ ತು ತಸ್ಯಾಂ ನಕ್ತಂ ಪ್ರಕೀರ್ತಿತಂ ॥ ೪೨ ॥

ಭೂರಿಚಂದ್ರಮಯಂ ನಾಗಮಥ ವಾ ಕಲಧೌತಜಮ್ ।
ಕೃತ್ವಾ ದಾರುಮಯಂ ಚಾಪಿ ಉತಾಹೋ ಮೃನ್ಮಯಂ ನೃಪ ॥ ೪೩ ॥

ಪಂಚಮ್ಯಾಮರ್ಚಯೇದ್ಭಕ್ತ್ಯಾ ನಾಗಂ ಪಂಚಫಣಂ ಶೃಣು ।
ಕರವೀರೈಸ್ತಥಾ ಪದ್ಮೈರ್ಜಾತೀಪುಷ್ಪೈಃ ಸುಶೋಭನೈಃ ॥ ೪೪ ॥

ಗಂಧಪುಷ್ಪೈಃ ಸನೈವೇದ್ಯೈಃ ಪೂಜ್ಯ ಪನ್ನಗಸತ್ತಮಮ್ ।
ಬ್ರಾಹ್ಮಣಾನ್ಭೋಜಯೇತ್ಪಶ್ಚಾದ್ಘೃತಪಾಯಸ ಮೋದಕೈಃ ॥ ೪೫ ॥

---

೪೧-೪೨. ಅಯ್ಯಾ ನರೇಂದ್ರನೇ ! ಸರ್ಪದಷ್ಟರಾದ ಪಿತೃ ಮೊದಲಾದವರಿಗೆ ಸದ್ಗತಿಯಾಗಬೇಕಾದರೆ ಭಾದ್ರಪದಮಾಸ ಶುಕ್ಲಪಕ್ಷ ಪಂಚಮೀ ತಿಥಿಯು ಅತಿ ಪುಣ್ಯದಿನವೆಂದು ಪ್ರಮಾಣ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದರಿಂದ ಆ ಪಂಚಮಿ ಮೊದಲ್ಗೊಂಡು ಹನ್ನೆರಡು ಪಂಚಮಿಗಳು ಎಂದರೆ ವರ್ಷವಾಗುವವರೆಗ ಚತುರ್ಥೀದಿನ ಏಕಭುಕ್ತನಿಯಮ ಸ್ವೀಕಾರಮಾಡಿ ನಕ್ತಭೋಜನಮಾಡಬೇಕು.

೪೩. ಅಯ್ಯಾ ರಾಜನೇ ! ಚಂದ್ರಕಾಂತಶಿಲೆ, ಅಥವಾ ಸುವರ್ಣ, ಅಥವಾ ಮರ, ಇಲ್ಲವೆ ಮಣ್ಣು ಇವುಗಳಿಂದ ನಾಗಪ್ರತಿಮೆಯನ್ನು ಮಾಡಿಸಬೇಕು.

೪೪. ಈ ಪಂಚಮೀ ತಿಥಿಯಲ್ಲಿ ಭಕ್ತಿಪೂರ್ವಕವಾಗಿ ಐದು ಹೆಡೆಗಳುಳ್ಳ ನಾಗರಾಜನನ್ನು ಅರ್ಚಿಸಬೇಕು. ಅರ್ಚನಾಕ್ರಮವನ್ನು ಹೇಳುವೆನು ಕೇಳು. ಕರವೀರಪುಷ್ಪ ಮತ್ತು ಕಮಲಪುಷ್ಪ, ಸುಂದರವಾದ ಜಾಜೀಹೂವು ಇವುಗಳಿಂದ ಸ್ವಾಮಿಯನ್ನು ಅರ್ಚಿಸಬೇಕು.

೪೫. ಮತ್ತು ಶ್ರೇಷ್ಠವಾದ ಆ ನಾಗಾಧಿಪನಿಗೆ ಗಂಧ, ಪುಷ್ಪ, ನೈವೇದ್ಯ ಇವುಗಳನ್ನು ಸಮರ್ಪಿಸಿ ಪೂಜಿಸಿದನಂತರ ತುಪ್ಪ, ಪಾಯಸ, ಮೋದಕ ಇವುಗಳ ಮೂಲಕ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ನಾರಾಯಣಬಲಿಃ ಕಾರ್ಯಃ ಸರ್ಪದಷ್ಟಸ್ಯ ದೇಹಿನಃ ।
ದಾನೈಃ ಪಿಂಡಪ್ರದಾನೈಶ್ಚ ಬ್ರಾಹ್ಮಣಾನಾಂ ಚ ತರ್ಪಯೇತ್ ॥ ೪೬ ॥
ವೃಷೋತ್ಸರ್ಗಸ್ತು ಕರ್ತವ್ಯೋ ಗತೇ ಸಂವತ್ಸರೇ ನೃಪ ।

ಸ್ನಾನಂ ಕೃತ್ವೋದಕಂ ದದ್ಯಾತ್ಕೃಷ್ಣೋऽತ್ರ ಪ್ರೀಯತಾಮಿತಿ ॥ ೪೭ ॥
ಅನಂತೋ ವಾಸುಕಿಃ ಶೇಷಃ ಪದ್ಮಃ ಕಂಬಲ ಏವ ಚ ।

ತಥಾ ಕುಲಿಕನಾಗಶ್ಚ ನಾಗಶ್ಚಾಶ್ವತರೋ ನೃಪ ॥ ೪೮ ॥
ಧೃತರಾಷ್ಟ್ರಃ ಶಂಖಪಾಲಃ ಕಾಲೀಯಸ್ತಕ್ಷಕಸ್ತಥಾ ।

ಪಿಂಗಲಶ್ಚ ಮಹಾನಾಗೋ ಮಾಸಿ ಮಾಸಿ ಪ್ರಕೀರ್ತಿತಾಃ ।
ವತ್ಸರಾಂತೇ ಪಾರಣಂ ಸ್ಯಾನ್ಮಹಾಬ್ರಾಹ್ಮಣಭೋಜನಂ ॥ ೪೯ ॥

---

೪೬. ಸರ್ಪದಷ್ಟನಾದ ಪುರುಷನಿಗೆ ನಾರಾಯಣಬಲಿ ಎಂಬ ಔರ್ಧ್ವ ದೇಹಿತ ಕರ್ಮವನ್ನು ಮಾಡಬೇಕು. ಮತ್ತು ಗೋದಾನ, ಭೂದಾನ, ಹಿರಣ್ಯದಾನ, ಅನ್ನದಾನ ಇವುಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು.

೪೭. ಅಯ್ಯಾ ರಾಜನೇ ! ಅಂಥ ಸರ್ಪದಂಶದಿಂದ ಮೃತರಾದ ಪುರುಷರಿಗೆ ಒಂದುವರ್ಷ ಕಳೆದಮೇಲೆ ವೃಷೋತ್ಸರ್ಗವೆಂಬ ಕರ್ಮವನ್ನು ಮಾಡಬೇಕು. ಅನಂತರ ಸ್ನಾನಮಾಡಿ ಶ್ರೀ ಕೃಷ್ಣಃ ಪ್ರೀಯತಾಂ ಎಂದು ಹೇಳಿ ಜಲಧಾರೆಯನ್ನು ಬಿಡಬೇಕು.

೪೮-೪೯. ಭಾದ್ರಪದ ಮಾಸವ ಶುಕ್ಲಪಕ್ಷದ ಪಂಚಮಿಯಿಂದಾರಂಭಿಸಿ ಒಂದು ವರ್ಷದವರೆಗೆ ಪ್ರತಿಮಾಸದ ಶುಕ್ಲ ಪಂಚಮಿಯಲ್ಲೂ ಕ್ರಮವಾಗಿ ಆರಾಧಿಸಬೇಕಾದ ನಾಗಗಳಿಗೆ ಅನಂತ, ವಾಸುಕಿ, ಶೇಷ, ಪದ್ಮ, ಕಂಬಲ, ಕುಲಿಕ, ಅಶ್ವತರ, ಧೃತರಾಷ್ಟ್ರ, ಶಂಖಪಾಲ, ಕಾಲಿಯ, ತಕ್ಷಕ ಮತ್ತು ಪಿಂಗಲ ಎಂಬ ಈ ಹನ್ನೆರಡು ನಾಮಧೇಯಗಳು ಉಕ್ತವಾಗಿವೆ. ಈರೀತಿ ಪೂಜಿಸಿ ಒಂದು ವರ್ಷವಾದ ಮೇಲೆ ವಿತರಣೆಯಿಂದ ಬ್ರಾಹ್ಮಣ ಸಂತರ್ಪಣೆಯನ್ನು ನಡೆಯಿಸುವ ಮೂಲಕ ಪಾರಣೆಮಾಡಬೇಕು.

ಇತಿಹಾಸವಿದೇ ನಾಗಃ ಕಾಂಚನೇನ ಕೃತೋ ನೃಪ ।
ತಥಾರ್ಜುನೀ ಪ್ರದಾತವ್ಯಾ ಸವತ್ಸಾ ಕಾಂಸ್ಯದೋಹನಾ ॥ ೫೦ ॥

ಏಷ ಪಾರಣಕೇ ಪಾರ್ಥ ವಿಧಿಃ ಪ್ರೋಕ್ತೋ ವಿಚಕ್ಷಣೈಃ ।
ಕೃತೇ ವ್ರತವರೇ ತಸ್ಮಿನ್ಸದ್ಗತಿಂ ಯಾಂತಿ ಬಾಂಧವಾಃ ॥ ೫೧ ॥

ಯೇ ದಂದಶೂಕೈರದನೈರ್ದಷ್ಟಾಃ ಪ್ರಾಪ್ತಾಃ ಹ್ಯಧೋಗತಿಂ ।
ವರ್ಷಮೇಕಂ ಚರಿಷ್ಯಂತಿ ಭಕ್ತ್ಯಾ ಯೇ ವ್ರತಮುತ್ತಮಮ್ ।
ದಾಂಷ್ಟ್ರಿಕಂ ಮೋಕ್ಷ್ಯತೇ ತೇಷಾಂ ಶುಭಂ ಸ್ಥಾನಮವಾಪ್ಸ್ಯತಿ ॥ ೫೨ ॥

ಯಶ್ಚೇದಂ ಶೃಣುಯಾನ್ನಿತ್ಯಂ ಪಠೇದ್ಭಕ್ತ್ಯಾ ಸಮನ್ವಿತಃ ।
ನ ವೈ ಕುಟುಂಬೇ ನಾಗೇಭ್ಯೋ ಭಯಂ ಭವತಿ ಕುತ್ರಚಿತ್ ॥ ೫೩ ॥

---

೫೦. ಅಯ್ಯಾ ರಾಜನೇ ! ಸುವರ್ಣದಿಂದ ಮಾಡಿದ ನಾಗಪ್ರತಿಮೆಯನ್ನೂ, ಕರುಸಹಿತವಾದ ಗೋವು ಮತ್ತು ಹಾಲುಕರೆಯುವ ಕಂಚಿನಪಾತ್ರೆ ಇವುಗಳನ್ನೂ ಇತಿಹಾಸಜ್ಞನಾದ ಪಂಡಿತನಿಗೆ ದಾನಮಾಡಬೇಕು.

೫೧. ಎಲೈ ಕುಂತೀ ಪುತ್ರನೇ ! ಈ ವ್ರತದ ಪಾರಣೆಯ ಕಾಲದಲ್ಲಿ ಇವನ್ನೆಲ್ಲಾ ಮಾಡಬೇಕೆಂಬ ಕ್ರಮವನ್ನು ನಿಯಮಪ್ರಕಾರ ಪಂಡಿತರು ಪ್ರತಿಪಾದಿಸಿರುತ್ತಾರೆ. ಈ ಉತ್ತಮ ವ್ರತವನ್ನು ಆಚರಿಸಿದರೆ ಸರ್ಪದಂಶನದಿಂದ ಮೃತರಾದ ಇವನ ಬಂಧುಗಳು ಸದ್ಗತಿಯನ್ನು ಪಡೆಯುವರು.

೫೨. ಸರ್ಪಗಳ ಹಲ್ಲುಗಳು ನಾಟಿ ಮೃತನಾಗಿ ಅಧೋಗತಿಯನ್ನು ಹೊಂದಿ, ಸರ್ಪಜನ್ಮವನ್ನು ಪಡೆದಂಥಾ ಬಂಧುವಿನ ಮೋಕ್ಷೋದ್ದೇಶದಿಂದ ಒಂದು ವರ್ಷದವರೆಗೆ ಭಕ್ತಿಯಿಂದ ಈ ವ್ರತವನ್ನಾಚರಿಸಿದರೆ ಈ ಅನುಷ್ಠಾನ ಮಾಡಿದವನ ಮೃತಬಂಧುವಿಗೆ ಸರ್ಪದಂಶನದಿಂದ ಉಂಟಾಗಿದ್ದ ಸರ್ಪಜನ್ಮವು ನಾಶವಾಗಿ ಸದ್ಗತಿಯು ಪ್ರಾಪ್ತವಾಗುವುದು.

೫೩. ಮತ್ತು ಸದಾ ಈ ವ್ರತ ಕಥಾಶ್ರವಣವನ್ನು ಮಾಡಿದವನೂ, ಈ ಗ್ರಂಥವನ್ನು ಭಕ್ತಿಯುತನಾಗಿ ಪಠಿಸಿದವನೂ, ತನ್ನ ವಂಶದಲ್ಲಿಲ್ಲರಿಗೂ ಯಾವಾಗಲೂ ನಾಗಭಯವಿಲ್ಲದೆ ಇರಬಹುದು.

॥ ಶ್ರೀ ಕೃಷ್ಣ ಉವಾಚ ॥

ತದ್ವದ್ಭಾದ್ರಪದೇ ಮಾಸಿ ಪಂಚಮ್ಯಾಂ ಶ್ರದ್ಧಯಾನ್ವಿತಃ ।
ಯಸ್ತ್ವಾಲಿಖ್ಯ ನರೋ ನಾಗಾನ್ಕೃಷ್ಣವರ್ಣಾದಿವರ್ಣಕೈಃ ।
ಪೂಜಯೇದ್ಗಂಧಪುಷ್ಪೈಸ್ತು ಸರ್ಪಿರ್ಗುಗ್ಗುಲುಪಾಯಸೈಃ ॥ ೫೪ ॥

ತಸ್ಯ ತುಷ್ಟಿಂ ಸಮಾಯಾಂತಿ ಪನ್ನಗಾಸ್ತಕ್ಷಕಾದಯಃ ।
ಆಸಪ್ತಮಾತ್ಕುಲಾತ್ತಸ್ಯ ನ ಭಯಂ ನಾಗತೋ ಭವೇತ್ ॥ ೫೫ ॥

ತಸ್ಮಾತ್ಸರ್ವಪ್ರಯತ್ನೇನ ನಾಗಾನ್ಸಂಪೂಜಯೇದ್ಬುಧಃ ।
ತಥಾ ಚಾಶ್ವಯುಜೇ ಮಾಸಿ ಪಂಚಮ್ಯಾಂ ಕುರುನಂದನ ॥ ೫೬ ॥

ಕೃತ್ವಾ ಕುಶಮಯಾನ್ನಾಗಾನಿಂದ್ರಾಣ್ಯಾ ಸಹ ಪೂಜಯೇತ್ ।
ಘೃತೋದಕಾಭ್ಯಾಂ ಪಯಸಾ ಸ್ನಪಯಿತ್ವಾ ವಿಶಾಂ ಪತೇ ॥ ೫೭ ॥

---

೫೪-೫೫. ಶ್ರೀ ಕೃಷ್ಣನು ಹೇಳುತ್ತಾನೆ—ಇದೇ ಪ್ರಕಾರವಾಗಿ ಭಾದ್ರಪದ ಮಾಸದ ಶುಕ್ಲಪಕ್ಷದ ಪಂಚಮಿಯಲ್ಲಿ ಶ್ರದ್ಧಾನ್ವಿತನಾಗಿ ಯಾವನು ಕಪ್ಪು, ಮೊದಲಾದ ಬಣ್ಣಗಳಿಂದ ನಾಗಾಕೃತಿಯನ್ನು ಬರೆದು, ಗಂಧಪುಷ್ಪ, ಧೂಪ, ದೀಪ ಇವೇ ಮೊದಲಾದ ಪೂಜಾದ್ರವ್ಯಗಳಿಂದ ಅರ್ಚಿಸಿ, ಪಾಯಸವನ್ನು ನಿವೇದನ ಮಾಡುವನೋ ಅವನಿಗೆ ತಕ್ಷಕಾದಿ ಸರ್ಪಗಳು ಸುಪ್ರೀತವಾಗುವುವು. ಅದರಿಂದ ಅವನ ವಂಶದಲ್ಲಿ ಏಳುತಲೆಮಾರಿನವರೆಗೂ ಸರ್ಪಭಯವು ಇರುವುದಿಲ್ಲ.

೫೬. ಅಯ್ಯಾ ಕುರುವಂಶಜನೇ ! ಆದ್ದರಿಂದ ಪಂಡಿತನಾದವನು ಸರ್ವ ಪ್ರಯತ್ನಮಾಡಿ ನಾಗಪೂಜೆಯನ್ನು ಮಾಡಬೇಕು. ಇದೇ ರೀತಿ ಆಶ್ವಯುಜ ಶುದ್ಧ ಪಂಚಮಿಯಲ್ಲೂ ಸರ್ಪಾರಾಧನೆ ಮಾಡಬೇಕು.

೫೭. ಅಯ್ಯಾ ರಾಜನೇ ! ಆಶ್ವಯುಜಮಾಸದ ಪೂಜೆಯಲ್ಲಿ ದರ್ಭೆಗಳಿಂದ ಸರ್ಪಾಕಾರವನ್ನು ರಚಿಸಿ, ಸರ್ಪಗಳ ಜೊತೆಯಲ್ಲಿ ಇಂದ್ರಾಣಿಯನ್ನೂ ಅರ್ಚಿಸಬೇಕು. ಮತ್ತು ತುಪ್ಪ, ಜಲ, ಹಾಲು ಇವುಗಳನ್ನು ಅಭಿಷೇಕ ಮಾಡಬೇಕು.

ಗೋಧೂಮ್ಯೈಃ ಪಯಸಾ ಸ್ವಿನ್ನೈರ್ಭಕ್ಷ್ಯೈಶ್ಚ ವಿವಿಧೈಸ್ತಥಾ ।
ಯಸ್ತ್ವಸ್ಯಾಂ ವಿವಿಧಾನ್ನಾಗಾಞ್ಛುಚಿರ್ಭಕ್ತ್ಯಾ ಸಮನ್ವಿತಃ ॥ ೫೮ ॥

ಪೂಜಯೇತ್ಕುರುಶಾರ್ದೂಲ ತಸ್ಯ ಶೇಷಾದಯೋ ನೃಪ ।
ನಾಗಾಃ ಪ್ರೀತಾ ಭವಂತೀಹ ಶಾಂತಿಂ ಪ್ರಾಪ್ನೋತಿ ಶೋಭನಾಂ ।
ಸ ಶಾಂತಿಲೋಕಮಾಸಾದ್ಯ ಮೋದತೇ ಶಾಶ್ವತೀಃ ಸಮಾಃ ॥ ೫೯ ॥

ಇತ್ಯೇತತ್ಕಥಿತಂ ವೀರ ಪಂಚಮೀವ್ರತಮುತ್ತಮಮ್ ।
ತತ್ರಾಯಮುಚ್ಯತೇ ಮಂತ್ರಃ ಸರ್ವದೋಷನಿಷೇಧಕಃ ॥ ೬೦ ॥

" ಓಂ ಕುರುಕುಲ್ಲೇ ಹುಂ ಫಟ್ ಸ್ವಾಹಾ "

ಇತಿ ಮಂತ್ರಃ

ಭಕ್ತೇನ ಭಕ್ತಿಸಹಿತಾಃ ಶತಪಂಚಮೀಷು ।
ಯೇ ಪೂಜಯಂತಿ ಭುಜಗಾನ್ಕುಸುಮೋಪಹಾರೈಃ ।

---

೫೮-೫೯. ಎಲೈ ಕುರುವಂಶೋತ್ಪನ್ನನೇ ! ಈ ಅಶ್ವಯುಜ ಮಾಸದಲ್ಲಿ ವಿವಿಧವಾದ ನಾಗಗಳನ್ನು ಪೂಜಿಸಿ, ಹಾಲನ್ನು ಹಾಕಿ ಮಾಡಿದ ಗೋಧಿಯ ಪಾಯಸವನ್ನೂ, ವಿವಿಧ ಭಕ್ಷ್ಯಗಳನ್ನೂ ಮಾಡಿ, ಶುಚಿಯಾಗಿಯೂ ಭಕ್ತಿಪೂರ್ವಕ ವಾಗಿಯೂ ಸಮರ್ಪಿಸಿದರೆ, ಶೇಷಾದಿ ಸಕಲ ನಾಗಗಳೂ ಅವನ ವಿಷಯದಲ್ಲಿ ಸುಪ್ರೀತರಾಗಿ ಈ ಲೋಕದಲ್ಲಿ ಉತ್ತಮವಾದ ಶಾಂತಿಸುಖಗಳನ್ನು ಕೊಡುವು ದಲ್ಲದೆ ಪರದಲ್ಲೂ ಉತ್ತಮಲೋಕ ವಾಸ ಫಲಪ್ರಾಪ್ತಿಯಾಗಿ ಆ ಲೋಕಗಳಲ್ಲಿ ಬಹುಕಾಲ ಸಂತೋಷದಿಂದ ಇರುವ ಹಾಗೆ ಮಾಡುತ್ತಾರೆ.

೬೦. ಅಯ್ಯಾ ವೀರನೇ ! ಉತ್ತಮವಾದ ಪಂಚಮೀ ವ್ರತವನ್ನು ನಿನಗೆ ಹೇಳಿದ್ದಾಯಿತು. " ಓಂ ಕುರು ಕುಲ್ಲೇಹುಂ ಫಟ್‌ಸ್ವಾಹಾ " ಎಂಬುದು ಆ ವ್ರತಕಾಲದಲ್ಲಿ ಹೇಳಬೇಕಾಗಿರುವ ಸರ್ವ ದೋಷನಿವಾರಕವಾದ ಮಂತ್ರ ವಾಗಿದೆ.

೬೧. ನಾಗಭಕ್ತರು ಭಕ್ತಿಪೂರ್ವಕವಾಗಿ ನೂರು ಪಂಚಮೀ ತಿಥಿಗಳಲ್ಲಿ ಪುಷ್ಪ ನೈವೇದ್ಯ ಇತ್ಯಾದಿಗಳಿಂದ ನಾಗಪೂಜೆಯನ್ನು ಮಾಡಿದರೆ ಅವರ ಮನೆ

**ತೇಷಾಂ ಗೃಹೇಷ್ವಭಯದಾ ಹಿ ಸದೈವ ಸರ್ಪಾಃ ।**
**ಶಶ್ವತ್ಪ್ರಮೋದಪರಮಾ ರುಚಯೋ ಭವಂತಿ ॥ ೬೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ನಾಗಪಂಚಮೀ ವ್ರತವರ್ಣನಂ ನಾಮ ಷಟ್ತ್ರಿಂಶತ್ತಮೋಽಧ್ಯಾಯಃ.**



---

ಯಲ್ಲಿ ಯಾವಾಗಲೂ ಸರ್ಪಗಳ ಭಯವು ಇರುವುದಿಲ್ಲ. ಮತ್ತು ಅವರ ಮನೆಯಲ್ಲಿ ಸಂತೋಷ ಸೂಚಕವಾದ ಕಳೆಯೇ ಎದ್ದು ಕಾಣುತ್ತಿರುತ್ತದೆ.

ಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ನಾಗಪಂಚಮೀ ವ್ರತ ವರ್ಣನವೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತತ್ರಿಂಶತ್ತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

**ಕಥಮಾಸಾದ್ಯತೇ ಲಕ್ಷ್ಮೀರ್ದುರ್ಲಭಾ ಭುವನತ್ರಯೇ ।**
**ದಾನೇನ ತಪಸಾ ವಾಪಿ ವ್ರತೇನ ನಿಯಮೇನ ವಾ ॥ ೧ ॥**

**ಜಪಹೋಮನಮಸ್ಕಾರೈಃ ಸಂಸ್ಕಾರೈರ್ವಾ ಪೃಥಗ್ವಿಧೈಃ ।**
**ಏತದ್ವದ ಯದುಶ್ರೇಷ್ಠ ಸರ್ವವಿತ್ತ್ವಂ ಮತೋ ಮಮ ॥ ೨ ॥**

---

## ಮೂವತ್ತೇಳನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಯಾವ ದಾನ, ತಪಸ್ಸು, ವ್ರತ, ಉಪವಾಸ ಇತ್ಯಾದಿ ನಿಯಮಗಳ ಆಚರಣೆಯಿಂದ ಮೂರು ಲೋಕಗಳಲ್ಲೂ ದುರ್ಲಭವಾದ ಸಂಪತ್ತು ಲಭಿಸುವುದು.

೨. ಅಯ್ಯಾ ಯಾದವೋತ್ತಮನೇ ! ಜಪ, ಹೋಮ, ದೇವತಾ ವಂದನೆ ವಿವಿಧ ಸಂಸ್ಕಾರಗಳು, ಇವುಗಳಲ್ಲಿ ಯಾವುದರಿಂದ ಸಂಪತ್ ಪ್ರಾಪ್ತಿಯಾಗುವುದು ಎಂಬ ವಿಷಯವನ್ನು ಹೇಳು. ನೀನು ಸರ್ವಜ್ಞನೆಂದು ನನ್ನ ನಂಬಿಕೆಯಿರುವುದರಿಂದ ನಿನಗೆ ಎಲ್ಲಾ ವಿಷಯವೂ ವೇದ್ಯವಾಗಿದೆ.

॥ ಶ್ರೀ ಕೃಷ್ಣ ಉವಾಚ ॥

ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಪೂರ್ವಂ ಶ್ರೀ ಶ್ರೂಯತೇ ಶುಭಾ ।
ವಾಸುದೇವಾಯ ಸಾ ದತ್ತಾ ಮುನಿನಾ ಮಾನವೃದ್ಧಯೇ ॥ ೩ ॥

ವಾಸುದೇವೋಽಪಿ ತಾಂ ಪ್ರಾಪ್ಯ ಪೀನೋನ್ನತಪಯೋಧರಾಂ ।
ಪದ್ಮಪತ್ರವಿಶಾಲಾಕ್ಷೀಂ ಪೂರ್ಣಚಂದ್ರನಿಭಾನನಾಂ ॥ ೪ ॥

ಭಾಭಾಸಿತದಿಗಾಭೋಗಾಂ ಸಾಕ್ಷಾದ್ಭಾನೋಃ ಪ್ರಭಾಮಿವ ।
ನಿತಂಬಾಡಂಬರವತೀಂ ಮತ್ತಮಾತಂಗಗಾಮಿನೀಂ ॥ ೫ ॥

ರೇಮೇ ಸಹ ತಯಾ ರಾಜನ್ವಿಭ್ರಮೋದ್ಭ್ರಾಂತಚಿತ್ತಯಾ ।
ಸಾ ಚ ವಿಷ್ಣುಂ ಜಗಜ್ಜಿಷ್ಣುಂ ಪತಿಂ ತ್ರಿಜಗತಾಂ ಪತಿಂ ।
ಸಂಪ್ರಾಪ್ಯ ಧನ್ಯಮಾತ್ಮಾನಂ ಮೇನೇ ಮಾನಯಶೋಧನಾ ॥ ೬ ॥

---

೩. ಶ್ರೀ ಕೃಷ್ಣನು ಹೇಳುತ್ತಾನೆ-ಪೂರ್ವದಲ್ಲಿ ಭೃಗುಮಹರ್ಷಿಗೆ ಖ್ಯಾತಿ ಎಂಬ ಸ್ತ್ರೀಯಲ್ಲಿ ಮಂಗಳಸ್ವರೂಪಿಣಿಯಾದ ಲಕ್ಷ್ಮಿಯು ಜನಿಸಿದಳು ಎಂದು ಶ್ರುತವಾಗಿದೆ. ಆ ಭೃಗುಮುನಿಯು ಲೋಕದಲ್ಲಿ ಗೌರವವನ್ನು ಸಂಪಾದಿಸುವ ಉದ್ದೇಶದಿಂದ ಮಗಳಾದ ಶ್ರೀ ಲಕ್ಷ್ಮಿಯನ್ನು ವಾಸುದೇವನಿಗೆ ಕನ್ಯಾದಾನ ಮಾಡಿ ವಿವಾಹಮಾಡಿದನು.

೪-೫. ಅಯ್ಯಾ ರಾಜನೇ ! ದಪ್ಪವಾಗಿಯೂ, ಎತ್ತರವಾಗಿಯೂ ಇರುವ ಸ್ತನಗಳುಳ್ಳವಳಾಗಿಯೂ, ಕಮಲದಳಗಳಂತೆ ವಿಶಾಲವಾದ ಕಣ್ಣುಗಳುಳ್ಳವ ಳಾಗಿಯೂ, ಪೂರ್ಣಚಂದ್ರ ಸದೃಶವಾದ ಮುಖವುಳ್ಳವಳಾಗಿಯೂ, ಸಮಸ್ತ ದಿಗಂತಗಳನ್ನೂ ಬೆಳಗುವವಳಾಗಿಯೂ, ಸಾಕ್ಷಾತ್ ಸೂರ್ಯಪ್ರಭೆಗೆ ಸಮಾನ ಳಾಗಿಯೂ, ನಿತಂಬಿನಿಯಾಗಿಯೂ ಮತ್ತು ಮತ್ತಗಜಗಾಮಿನಿಯಾಗಿಯೂ, ಇರುವ ಆ ಲಕ್ಷ್ಮಿಯನ್ನು ವಾಸುದೇವನು ಮದುವೆಯಾಗಿ ವಿಲಾಸವತಿಯಾದ ಆ ಲಕ್ಷ್ಮಿಯ ಜೊತೆಯಲ್ಲಿ ಕ್ರೀಡಿಸಿದನು.

೬. ಮಾನ, ಯಶಸ್ಸುಗಳು ಇವುಗಳನ್ನೇ ಧನವಾಗಿ ಉಳ್ಳ ಆ ಲಕ್ಷ್ಮಿಯು ಜಗತ್ತನ್ನು ಜಯಿಸಿದವನಾಗಿಯೂ, ತ್ರಿಜಗತ್ತಿಗೆ ಅಧಿಪತಿಯಾಗಿಯೂ ಇರುವ ಶ್ರೀ ಮಹಾವಿಷ್ಣುವನ್ನು ವರನನ್ನಾಗಿ ಪಡೆದುದರಿಂದ ತಾನು ಕೃತಕೃತ್ಯಳಾದೆ ನೆಂದು ಭಾವಿಸಿದಳು.

ಹೃಷ್ಟಂ ಪುಷ್ಟಂ ಜಗತ್ಸರ್ವಮಭವದ್ಭಾವಿತಂ ತಯಾ ।
ಲಕ್ಷ್ಮ್ಯಾ ನಿರೀಕ್ಷಿತಂ ಚೈವ ಸಾನಂದಂ ಹಿ ಮಹೀತಲಂ ॥ ೭ ॥

ಕ್ಷೇಮಂ ಸುಭಿಕ್ಷಮಾರೋಗ್ಯಮನಾಕ್ರಂದಮನಾಕುಲಂ ।
ಜಗದಾಸೀದಸುದ್ಭ್ರಾಂತಂ ಪ್ರಶಾಂತೋಪದ್ರವಂ ತಥಾ ॥ ೮ ॥

ದಿವಿ ದೇವಾ ಮುಮುದಿರೇ ದಾನವಾ ದೈತ್ಯಮಾಗತಾಃ ।
ವಿಸ್ಫಾರಿತಫಣಾಭೋಗಾ ನಾಗಾಶ್ಚೈವ ರಸಾತಲೇ ॥ ೯ ॥

ಹೃದಯೇ ಬ್ರಾಹ್ಮಣೈರ್ವಹ್ನೌ ಭುಜ್ಯತೇ ತ್ರಿದಿವೈರ್ಹವಿಃ ।
ಚಾತುರ್ವರ್ಣ್ಯಮಸಂಕೀರ್ಣಂ ಪಾಲ್ಯತೇ ಪಾರ್ಥ ಪಾರ್ಥಿವೈಃ ॥ ೧೦ ॥

---

೭. ಆ ಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರವಾದ ಸಮಸ್ತ ಜಗತ್ತೂ ಹೃಷ್ಟವೂ, ಪುಷ್ಟವೂ ಆಯಿತು. ಮತ್ತು ಆ ಲಕ್ಷ್ಮೀ ಕಟಾಕ್ಷವೊದಗಿ ಭೂಲೋಕವು ಆನಂದ ಭರಿತವಾಯಿತು.

೮. ಮತ್ತು ಲೋಕಕ್ಕೆ ಕ್ಷೇಮವೂ ಸುಭಿಕ್ಷವೂ ಆರೋಗ್ಯವೂ ಆದದ್ದಲ್ಲದೆ ಜಗತ್ತು ದುಃಖರೋದನಾದಿಗಳಿಲ್ಲದ್ದೂ, ಮನೋವ್ಯಾಕುಲತೆ ರಹಿತವಾದುದೂ, ದಿಗ್ಭ್ರಮೆ ಇಲ್ಲದುದೂ, ನಿಖಿಲೋಪದ್ರವಶಾಂತಿಯುಳ್ಳದ್ದೂ ಆಯಿತು.

೯. ಮತ್ತು ಆ ಕಾಲದಲ್ಲಿ ಸ್ವರ್ಗದಲ್ಲಿ ದೇವತೆಗಳು ಸಂತೋಷದಿಂದಿದ್ದರು. ಹಾಗೆಯೇ ದಾನವರೂ ದೈತ್ಯರೂ ಸಹ ಸಂತುಷ್ಟರಾಗಿದ್ದರು. ಪಾತಾಳ ಲೋಕದಲ್ಲಿ ಸರ್ಪಗಳೂ ಸಂತೋಷದಿಂದ ಹೆಡೆಗಳನ್ನು ಬಿಚ್ಚಿಕೊಂಡಿದ್ದುವು.

೧೦. ಅಯ್ಯಾ ಪಾರ್ಥ ಸಹೋದರನೇ ! ಬ್ರಾಹ್ಮಣರು ಅಗ್ನಿಯಲ್ಲಿ ಹೋಮಮಾಡಿದರು. ಅದರಿಂದ ದೇವತೆಗಳು ಹವಿರ್ಭಾಗವನ್ನು ಭುಂಜಿಸಿದರು. ರಾಜರು ಪ್ರಜೆಗಳನ್ನು ಆಯಾ ವರ್ಣಾಶ್ರಮಗಳ ಧರ್ಮನಿರತರಾಗಿರುವಂತೆಯೂ, ಪರಧರ್ಮವನ್ನಾಶ್ರಯಿಸಿ ಸ್ವಧರ್ಮಪರಿತ್ಯಾಗಮಾಡಿ ಸಾಂಕರ್ಯದೋಷಕ್ಕೆ ಒಳಗಾಗದಂತೆಯೂ, ವರ್ಣಾಶ್ರಮ ಧರ್ಮರಕ್ಷಣೆ ಮಾಡಿಕೊಂಡಿದ್ದರು.

ವಿರೋಚನಪ್ರಭೃತಿಭಿರ್ದೃಷ್ಟ್ವೈವಂ ದೈತ್ಯಸತ್ತಮೈಃ ।
ತಪಸ್ತಪ್ತುಮಥಾರಬ್ಧಮಗ್ನಿಮಾಶ್ರಿತ್ಯ ಸಂಯತೈಃ ॥ ೧೧ ॥

ಸೋಮಸಂಸ್ಥಾ ಹವಿಃಸಂಸ್ಥಾ ಪಾಕಸಂಸ್ಥಾದಿಭಿರ್ಮಖೈಃ ।
ಸದಾಚಾರೈಸ್ಸಮಾರಬ್ಧಮಿಷ್ಟಂ ಸ್ವೇಷ್ಟಾಭಿಲಾಷಿಭಿಃ ॥ ೧೨ ॥

ಏವಂ ಧರ್ಮಪ್ರಧಾನೈಸ್ತೈರ್ವೇದವಾದರತಾತ್ಮಭಿಃ ।
ಜಗದಾಸೀತ್ಸಮಾಕ್ರಾಂತಂ ವಿಕ್ರಮೇಣ ಕ್ರಮೇಣ ತು ॥ ೧೩ ॥

ಲಕ್ಷ್ಮೀವಿಲಾಸಪ್ರಭವೋ ದೇವಾನಾಮಭವನ್ಮದಃ ।
ಮದಾಚ್ಛೀಲಂ ಚ ಶೌಚಂ ಚ ಸತ್ಯಂ ಸದ್ಯೋ ವ್ಯನೀನಶನ್ ॥ ೧೪ ॥

---

೧೧. ಈರೀತಿ ಲೋಕವು ಸುವ್ಯವಸ್ಥಿತವಾಗಿರುವುದನ್ನು ಕಂಡು ವಿರೋಚನನೇ ಮೊದಲಾದ ದೈತ್ಯಶ್ರೇಷ್ಠರು ಇಂದ್ರಿಯಸಂಯಮ ಮಾಡಿಕೊಂಡು ಅಗ್ನಿಯನ್ನುದ್ದೇಶಿಸಿ ತಪಸ್ಸುಮಾಡುವುದಕ್ಕೆ ಪ್ರಾರಂಭಿಸಿದರು.

೧೨. ತಮ್ಮ ಇಷ್ಟಾರ್ಥ ಸಿದ್ಧಿಯಾಗುವುದಕ್ಕಾಗಿ ಅವರು ಸದಾಚಾರ ಯುಕ್ತರಾಗಿ ಸಪ್ತಸೋಮಯಜ್ಞ ಸಂಸ್ಥೆಗಳನ್ನೂ, ಸಪ್ತಹವಿರ್ಯಜ್ಞ ಸಂಸ್ಥೆಗಳನ್ನೂ, ಸಪ್ತಪಾಕಯಜ್ಞ ಸಂಸ್ಥೆಗಳನ್ನೂ, ಏರ್ಪಡಿಸಿ ಈ ಯಾಗಗಳನ್ನು ಮಾಡುವುದಕ್ಕೆ ಪ್ರಾರಂಭಿಸಿದರು.

೧೩. ಈರೀತಿ ದೈತ್ಯರೂ ವೇದೋಕ್ತ ವಚನಗಳಲ್ಲಿ ವಿಶ್ವಾಸ ಮನಸ್ಕರಾಗಿ ಧರ್ಮಾನುಷ್ಠಾನ ತತ್ಪರರಾಗುತ್ತಿರಲು ಕ್ರಮೇಣ ಜಗತ್ತು ವೀರ್ಯವತ್ತರವಾಯಿತು.

೧೪. ಆ ಸಮಯದಲ್ಲಿ ದೇವತೆಗಳಿಗೆ ಲಕ್ಷ್ಮೀವಿಲಾಸದಿಂದ ಮದೋದ್ರೇಕವಾಯ್ತು ಆ ಮದದಿಂದ ಸದಾಚಾರದ ಉದ್ಭ್ರಂಶವುಳ್ಳವರಾಗಿ ಆಚಾರ ಹೀನತೆಯಿಂದ ಬಾಹ್ಯಾಭ್ಯಂತರ ಶೌಚವು ಮಾಯವಾಯ್ತು ಆ ಅಶುಚಿತ್ವದಿಂದ ಸತ್ಯಭ್ರಷ್ಟತೆಯನ್ನು ಹೊಂದಿದ ಕಾರಣ ಅವರ ಸಮಸ್ತ ಪುರುಷಾರ್ಥಗಳೂ ಹಾಳಾದುವು.

ಸತ್ಯಶೌಚವಿಹೀನಾಂಸ್ತಾನ್ದೇವಾನ್ಸಂತ್ಯಜ್ಯ ಚಂಚಲಾನ್ ।
ಜಗಾಮ ದಾನವಕುಲಂ ಕುಲದೇವಾನುರಾಗತಃ ॥ ೧೫ ॥

ಲಕ್ಷ್ಮ್ಯಾ ಭಾವಿತದೇಹೈಸ್ತ್ರೈಃ ಪುನರುದ್ಧತಮಾನಸೈಃ ।
ವ್ಯವಹರ್ತುಂ ಸಮಾರಬ್ಧಮನ್ಯಾಯೇನ ಮದೋದ್ಧತೈಃ ॥ ೧೬ ॥

ವಯಂ ವೇದಾ ವಯಂ ಯಜ್ಞಾ ವಯಂ ವಿದ್ಯಾ ವಯಂ ಜಗತ್ ।
ಬ್ರಹ್ಮವಿಷ್ಣುಮಹೇಶಾದ್ಯಾ ವಯಂ ಸರ್ವೇ ದಿವೌಕಸಃ ॥ ೧೭ ॥

ಅಹಂಕಾರವಿಮೂಢಾಂಸ್ತಾಞ್ಜ್ಞಾತ್ವಾ ದಾನವಸತ್ತಮಾನ್ ।
ಸಾಗರಂ ಸಾ ವಿವೇಶಾಥ ಭ್ರಾಂತಚಿತ್ತಾ ಭೃಗೋಃ ಸುತಾ ॥ ೧೮ ॥

---

೧೫. ಈರೀತಿ ದೇವತೆಗಳು ಸತ್ಯ, ಶೌಚ ಇವುಗಳಿಂದ ರಹಿತರಾಗಿ ಚಪಲ ಚಿತ್ತರಾಗಿರುವುದನ್ನು ಕಂಡು, ಲಕ್ಷ್ಮಿಯು ಅವರನ್ನು ತ್ಯಜಿಸಿ, ರಾಕ್ಷಸರು ತನ್ನ ಕುಲದೇವನಾದ ಭೃಗುಮಹರ್ಷಿಗೆ ಪ್ರೀತಿಪಾತ್ರರಾದ್ದರಿಂದ ಆ ಭೃಗು ಸಂಬಂಧ ವಾದ ಅನುರಾಗದಿಂದ ದಾನವಕುಲವನ್ನು ಸೇರಿದಳು.

೧೬. ಆಗ ಲಕ್ಷ್ಮೀ ಕಟಾಕ್ಷಕ್ಕೆ ಪಾತ್ರರಾದ ಆ ದೈತ್ಯರು ಪುನಃ ಉದ್ಧತ ಮನಸ್ಕರಾಗಿ ಮದೋನ್ಮತ್ತತೆಯಿಂದ ಅನ್ಯಾಯವಾದ ವ್ಯವಹಾರಕ್ಕೆ ಪ್ರಾರಂಭಿಸಿದರು.

೧೭. ನಾವೇ ವೇದಸ್ವರೂಪರು, ಆ ವೇದಗಳಲ್ಲಿ ಪ್ರತಿಪಾದಿತಗಳಾದ ಶ್ರೌತ ಯಜ್ಞಾದಿಗಳೂ ನಾವೇ, ನಾವೇ ವಿದ್ಯೆಗಳು, ನಾವೇ ಜಗತ್ತು, ತ್ರಿಲೋಕೇಶ್ವರರಾದ ಬ್ರಹ್ಮ, ವಿಷ್ಣು, ಮಹೇಶ್ವರರೂ ನಾವೇ, ಮತ್ತು ಸ್ವರ್ಗನಿವಾಸಿಗಳಾದ ದೇವತೆಗಳೂ ನಾವೇ, ಎಂದು ಅಹಂಕಾರದಿಂದ ತಾವೇ ಸರ್ವಾತ್ಮಕರೆಂದು ಹೇಳಿಕೊಳ್ಳಲು ಪ್ರಾರಂಭಿಸಿದರು.

೧೮. ಅನಂತರ ಭೃಗುಪುತ್ರಿಯಾದ ಆ ಲಕ್ಷ್ಮಿಯು ದಾನವರು ಈರೀತಿ ಅಹಂಕಾರದಿಂದ ಮೌಢ್ಯವಶರಾಗಿರುವರು ಎಂದು ತಿಳಿದು ಭ್ರಾಂತಚಿತ್ತಳಾಗಿ ಏನೂ ತೋಚದೆ ಸಮುದ್ರವಲ್ಲಿ ಪ್ರವೇಶಮಾಡಿದಳು.

ಕ್ಷೀರಾಬ್ಧಿಮಧ್ಯಗತಯಾ ಲಕ್ಷ್ಮ್ಯಾ ಕ್ಷೀಣಾರ್ಥಸಂಚಯಮ್ ।
ನಿರಾನಂದಂ ಗತಶ್ರೀಕಮಭವದ್ಭುವನತ್ರಯಂ ॥ ೧೯ ॥

ಗತಶ್ರೀಕಮಥಾತ್ಮಾನಂ ಮತ್ವಾ ಶಂಬರಸೂದನಃ ।
ಪಪ್ರಚ್ಛಾಂಗಿರಸಂ ವಿಪ್ರಂ ಬ್ರೂಹಿ ಕಿಂಚಿದ್ವ್ರತಂ ಮಮ ॥ ೨೦ ॥

ಯೇನ ಸಂಪ್ರಾಪ್ಯತೇ ಲಕ್ಷ್ಮೀರ್ಲಬ್ಧಾ ನ ಚಲತೇ ಪುನಃ ।
ನಿಶ್ಚಲಾಪಿ ಸುಹೃನ್ಮಿತ್ರೈರ್ಭೋಗ್ಯಾ ಭವತಿ ಯಾ ಮುನೇ ॥ ೨೧ ॥

ನ ಸಾ ಶ್ರೀರಿತ್ಯಭಿಮಂತವ್ಯಾ ಕನ್ಯಾ ಸಾ ಪಾಲ್ಯತೇ ಗೃಹೇ ।
ಪರಾರ್ಥಂ ಯಾ ಸುಹೃನ್ಮಿತ್ರಭೃತ್ಯೈರ್ನೈವೋಪಭುಜ್ಯತೇ ॥ ೨೨ ॥

---

೧೯. ಈರೀತಿ ಶ್ರೀ ಮಹಾಲಕ್ಷ್ಮಿಯು ಕ್ಷೀರಸಾಗರದ ಮಧ್ಯದಲ್ಲಿ ಪ್ರವೇಶ ಮಾಡಿದ್ದರಿಂದ ಮೂರು ಲೋಕವೂ ಧನರಹಿತವೂ, ಉತ್ಸಾಹವಿಲ್ಲದುದೂ, ನಿರಾನಂದವೂ ನಿಸ್ತೇಜಸ್ಕವೂ ಆಯಿತು.

೨೦. ಅನಂತರ ಶಂಬರಾಸುರ ನಾಶಕನಾದ ದೇವೇಂದ್ರನು ತನ್ನ ಸಂಪತ್ತೆಲ್ಲಾ ನಾಶವಾಗಿ ಅಲಕ್ಷ್ಮಿಯು ಆವರಿಸಿಕೊಂಡದ್ದನ್ನು ಕಂಡು, ಬ್ರಾಹ್ಮಣೋತ್ತಮರಾದ ಬೃಹಸ್ಪತ್ಯಾಚಾರ್ಯರ ಸಮೀಪಕ್ಕೆ ಬಂದು ತನಗೆ ಯಾವುದಾದರೂ ಒಂದು ವ್ರತೋಪದೇಶವನ್ನು ಮಾಡಬೇಕೆಂದು ಕೇಳಿದನು.

೨೧. "ಅಯ್ಯಾ ಋಷಿಯೇ! ಆ ವ್ರತಾಚರಣೆಯಿಂದ ಸಂಪತ್ತು ಅತ್ಯಧಿಕ ಲಾಭವಾಗಿ ಆ ಲಕ್ಷ್ಮಿಯು ಪುನಃ ನನ್ನನ್ನು ಬಿಟ್ಟು ಇನ್ನೊಂದುಕಡೆ ಚಲಿಸಬಾರದು. ಆ ಲಕ್ಷ್ಮಿಯು ಸ್ಥಿರವಾಗಿದ್ದರೂ ಸ್ವಭೋಗಕ್ಕೆ ಉಪಯುಕ್ತಳಾಗದೆ ಮಿತ್ರಾದಿ ಇತರ ಜನಕ್ಕೆ ಮಾತ್ರ ಉಪಭೋಗ ಸಾಧನವಾಗಿದ್ದರೆ ಆ ಲಕ್ಷ್ಮಿಯನ್ನು ಶ್ರೀ ಎಂದೂ ಯಾರೂ ಅಭಿಮಾನಿಸಬಾರದು.

೨೨. ಲಕ್ಷ್ಮಿಯು ಇದ್ದರೂ ಅದನ್ನು ಭೋಗಿಸದೆ ರಕ್ಷಿಸಿಕೊಂಡಿರುವವನು ಪರರಿಗೆ ದಾನಮಾಡುವುದಕ್ಕಾಗಿ ಮಗಳನ್ನು ಸಾಕಿ ಮನೆಯಲ್ಲಿ ಕಾಪಾಡಿದಂತೆ ಆಗುವುದರಿಂದ ಅಂಥವನ ಆ ಲಕ್ಷ್ಮಿಯನ್ನು ಕನ್ಯೆ ಎಂದೇ ಭಾವಿಸಬೇಕು. ಕನ್ಯೆಯಂತೆ ಅವನ ಲಕ್ಷ್ಮಿಯೂ ಮಿತ್ರರೇ ಮೊದಲಾದ ಇತರರ ಭೋಗಕ್ಕೆ ಸಾಧನಳಾಗುವಳು. ತನಗೂ ತನ್ನ ಪರಿಚಾರಕರಿಗೂ ಆ ಲಕ್ಷ್ಮಿಯಿಂದ ಯಾವ ಭೋಗವೂ ಲಭಿಸುವುದಿಲ್ಲ. ಆದುದರಿಂದ ಆ ಲಕ್ಷ್ಮಿಯು ಇವರಿಗೆ ಕನ್ಯಾ ಸಮಾನವು" ಎಂದನು.

ಶಕ್ರಸ್ಯೈತದ್ವಚಃ ಶ್ರುತ್ವಾ ಬೃಹಸ್ಪತಿರುದಾರಧೀಃ ।
ಕಥಯಾಮಾಸ ಸಂಚಿಂತ್ಯ ಶುಭಂ ಶ್ರೀ ಪಂಚಮೀವ್ರತಂ ॥ ೨೩ ॥

ಯತ್ಪುರಾ ಕಸ್ಯಚಿತ್ಪ್ರೋಕ್ತಂ ವ್ರತಾನಾಮುತ್ತಮಂ ವ್ರತಂ ।
ತದಸ್ಮೈ ಕಥಯಾಮಾಸ ಸರಹಸ್ಯಮಶೇಷತಃ ॥ ೨೪ ॥

ತಚ್ಛ್ರುತ್ವಾ ಕರ್ತುಮಾರಬ್ಧಂ ಸುರೇಶೇನ ಸುರೈಸ್ತಥಾ ।
ದೈತ್ಯದಾನವಗಂಧರ್ವೈರ್ಯಕ್ಷೈಃ ಪ್ರಕ್ಷೀಣಕಲ್ಮಷೈಃ ॥ ೨೫ ॥

ಸಿದ್ಧೈಃ ಪ್ರಸಿದ್ಧಚರಿತ್ರೈರ್ವಿಷ್ಣುನಾ ಪ್ರಭವಿಷ್ಣುನಾ ।
ಬ್ರಾಹ್ಮಣೈರ್ಬ್ರಹ್ಮತತ್ವಜ್ಞೈಃ ಸಮರ್ಥೈಃ ಪಾರ್ಥಿವೈಃ ಸಹ ॥ ೨೬ ॥

---

೨೩. ಇಂದ್ರನು ಆಡಿದ ಈ ಮಾತನ್ನು ಕೇಳಿ ಉದಾರಮನಸ್ಕನಾದ ಬೃಹಸ್ಪತ್ಯಾಚಾರ್ಯನು ಸ್ವಲ್ಪ ಹೊತ್ತು ಯೋಚಿಸಿ, ಅನಂತರ ಅವನಿಗೆ ಮಂಗಳಕರವಾದ ಈ ಪಂಚಮೀ ವ್ರತವನ್ನು ಉಪದೇಶಿಸಿದನು.

೨೪. ಸರ್ವ ವ್ರತಗಳಲ್ಲಿಯೂ ಉತ್ತಮವಾದುದೂ, ಇದಕ್ಕೆ ಮುಂಚೆ ಯಾರಿಗೂ ಹೇಳದೆ ಗೋಪ್ಯವಾಗಿಟ್ಟುಕೊಂಡುದೂ ಆದ, ಈ ಪಂಚಮೀ ವ್ರತವನ್ನು ಬೃಹಸ್ಪತಿಯು ಆ ಇಂದ್ರನಿಗೆ ಸಾಂಗವಾಗಿಯೂ ಸಂಪೂರ್ಣವಾಗಿಯೂ ಹೇಳಿದನು.

೨೫. ಬೃಹಸ್ಪತಿಯಿಂದ ಉಪದಿಷ್ಟವಾದ ಈ ವ್ರತವನ್ನು ಶ್ರವಣಮಾಡಿ ದೇವಪತಿಯಾದ ಇಂದ್ರನೂ, ಮತ್ತು ಕ್ಷೀಣಕಲ್ಮಷರಾದ ದೇವತೆಗಳು ದೈತ್ಯರು, ದಾನವರು, ಗಂಧರ್ವರು, ಯಕ್ಷರು ಇವರೆಲ್ಲರೂ ಆ ವ್ರತವನ್ನಾಚರಿಸುವುದಕ್ಕೆ ಪ್ರಾರಂಭಮಾಡಿದರು.

೨೬. ಮತ್ತು ಸದಾಚಾರ ಸಂಪನ್ನರಾದ ಸಿದ್ಧಪುರುಷರೂ, ಮಹಾಪ್ರಭು ಶಕ್ತಿಸಂಪನ್ನನಾದ ಶ್ರೀ ಮಹಾವಿಷ್ಣುವೂ, ಬ್ರಹ್ಮತತ್ವವನ್ನರಿತ ಬ್ರಾಹ್ಮಣರೂ, ಸಮರ್ಥರಾದ ರಾಜರೂ ಈ ವ್ರತವನ್ನಾಚರಿಸಿದರು.

ಕೈಶ್ಚಿತ್ಸಾತ್ತ್ವಿಕಭಾವೇನ ರಾಜಸೇನಾಪರೈರಪಿ ।
ತಾಮಸೇನ ತಥಾ ಕೈಶ್ಚಿತ್ಕೃತಂ ವ್ರತಮಿದಂ ತಥಾ ॥ ೨೭ ॥

ವ್ರತೇ ಸಮಾಪ್ತೇ ಭೂಯಿಷ್ಠೇ ನಿಷ್ಠಯಾ ಪರಯಾ ಪ್ರಭೋ ।
ದೇವಾನಾಂ ದಾನವಾನಾಂ ಚ ಯುದ್ಧಮಾಸೀದಥೋದ್ಧತಂ ॥ ೨೮ ॥

ನಿರ್ಮಥ್ಯ ಭುಜವೀರ್ಯೇಣ ಸಾಗರಂ ಸರಿತಾಂ ಪತಿಂ ।
ಸಮಾಹರಾಮೋ ಹ್ಯಮೃತಂ ಹಿತಾಯ ತ್ರಿದಿವೌಕಸಾಂ ॥ ೨೯ ॥

ಇತ್ಯೇವಂ ಸಮಯಂ ಕೃತ್ವಾ ಮಮಂಥುರ್ವರುಣಾಲಯಂ ।
ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಂ ॥ ೩೦ ॥

ಮಥ್ಯಮಾನಜಲಾಜ್ಜಾತಶ್ಚಂದ್ರಃ ಶೀತಾಂಶುರುಜ್ಜ್ವಲಃ ।
ಅನಂತರಂ ಸಮುತ್ಪನ್ನಾ ಲಕ್ಷ್ಮೀಃ ಕ್ಷೀರಾಬ್ಧಿಮಧ್ಯತಃ ॥ ೩೧ ॥

---

೨೭. ಈ ವ್ರತಾನುಷ್ಠಾನಪರರಾದ ಇಂದ್ರಾದಿಗಳಲ್ಲಿ ಕೆಲವರು ಈ ವ್ರತವನ್ನು ಸಾತ್ವಿಕ ಭಾವನೆಯಿಂದ ಮಾಡಿದರು. ಮತ್ತೆ ಕೆಲವರು ರಾಜಸ ಭಾವನೆಯಿಂದ ಅನುಷ್ಠಾನಮಾಡಿದರು.

೨೮. ಎಲೈ ರಾಜನೇ ! ಪರಮನಿಷ್ಠೆಯಿಂದ ಆಚರಿಸತಕ್ಕುದೂ ಸಮೃದ್ಧಿಪ್ರದವೂ ಆದ ಈ ವ್ರತವು ಸಮಾಪ್ತವಾಗುತ್ತಲೆ, ದೇವತೆಗಳಿಗೂ ದಾನವರಿಗೂ ದೊಡ್ಡ ಯುದ್ಧವು ನಡೆಯಿತು.

೨೯. ಆಗ ಸ್ವರ್ಗನಿವಾಸಿಗಳ ಹಿತಾರ್ಥವಾಗಿ ಸರಿತ್ಪತಿಯಾದ ಸಾಗರವನ್ನು ಭುಜಬಲದಿಂದ ಕಡೆದು ಅಮೃತವನ್ನು ಹೊಂದೋಣವೆಂದು ತೀರ್ಮಾನಿಸಿದರು.

೩೦. ಬಳಿಕ ಹಿರಿದಾದ ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿ ಎಂಬ ಸರ್ಪರಾಜನನ್ನು ಕಡೆಯುವ ಹಗ್ಗವನ್ನಾಗಿಯೂ, ಮಾಡಿಕೊಂಡು ಸಮುದ್ರ ಮಥನಮಾಡಿದರು.

೩೧. ಈರೀತಿ ಕಡೆಯುತ್ತಿರುವಾಗ ಮಥಿತವಾದ ಆ ನೀರಿನಲ್ಲಿ ಪ್ರಕಾಶಮಾನನೂ, ಶೀತಕಿರಣನೂ, ಆದ ಚಂದ್ರನು ಜನಿಸಿದನು. ಅನಂತರ ಆ ಕ್ಷೀರಸಾಗರದ ಮಧ್ಯದಲ್ಲಿ ಲಕ್ಷ್ಮಿಯು ಉದ್ಭವಿಸಿದಳು.

ತಯಾ ವಿಲೋಕಿತಾಃ ಸರ್ವೇ ದೈತ್ಯದಾನವಸತ್ತಮಾಃ ।
ಆಲೋಕ್ಯ ಸಾ ಜಗಾಮಾಶು ವಿಷ್ಣೋರ್ವಕ್ಷಸ್ಥಲಂ ಶುಭಂ ॥ ೩೨ ॥

ವಿಧಿನಾ ವಿಷ್ಣುನಾ ಚೀರ್ಣಂ ವ್ರತಂ ತೇನಾಬ್ಧಿಸಂಭವಾ ।
ಶರೀರಸ್ಥಾ ಬಭೂವಾಸ್ಯ ವಿಭ್ರಮೋದ್ಭ್ರಾಂತಲೋಚನಾ ॥ ೩೭ ॥

ಕಿಂ ಚ ರಾಜಸಭಾವೇನ ಶಕ್ರೇಣೈತತ್ಕೃತಂ ಯತಃ ।
ತತಸ್ತ್ರಿಭುವನೈಶ್ವರ್ಯಂ ಪ್ರಾಪ್ತಂ ತೇನ ಮಹರ್ದ್ಧಿಕಂ ॥ ೩೪ ॥

ತಮಸಾವೃತಚಿತ್ತೈಸ್ತು ಸಂಚೀರ್ಣಂ ದೈತ್ಯದಾನವೈಃ ।
ತೇನ ತೇಷಾಮಭೈಶ್ವರ್ಯಂ ದೃಷ್ಟನಷ್ಟಮಭೂತ್ಕಿಲ ॥ ೩೫ ॥

---

೩೨. ಆಗ ಆ ಲಕ್ಷ್ಮಿಯು ಅಲ್ಲಿದ್ದ ದೈತ್ಯರು, ದಾನವರು ಮತ್ತು ಇತರರನ್ನೆಲ್ಲಾ ನೋಡಿ ಅವರನ್ನು ತ್ಯಜಿಸಿ, ಶ್ರೀ ಮಹಾವಿಷ್ಣುವನ್ನು ನೋಡಿ ಅವನ ಶುಭಕರವಾದ ವಕ್ಷಸ್ಥಲದಲ್ಲಿ ಹೋಗಿ ನೆಲಸಿದಳು.

೩೩. ಶ್ರೀ ಮಹಾವಿಷ್ಣುವು ಮೊದಲು ಸಾತ್ವಿಕ ಭಾವನೆಯಿಂದ ಶಾಸ್ತ್ರ ಪ್ರಕಾರವಾಗಿ ಈ ಪಂಚಮಿ ವ್ರತವನ್ನಾಚರಿಸಿದ್ದ ಕಾರಣ; ವಿಲಾಸಯುಕ್ತವೂ, ಚಂಚಲವೂ ಆದ ನೇತ್ರಗಳಿಂದ ಶೋಭಿಸುತ್ತಿರುವವಳೂ, ಕ್ಷೀರಾಬ್ಧಿ ಸಂಭೂತೆಯೂ ಆದ ಶ್ರೀ ಮಹಾಲಕ್ಷ್ಮಿಯು ಆ ವಿಷ್ಣುವಿನ ಶರೀರಸ್ಥಳಾದಳು.

೩೪. ಇಂದ್ರನು ರಾಜಸಭಾವನೆಯಿಂದ ಈ ವ್ರತವನ್ನಾಚರಿಸಿದ್ದರಿಂದ ಸಂಪತ್ಸಮೃದ್ಧವಾದ ತ್ರಿಭುವನಾದಿಪತ್ಯವನ್ನು ನಿಷ್ಕಂಟಕವಾಗಿ ಪಡೆದನು.

೩೫. ತಮೋಗುಣ ಭೂಯಿಷ್ಠವಾದ ಮನಸ್ಸಿನಿಂದ ದೈತ್ಯರು ಮತ್ತು ದಾನವರು ಈ ವ್ರತವನ್ನಾಚರಿಸಿದ ಕಾರಣ ಅವರಿಗೆ ಐಶ್ವರ್ಯವು ಸ್ವಲ್ಪಕಾಲ ದೃಷ್ಟವಾಗಿ ಅನಂತರ ನಷ್ಟವಾಗತಕ್ಕುದಾದ ದೃಷ್ಟ ನಷ್ಟ ಸ್ವರೂಪ ಐಶ್ವರ್ಯವು ಅವರಿಗೆ ಪ್ರಾಪ್ತಿಯಾಯಿತು.

ಏವಂ ಸಶ್ರೀಕಮಭವತ್ಸದೇವಾಸುರಮಾನುಷಂ ।
ಜಗಚ್ಚ ಜಗತಾಂ ಶ್ರೇಷ್ಠ ವ್ರತಸ್ಯಾಸ್ಯ ಪ್ರಭಾವತಃ ॥ ೩೬ ॥

॥ ಯುಧಿಷ್ಠಿರ ಉವಾಚ ॥

ಕಥಮೇತದ್ವ್ರತಂ ಕೃಷ್ಣ ಕ್ರಿಯತೇ ಮನುಜೈಃ ಕದಾ ।
ಪ್ರಾರಭ್ಯತೇ ಪಾರ್ಯತೇ ಚ ಸರ್ವಂ ವದ ಯದೂತ್ತಮ ॥ ೩೭ ॥

॥ ಶ್ರೀ ಕೃಷ್ಣ ಉವಾಚ ॥

ಮಾರ್ಗಶೀರ್ಷೇ ಸಿತೇ ಪಕ್ಷೇ ಪಂಚಮ್ಯಾಂ ಪತಗೋದಯೇ ।
ಉಪವಾಸಸ್ಯ ನಿಯಮಂ ಕುರ್ಯಾದಾಶು ಸುಹೃದ್ಧೃದಿ ॥ ೩೮ ॥

ಸ್ವರ್ಣರೌಪ್ಯಾರಕೂಟೋತ್ಥಾ ತಾಮ್ರಮೃತ್ಕಾಷ್ಠಜಾಥ ವಾ ।
ಚಿತ್ರಪಟ್ಟಗತಾಂ ದೇವೀಂ ಲಕ್ಷ್ಮೀಂ ಕ್ಷ್ಮಾಪಾಲ ಕಾರಯೇತ್ ॥ ೩೯ ॥

---

೩೬. ಅಯ್ಯಾ ಪುರುಷಶ್ರೇಷ್ಠನೇ ! ಈ ವ್ರತಮಹಾತ್ಮೆಯಿಂದ ದೇವತೆಗಳು, ಅಸುರರು, ಮನುಷ್ಯರು ಇವರುಗಳಿಂದ ಕೂಡಿದ ಜಗತ್ತು ಸಂಪತ್ಸಮೃದ್ಧವಾಯಿತು.

೩೭. ಯುಧಿಷ್ಠಿರನು ಹೇಳುತ್ತಾನೆ—"ಎಲೈ ಯಾದವೋತ್ತಮನೇ ! ಮನುಷ್ಯರು ಈ ವ್ರತವನ್ನು ಹೇಗೆ ಮಾಡಬೇಕು ? ಯಾವಾಗ ಪ್ರಾರಂಭಿಸಬೇಕು? ಯಾವಾಗ ವ್ರತಪಾರಣೆಯನ್ನು ಮಾಡಬೇಕು? ಇವೆಲ್ಲವನ್ನೂ ಹೇಳು" ಎಂದನು.

೩೮. ಶ್ರೀ ಕೃಷ್ಣನು ಹೇಳುತ್ತಾನೆ—ಮಾರ್ಗಶೀರ್ಷ ಶುಕ್ಲ ಪಂಚಮಿ ದಿನ ಸೂರ್ಯೋದಯವಾಗುತ್ತಲೆ ನಿಷ್ಕಲ್ಮಷವಾದ ಮನಸ್ಸಿನಿಂದ ಉಪವಾಸ ನಿಯಮವನ್ನು ಆಚರಿಸುತ್ತೇನೆಂದು ಸಂಕಲ್ಪಿಸಬೇಕು.

೩೯. ಎಲೈ ಭೂಪತಿಯೇ ! ಚಿನ್ನ, ಬೆಳ್ಳಿ, ಹಿತ್ತಾಳೆ, ಮಣ್ಣು, ಮರ ಇವುಗಳಲ್ಲಿ ತನ್ನ ಶಕ್ತ್ಯನುಸಾರ ಯಾವುದಾದರೂ ಒಂದು ವಸ್ತುವಿನಿಂದ ಶ್ರೀ ಲಕ್ಷ್ಮೀದೇವಿಯ ಪ್ರತಿಮೆಯನ್ನು ಮಾಡಿಸಬೇಕು. ಅಥವಾ ಲಕ್ಷ್ಮಿಯ ಆಕೃತಿಯನ್ನು ಚಿತ್ರಪಟದಲ್ಲಾದರೂ ಚಿತ್ರಿಸಬೇಕು.

ಪದ್ಮಹಸ್ತಾಂ ಪದ್ಮವರ್ಣಾಂ ಪದ್ಮಾಂ ಪದ್ಮದಲೇಕ್ಷಣಾಂ ।
ದಿಗ್ಗಜೇಂದ್ರೈಃ ಸ್ನಾಪ್ಯಮಾನಾಂ ಕಾಂಚನೈಃ ಕಲಶೋತ್ತಮೈಃ ॥ ೪೦ ॥

ತತೋ ಯಾಮತ್ರಯೇ ಜಾತೇ ನಿಮ್ನಗಾಯಾಂ ಗೃಹೇಽಥ ವಾ ।
ಸ್ನಾನಂ ಕುರ್ಯಾದಸಂಭ್ರಾಂತಂ ಶಕ್ರವದುಪಚಾರತಃ ॥ ೪೧ ॥

ದೇವಾನ್ಪಿತ್ರ್ಯಾಂಶ್ಚ ಸಂತರ್ಪ್ಯ ತತೋ ದೇವಗೃಹಂ ವ್ರಜೇತ್ ।
ತತ್ರಸ್ಥಾಂ ಪೂಜಯೇದ್ದೇವೀಂ ಪುಷ್ಪೈಸ್ತತ್ಕಾಲಸಂಭವೈಃ ॥ ೪೨ ॥

ಚಪಲಾಯೈ ನಮಃ ಪಾದೌ ಚಂಚಲಾಯೈ ಚ ಜಾನುನೀ ।
ಕಟಿಂ ಕಮಲವಾಸಿನ್ಯೈ ನಾಭಿಂ ಖ್ಯಾತ್ಯೈ ನಮೋನಮಃ ॥ ೪೩ ॥

---

೪೦. ದೇವಿಯು ಕೈಯ್ಯಲ್ಲಿ ಕಮಲವನ್ನು ಹಿಡಿದಿರುವಂತೆಯೂ, ಕಮಲದಂತೆ ಬಣ್ಣ, ಕಮಲದಳದಂತೆ ನಯನಗಳು, ಇರುವಂತೆಯೂ, ಸುವರ್ಣ ಕಲಶಗಳಲ್ಲಿ ದಿಗ್ಗಜಗಳು ಅಭಿಷೇಕ ಮಾಡುವಂತೆಯೂ, ಲಕ್ಷ್ಮಿಯ ಆಕಾರವನ್ನು ಧ್ಯಾನಿಸಬೇಕು.

೪೧. ಆದಿನ ಮೂರುಯಾಮಗಳು ಕಳೆದಮೇಲೆ ನಾಲ್ಕನೆಯ ಯಾಮದಲ್ಲಿ ನದಿಯ ಜಲದಲ್ಲೋ, ಮನೆಯಲ್ಲಿಯೇ ಭಾವಿಯ ನೀರಿನಿಂದಲೋ ಸ್ಥಿರಚಿತ್ತತೆಯಿಂದ (ಇಂದ್ರನು ಆಚರಿಸಿದಂತೆ) ಸ್ನಾನಮಾಡಬೇಕು.

೪೨. ಅನಂತರ ದೇವ ಪಿತೃತರ್ಪಣವನ್ನಾಚರಿಸಿ, ದೇವರಮನೆಗೆ ಹೋಗಿ ಅಲ್ಲಿ ಶ್ರೀ ಲಕ್ಷ್ಮೀದೇವಿಯನ್ನು ಪ್ರತಿಷ್ಠಿಸಿ, ತತ್ಕಾಲದಲ್ಲಿ ದೊರೆಯುವ ಫಲಪುಷ್ಪಗಳಿಂದ ಅರ್ಚಿಸಬೇಕು.

೪೩. "ಚಪಲಾಯೈನಮಃ ಪಾದೌ ಪೂಜಯಾಮಿ" ಎಂದು ಪಾದಗಳನ್ನು, "ಚಂಚಲಾಯೈನಮಃ ಜಂಘೇ ಪೂಜಯಾಮಿ" ಎಂದು ಮೊಣಕಾಲುಗಳನ್ನು, "ಕಮಲವಾಸಿನ್ಯೈನಮಃ ಕಟಿಂ ಪೂಜಯಾಮಿ" ಎಂದು ಸೊಂಟವನ್ನು, "ಖ್ಯಾತ್ಯೈನಮಃ ನಾಭಿಂ ಪೂಜಯಾಮಿ" ಎಂದು ಹೊಕ್ಕುಳನ್ನು ಅರ್ಚಿಸಬೇಕು.

ಸ್ತನೌ ಮನ್ಮಥವಾಸಿನ್ಯೈ ಲಲಿತಾಯೈ ಭುಜದ್ವಯಂ ।
ಉತ್ಕಂಠಿತಾಯೈ ಕಂಠಂ ಚ ಮಾಧವ್ಯೈ ಮುಖಮಂಡಲಂ ॥ ೪೪ ॥

ನಮಃ ಶ್ರಿಯೈ ಶಿರಃ ಪೂಜ್ಯ ದದ್ಯಾನ್ನೈವೇದ್ಯಮಾದರಾತ್ ।
ಫಲಾನಿ ಚ ಯಥಾಲಾಭಂ ವಿರೂಢಾನ್ಧಾನ್ಯಸಂಚಯಾ‌ರ್ ॥ ೪೫ ॥

ತತಃ ಸುವಾಸಿನೀ ಪೂಜ್ಯಾ ಕುಸುಮೈಃ ಕುಂಕುಮೇನ ಚ ।
ಭೋಜಯೇನ್ಮಧುರಾನ್ನೇನ ಪ್ರಣಿಪತ್ಯ ವಿಸರ್ಜಯೇತ್ ॥ ೪೬ ॥

ತತಸ್ತು ತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ।
ಬ್ರಾಹ್ಮಣಾಯ ಪ್ರದಾತವ್ಯಂ ಶ್ರೀಶಃ ಸಂಪ್ರೀಯತಾಮಿತಿ ॥ ೪೭ ॥

---

೪೪. ಮತ್ತು "ಮನ್ಮಥವಾಸಿನ್ಯೈನಮಃನಮಃ ಸ್ತನೌ ಪೂಜಯಾಮಿ" ಎಂದು ಸ್ತನಗಳನ್ನೂ, "ಲಲಿತಾಯೈನಮಃ ಬಾಹೂ ಪೂಜಯಾಮಿ" ಎಂದು ತೋಳುಗಳನ್ನೂ, "ಉತ್ಕಂಠಿತಾಯೈನಮಃ ಕಂಠಂ ಪೂಜಯಾಮಿ" ಎಂದು ಕತ್ತನ್ನೂ, "ಮಾಧವ್ಯೈನಮಃ ಮುಖಂ ಪೂಜಯಾಮಿ" ಎಂದು ಮುಖವನ್ನು ಅರ್ಚಿಸಬೇಕು.

೪೫. "ಶ್ರಿಯೈನಮಃ ಶಿರಃ ಪೂಜಯಾಮಿ" ಎಂದು, ಹೇಳಿ ಶಿರಸ್ಸನ್ನು ಅರ್ಚಿಸಿ, ಆದರಪೂರ್ವಕವಾಗಿ ನೈವೇದ್ಯವನ್ನು ನಿವೇದನಮಾಡಿ ತತ್ಕಾಲದಲ್ಲಿ ಲಭಿಸಿದ ಫಲಗಳನ್ನೂ ಧಾನ್ಯಸಮೂಹಗಳನ್ನೂ ಸಮರ್ಪಿಸಬೇಕು.

೪೬. ಅನಂತರ ಸುವಾಸಿನಿಯರಿಗೆ ಹೂವು, ಕುಂಕುಮ ಇತ್ಯಾದಿಗಳನ್ನು ಕೊಟ್ಟು ಪೂಜೆಮಾಡಿ ಮಧುರಾನ್ನಗಳನ್ನು ಬಡಿಸಿ ಭೋಜನಮಾಡಿಸಿ ನಮಸ್ಕಾರ ಮಾಡಿ ಕಳುಹಿಸಬೇಕು.

೪೭. ಅನಂತರ ಒಂದು ಸೇರು ಅಕ್ಕಿಯನ್ನು ಒಂದು ತಟ್ಟೆಯಲ್ಲಿ ಹಾಕಿ ಘೃತಪೂರ್ಣ ಪಾತ್ರೆಯ ಸಮೇತವಾಗಿ 'ಶ್ರೀಶಃ ಪ್ರಿಯತಾಂ' ಎಂದು ಹೇಳಿ ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನಮಾಡಬೇಕು.

ನಿರ್ವರ್ತ್ಯ ತದಶೇಷೇಣ ತತೋ ಭುಂಜೀತ ವಾಗ್ಯತಃ ।
ಮಾಸಾನುಮಾಸಂ ಕರ್ತವ್ಯಂ ವಿಧಿನಾನೇನ ಭಾರತ ॥ ೪೮ ॥

ಶ್ರೀರ್ಲಕ್ಷ್ಮೀಃ ಕಮಲಾ ಸಂಪದುಮಾ ನಾರಾಯಣೀ ತದಾ ।
ಪದ್ಮಾ ಧೃತಿಃ ಸ್ಥಿತಿಃ ಪುಷ್ಟಿರ್ಋದ್ಧಿಃ ಸಿದ್ಧಿರ್ಯಥಾಕ್ರಮಂ ।
ಮಾಸಾನುಮಾಸಂ ರಾಜೇಂದ್ರ ಪ್ರೀಯತಾಮಿತಿ ಕೀರ್ತಯೇತ್ ॥ ೪೯ ॥

ತತಶ್ಚ ದ್ವಾದಶೇ ಮಾಸಿ ಸಂಪ್ರಾಪ್ತೇ ಪಂಚಮೇ ದಿನೇ ।
ವಸ್ತ್ರಮಂಡಪಿಕಾಂ ಕೃತ್ವಾ ಪುಷ್ಪಗಂಧಾಧಿವಾಸಿತಾಂ ॥ ೫೦ ॥

ಶಯ್ಯಾಯಾಂ ಸ್ಥಾಪಯೇಲ್ಲಕ್ಷ್ಮೀಂ ಸರ್ವೋಪಸ್ಕರಸಂಯುತಾಂ ।
ಮೌಕ್ತಿಕಾಷ್ಟಕಸಂಯುಕ್ತಾಂ ನೇತ್ರಪಟ್ಟಾವೃತಸ್ತನೀಂ ॥ ೫೧ ॥

---

೪೮. ಅಯ್ಯಾ ಭರತವಂಶಜನೇ ! ಈರೀತಿ ಈ ವ್ರತವನ್ನು ಸಂಪೂರ್ಣ ವಾಗಿ ಮಾಡಿ ಅನಂತರ ಮೌನದಿಂದ ಭೋಜನ ಮಾಡಬೇಕು.

೪೯. ಅಯ್ಯಾ ರಾಜೇಂದ್ರನೇ ! ಮಾರ್ಗಶೀರ್ಷ ಮಾಸದಿಂದಾರಂಭಿಸಿ ಹನ್ನೆರಡು ತಿಂಗಳುಗಳಲ್ಲೂ ಕ್ರಮವಾಗಿ ಶ್ರೀ, ಲಕ್ಷ್ಮೀ, ಕಮಲಾ, ಸಂಪತ್, ಉಮಾ, ನಾರಾಯಣೀ, ಪದ್ಮಾ, ಧೃತಿ, ಸ್ಥಿತಿ, ಪುಷ್ಟಿ, ಋದ್ಧಿ, ಸಿದ್ಧಿ ಈ ಹನ್ನೆರಡು ನಾಮಗಳನ್ನುಚ್ಚರಿಸಿ ಆ ನಾಮದ ಮುಂದೆ ಪ್ರೀಯತಾಂ ಎಂದು ಹೇಳಬೇಕು.

೫೦. ಅನಂತರ ಹನ್ನೆರಡನೆಯ ತಿಂಗಳಿನ ಶುಕ್ಲಪಕ್ಷದ ಪಂಚಮೀ ತಿಥಿಯಲ್ಲಿ ಪುಷ್ಪಗಂಧಗಳಿಂದ ಅಧಿವಾಸಿತವಾದ ಹೂವಿನಮಂಟಪವನ್ನು ನಿರ್ಮಿಸ ಬೇಕು.

೫೧. ದಿಂಬು, ಹಾಸಿಗೆ ಮೊದಲಾದ ಶಯನೋಪಯುಕ್ತವಾದ ಸರ್ವ ಸಾಮಗ್ರಿಗಳಿಂದ ಕೂಡಿದುದೂ; ಸಪ್ತಧಾನ್ಯ, ರಸ, ಧಾತು, ಪಾದುಕೆ, ಛತ್ರಿ, ಪಾನಪಾತ್ರೆ, ಆಸನ ಇತ್ಯಾದಿಗಳಿಂದ ಸಹಿತವೂ ಆದ ಮಂಚವನ್ನು ಆ ಪುಷ್ಪ ಮಂಟಪದಲ್ಲಿ ಇರಿಸಬೇಕು.

ಸಪ್ತಧಾನ್ಯಸಮೋಪೇತಾಂ ರಸಧಾತುಸಮನ್ವಿತಾಂ ।
ಪಾದುಕೋಪಾನಹಚ್ಛತ್ರಭಾಜನಾಸನಸತ್ಕೃತಾಂ ॥ ೫೨ ॥

ದದ್ಯಾತ್ಸಂಪೂಜ್ಯ ವಿಧಿವದ್ಬ್ರಾಹ್ಮಣಾಯ ಕುಟುಂಬಿನೇ ।
ವ್ಯಾಸಾಯ ವೇದವಿದುಷೇ ಯಸ್ಯ ವಾ ರೋಚತೇ ಸ್ವಯಂ ।
ಸೋಪಸ್ಕರಾಂ ಸವತ್ಸಾಂ ಚ ಧೇನುಂ ದತ್ವಾ ಕ್ಷಮಾಪಯೇತ್ ॥ ೫೩ ॥

ಕ್ಷೀರಾಬ್ಧಿಮಥನೋದ್ಭೂತೇ ವಿಷ್ಣೋರ್ವಕ್ಷಃಸ್ಥಲಾಲಯೇ ।
ಸರ್ವಕಾಮಪ್ರದೇ ದೇವಿ ಋದ್ಧಿಂ ಯಚ್ಛ ನಮೋಽಸ್ತು ತೇ ॥ ೫೪ ॥

---

೫೨. ಅದರಲ್ಲಿ ಹಾಸಿಗೆಯನ್ನು ಹಾಸಿ ಆ ಹಾಸಿಗೆಯಲ್ಲಿ ಎಂಟು ಎಂಟು ಮುತ್ತುಗಳಿಂದ ಅಲಂಕೃತವೂ ಸೂಕ್ಷ್ಮವಾದ ಪಟ್ಟೆಯವಸ್ತ್ರದಿಂದ ಆವೃತಸ್ತನವುಳ್ಳದ್ದೂ ಆದ ಶ್ರೀ ಲಕ್ಷ್ಮೀದೇವಿಯ ಪ್ರತಿಮೆಯನ್ನು ಇರಿಸಬೇಕು.

೫೩. ಅನಂತರ ಕುಟುಂಬಿಯಾದ ಬ್ರಾಹ್ಮಣನಿಗೋ, ವೇದವೇದಾಂಗಾದಿ ಶಾಸ್ತ್ರಗಳನ್ನು ಅಧ್ಯಯನಮಾಡಿದ ವಿದ್ವಾಂಸನಿಗೋ, ಅಥವಾ ಯಾರಿಗೆ ದಾನ ಮಾಡಬೇಕೆಂದು ಮನಸ್ಸಿಗೆ ತೋರುವುದೋ ಅಂತಹ ಬ್ರಾಹ್ಮಣನಿಗೋ, ವಿಧಿವತ್ತಾಗಿ ಪೂಜೆಮಾಡಿ, ಹಾಸಿಗೆ ಮೊದಲಾದ ಪದಾರ್ಥಗಳ ಸಮೇತ ಆ ಲಕ್ಷ್ಮೀ ವಿಗ್ರಹವನ್ನು ದಾನಮಾಡಬೇಕು. ಮತ್ತು ಹಾಲು ಕರೆಯುವ ಪಾತ್ರೆ ಇತ್ಯಾದಿ ಗೋಸಾಮಗ್ರಿ ಸಮೇತ ಎಳೆಗರುವಿನಿಂದ ಕೂಡಿದ ಕರೆಯುವ ಹಸುವನ್ನು ಅವನಿಗೆ ದಾನಮಾಡಿ ಕ್ಷಮಾಪ್ರಾರ್ಥನೆ ಮಾಡಬೇಕು.

೫೪. " ಕ್ಷೀರಾಬ್ಧಿ ಮಥನೋದ್ಭೂತೇ, ವಿಷ್ಣೋರ್ವಕ್ಷಸ್ಥಲಾಲಯೇ ।
ಸರ್ವಕಾಮ ಪ್ರದೇ ದೇವೀ ಋದ್ಧಿಂಯಚ್ಛ ನಮೋಽಸ್ತುತೇ ॥

ಕ್ಷೀರಸಾಗರ ಮಥನಕಾಲದಲ್ಲಿ ಉತ್ಪನ್ನಳಾಗಿ ವಿಷ್ಣುವಿನ ವಕ್ಷಸ್ಥಳದಲ್ಲಿ ತಾಂಡವವಾಡುತ್ತಿರುವವಳೂ, ಭಕ್ತರ ಸರ್ವಕಾಮ ಪ್ರದಾಯಕಳೂ ಆದ ಮಹಾದೇವಿಯೇ ! ನನಗೆ ಐಶ್ವರ್ಯವನ್ನು ಕೊಡು. ನಿರಂತರವೂ ನಮಸ್ಕಾರ ಮಾಡುವೆನು " ಎಂದು ಅರ್ಥವುಳ್ಳ ಈ ಮಂತ್ರವನ್ನು ಹೇಳಿ ಮಹಾಲಕ್ಷ್ಮಿಯನ್ನು ಪ್ರಾರ್ಥಿಸಬೇಕು.

ತತಃ ಸುವಾಸಿನೀಃ ಪೂಜ್ಯ ವಸ್ತ್ರೈರಾಭರಣೈಃ ಶುಭೈಃ ।
ಭೋಜಯಿತ್ವಾ ಸ್ವಯಂ ಪಶ್ಚಾದ್ಭುಂಜೀತ ಸಹ ಬಂಧುಭಿಃ ॥ ೫೫ ॥

ಏವಂ ಯಃ ಕುರುತೇ ಪಾರ್ಥ ಭಕ್ತ್ಯಾ ಶ್ರೀ ಪಂಚಮೀವ್ರತಂ ।
ತಸ್ಯ ಶ್ರೀರ್ಭವನೇ ಭಾತಿ ಕುಲಾನಾಮೇಕವಿಂಶತಿಃ ॥ ೫೬ ॥

ನಾರೀ ವಾ ಕುರುತೇ ಯಾ ತು ಪ್ರಾಪ್ಯಾನುಜ್ಞಾಂ ಸ್ವಭರ್ತೃತಃ ।
ಸುಭಗಾ ದರ್ಶನೀಯಾ ಚ ಬಹುಪುತ್ರಾ ಚ ಜಾಯತೇ ॥ ೫೭ ॥

ಶ್ರೀ ಪಂಚಮೀವ್ರತಮಿದಂ ದಯಿತಂ ಮುರಾರೇ ।
ಭಕ್ತ್ಯಾ ಸಮಾಚರತಿ ಪೂಜ್ಯಭೃಗೋಸ್ತನೂಜಾಂ ।

---

೫೫. ಅನಂತರ ಮಂಗಳಕರವಾದ ವಸ್ತ್ರ ಮತ್ತು ಆಭರಣಗಳ ಸಮರ್ಪಣ ದಿಂದ ಸುವಾಸಿನಿಯರಿಗೆ ಪೂಜೆಮಾಡಿ ಅವರಿಗೆ ಭೋಜನ ಮಾಡಿಸಿ ಆಮೇಲೆ ತಾನು ಬಂಧುಪರಿವೃತನಾಗಿ ಭೋಜನ ಮಾಡಬೇಕು.

೫೬. ಅಯ್ಯಾ ಕುಂತೀಸುತನೇ ! ಯಾವನು ಭಕ್ತಿಪೂರ್ವಕವಾಗಿ ಈ ಕ್ರಮದಿಂದ ಶ್ರೀ ಪಂಚಮೀ ವ್ರತವನ್ನಾಚರಿಸುವನೋ, ಅಂತಹವನ ಮನೆಯಲ್ಲಿ ಅವನಿಂದ ಆರಂಭಿಸಿ ಮುಂದೆ ಇಪ್ಪತ್ತೊಂದು ತಲೆಮಾರಿನವರೆಗೂ ಸಂಪತ್ಸೌ ಭಾಗ್ಯವು ಸ್ಥಿರವಾಗಿರುತ್ತದೆ.

೫೭. ಹೆಂಗಸೂಕೂಡ ತನ್ನ ಪತಿಯ ಅನುಜ್ಞೆಯನ್ನು ಪಡೆದು ಹಿಂದೆ ಹೇಳಿದಂತೆ ಈ ವ್ರತವನ್ನಾಚರಿಸಿದರೆ, ಆಕೆಯೂ ಸಹ ಸೌಭಾಗ್ಯವತಿಯೂ, ಸೌಂದರ್ಯವತಿಯೂ, ಬಹುಪುತ್ರವತಿಯೂ, ಸ್ಥಿರಸಂಪತ್ತು ಸುಖಗಳುಳ್ಳವಳೂ ಆಗುತ್ತಾಳೆ.

೫೮. ಭೃಗುಪುತ್ರಿಯಾದ ಶ್ರೀ ಮಹಾಲಕ್ಷ್ಮಿಯನ್ನುದ್ದೇಶಿಸಿ ಶ್ರೀ ಮಹಾ ವಿಷ್ಣುವಿನ ಪ್ರೀತಿಗೆ ಪಾತ್ರವಾದ ಶ್ರೀ ಪಂಚಮೀ ವ್ರತವನ್ನು ಯಾವನು ಭಕ್ತಿಯಿಂದ ಆಚರಿಸುವನೋ ಅವನು ಈ ಲೋಕದಲ್ಲಿ ಸ್ವರಾಜ್ಯವನ್ನು ಪಡೆದು

ರಾಜ್ಯಂ ನಿಜಂ ಸ ಭುವಿ ಭವ್ಯಜನೋಽಪಭೋಗಾ ।
ನ್ಭುಕ್ತ್ವಾ ಪ್ರಯಾತಿ ಭುವನಂ ಮಧುಸೂದನ ಸ್ಯ ॥ ೫೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಪಂಚಮೀವ್ರತಕಲ್ಪೇ ಶ್ರೀ ಪಂಚಮಿವ್ರತ ನಿರೂಪಣಂ ನಾಮ ಸಪ್ತತ್ರಿಂಶತ್ತಮೋಽಧ್ಯಾಯಃ.



---

ಪುಣ್ಯಶಾಲಿಗಳು ಭೋಗಿಸುವ ಭೋಗಗಳನ್ನೆಲ್ಲಾ ಪಡೆದು ದೇಹಾಂತದಲ್ಲಿ ಶ್ರೀ ಮಧುಸೂದನನ ಸ್ಥಾನವಾದ ವೈಕುಂಠಕ್ಕೆ ಹೋಗುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಪಂಚಮಿ ವ್ರತಕಲ್ಪೇ ಶ್ರೀ ಪಂಚಮಿ ವ್ರತವರ್ಣನ ವೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟತ್ರಿಂಶತ್ತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಷಷ್ಠೀವಿಧಾನಮಧುನಾ ಕಥಯಸ್ವ ಜನಾರ್ದನ ।
ಸರ್ವವ್ಯಾಧಿಪ್ರಶಮನಂ ಸರ್ವಕರ್ಮಫಲಪ್ರದಂ ॥ ೧ ॥

ಶ್ರುತಂ ಮಯಾ ಪೂಜ್ಯಮಾನೋ ಭಾನುಃ ಸರ್ವಂ ಪ್ರಯಚ್ಛತಿ ।
ದಿವಾಕರಾರಾಧನಂ ಮೇ ತಸ್ಮಾತ್ಕಥಯ ಕೇಶವ ॥ ೨ ॥

---

## ಮೂವತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಸ್ವಾಮಿ ಜನಾರ್ದನನೇ ! ಸರ್ವ ವ್ಯಾಧಿ ನಿವಾರಕವೂ ಸರ್ವಕರ್ಮಗಳ ಫಲವನ್ನು ಕೊಡುವುದೂ ಆದ ಷಷ್ಠೀವ್ರತ ಕಲ್ಪವನ್ನು ಹೇಳು.

೨. ಅಯ್ಯಾ ಕೇಶವ ! ಸೂರ್ಯನನ್ನು ಪೂಜಿಸಿದರೆ ಅವನು ಸರ್ವಾಭಿಲಷಿತ ಫಲವನ್ನು ಕೊಡುವನು ಎಂದು ಪ್ರಾಜ್ಞರು ಹೇಳುವುದನ್ನು ನಾನು ಕೇಳಿದ್ದೇನೆ. ಆದುದರಿಂದ ಆ ಸೂರ್ಯಾರಾಧನದ ರೀತಿಯನ್ನು ನನಗೆ ಅರುಹು ಎಂದನು.

॥ ಶ್ರೀ ಕೃಷ್ಣ ಉವಾಚ ॥

ವಿಶೋಕಷಷ್ಠೀಮತುಲಾಂ ವಕ್ಷ್ಯಾಮಿ ಮನುಜೋತ್ತಮ ।
ಯಾಮುಪೋಷ್ಯ ನರಃ ಶೋಕಂ ನ ಕದಾಚಿದವಾಪ್ನುತೇ ॥ ೩ ॥

ಮಾಘೇ ಕೃಷ್ಣತಿಲೈಃ ಸ್ನಾತಃ ಪಂಚಮ್ಯಾಂ ಶುಕ್ಲಪಕ್ಷತಃ ।
ಕೃತಾಹಾರಃ ಕೃಶರಯಾ ದಂತಧಾವನಪೂರ್ವಕಂ ॥ ೪ ॥

ಉಪವಾಸವ್ರತಂ ಕೃತ್ವಾ ಬ್ರಹ್ಮಚಾರೀ ಭವೇನ್ನಿಶಿ ।
ತತಃ ಪ್ರಭಾತೇ ಚೋತ್ಥಾಯ ಕೃತಸ್ನಾನಸ್ತತಃ ಶುಚಿಃ ॥ ೫ ॥

ಕೃತ್ವಾ ತು ಕಾಂಚನಂ ಪದ್ಮಮರ್ಕೋಽಯಮಿತಿ ಪೂಜಯೇತ್ ।
ಕರವೀರೇಣ ರಕ್ತೇನ ರಕ್ತವಸ್ತ್ರಯುಗೇನ ಚ ॥ ೬ ॥

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ನರೋತ್ತಮನೇ ! ನಿರುಪಮವಾದ ವಿಶೋಕಷಷ್ಠೀ ವ್ರತವೆಂಬುದನ್ನು ಹೇಳುತ್ತೇನೆ ಶ್ರವಣಮಾಡು. ಈ ಷಷ್ಠಿಯದಿನ ಉಪವಾಸವನ್ನಾಚರಿಸಿದ ಮಾನವನು ಈ ಲೋಕದಲ್ಲಿ ಯಾವ ಕಾಲದಲ್ಲೂ ದುಃಖಿತನಾಗುವುದಿಲ್ಲ.

೪. ಮಾಘ ಶುಕ್ಲ ಪಂಚಮಿಯದಿನ ಕರಿಯ ಎಳ್ಳಿನಿಂದ ತೆಗೆದ ಎಣ್ಣೆಯಿಂದ ತೈಲಾಭ್ಯಂಗನ ಸ್ನಾನವನ್ನು ಮಾಡಿ ಅನಂತರ ಫಲವನ್ನೂ, ಕೃಶರವನ್ನೂ (ಚಿಗುಳಿ) ಭುಂಜಿಸಿ ಮಾರನೆಯ ಬೆಳಿಗ್ಯೆ ದಂತಧಾವನ ಮಾಡಬೇಕು.

೫. ಅನಂತರ ಯಾವ ಆಹಾರವನ್ನೂ ತೆಗೆದುಕೊಳ್ಳದೆ ಉಪವಾಸ ವ್ರತವನ್ನು ಸ್ವೀಕರಿಸಿ, ಆದಿನ ರಾತ್ರಿಯಲ್ಲಿ ಜಿತೇಂದ್ರಿಯತೆಯಿಂದಿದ್ದು ನಿದ್ರೆಮಾಡಿ, ಮರುದಿನ ಪ್ರಾತಃಕಾಲದಲ್ಲೆದ್ದು ಸ್ನಾನಾಹ್ನಿಕಾದಿಗಳನ್ನು ಮಾಡಿ ಶುಚಿಯಾಗಬೇಕು.

೬. ಅನಂತರ ಭಂಗಾರದ ಪದ್ಮವನ್ನು ರಚಿಸಿ ಅದೇ ಸೂರ್ಯನೆಂಬ ಭಾವನೆಯನ್ನಿಟ್ಟು ರಕ್ತಕರವೀರಪುಷ್ಪ, ರಕ್ತವಸ್ತ್ರಯುಗ್ಮ ಇವುಗಳಿಂದ ಅದನ್ನು ಅರ್ಚಿಸಬೇಕು.

ಯಥಾ ವಿಶೋಕಂ ಭುವನಂ ತ್ವಯ್ಯೈವಾದಿತ್ಯ ಸರ್ವದಾ ।
ತಥಾ ವಿಶೋಕತಾ ಮೇ ಸ್ಯಾತ್ತ್ವದ್ಭಕ್ತಿರ್ಜನ್ಮಜನ್ಮನಿ ॥ ೭ ॥

ಏವಂ ಸಂಪೂಜ್ಯ ಷಷ್ಠ್ಯಾಂ ತು ಶಕ್ತ್ಯಾ ಸಂಪೂಜಯೇದ್ದ್ವಿಜಾನ್ ।
ಸುಪ್ತ್ವಾ ಸಂಪ್ರಾಶ್ಯ ಗೋಮೂತ್ರಮುತ್ಥಾಯ ಕೃತನೈತ್ಯಕಃ ॥ ೮ ॥

ಸಂಪೂಜ್ಯ ವಿಪ್ರಂ ಮಂತ್ರೇಣ ಗುಡಪಾತ್ರಸಮನ್ವಿತಂ ।
ಸುಸೂಕ್ಷ್ಮವಸ್ತ್ರಯುಗಲಂ ಬ್ರಾಹ್ಮಣಾಯ ನಿವೇದಯೇತ್ ॥ ೯ ॥

ಅತೈಲ ಲವಣಂ ಭುಕ್ತ್ವಾ ಸಪ್ತಮ್ಯಾಂ ಮೌನಸಂಯುತಃ ।
ತತಃ ಪುರಾಣಶ್ರವಣಂ ಕರ್ತವ್ಯಂ ಭೂತಿಮಿಚ್ಛತಾ ॥ ೧೦ ॥

---

೬-೭. ಯಥಾವಿಶೋಕಂ ಭುವನಂ ತ್ವಯ್ಯೈವಾದಿತ್ಯ ಸರ್ವದಾ ।
ತಥಾ ವಿಶೋಕತಾ ಮೇ ಸ್ಯಾತ್ ತ್ವದ್ಭಕ್ತಿರ್ಜನ್ಮಜನ್ಮನಿ ॥

ಎಂದು ಪ್ರಾರ್ಥಿಸಬೇಕು. (ಎಲೈ ಆದಿತ್ಯನೇ! ಭುವನವು ನಿನ್ನಿಂದಲೇ ಹೇಗೆ ಯಾವಾಗಲೂ ಶೋಕರಹಿತವಾಗಿದೆಯೋ ಹಾಗೆಯೇ ನನಗೂ ನಿನ್ನ ಅನುಗ್ರಹ ದಿಂದ ವಿಶೋಕತ್ವವು ಬರಲಿ. ಪ್ರತಿ ಜನ್ಮದಲ್ಲೂ ನಿನ್ನಲ್ಲಿ ಭಕ್ತಿ ಇರುವ ಹಾಗೆ ಮಾಡು ಎಂಬುದು ಇದರ ಅರ್ಥ).

೮. ಷಷ್ಠಿಯದಿನ ಈರೀತಿ ಪ್ರಾರ್ಥನಾ ಪೂರ್ವಕವಾಗಿ ಸೂರ್ಯಾರ್ಚನೆ ಯನ್ನು ಮಾಡಿ, ಸ್ವಶಕ್ತ್ಯನುಸಾರವಾಗಿ ಬ್ರಾಹ್ಮಣಪೂಜೆಯನ್ನು ನೆರವೇರಿಸಿ, ಗೋಮೂತ್ರಪ್ರಾಶನೆಮಾಡಿ, ಆದಿನ ರಾತ್ರಿಯಲ್ಲಿ ಶಯನಮಾಡಿ ಮರುದಿನ ಪ್ರಾತಃಕಾಲದಲ್ಲೆದ್ದು ಸ್ನಾನ ಸಂಧ್ಯೋಪಾಸನಾದಿ ನಿತ್ಯಕರ್ಮಗಳನ್ನು ಪೂರೈಸ ಬೇಕು.

೯. ಅನಂತರ ಮಂತ್ರ ಪೂರ್ವಕವಾಗಿ ಬ್ರಾಹ್ಮಣಪೂಜೆಯನ್ನು ಮಾಡಿ, ಬೆಲ್ಲ ತುಂಬಿದ ಪಾತ್ರೆಯನ್ನೂ ಸೂಕ್ಷ್ಮ ತಂತುಗಳಿಂದ ಮಾಡಲ್ಪಟ್ಟ ಅತ್ಯುತ್ತಮ ವಾಗಿರುವ ವಸ್ತ್ರಯುಗ್ಮವನ್ನೂ ಅವನಿಗೆ ದಾನಮಾಡಬೇಕು.

೧೦. ಆ ಸಪ್ತಮೀ ದಿನದಲ್ಲಿ ಎಣ್ಣೆ, ಉಪ್ಪು ಇವೆರಡನ್ನೂ ಸರ್ವಪ್ರಕಾರ ದಿಂದಲೂ ವರ್ಜ್ಯಮಾಡಬೇಕು. ಆಹಾರ ಭುಂಜಿಸಿದ ಮೇಲೆ ತನಗೆ ಐಶ್ವರ್ಯ ಲಭಿಸಬೇಕೆಂಬ ಅಪೇಕ್ಷೆಯುಳ್ಳವನು ಭಕ್ತಿಪೂರ್ವಕವಾಗಿ ಪುರಾಣ ಶ್ರವಣವನ್ನು ಮಾಡಬೇಕು.

ಅನೇನ ವಿಧಿನಾ ಸರ್ವಮುಭಯೋರಪಿ ಪಕ್ಷಯೋಃ ।
ಕುರ್ಯಾದ್ಯಾವತ್ಪುನರ್ಮಾಘಶುಕ್ಲಪಕ್ಷಸ್ಯ ಸಪ್ತಮೀ ॥ ೧೧ ॥

ವ್ರತಾಂತೇ ಕಲಶಂ ದದ್ಯಾತ್ಸುವರ್ಣ ಕಮಲಾನ್ವಿತಂ ।
ಶಯ್ಯಾಂ ಸೋಪಸ್ಕರಾಂ ತದ್ವತ್ಕಪಿಲಾಂ ಚ ಪಯಸ್ವಿನೀಂ ॥ ೧೨ ॥

ಅನೇನ ವಿಧಿನಾ ಯಸ್ತು ವಿತ್ತಶಾಠ್ಯವಿವರ್ಜಿತಃ ।
ವಿಶೋಕಷಷ್ಠೀಂ ಕುರುತೇ ಸ ಯಾತಿ ಪರಮಾಂ ಗತಿಂ ॥ ೧೩ ॥

ಯಾವಜ್ಜನ್ಮಸಹಸ್ರಾಣಾಂ ಸಾಗ್ರಕೋಟಿಶತಂ ಭವೇತ್ ।
ತಾವನ್ನ ಶೋಕಮಭ್ಯೇತಿ ರೋಗ ದೌರ್ಗತ್ಯ ವರ್ಜಿತಃ ॥ ೧೪ ॥

ಯಂ ಯಂ ಪ್ರಾರ್ಥಯತೇ ಕಾಮಂ ತಂತಂ ಪ್ರಾಪ್ನೋತಿ ಪುಷ್ಕಲಂ ।
ನಿಷ್ಕಾಮಂ ಕುರುತೇ ಯಸ್ತು ಸ ಪರಂ ಬ್ರಹ್ಮ ಗಚ್ಛತಿ ॥ ೧೫ ॥

---

೧೧. ಈ ಕ್ರಮವನ್ನನುಸರಿಸಿ ಮಾರನೆಯ ವರ್ಷದ ಮಾಘ ಶುಕ್ಲ ಸಪ್ತಮೀ ತಿಥಿಯು ಬರುವವರೆಗೂ ಪ್ರತಿಮಾಸದ ಎರಡು ಪಕ್ಷಗಳ ಸಪ್ತಮಿಗಳಲ್ಲೂ ಈ ಹಿಂದೆ ಹೇಳಿದ್ದೆಲ್ಲವನ್ನೂ ಆಚರಿಸಬೇಕು.

೧೨. ಪೂಜಿಸಿದ ಸುವರ್ಣ ಕಮಲಸಹಿತವಾಗಿ ಕಲಶವನ್ನು ದಾನ ಮಾಡಬೇಕು. ಮತ್ತು ಸಸೋಪಸ್ಕರವಾಗಿ ಶಯ್ಯೆಯನ್ನೂ, ಹಾಲುಕೊಡುವ ಕಪಿಲಗೋವನ್ನೂ, ಕರು ಸಹಿತವಾದ ದಾನ ಮಾಡಬೇಕು.

೧೩. ಈ ರೀತಿಯಲ್ಲಿ ಹಣದಾಶೆಯಿಲ್ಲದೆ ಈ ವಿಶೋಕ ಷಷ್ಠೀವ್ರತವನ್ನು ಅನುಷ್ಠಾನಮಾಡಿದವನು ಉತ್ತಮಗತಿಯನ್ನು ಪಡೆಯುತ್ತಾನೆ.

೧೪. ಮತ್ತು ಅವನಿಗೆ ನೂರುಕೋಟಿ ಒಂದುಸಹಸ್ರ ಜನ್ಮಗಳು ಪ್ರಾಪ್ತವಾಗುವವರೆಗೂ ಶೋಕವಾಗಲಿ, ರೋಗಭಾಧೆಗಳಾಗಲಿ, ದುರ್ಗತಿ ಪ್ರಾಪ್ತಿಯಾಗಲಿ ಆಗುವುದಿಲ್ಲ.

೧೫. ಮತ್ತು ಅವನು ಯಾವ ಯಾವ ಭೋಗ್ಯವಸ್ತುವನ್ನು ಬೇಕೆಂದು ಪ್ರಾರ್ಥಿಸುವನೋ ಅಂಥಾ ಭೋಗ್ಯಪದಾರ್ಥವು ಯಾವ ನ್ಯೂನತೆಯೂ ಇಲ್ಲದೆ ಪುಷ್ಕಲವಾಗಿ ಸಿಕ್ಕುತ್ತದೆ. ಐಶ್ವರ್ಯಾದಿಕಾಮನೆ ಇಲ್ಲದೆ ನಿಷ್ಕಾಮನೆಯಿಂದ ಈಶ್ವರ ಪ್ರೀತ್ಯರ್ಥವಾಗಿ ಈ ವ್ರತವನ್ನು ಆಚರಿಸಿದರೆ ಅವನು ಚಿತ್ತಶುದ್ಧಿಯನ್ನು ಪಡೆದು ಜ್ಞಾನಿಯೆನಿಸಿ ಬ್ರಹ್ಮೈಕ್ಯವನ್ನು ಹೊಂದಿ ಮುಕ್ತನಾಗುವನು.

ಯಃ ಪಠೇಚ್ಛೃಣುಯಾದ್ವಾಪಿ ಷಷ್ಠೀಂ ಶೋಕವಿನಾಶಿನೀಂ ।
ಸೋಪೀಂದ್ರಲೋಕಮಾಪ್ನೋತಿ ನ ದುಃಖೀ ಜಾಯತೇ ಕ್ವಚಿತ್॥ ೧೬ ॥

ಯೇ ಭಾಸ್ಕರಂ ದಿನಕರಂ ಕರವೀರಪುಷ್ಪೈಃ ।
ಸಂಪೂಜಯಂತ್ಯಭಿನಮಂತಿ ಕೃತೋಪವಾಸಾ ।
ತೇ ದುಃಖಶೋಕರಹಿತಾಃ ಸಹಿತಾಃ ಸುಹೃದ್ಭಿಃ ।
ಭೂವೌ ವಿಹೃತ್ಯ ರವಿಲೋಕಮವಾಪ್ನುವಂತಿ ॥ ೧೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ವಿಶೋಕಷಷ್ಠೀ ವ್ರತಂ
ನಾಮಾಷ್ಟತ್ರಿಂಶತ್ತಮೋಽಧ್ಯಾಯಃ.



---

೧೬. ಶೋಕನಾಶಕವಾದ ಈ ವಿಶೋಕ ಷಷ್ಠೀ ವ್ರತವನ್ನು ಉಲ್ಲೇಖಿಸಿದ ಗ್ರಂಥವನ್ನು ಪಠಿಸುವವನು, ಅಥವಾ ಶ್ರವಣಮಾಡುವವನು, ಮುಂತಾದ ಸತ್ಪುರುಷರು ಅಪ್ರತಿಮವಾದ ಸ್ವರ್ಗಲೋಕವನ್ನು ಹೊಂದುವರು. ಮತ್ತೆ ಆತನು ಯಾವ ಲೋಕದಲ್ಲೂ ದುಃಖಭಾಜನನಾಗುವುದಿಲ್ಲ.

೧೭. ನಿಯಮವಿಧಿಯಿಂದ ಉಪವಾಸ ವ್ರತವನ್ನಾಚರಿಸಿ ದಿವಾಕರನಾದ ಶ್ರೀ ಸೂರ್ಯನನ್ನು ಕರವೀರ ಪುಷ್ಪದಿಂದ ಮನಃಪೂರ್ತಿಯಾಗಿ ಪೂಜಿಸಿ ನಮಸ್ಕರಿಸುವ ಪುಣ್ಯಾತ್ಮರು ಈ ಭೂಲೋಕದಲ್ಲಿ ದುಃಖ ದುರ್ಗತಿ ಶೋಕ ಇವುಗಳಿಗೆ ಸಿಕ್ಕದೆ ಬಂಧು ಮಿತ್ರಾದಿಗಳ ಸಮೇತ ಸಂತೋಷವಾಗಿ ಕ್ರೀಡಿಸಿ ಮರಣಾನಂತರ ಶ್ರೇಷ್ಠವಾದ ಸೂರ್ಯಲೋಕವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವಿಶೋಕ
ಷಷ್ಠೀ ವ್ರತ ನಿರೂಪಣವೆಂಬ ಮೂವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನಚತ್ವಾರಿಂಶತ್ತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

**ಅನ್ಯಾಮಪಿ ಪ್ರವಕ್ಷ್ಯಾಮಿ ಪದ್ಮಷಷ್ಠೀಂ ಶುಭಾಂ ತಥಾ ।**
**ಯಾಮುಪೋಷ್ಯ ನರಃ ಪಾಪವಿಮುಕ್ತಃ ಸ್ವರ್ಗಭಾಗ್ಭವೇತ್ ॥ ೧ ॥**

**ಮಾರ್ಗಶೀರ್ಷೇ ಶುಭೇ ಮಾಸಿ ಪಂಚಮ್ಯಾಂ ನಿಯತವ್ರತಃ ।**
**ಷಷ್ಠೀಮುಪೋಷ್ಯ ಕಮಲಂ ಕಾರಯಿತ್ವಾ ಸುಕಾಂಚನಂ ॥ ೨ ॥**

**ಶರ್ಕರಾಸಂಯುತಂ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ।**
**ರೂಪಂ ಚ ಕಾಂಚನಂ ಕೃತ್ವಾ ಫಲಸ್ಯೈಕಸ್ಯ ಧರ್ಮವಿತ್ ॥ ೩ ॥**

---

### ಮೂವತ್ತೊಂಭತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಮಂಗಳಕರವಾದ ಪದ್ಮಷಷ್ಠೀ ಎಂಬ ಇನ್ನೊಂದು ವ್ರತವನ್ನು ಹೇಳುತ್ತೇನೆ ಕೇಳು. ಮನುಷ್ಯನು ಉಪವಾಸ ಪೂರ್ವಕವಾಗಿ ಆ ವ್ರತವನ್ನಾಚರಿಸಿದರೆ ಪಾಪವಿಮುಕ್ತನಾಗಿ ಸ್ವರ್ಗವನ್ನು ಪಡೆಯುತ್ತಾನೆ.

೨. ಭಂಗಾರದಲ್ಲಿ ಉತ್ತಮವಾದ ಕಮಲವನ್ನು ಮಾಡಿಸಬೇಕು. ಶುಭಕರವಾದ ಮಾರ್ಗಶೀರ್ಷ ಶುಕ್ಲ ಪಂಚಮಿ ತಿಥಿಯಲ್ಲಿ ನಿತ್ಯಕರ್ಮವನ್ನಾಚರಿಸಿ ಉಪೋಷ್ಯವಿದ್ದು ಮರುದಿನ ಷಷ್ಠಿಯಲ್ಲೂ ಉಪವಾಸವಾಗಿರಬೇಕು.

೩-೪. ವ್ರತಿಯು ಆ ಸುವರ್ಣ ಕಮಲವನ್ನು ಪೂಜಿಸಿ ಸಕ್ಕರೆ ಸಹಿತವಾಗಿ ಅದನ್ನು ಕುಟುಂಬಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು. ಮತ್ತು ಭಂಗಾರ

ದದ್ಯಾತ್ಪ್ರಾತಃ ಕೃತಸ್ನಾನೋ ಭಾನುರ್ಮೇ ಪ್ರೀಯತಾಮಿತಿ ।
ಭಕ್ತ್ಯಾ ತು ವಿಪ್ರಾನ್ಸಂಪೂಜ್ಯ ಸಪ್ತಮ್ಯಾಂ ಕ್ಷೀರಭೋಜನಂ ॥ ೪ ॥

ಕೃತ್ವಾ ಕುರ್ಯಾತ್ಫಲತ್ಯಾಗಂ ಯಾ ಚ ಸ್ಯಾತ್ಕೃಷ್ಣಸಪ್ತಮೀ ।
ಏತಾಮುಪೋಷ್ಯ ವಿಧಿವದನೇನೈವ ಕ್ರಮೇಣ ತು ॥ ೫ ॥

ತದ್ವೈ ಹೈಮಂ ಫಲಂ ದತ್ವಾ ಸುವರ್ಣಕಮಲಾನ್ವಿತಂ ।
ಶರ್ಕರಾಪಾತ್ರಸಂಯುಕ್ತಂ ವಸ್ತ್ರಮಾಲಾ ಸಮನ್ವಿತಂ ॥ ೬ ॥

ಷಷ್ಠ್ಯೋರುಭಯೋರ್ಮಹಾರಾಜ ಯಾವತ್ಸಂವತ್ಸರಂ ತತಃ ।
ಉಪೋಷ್ಯ ದದ್ಯಾತ್ಕ್ರಮಶಃ ಸೂರ್ಯಮಂತ್ರಾನುದೀರಯೇತ್ ॥ ೭ ॥

---

ದಲ್ಲಿ ಒಂದು ಫಲವನ್ನು ಮಾಡಿಸಿ ಷಷ್ಠೀದಿನ ಪ್ರಾತಃ ಸ್ನಾನವಾದಮೇಲೆ "ಭಾನುರ್ಮೇ ಪ್ರೀಯತಾಂ" ಎಂದು ಹೇಳಿ ಅದನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಅನಂತರ ಸಪ್ತಮೀ ತಿಥಿಯಲ್ಲಿ ಭಕ್ತಿಯಿಂದ ಬ್ರಾಹ್ಮಣರನ್ನು ಪೂಜಿಸಿ ಭೋಜನ ಮಾಡಿಸಿ ಅನಂತರ ಕ್ಷೀರಸೇವನೆ ಮಾಡಬೇಕು.

೫. ಮಾರ್ಗಶೀರ್ಷ ಕೃಷ್ಣ ಷಷ್ಠಿಯದಿನ ಹಿಂದೆ ಹೇಳಿದ ರೀತಿಯಲ್ಲಿಯೇ ಉಪವಾಸವನ್ನಾಚರಿಸಿ, ಸಪ್ತಮಿಯ ದಿನ ಸುವರ್ಣಫಲದಾನಾದಿಗಳನ್ನು ಮಾಡಬೇಕು.

೬. ಮತ್ತು ಆ ಸುವರ್ಣ ಫಲದಾನ ಮಾಡಿದಮೇಲೆ ಸಕ್ಕರೆಯನ್ನು ತುಂಬಿದ ಆ ಪಾತ್ರೆಯನ್ನೂ ಭಂಗಾರದ ಕಮಲವನ್ನೂ ಉತ್ತಮವಾದ ವಸ್ತ್ರಗಳನ್ನೂ ದಾನಮಾಡಬೇಕು.

೭. ಅಯ್ಯಾ ಮಹಾರಾಜನೇ ! ಅನಂತರ ಒಂದುವರ್ಷ ಪೂರ್ತವಾಗುವವರೆಗೂ ಪ್ರತಿತಿಂಗಳಲ್ಲೂ ಶುಕ್ಲಪಕ್ಷ, ಕೃಷ್ಣಪಕ್ಷ ಈ ಎರಡು ಪಕ್ಷಗಳ ಷಷ್ಠಿಯಲ್ಲೂ ಉಪವಾಸವನ್ನಾಚರಿಸಿ ಸುವರ್ಣಫಲ ಕಮಲಾದಿಗಳನ್ನು ದಾನಕೊಟ್ಟು ಈ ಮುಂದೆ ಹೇಳುವ ಸೂರ್ಯನಾಮಗಳನ್ನು ಪ್ರತಿಮಾಸದಲ್ಲೂ ಕ್ರಮವಾಗಿ ಹೇಳಿ ವ್ರತಸಮರ್ಪಣೆ ಮಾಡಬೇಕು.

ಭಾನುರರ್ಕೋ ರವಿರ್ಬ್ರಹ್ಮಾ ಸೂರ್ಯಃ ಶುಕ್ರೋ ಹರಿಃ ಶಿವಃ ।
ಶ್ರೀಮಾನ್ವಿಭಾವಸುಸ್ತ್ವಷ್ಟಾ ವರುಣಃ ಪ್ರೀಯತಾಮಿತಿ ॥ ೮ ॥

ಪ್ರತಿಮಾಸಂ ಚ ಸಪ್ತಮ್ಯಾಮೇಕೈಕಂ ನಾಮ ಕೀರ್ತಯೇತ್ ।
ಪ್ರತಿಪಕ್ಷಂ ಫಲತ್ಯಾಗಮೇತತ್ಕುರ್ವನ್ಸಮಾಚರೇತ್ ॥ ೯ ॥

ವ್ರತಾಂತೇ ವಿಪ್ರಮಿಥುನಂ ಪೂಜಯೇದ್ವಸ್ತ್ರಭೂಷಣೈಃ ।
ಶರ್ಕರಾಕಲಶಂ ದದ್ಯಾದ್ಧೈಮ ಪದ್ಮಫಲಾನ್ವಿತಂ ॥ ೧೦ ॥

ಯಥಾ ಫಲಕರೋ ಮಾಸಸ್ತ್ವದ್ಭಕ್ತಾನಾಂ ಸದಾ ರವೇ ।
ತಥಾನಂತಫಲಾವಾಪ್ತಿರಸ್ತು ಜನ್ಮನಿ ಜನ್ಮನಿ ॥ ೧೧ ॥

---

೮. ಭಾನುಃ, ಅರ್ಕಃ, ರವಿಃ, ಬ್ರಹ್ಮಾ, ಸೂರ್ಯಃ, ಶುಕ್ರಃ, ಹರಿಃ, ಶಿವಃ, ಶ್ರೀಮಾನ್, ವಿಭಾವಸುಃ, ತ್ವಷ್ಟಾ ವರುಣಃ ಎಂದು ಈ ಹನ್ನೆರಡು ಸೂರ್ಯ ವಾಚಕವಾದ ನಾಮಗಳ ಮುಂದೆ ‘ ಪ್ರೀಯತಾಂ ’ ಎಂದು ಸೇರಿಸಿ ಮಾರ್ಗ ಶೀರ್ಷಾದಿ ಹನ್ನೆರಡು ತಿಂಗಳುಗಳಲ್ಲಿಯೂ, ಕ್ರಮವಾಗಿ ಹೇಳಬೇಕು. ಅಂದರೆ ಮೊದಲನೆಯ ಮಾಸದಲ್ಲಿ ಭಾನುಃ ಪ್ರೀಯತಾಂ ಎಂದು ಹೇಳಬೇಕು. ಇದೇ ರೀತಿ ಮುಂದಿನ ತಿಂಗಳುಗಳಲ್ಲೂ ಅನುಕ್ರಮವಾಗಿ ಹೇಳಬೇಕು.

೯. ಪ್ರತಿತಿಂಗಳಲ್ಲೂ ಸುವರ್ಣ ಫಲದಾನ ಮಾಡುವಾಗ ಹಿಂದೆ ಹೇಳಿದಂತೆ ಭಾನುಃ ಪ್ರೀಯತಾಂ ಇತ್ಯಾದಿ ಕ್ರಮದಲ್ಲಿ ಹೇಳಿ ಜಲಧಾರಾ ಪೂರ್ವಕವಾಗಿ ದಾನಮಾಡಬೇಕು.

೧೦. ಈ ವ್ರತಸಮಾಪ್ತಿಯಾಗುವಾಗ ಕೊನೆಯ ಷಷ್ಠಿಯಲ್ಲಿ ಬ್ರಾಹ್ಮಣ ದಂಪತಿಗಳಿಗೆ ವಸ್ತ್ರಭೂಷಣಾದಿಗಳನ್ನರ್ಪಿಸಿ ಪೂಜೆಮಾಡಬೇಕು. ಮತ್ತು ಭಂಗಾರದ ಕಮಲ, ಫಲ, ಇವುಗಳ ಜತೆಯಲ್ಲಿ ಶರ್ಕರಾಪೂರಿತವಾದ ಕಲಶದಾನವನ್ನೂ ಮಾಡಬೇಕು.

೧೧. ಯಥಾ ಫಲಕರೋ ಮಾಸಸ್ತ್ವದ್ಭಕ್ತಾನಾಂ ಸದಾ ರವೇ ।
ತಥಾನಂತಫಲಾವಾಪ್ತಿರಸ್ತು ಜನ್ಮನಿ ಜನ್ಮನಿ ॥

ಎಂದು ಸೂರ್ಯಪ್ರಾರ್ಥನೆಯನ್ನು ಮಾಡತಕ್ಕದ್ದು. (ಸರ್ವರಿಗೂ ಸ್ವಾಮಿಯಾದ ಸೂರ್ಯನೇ ! ನಿನ್ನ ಭಕ್ತರಿಗೆ ಯಾವಾಗಲೂ ಈ ಮಾಸವು ಫಲಪ್ರದವಾಗುವಂತೆ

ಇಮಾಮನಂತಫಲದಾಂ ಫಲಷಷ್ಠೀಂ ಕರೋತಿ ಯಃ ।
ಸ ಸರ್ವಪಾಪನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ॥ ೧೨ ॥

ಸುರಾಪಾನಾದಿಕಂ ಕಿಂಚಿದ್ಯದತ್ರಾಮುತ್ರ ವಾ ಕೃತಂ ।
ತತ್ಸರ್ವಂ ನಾಶಮಾಯಾತಿ ಸೂರ್ಯಲೋಕಂ ಸ ಗಚ್ಛತಿ ॥ ೧೩ ॥

ಭೂತಾನ್ಭವ್ಯಾಂಶ್ಚ ಪುರುಷಾಂಸ್ತಾರಯೇದೇಕವಿಂಶತಿಂ ।
ಶೃಣುಯಾದ್ಯಃ ಪಠೇದ್ವಾಪಿ ಸೋಽಪಿ ಕಲ್ಯಾಣಭಾಗ್ಭವೇತ್ ॥ ೧೪ ॥

ಹೈಮಂ ಫಲಂ ಸಕಮಲಂ ಕಲಶಂ ಸಿತಾಯಾಃ ।
ಷಷ್ಠೀಮುಪೋಷ್ಯ ವಿಧಿವದ್ದ್ವಿಜ ಪುಂಗವಾಯ ।

---

ನನಗೂ ಸಹ ಪ್ರತಿ ಜನ್ಮದಲ್ಲೂ ಅಪರಿಮಿತ ಫಲಪ್ರಾಪ್ತಿಯಾಗಲಿ ಎಂಬುದೇ ಈ ಮಂತ್ರದ ಅರ್ಥ.)

೧೨. ಅನಂತ ಫಲದಾಯಕವಾದ ಈ ಫಲಷಷ್ಠೀ ವ್ರತವನ್ನು ಆಚರಿಸಿದವನು ಸರ್ವಪಾಪ ವಿನಿರ್ಮುಕ್ತನಾಗಿ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೧೩. ಮತ್ತು ಈ ವ್ರತವನ್ನು ಮಾಡಿದವನು ಈ ಜನ್ಮದಲ್ಲೋ ಹಿಂದಿನ ಜನ್ಮಗಳಲ್ಲೋ ಮದ್ಯಪಾನಾದಿ ನಿಷಿದ್ಧ ಕರ್ಮಗಳನ್ನಾಚರಿಸಿ ಪಾಪ ಗಳಿಸಿದ್ದರೂ ಆ ಎಲ್ಲ ಪಾಪಗಳೂ ಈ ವ್ರತಾಚರಣದಿಂದ ನಾಶವಾಗಿ ಅವನು ಮರಣಾನಂತರ ಸೂರ್ಯಲೋಕಕ್ಕೆ ಹೋಗುವನು.

೧೪. ಮತ್ತು ಅವನ ವಂಶದಲ್ಲಿ ಹಿಂದೆ ಜನಿಸಿ ಮೃತರಾದ ಮತ್ತು ಮುಂದೆ ಜನಿಸುವ ಪುರುಷರೂ ಸೇರಿ ಇಪ್ಪತ್ತೊಂದು ತಲೆಮಾರಿನವರು ಈ ವ್ರತಪ್ರಭಾವದಿಂದ ಸದ್ಗತಿಯನ್ನು ಹೊಂದುತ್ತಾರೆ. ಈ ವ್ರತವನ್ನು ಶ್ರವಣ ಮಾಡಿದವನೂ ಮತ್ತು ಪಠಿಸಿದವನೂ ಸಹ ಶುಭಪರಂಪರೆಗಳನ್ನು ಪಡೆಯುತ್ತಾನೆ.

೧೫. ಪುರುಷನು ವಿಧಿವತ್ತಾಗಿ ಷಷ್ಠಿಯದಿನ ಉಪವಾಸವಿದ್ದು ಸುವರ್ಣದ ಫಲ, ಸುವರ್ಣದ ಕಮಲ, ಮತ್ತು ಶರ್ಕರಾಪೂರಿತ ಕಲಶ ಇವುಗಳನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡಿ ದೇವದಾನವರ ಕಿರೀಟಗಳಿಂದ ಆವರಿಸಲ್ಪಟ್ಟ

ದದ್ಯಾತ್ಸುರಾಸುರಶಿರೋಮಣಿಘೃಷ್ಟಪಾದಂ ।
ಭಾನುಂ ಪ್ರಣಮ್ಯ ಫಲಸಿದ್ಧಿಮುಪೈತಿ ಮರ್ತ್ಯಃ ॥ ೧೫।

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಕಮಲಷಷ್ಠೀ ವ್ರತಂ ನಾಮೈ
ಕೋನಚತ್ವಾರಿಂಶತ್ತಮೋಽಧ್ಯಾಯಃ.



---

ಪಾದಕಮಲಗಳುಳ್ಳ (ದೇವನಮಸ್ಕೃತನಾದ) ಸೂರ್ಯನಿಗೆ ವಂದನೆಮಾಡಿ ಈ ವ್ರತ ವನ್ನಾಚರಿಸಿದರೆ ಅವನಿಗೆ ಸಕಲ ಫಲಸಿದ್ಧಿಯಾಗುವುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಕಮಲಷಷ್ಠೀ
ವ್ರತವರ್ಣನೆ ಎಂಬ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತ್ವಾರಿಂಶತ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ಸರ್ವಕಾಮಪ್ರದಾಂ ಪುಣ್ಯಾಂ ಷಷ್ಠೀಂ ಮಂದಾರಸಂಜ್ಞಿತಾಂ ॥ ೧ ॥

ಮಾಘಸ್ಯಾಮಲಪಕ್ಷೇ ತು ಪಂಚಮ್ಯಾಂ ಲಘುಭುಙ್ನರಃ ।
ದಂತಕಾಷ್ಠಂ ತತಃ ಕೃತ್ವಾ ಷಷ್ಠೀಮುಪವಸೇದ್ಬುಧಃ ।
ವಿಪ್ರಾನ್ಸಂಪೂಜ್ಯ ವಿಧಿವನ್ಮಂದಾರಂ ಪ್ರಾಶಯೇನ್ನಿಶಿ ॥ ೨ ॥

---

### ನಲವತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಈಗ ಸರ್ವಪಾಪ ನಿವಾರಕವೂ ಸರ್ವಾಭಿಲಷಿತ ಫಲದಾಯಕವೂ ಪುಣ್ಯಕರವೂ ಆದ ಮಂದಾರ ಷಷ್ಠೀ ಎಂಬ ವ್ರತವನ್ನು ಹೇಳುತ್ತೇನೆ ಕೇಳು.

೨. ಈ ವ್ರತವನ್ನಾಚರಿಸುವವನು ಮಾಘ ಶುಕ್ಲ ಪಂಚಮೀ ದಿನದಲ್ಲಿ ಕಾಷ್ಠದಿಂದ ದಂತಧಾವನವನ್ನಾಚರಿಸಿ, ಲಘುವಾಗಿ ಭೋಜನಮಾಡಿ, ಅನಂತರ ಮರುದಿನ ಷಷ್ಠಿಯಲ್ಲಿ ಉಪವಾಸವಿರಬೇಕು. ಮತ್ತು ಆ ದಿನ ಶಾಸ್ತ್ರಪ್ರಕಾರವಾಗಿ ಬ್ರಾಹ್ಮಣ ಪೂಜೆಯನ್ನು ಮಾಡಿ ರಾತ್ರಿಯಲ್ಲಿ ಮಂದಾರಪುಷ್ಪವನ್ನು ಪ್ರಾಶನೆಮಾಡಬೇಕು.

ತತಃ ಪ್ರಭಾತೇ ಚೋತ್ಥಾಯ ಕೃತಸ್ನಾನಃ ಪುನರ್ದ್ವಿಜಾನ್ ।
ಭೋಜಯೇಚ್ಛಕ್ತಿತಃ ಕೃತ್ವಾ ಮಂದಾರಕುಸುಮಾಷ್ಟಕಂ ॥ ೩ ॥

ಸೌವರ್ಣಂ ಪುರುಷಂ ತದ್ವತ್ಪದ್ಮಹಸ್ತಂ ಸುಶೋಭನಂ ।
ಪದ್ಮಂ ಕೃಷ್ಣತಿಲೈಃ ಕೃತ್ವಾ ತಾಮ್ರಪಾತ್ರೇಽಷ್ಟಪತ್ರಕಂ ॥ ೪ ॥

ಪೂಜ್ಯ ಮಂದಾರಕುಸುಮೈರ್ಭಾಸ್ಕರಾಯೇತಿ ಪೂರ್ವತಃ ।
ನಮಸ್ಕಾರೇಣ ತದ್ವಚ್ಚ ಸೂರ್ಯಾಯೇತ್ಯನಲೇ ದಲೇ ॥ ೫ ॥

ದಕ್ಷಿಣೇ ತದ್ವದರ್ಕಾಯ ತಥಾರ್ಯಮ್ಣೇ ಚ ನೈಋತೇ ।
ಪಶ್ಚಿಮೇ ವಸುಧಾತ್ರೇ ಚ ವಾಯವ್ಯೇ ಚಂಡಭಾನವೇ ॥ ೬ ॥

---

೩. ಅನಂತರ ಮರುದಿನ ಬೆಳಗ್ಗೆ ಎದ್ದು ಸ್ನಾನಮಾಡಿ ಪುನಃ ಸ್ವಶಕ್ತ್ಯನುಸಾರವಾಗಿ ಬ್ರಾಹ್ಮಣ ಭೋಜನಮಾಡಿಸಬೇಕು. ಈ ವ್ರತಕ್ಕಾಗಿ ಮುಂಚೆಯೇ ಎಂಟು ಸುವರ್ಣದ ಮಂದಾರಪುಷ್ಪಗಳನ್ನು ಮಾಡಿಸಿರಬೇಕು.

೪. ಹಾಗೆಯೇ ಪದ್ಮಹಸ್ತವುಳ್ಳ ಭಂಗಾರದ ಸೂರ್ಯಪ್ರತಿಮೆಯನ್ನೂ ಸುಂದರವಾಗಿ ಮಾಡಿಸಿ, ಕರಿಯ ಎಳ್ಳಿನಪುಡಿಯಿಂದ ತಾಮ್ರ ಪಾತ್ರೆಯಲ್ಲಿ ಅಷ್ಟದಳ ಪದ್ಮವೊಂದನ್ನು ರಚಿಸಬೇಕು.

೫, ಆ ತಾಮ್ರಪಾತ್ರೆಯಲ್ಲಿ ರಚಿಸಿದ ಅಷ್ಟದಳ ಕಮಲದಲ್ಲಿ ಪೂರ್ವ ದಿಕ್ಕಿನ ದಳದಲ್ಲಿ ಭಾಸ್ಕರಾಯನಮಃ ಎಂದು ಹೇಳಿ ಒಂದು ಸುವರ್ಣ ಮಂದಾರ ಪುಷ್ಪವನ್ನು ಇಟ್ಟು ಪೂಜಿಸಬೇಕು. ಹಾಗೆಯೇ ಆ ಕಮಲದ ಆಗ್ನೇಯ ದಳದಲ್ಲಿ ಸೂರ್ಯಾಯನಮಃ ಎಂದು ಹೇಳಿ ಇನ್ನೊಂದು ಸುವರ್ಣ ಮಂದಾರಪುಷ್ಪದಿಂದ ಅರ್ಚಿಸಬೇಕು.

೬. ಹಾಗೆಯೇ ದಕ್ಷಿಣ ದಳದಲ್ಲಿ ಅರ್ಕಾಯನಮಃ ಎಂದೂ, ನೈರುತ್ಯ ದಿಕ್ಕಿನ ದಳದಲ್ಲಿ ಅರ್ಯಮ್ಣೇನಮಃ ಎಂದೂ, ಪಶ್ಚಿಮದಿಕ್ಕಿನ ದಳದಲ್ಲಿ ವಸುಧಾತ್ರೇನಮಃ ಎಂದೂ, ವಾಯವ್ಯದ ದಳದಲ್ಲಿ ಚಂಡಭಾನವೇನಮಃ ಎಂದೂ ಹೇಳಿ ಸುವರ್ಣದ ಮಂದಾರಪುಷ್ಪಗಳನ್ನು ಅರ್ಚಿಸಬೇಕು.

ಪೂಷ್ಣೇ ಹ್ಯುತ್ತರತಃ ಪೂಜ್ಯ ಆನಂದಾಯೇತ್ಯತಃ ಪರಂ ।
ಕರ್ಣಿಕಾಯಾಂ ತು ಪುರುಷಃ ಪೂಜ್ಯಃ ಸರ್ವಾತ್ಮನೇತಿ ಚ ॥ ೭ ॥

ಶುಕ್ಲವಸ್ತ್ರೈಃ ಸಮಾವೇಷ್ಟ್ಯ ಭಕ್ಷ್ಯೈರ್ಮಾಲ್ಯಫಲಾದಿಭಿಃ ।
ಏವಮುಭ್ಯರ್ಚ್ಯ ತತ್ಸರ್ವಂ ದದ್ಯಾದ್ವೇದವಿದೇ ಪುನಃ ।
ಭುಂಜೀತಾತ್ತೈಲಲವಣಂ ವಾಗ್ಯತಃ ಪ್ರಾಙ್ಮುಖೋ ಗೃಹೀ ॥ ೮ ॥

ಅನೇನ ವಿಧಿನಾ ಸರ್ವಂ ಸಪ್ತಮ್ಯಾಂ ಮಾಸಿ ಮಾಸಿ ಚ ।
ಕುರ್ಯಾತ್ಸಂವತ್ಸರಂ ಯಾವದ್ವಿತ್ತಶಾಠ್ಯವಿವರ್ಜಿತಃ ॥ ೯ ॥

ಏತದೇವ ವ್ರತಾಂತೇ ತು ನಿಧಾಯ ಕಲಶೋಪರಿ ।
ಗೋಭಿರ್ವಿಭವತಃ ಸಾರ್ಧಂ ದಾತವ್ಯಂ ಭೂತಿಮಿಚ್ಛತಾ ॥ ೧೦ ॥

---

೭. ಹಾಗೆಯೇ ಉತ್ತರ ದಳದಲ್ಲಿ ಪೂಷ್ಣೇನಮಃ ಎಂದೂ, ಈಶಾನ್ಯ ದಳದಲ್ಲಿ ಆನಂದಾನಮಃ ಎಂದೂ, ಪಠಿಸಿ ಪೂಜಿಸಿ ಆ ಕಮಲದ ಮಧ್ಯಭಾಗವಾದ ಕರ್ಣಿಕೆಯಲ್ಲಿ ಸರ್ವಾತ್ಮನೇನಮಃ ಎಂದು ಹೇಳಿ ಆದಿತ್ಯಸ್ವರೂಪಿಯಾದ ಪರಮಪುರುಷನನ್ನು ಪೂಜಿಸಬೇಕು.

೮. ಮತ್ತು ಆ ಆದಿತ್ಯನಿಗೆ ಬಿಳಿಯ ವಸ್ತ್ರಗಳನ್ನು ಹೊದ್ದಿಸಿ, ಪುಷ್ಪಮಾಲಿಗಳಿಂದ ಅಲಂಕರಿಸಿ, ಭಕ್ಷ್ಯ ಫಲಾದಿಗಳನ್ನು ಸಮರ್ಪಣೆಮಾಡಿ, ಹಿಂದೆ ಹೇಳಿದ ಕ್ರಮದಲ್ಲಿ ಪೂಜೆಮಾಡಿ, ಅನಂತರ ಆ ಪ್ರತಿಮೆ ·ಮೊದಲಾದ ಎಲ್ಲಾ ಪದಾರ್ಥಗಳನ್ನೂ ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ದಾನಮಾಡಬೇಕು. ಅನಂತರ ಈ ವ್ರತವನ್ನಾಚರಿಸುವ ಗೃಹಸ್ಥನು ಎಣ್ಣೆ, ಉಪ್ಪು ಇವೆರಡನ್ನೂ ವರ್ಜ್ಯಮಾಡಿ ಮೌನಿಯಾಗಿ ಪೂರ್ವಾಭಿಮುಖವಾಗಿ ಕುಳಿತು ಭೋಜನ ಮಾಡಬೇಕು.

೯. ಈ ಕ್ರಮದಲ್ಲಿ ಒಂದುವರ್ಷ ಸಂಪೂರ್ಣವಾಗುವವರೆಗೆ ಪ್ರತಿತಿಂಗಳಿನಲ್ಲೂ ಸಪ್ತಮಿಾ ದಿನದಲ್ಲಿ ಈ ಎಲ್ಲವನ್ನೂ ಆಚರಿಸಬೇಕು. ಧನವ್ಯಯವನು. ಲೆಕ್ಕಿಸಬಾರದು.

೧೦. ತನ್ನ ಅಭ್ಯುದಯಾಭಿಲಾಷೆಯುಳ್ಳ ಪುರುಷನು ವ್ರತಾಂತದಲ್ಲಿ ಈ ಪ್ರತಿಮೆಯನ್ನು ಕಲಶದ ಮೇಲಿಟ್ಟು ಗೋಸಾಮಗ್ರಿ ಮತ್ತು ಕರು ಸಹಿತವಾದ ಗೋವು ಇವನ್ನು ದಾನಮಾಡಬೇಕು.

ನಮೋ ಮಂದಾರನಾಥಾಯ ಮಂದಾರಭವನಾಯ ಚ ।
ತ್ವಂ ಚ ವೈ ತಾರಯಸ್ಮಾಸ್ಮಾನಸ್ಮಾತ್ಸಂಸಾರಕರ್ದಮಾತ್ ॥ ೧೧ ॥

ಅನೇನ ವಿಧಿನಾ ಯಸ್ತು ಕುರ್ಯ್ಯಾನ್ಮಂದಾರಕಂ ವ್ರತಂ ।
ವಿಪಾಪ್ಮಾ ಸ ಸುಖೀ ಮರ್ತ್ಯಃ ಕಲ್ಪಂ ಚ ದಿವಿ ಮೋದತೇ ॥ ೧೨ ॥

ಇಮಾಮಘೌಘಪಟಲಧ್ವಾಂತಸದ್ವರ್ತಿದೀಪಿಕಾಂ ।
ಗಚ್ಛನ್ಪ್ರಗೃಹ್ಯ ಸಂಸಾರಶರ್ವರ್ಯಾಂ ನ ಸ್ಖಲೇನ್ನರಃ ॥ ೧೩ ॥

ಮಂದಾರಷಷ್ಠೀಂ ವಿಖ್ಯಾತಾಮೀಪ್ಸಿತಾರ್ಥಫಲಪ್ರದಾಂ ।
ಯಃ ಪಠೇಚ್ಛೃಣುಯಾದ್ವಾಪಿ ಸೋಽಪಿ ಪಾಪೈಃ ಪ್ರಮುಚ್ಯತೇ ॥ ೧೪ ॥

---

೧೧. ನಮೋ ಮಂದಾರನಾಥಾಯ ಮಂದಾರಭವನಾಯಚ ।
ತ್ವಂ ಚ ವೈತಾರಯಸ್ಮಾಸ್ಮಾನಸ್ಮಾತ್ಸಂಸಾರಕರ್ದಮಾತ್ ॥
ಎಂದು ಪಠಿಸಿ ಸೂರ್ಯ ಪ್ರಾರ್ಥನೆಯನ್ನು ಮಾಡಬೇಕು.

(ಮಂದಾರಕ್ಕೆ ಅಧಿಪತಿಯೂ, ಮಂದಾರಪುಷ್ಪ ನಿವಾಸಿಯೂ ಆಗಿರುವ ನೀನು ನಮ್ಮನ್ನು ಈ ಸಂಸಾರವೆಂಬ ಕೆಸರಿನಲ್ಲಿ ಹೂತುಹೋಗದಂತೆ ಉದ್ಧರಿಸು ಎಂಬುವೇ ಈ ಪ್ರಾರ್ಥನೆಯ ಶ್ಲೋಕದ ಅರ್ಥ).

೧೨. ಈ ರೀತಿ ಯಾವನು ಈ ಮಂದಾರಷಷ್ಠೀ ವ್ರತವನ್ನು ಆಚರಿಸುವನೋ ಅವನು ಸರ್ವಪಾಪ ವಿನಿರ್ಮುಕ್ತನಾಗಿ ಇಹದಲ್ಲಿ ಸೌಖ್ಯವನ್ನೂ ದೇಹಾಂತದಲ್ಲಿ ಸ್ವರ್ಗವನ್ನೂ ಪಡೆದು ಅಲ್ಲಿ ಒಂದು ಕಲ್ಪದವರೆಗೂ ಸಂತೋಷದಿಂದಿರುತ್ತಾನೆ.

೧೩. ಪಾಪಸಮುದಾಯಪಟಲವೆಂಬ ಕತ್ತಲೆಯನ್ನು ನಾಶಮಾಡುವ ಒಳ್ಳೆಯ ದೀಪವರ್ತಿ ಸಮೇತವಾದ ಈ ವ್ರತವೆಂಬ ದೀಪವನ್ನು ಹಿಡಿದುಕೊಂಡು ಸಂಚಾರಮಾಡುವವನು ಸಂಸಾರವೆಂಬ ಗಾಢಾಂಧಕಾರದ ರಾತ್ರಿಯಲ್ಲಿ ಯಾವ ಪ್ರದೇಶದಲ್ಲೂ ಜಾರಿ ಬೀಳುವುದಿಲ್ಲ.

೧೪. ಇಷ್ಟಾರ್ಥ ಫಲಪ್ರದವೆಂದು ಲೋಕದಲ್ಲಿ ಪ್ರಸಿದ್ಧಿ ಪೊಂದಿದ ಈ ಮಂದಾರಷಷ್ಠೀ ವ್ರತವಿಚಾರವನ್ನು ಪಠಿಸಿದವನೂ, ಶ್ರವಣಮಾಡಿದವನೂ, ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

ಷಷ್ಠೀಮುಪೋಷ್ಯ ತಿಲಪಂಕಜಕರ್ಣಿಕಾಯಾಂ ।
ಸಂಪೂಜ್ಯ ಭಾಸ್ಕರಮಹೋ ಸುರವೃಕ್ಷಪುಷ್ಪೈಃ ।
ಯತ್ಪ್ರಾಪ್ನುವಂತಿ ಪುರುಷಾ ನ ಹಿ ತತ್ಕದಾಚಿ ।
ದ್ಗೋಭೂಹಿರಣ್ಯತಿಲದಾಃ ಪದಮಾಪ್ನುವಂತಿ ॥ ೧೫ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಂದಾರಷಷ್ಠೀ ವ್ರತ ನಿರೂಪಣಂ ನಾಮ ಚತ್ವಾರಿಂಶೋಽಧ್ಯಾಯಃ.**



---

೧೫. ಷಷ್ಠಿಯ ದಿವಸ ಉಪವಾಸಮಾಡಿ ಎಳ್ಳಿನಿಂದ ನಿರ್ಮಿತವಾದ ಕಮಲ ಕರ್ಣಿಕೆಯ ಮಧ್ಯಭಾಗದಲ್ಲಿ ಮಂದಾರಪುಷ್ಪಗಳಿಂದ ಸೂರ್ಯನನ್ನು ಅರ್ಚಿಸಿದ ಪುರುಷನಿಗೆ ಅಥವಾ ಸ್ತ್ರೀಗೆ ಲಭಿಸುವ ಪುಣ್ಯಫಲವು ಗೋದಾನದಿಂದಾಗಲಿ, ಭೂದಾನದಿಂದಾಗಲಿ, ಹಿರಣ್ಯದಾನದಿಂದಾಗಲಿ, ಶಿಲದಾನದಿಂದಾಗಲಿ ಯಾವಾಗಲೂ ಪ್ರಾಪ್ತಿಯಾಗುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಮಂದಾರ ಷಷ್ಠೀ ವ್ರತ ನಿರೂಪಣೆಯೆಂಬ ನಾಲ್ವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕಚತ್ವಾರಿಂಶತ್ತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಭದ್ರೆ ಭಾದ್ರಪದೇ ಮಾಸಿ ಶುಕ್ಲಷಷ್ಠ್ಯಾಂ ಯುಧಿಷ್ಠಿರ ।
ಯೋಷಿತ್ಸ್ನವೇ ಷಾ ಸುಭಗಾ ಸರ್ವಲೋಕಮನೋಹರಾ ॥ ೧ ॥

ಪ್ರಾತಃ ಸ್ನಾನಂ ಮಹಾನದ್ಯಾಂ ಕೃತ್ವಾ ಸಂಗೃಹ್ಯ ವಾಲುಕಾಂ ।
ನವೇ ವಂಶಮಯೇ ಪಾತ್ರೇ ಯಾಯಾದ್ಗೃಹಮತಂದ್ರಿತಾ ॥ ೨ ॥

ಸೋಪವಾಸಾ ಪ್ರಯತ್ನೇನ ದೇವೀಂ ತತ್ರ ಪ್ರಪೂಜಯೇತ್ ।
ಕೃತ್ವಾ ವಸ್ತ್ರಗೃಹಂ ರಮ್ಯಂ ದೀಪನೇತ್ರಪಟಾವೃತಂ ॥ ೩ ॥

---

## ನಲವತ್ತೊಂದನೆಯ ಅಧ್ಯಾಯ

೧-೨. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರನೇ ! ಭಾದ್ರಪದ ಮಾಸದ ಶುಕ್ಲಪಕ್ಷದ ಷಷ್ಠಿಯಲ್ಲಿ ಸರ್ವಜನ ಮನೋಹರಳೂ, ಸೌಭಾಗ್ಯವತಿಯೂ, ಸುಂದರ ವಸ್ತ್ರಾಭರಣವನ್ನು ಧರಿಸಿದವಳೂ ಆದ ಹೆಂಗಸು, ಆದಿನ ಬೆಳಗ್ಗೆ ಮಹಾನದಿಯಲ್ಲಿ ಸ್ನಾನಮಾಡಿ ಆ ನದಿಯ ಸ್ವಲ್ಪ ಮರಳನ್ನು ಕೈಯಲ್ಲಿ ತೆಗೆದುಕೊಂಡು ಹೊಸ ಬಿದಿರಿ (ಬೊಂಬು) ನಿಂದ ಮಾಡಿದ ಪಾತ್ರೆಯಲ್ಲಿ (ಬುಟ್ಟಿ) ಆ ಮರಳನ್ನು ಇರಿಸಿಕೊಂಡು ಶುದ್ಧಚಿತ್ತಳಾಗಿ ಮನೆಯನ್ನು ಸೇರಬೇಕು.

೩-೪. ಅನಂತರ ಮನೆಯಲ್ಲಿ ಉಪವಾಸ ವ್ರತವನ್ನು ಸ್ವೀಕರಿಸಿ ಪ್ರಯತ್ನಪೂರ್ವಕವಾಗಿ ತೆಳ್ಳಗಿರುವ ಬಟ್ಟೆಯಿಂದ ಸುಂದರವಾದ ವಸ್ತ್ರದ ಮಂಟಪವನ್ನು

ತತ್ರ ಸಂಸ್ಥಾಪ್ಯ ತಾಂ ದೇವೀಂ ಪುಷ್ಪೈಃ ಸಂಪೂಜಯೇನ್ನವೈಃ ।
ಧ್ಯಾತ್ವಾ ಲಲಿತಿಕಾಂ ಗೌರೀಂ ತಪೋವನನಿವಾಸಿನೀಂ ॥ ೪ ॥
ಮಂತ್ರೇಣಾನೇನ ಕುಸುಮೈಶ್ಚಂಪಕಸ್ಯ ಸುಶೋಭನೈಃ ।

ಚಂಪಕಂ ಕರವೀರಂ ಚ ನೇವಮಾಲಿಂ ಮಾಲತೀಂ ತಥಾ ।
ನೀಲೋತ್ಪಲಂ ಕೇತಕೀಂ ಚ ಸಂಗೃಹ್ಯ ತಗರಂ ತಥಾ ॥ ೫ ॥

ಏಕೈಕಸ್ಯ ತ್ವಷ್ಟಶತಮಷ್ಟಾವಿಂಶತಿರೇವ ವಾ ।
ಅಕ್ಷತೈಃ ಕಲಿಕಾ ಗ್ರಾಹ್ಯಾಸ್ತೈಸ್ತು ದೇವೀಂ ಸಮರ್ಚಯೇತ್ ॥ ೬ ॥

ಗಂಗಾದ್ವಾರೇ ಕುಶಾವರ್ತೇ ಬಿಲ್ವಕೇ ನೀಲಪರ್ವತೇ ।
ಸ್ನಾತ್ವಾ ಕನಖಲೇ ತೀರ್ಥೇ ಹರಂ ಲಬ್ಧವತೀ ವ್ರಜೇತ್ ॥ ೭ ॥

---

ರಚಿಸಿ, ಅದನ್ನು ದೀಪಾದಿಗಳಿಂದಲಂಕರಿಸಿ, ಆ ಮಂಟಪದಲ್ಲಿ ದೇವಿಯನ್ನು ಪ್ರತಿಷ್ಠೆಮಾಡಿ, ಹೊಸ ಪುಷ್ಪಗಳಿಂದ ಅರ್ಚಿಸಿ ತಪೋವನವಾಸಿನಿಯೂ, ಮಹಾ ಸುಂದರಿಯೂ ಆದ ಶ್ರೀ ಗೌರಿಯನ್ನು ಧ್ಯಾನಿಸಬೇಕು.

೫-೬. ಮತ್ತು ಈ ಮುಂದೆ ಹೇಳುವ ಮಂತ್ರಪೂರ್ವಕವಾಗಿ ಮಂಗಳ ಕರವಾಗಿಯೂ, ಹುಳು ಮೊದಲಾದುವುಗಳಿಂದ ಛಿದ್ರವಾಗದೆ ಅಕ್ಷತ ವಾಗಿಯೂ ಇರುವ ನೂರೆಂಟು ಅಥವಾ ಇಪ್ಪತ್ತೆಂಟು ಸಂಖ್ಯೆಯ ಸಂಪಿಗೆ, ಕರವೀರ, ನವಮಾಲಿಕಾ, ಮಲ್ಲಿಗೆ, ಕನ್ನೈದಿಲೆ ಕೇದಿಗೆ, ತಗರ ಈ ಪುಷ್ಪ ಗಳಿಂದದೇವಿಯನ್ನು ಪೂಜಿಸಬೇಕು. ಋತುಮತಿಯಾಗದ ಕನ್ನಿಕೆಯರು ಈ ವ್ರತವನ್ನಾಚರಿಸುವುದಾದರೆ ಈ ಪುಷ್ಪಗಳ ಮೊಗ್ಗುಗಳಿಂದ ಅರ್ಚಿಸ ಬೇಕು.

೭. ಗಂಗಾದ್ವಾರ, ಕುಶಾವರ್ತ, ಬಿಲ್ವಕ, ನೀಲಪರ್ವತ, ಕನಖಲ, ಈ ತೀರ್ಥಗಳಲ್ಲಿ ಸ್ನಾನಮಾಡಿ ಅಲ್ಲಿರುವ ಈಶ್ವರನನ್ನು ದರ್ಶನಮಾಡಿ ಈ ವ್ರತವನ್ನು ಆಚರಿಸಬೇಕು.

ಲಲಿತೇ ಲಲಿತೇ ದೇವಿ ಸೌಖ್ಯಸೌಭಾಗ್ಯದಾಯಿನಿ ।
ಯಾ ಸೌಭಾಗ್ಯಸಮುತ್ಪನ್ನಾ ತಸ್ಯೈ ದೇವ್ಯೈ ನಮೋನಮಃ ।
ಏವಮಭ್ಯರ್ಚ್ಯ ವಿಧಿನಾ ನೈವೇದ್ಯಂ ಪುರತೋ ನ್ಯಸೇತ್ ॥ ೮ ॥

ಕೂಷ್ಮಾಂಡೈಃ ಕರ್ಕಟೀವೃಂತೈಃ ಕರ್ಕೋಟೈಃ ಕಾರವೇಲ್ಲಕೈಃ ।
ವೃಂತಾಕೈರಕ್ಷತೈರಂಗೈರ್ದೀಪಧೂಪಾದ್ಯಲಕ್ತಕೈಃ ॥ ೯ ॥

ಸಾರ್ದ್ಧಂ ಸಗುಡಕೈರ್ಧೂಪೈಃ ಸೋಹಾಲಕಕರಂಬಕೈಃ ।
ಗುಡಪುಷ್ಪೈಃ ಕರ್ಣವೇಷ್ಟೈರ್ಮೋದಕೈರ್ಮುಖಮೋದಕೈಃ ॥ ೧೦ ॥

ಏವಮಭ್ಯರ್ಚ್ಯ ವಿಧಿವದ್ರಾತ್ರೌ ಜಾಗರಣಂ ತತಃ ।
ಗೀತವಾದ್ಯನಟಚ್ಛತ್ರಪ್ರೇಕ್ಷಣೀಯೈಃ ಸುಶೋಭನೈಃ ।
ಸಖೀಭಿಃ ಸಹಿತಾ ಸಾಧ್ವೀ ತಾಂ ರಾತ್ರಿಂ ಪ್ರಶಮನ್ನಯೇತ್ ॥ ೧೧ ॥

---

೮. ಲಲಿತೇ ಲಲಿತೇ ದೇವೀ ಸೌಖ್ಯ ಸೌಭಾಗ್ಯದಾಯಿನೀ ।
ಯಾ ಸೌಭಾಗ್ಯ ಸಮುತ್ಪನ್ನಾ ತಸ್ಯೈದೇವ್ಯೈನಮೋ ನಮಃ ॥

ಎಂಬ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು. (ಎಲೌ ಸುಂದರ ಮೂರ್ತಿಯುಳ್ಳ ಲಲಿತಾದೇವಿಯೇ ! ಸೌಖ್ಯಸೌಭಾಗ್ಯ ಫಲದಾತೃವಾಗಿಯೂ, ಸೌಭಾಗ್ಯಮೂರ್ತಿಯೆನಿಸಿ ಆವಿರ್ಭವಿಸಿದವಳಾಗಿಯೂ, ಇರುವ ನಿನಗೆ ಅನೇಕ ನಮಸ್ಕಾರಗಳು ಎಂದು ಇದರ ಅರ್ಥ). ಈರೀತಿ ಶಾಸ್ತ್ರ ಪ್ರಕಾರವಾಗಿ ಅರ್ಚನೆಮಾಡಿದ ಅನಂತರ ದೇವೀ ಪುರೋಭಾಗದಲ್ಲಿ ನೈವೇದ್ಯವನ್ನು ಇರಿಸಬೇಕು.

೯–೧೦. ನೈವೇದ್ಯಕ್ಕಾಗಿ ಕ್ರಿಮಿಕೀಟಾದಿಗಳಿಂದ ಹುಳುಕಾಗದೇ ಚನ್ನಾಗಿರುವ ಕುಂಬಳಕಾಯಿ, ಸೌತೇಕಾಯಿ, ಪಡವಲಕಾಯಿ ಹಾಗಲಕಾಯಿ, ಬದನೇಕಾಯಿ, ಇವುಗಳನ್ನೂ, ಬೆಲ್ಲವನ್ನು ಹಾಕಿ ಸ್ವಾದುವಾಗಿ ಮಾಡಿದ ಮೋದಕಗಳನ್ನೂ ಇರಿಸಬೇಕು. ಮತ್ತು ಧೂಪದೀಪ ನೀರಾಜನಾದಿಗಳಿಂದ ಅರ್ಚಿಸಬೇಕು.

೧೧. ಈರೀತಿ ಶಾಸ್ತ್ರಪ್ರಕಾರ ಪೂಜೆಮಾಡಿ ಅನಂತರ ಆದಿನ ರಾತ್ರಿ ಸಖೀ ಸಮೇತಳಾಗಿ ಮಂಗಳಕರವಾದ ಸಂಗೀತ, ವಾದ್ಯ, ನರ್ತನ, ಪ್ರೇಕ್ಷಣೀಯವಾದ ಕೀರ್ತನಾದಿ ದರ್ಶನ ಇತ್ಯಾದಿಗಳ ಮೂಲಕ ಜಾಗರಣೆ ಮಾಡಬೇಕು.

ನ ಚ ಸಮ್ಮೀಲಯೇನ್ನೇತ್ರೇ ನಾರೀ ಯಾಮಚತುಷ್ಟಯಂ ।
ದುರ್ಭಗಾ ದುರ್ಗತಾ ವಂಧ್ಯಾ ನೇತ್ರಸಂಮೀಲನಾದ್ಭವೇತ್ ॥ ೧೨ ॥

ಏವಂ ಜಾಗರಣಂ ಕೃತ್ವಾ ಸಪ್ತಮ್ಯಾಂ ಸರಿತಂ ನಯೇತ್ ।
ಗಂಧಪುಷ್ಪೈರಥಾಭ್ಯರ್ಚ್ಯ ಗೀತವಾದ್ಯಪುರಸ್ಸರಂ ॥ ೧೩ ॥

ತಚ್ಚ ದದ್ಯಾದ್ದ್ವಿಜೇಂದ್ರಾಯ ನೈವೇದ್ಯಾದಿ ನರೋತ್ತಮ ।
ಸ್ನಾತ್ವಾ ಗೃಹಮುಪಾಗಮ್ಯ ಹುತ್ವಾ ವೈಶ್ವಾನರಂ ಕ್ರಮಾತ್ ।
ದೇವಾನ್ಪಿತೄನ್ಮನುಷ್ಯಾಂಶ್ಚ ಪೂಜಯಿತ್ವಾ ಸುವಾಸಿನೀಂ ॥ ೧೪ ॥

೧೨. ವ್ರತವನ್ನಾಚರಿಸುವ ಸ್ತ್ರೀಯು ಆದಿನ ರಾತ್ರಿ ನಾಲ್ಕು ಯಾಮಗಳಲ್ಲೂ ಕಣ್ಣನ್ನು ಮುಚ್ಚಲೇ ಬಾರದು. ಆಕಳಿಸಲೂ ಕೂಡದು. ಹಾಗೆ ಕದಾಚಿತ್ ನಿದ್ರೆಮಾಡಿದರೆ ಅವಳು ದೌರ್ಭಾಗ್ಯವತಿಯೂ, ದುಃಖಭಾಗಿನಿಯೂ, ಬಂಜೆಯೂ ಆಗುವಳು.

೧೩. ಈ ರೀತಿ ಜಾಗರಣೆಯಿಂದ ಆ ರಾತ್ರಿಯನ್ನು ಕಳೆದ ಮೇಲೆ ಮರುದಿನ ಸಪ್ತಮಿಯಲ್ಲಿ ಗಂಧ ಪುಷ್ಪಾದಿಗಳಿಂದ ಆ ದೇವಿಯನ್ನು ಪೂಜೆಮಾಡಿ ಅನಂತರ ನದಿಯಿಂದ ತಂದ ಮರಳಿನಲ್ಲಿ ಆವಾಹಿಸಿದ್ದ ದೇವಿಯನ್ನು ಪುನಃ ಗೀತವಾದ್ಯಾದಿ ಘೋಷಣ ಪುರಸ್ಸರವಾಗಿ ನದಿಗೇ ತೆಗೆದುಕೊಂಡು ಹೋಗಿ ಅಲ್ಲಿ ವಿಸರ್ಜಿಸಿಬಿಡಬೇಕು.

೧೪. ಅಯ್ಯಾ ರಾಜನೇ ! ವ್ರತಾನುಷ್ಠಾನ ಕಾಲದಲ್ಲಿ ಸಮರ್ಪಿಸಿದ ನೈವೇದ್ಯಾದಿ ಸಾಮಗ್ರಿಗಳನ್ನು ಬ್ರಾಹ್ಮಣೋತ್ತಮನಿಗೆ ಕೊಡಬೇಕು. ಅನಂತರ ಆ ನದಿಯಲ್ಲಿ ಸ್ನಾನಮಾಡಿ ಮನೆಗೆ ಬಂದು ಅಗ್ನಿಯಲ್ಲಿ ಹೋಮಮಾಡಿ ಕ್ರಮವಾಗಿ ದೇವಪೂಜೆ, ಪಿತೃಯಜ್ಞ, ಅತಿಥಿಸತ್ಕಾರ, ಸುವಾಸಿನೀ ಪೂಜೆ, ಇವನ್ನು ನೆರವೇರಿಸಬೇಕು.

ಕುಮಾರಿಕಾ ಭೋಜನೀಯಾ ಬ್ರಾಹ್ಮಣಾ ದಶ ಪಂಚ ಚ ।
ಭಕ್ಷ್ಯಭೋಜ್ಯೈರ್ಬಹುವಿಧೈರ್ದೇಯಾ ತೇಭ್ಯಃ ಸುದಕ್ಷಿಣಾ ।
ಲಲಿತಾ ಪ್ರೀತಿಯುಕ್ತಾಸ್ತು ಇತ್ಯುಕ್ತ್ವಾ ತಾನ್ವಿಸರ್ಜಯೇತ್ ॥ ೧೫ ॥

ಯಃ ಕಶ್ಚಿದಾಚರೇದೇತದ್ಭಕ್ತ್ಯಾ ಲಲಿತಿಕಾವ್ರತಂ ।
ನರೋ ವಾ ಯದಿ ವಾ ನಾರೀ ತಸ್ಯ ಪುಣ್ಯಫಲಂ ಶೃಣು ॥ ೧೬ ॥

ತನ್ನಾಸ್ತಿ ಮಾನುಷೇ ಲೋಕೇ ತಸ್ಯ ಯನ್ನೋಪಪದ್ಯತೇ ।
ಸುಖಸೌಭಾಗ್ಯಸಂಯುಕ್ತಾ ಗೌರೀಲೋಕಮವಾಪ್ನುಯಾತ್ ॥ ೧೭ ॥

ಷಷ್ಠ್ಯಾಂ ಜಲಾಂತರಗತಾ ವರವಂಶಪಾತ್ರೇ ।
ಸಂಗೃಹ್ಯ ಪೂಜಯತಿ ಯಾ ಸಿಕತಾಃ ಕ್ರಮೇಣ ।

---

೧೫. ಅನಂತರ ಬಹುವಿಧವಾದ ಭಕ್ಷ್ಯ ಭೋಜ್ಯಾದಿಗಳಿಂದ ಹದಿನೈದು ಜನ ಕುಮಾರಿಯರಿಗೂ ಬ್ರಾಹ್ಮಣರಿಗೂ ಭೋಜನಮಾಡಿಸಿ ಅವರಿಗೆ ದಕ್ಷಿಣೆ ಕೊಟ್ಟು "ಲಲಿತಾ ಪ್ರೀತಿಯುಕಾಸ್ತು" (ಶ್ರೀ ಲಲಿತಾದೇವಿಯು ಸುಪ್ರೀತಳಾಗಲಿ! ಎಂದು ಪ್ರಾರ್ಥಿಸಿ ಆ ಕನ್ನಿಕೆಯರನ್ನೂ ಬ್ರಾಹ್ಮಣರನ್ನೂ ಬೀಳ್ಕೊಡಬೇಕು.

೧೬. ಎಲೈ ರಾಜನೇ! ಹೆಂಗಸಾಗಲಿ ಅಥವಾ ಗಂಡಸಾಗಲಿ ಈ ವ್ರತವನ್ನು ಭಕ್ತಿಪೂರ್ವಕವಾಗಿ ಆಚರಿಸಿದರೆ ಅವರಿಗೆ ಇದರಿಂದ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೧೭. ಈ ವ್ರತವನ್ನಾಚರಿಸಿದುದರಿಂದ ಮನುಷ್ಯ ಲೋಕದಲ್ಲಿ ಲಭಿಸದಿರುವ ಫಲವೇ ಇಲ್ಲ. ಎಂದರೆ ಇದರಿಂದ ವಾಂಛಿತ ಸರ್ವಫಲಪ್ರಾಪ್ತಿಯಾಗುವುದು. ಮತ್ತು ಈ ಲೋಕದಲ್ಲಿ ಸುಖಸೌಭಾಗ್ಯಯುತರಾಗಿದ್ದು ಮರಣಾನಂತರ ಶ್ರೀಗೌರೀ ಲೋಕ ಪ್ರಾಪ್ತಿಯಾಗುವುದು.

೧೮. ಯಾವ ನಾರಿಯು ಷಷ್ಠೀ ತಿಥಿಯಲ್ಲಿ ನದೀನೀರಿನ ತಳದಲ್ಲಿರುವ ಮರಳನ್ನು ಬಿದಿರಿನ ತಟ್ಟೆಯಲ್ಲಿ ಇರಿಸಿ ಅದರಲ್ಲಿ ವಿಧ್ಯುಕ್ತರೀತಿ ಶ್ರೀ ಲಲಿತಾದೇವಿಯನ್ನು ಆವಾಹನೆಮಾಡಿ ಅರ್ಚಿಸಿ ರಾತ್ರಿಯಲ್ಲಿ ನೃತ್ಯ, ಗೀತಾದಿಗಳನ್ನು

ನಕ್ತಂ ಚ ಜಾಗರಮನುದ್ಧತಗೀತನೃತ್ಯೈಃ ।
ಕೃತ್ವಾ ಹ್ಯಸೌ ತ್ರಿಭುವನೇ ಲಲಿತೇವ ಭಾತಿ ॥ ೧೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಲಲಿತಾಷಷ್ಠೀ ವ್ರತವರ್ಣನಂ
ನಾಮೈಕಚತ್ವಾರಿಂಶೋಧ್ಯಾಯಃ.



---

ನೋಡುತ್ತಾ ಜಾಗರಣೆಯಿಂದಿದ್ದು ಈ ವ್ರತವನ್ನಾಚರಿಸುವಳೋ ಅವಳು ಮೂರು ಲೋಕಗಳಲ್ಲೂ ಶ್ರೀ ಲಲಿತಾದೇವಿಯಂತೆಯೇ ಸರ್ವೋತ್ಕೃಷ್ಟಳಾಗಿ ಪ್ರಕಾಶಿಸುವಳು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಲಲಿತಾ
ಷಷ್ಠೀ ವ್ರತವರ್ಣನೆಯೆಂಬ ನಾಲ್ವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಿಚತ್ವಾರಿಂಶತ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಯೇಯಂ ಮಾರ್ಗಶಿರೇ ಮಾಸಿ ಷಷ್ಠೀ ಭರತಸತ್ತಮ ।**
**ಪುಣ್ಯಾ ಪಾಪಹರಾ ಧನ್ಯಾ ಶಿವಾ ಶಾನ್ತಾ ಗುಹಪ್ರಿಯಾ ॥ ೧ ॥**

**ನಿಹತ್ಯ ತಾರಕಂ ಷಷ್ಠ್ಯಾಂ ಗುಹಸ್ತಾರಕರಾಜವತ್ ।**
**ರರಾಜ ತೇನ ದಯಿತಾ ಕಾರ್ತಿಕೇಶಸ್ಯ ಸಾ ತಿಥಿಃ ।**
**ಸ್ನಾನದಾನಾದಿಕಂ ಕರ್ಮ ತಸ್ಯಾಮಕ್ಷಯಮುಚ್ಯತೇ ॥ ೨ ॥**

---

### ನಲವತ್ತೆರಡನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಓ ಭರತವಂಶಜನಾದ ನೃಪೋತ್ತಮನೇ! ಮಾರ್ಗಶೀರ್ಷ ಶುಕ್ಲ ಷಷ್ಠೀ ತಿಥಿಯು ಪುಣ್ಯಪ್ರದವೂ, ಪಾಪನಾಶಕವೂ, ಕೃತಾರ್ಥತಾ ಸಂಪಾದಕವೂ, ಮಂಗಳಕರವೂ, ಶಾಂತಪ್ರದವೂ, ಸ್ಕಂದನ ಪ್ರೀತಿಗೆ ಪಾತ್ರವೂ ಆಗಿದೆ.

೨. ಕೃತ್ತಿಕಾಪುತ್ರನಾದ ಶ್ರೀ ಕುಮಾರಸ್ವಾಮಿಯು ಈ ಷಷ್ಠಿಯ ದಿನದಲ್ಲಿ ತಾರಕಾಸುರನನ್ನು ಕೊಂದು ಚಂದ್ರನಂತೆ ಪ್ರಕಾಶಮಾನನಾದ ಕಾರಣ ಆ ತಿಥಿಯು ಸ್ಕಂಧನ ಪ್ರೀತಿಗೆ ಪಾತ್ರವಾಗಿದೆ. ಆದುದರಿಂದ ಆ ದಿನದಲ್ಲಿ ಮಾಡಿದ ಸ್ನಾನ ದಾನಾದಿ ನಿಖಿಲ ಕರ್ಮಗಳೂ ಅಕ್ಷಯ ಫಲಪ್ರದಗಳಾಗುವುವು.

ಯಸ್ಯಾಂ ಪಶ್ಯಂತಿ ಗಾಂಗೇಯಂ ದಕ್ಷಿಣಾಪಥಮಾಶ್ರಿತಂ ।
ಬ್ರಹ್ಮಹತ್ಯಾದಿಪಾಪೈಸ್ತೇ ಮುಚ್ಯಂತೇ ನಾತ್ರ ಸಂಶಯಃ ॥ ೩ ॥

ತಸ್ಮಾದಸ್ಯಾಂ ಸೋಽಪವಾಸಃ ಕುಮಾರಂ ಸ್ವರ್ಣಸಂಭವಂ ।
ರಾಜತಂ ವಾ ಮಹಾರಾಜ ಮೃನ್ಮಯಂ ವಾಪಿ ಕಾರಯೇತ್ ॥ ೪ ॥

ಅಪರಾಹ್ಣೇ ತತಃ ಸ್ನಾತ್ವಾ ಸಮಾಚಮ್ಯ ಯತವ್ರತೀ ।
ಪದ್ಮಾಸನಸ್ಥೋ ಗಾಂಗೇಯಂ ಧ್ಯಾಯಂಸ್ತಿಷ್ಠೇತ್ಸಮಾಧಿನಾ ॥ ೫ ॥

ಬ್ರಾಹ್ಮಣಸ್ತು ತತೋ ವಿದ್ವಾನ್ಗೃಹೀತ್ವಾ ಕರಕಂ ನವಂ ।
ಪಾತಯೇತ್ತಸ್ಯ ಶಿರಸಿ ಧಾರಾಂ ವೈ ದಕ್ಷಿಣಾಮುಖಃ ॥ ೬ ॥

ಚಂದ್ರಮಂಡಲಭೂತಾನಾಂ ಭವಭೂತಿಪವಿತ್ರಿತಾ ।
ಗಂಗಾಕುಮಾರಧಾರೇಯಂ ಪಾತಿತಾ ತವ ಮಸ್ತಕೇ ॥ ೭ ॥

---

೩. ಆ ತಿಥಿಯಲ್ಲಿ ದಕ್ಷಿಣಾಪಥ ಕ್ಷೇತ್ರವಾಸಿಯಾದ ಕುಮಾರಸ್ವಾಮಿಯನ್ನು ದರ್ಶನಮಾಡಿದವರು ಬ್ರಹ್ಮಹತ್ಯಾದಿ ಘೋರ ಪಾಪಗಳಿಂದ ಮುಕ್ತರಾಗುತ್ತಾರೆ. ಈ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ.

೪. ಓ ಮಹಾರಾಜನೇ ! ಈ ಮಾರ್ಗಶೀರ್ಷಮಾಸದ ಷಷ್ಠಿ ಶುಕ್ಲಪಕ್ಷದಯಲ್ಲಿ ಉಪವಾಸವನ್ನಾಚರಿಸಿ ಭಂಗಾರದಿಂದಾಗಲಿ, ಬೆಳ್ಳಿಯಿಂದಾಗಲಿ, ಮಣ್ಣಿನಿಂದಾಗಲಿ ಶ್ರೀ ಷಣ್ಮುಖನ ವಿಗ್ರಹವನ್ನು ಮಾಡಿಸಬೇಕು.

೫. ಅನಂತರ ಆದಿನ ಅಪರಾಹ್ಣದಲ್ಲಿ ಸ್ನಾನಮಾಡಿ ಆಹ್ನಿಕಾದಿಗಳನ್ನು ಮಾಡಿ ಪ್ರಾಣಾಯಾಮ ಪೂರ್ವಕವಾಗಿ ಇಂದ್ರಿಯ ಸಂಯಮ ಮಾಡಿ ಪದ್ಮಾಸನವನ್ನು ಹಾಕಿಕೊಂಡು ಕುಳಿತು, ಏಕಾಗ್ರಚಿತ್ತತೆಯಿಂದ ಶ್ರೀ ಸ್ಕಂದನನ್ನು ಧ್ಯಾನಿಸಬೇಕು.

೬. ಅನಂತರ ಪಂಡಿತನಾದ ಬ್ರಾಹ್ಮಣನು ಹೊಸ ಕಮಂಡಲುವನ್ನು ತೆಗೆದುಕೊಂಡು ದಕ್ಷಿಣಾಭಿಮುಖವಾಗಿ ನಿಂತು ಆ ಕುಮಾರಸ್ವಾಮಿಯ ವಿಗ್ರಹದ ಮಸ್ತಕದ ಮೇಲೆ ಉದಕವನ್ನು ಸಂತತ ಧಾರೆಯಾಗಿ ಅಭಿಷೇಕಮಾಡಬೇಕು.

೭-೮. ಚಂದ್ರಮಂಡಲ ಭೂತಾನಾಂ ಭವಭೂತಿ ಪವಿತ್ರಿತಾ ।
ಗಂಗಾ ಕುಮಾರ ಧಾರೇಯಂ ಪಾತಿತಾ ತವ ಮಸ್ತಕೇ ॥

ಏವಂ ಸ್ನಾತ್ವಾ ಸಮಭ್ಯರ್ಚ್ಯ ಭಾಸ್ಕರಂ ಭುವನಾಧಿಪ ।
ಪುಷ್ಪಧೂಪಾದಿನಾ ಪಶ್ಚಾತ್ಪೂಜಯೇತ್ಕೃತ್ತಿಕಾಸುತಂ ॥ ೮ ॥

ದೇವಸೇನಾಪತೇ ಸ್ಕಂದ ಕಾರ್ತಿಕೇಯ ಭವೋದ್ಭವ ।
ಕುಮಾರ ಗುಹ ಗಾಂಗೇಯ ಶಕ್ತಿಹಸ್ತ ನಮೋಸ್ತು ತೇ ॥ ೯ ॥

ಏಭಿರ್ನಾಮಪದೈಃ ಪೂಜ್ಯ ನೈವೇದ್ಯಂ ವಿನಿವೇದಯೇತ್ ।
ಫಲಾನಿ ದಕ್ಷಿಣಾನ್ನಾನಿ ಚಂದನಂ ಮಲಯೋದ್ಭವಂ ॥ ೧೦ ॥

ಪಾರ್ಶ್ವಸ್ಥೌ ಪೂಜಯೇಚ್ಛಾಗಕುಕ್ಕುಟೌ ಸ್ವಾಮಿವಲ್ಲಭೌ ।
ಸಕಲಾಪಂ ಮಯೂರಂ ಚ ಪ್ರತ್ಯಕ್ಷಾಂ ಹಿಮಜಾಂ ತಥಾ ॥ ೧೧ ॥

---

ಎಂಬ ಮಂತ್ರೋಚ್ಚಾರಣೆಯಿಂದ ಅಭಿಷೇಕವನ್ನು ಮಾಡಿ ಸೂರ್ಯನನ್ನು ಪೂಜಿಸಿ ಅನಂತರ ಶ್ರೀ ಕೃತ್ತಿಕಾ ಪುತ್ರನಾದ ಕುಮಾರಸ್ವಾಮಿಗೂ ಪುಷ್ಪ ದೀಪ ಧೂಪಾದಿಗಳಿಂದ ಪೂಜೆಮಾಡಬೇಕು. ಓ ಸ್ಕಂಧನೇ ! ಚಂದ್ರನಂತೆ ಸ್ವಚ್ಛವೂ ಶ್ರೀ ಪರಮೇಶ್ವರನ ಶಿರಸ್ಸಿನಲ್ಲಿ ಬಿದ್ದು ಆ ಪರಮೇಶ್ವರನ ವಿಭೂತಿಗಳಿಂದ ಪವಿತ್ರವೂ ಆದ ಗಂಗಾಜಲಧಾರೆಯನ್ನು ನಿನ್ನ ಶಿರಸ್ಸಿನಲ್ಲಿ ಅಭಿಷೇಕಮಾಡುತ್ತೇನೆ ಎಂಬುದು ಈ ಮಂತ್ರದ ಅರ್ಥ.

೯. ದೇವಸೇನಾಪತಿ, ಸ್ಕಂಧ, ಕಾರ್ತಿಕೇಯ, ಭವೋದ್ಭವ, ಕುಮಾರ, ಗುಹ, ಗಾಂಗೇಯ, ಶಕ್ತಿಹಸ್ತ ಎಂಬ ಈ ಸ್ಕಂಧ ವಾಚಕಗಳಾದ ನಾಮಗಳ ಮುಂದೆ ನಮಃ ಶಬ್ದವನ್ನು ಸೇರಿಸಿ ದೇವಸೇನಾಪತಯೇ ನಮಃ ಇತ್ಯಾದಿ ಉಚ್ಚರಿಸಿ ಪೂಜೆ ಮಾಡಬೇಕು.

೧೦. ಈ ನಾಮ ಮಂತ್ರಗಳಿಂದ ಪೂಜೆ ಮಾಡಿದನಂತರ ಮಲಯ ಪರ್ವತದಲ್ಲಿ ಬೆಳೆದ ಶ್ರೀ ಗಂಧವನ್ನು ಹಚ್ಚಿದ ಫಲಗಳು, ಉತ್ತಮವಾದ ಅನ್ನ ಈ ನೈವೇದ್ಯಗಳನ್ನೂ ಸಮರ್ಪಿಸಬೇಕು.

೧೧. ಅನಂತರ ಆ ಕುಮಾರಸ್ವಾಮಿಯ ಪಕ್ಕದಲ್ಲಿ ಅವನ ಪ್ರೀತಿಗೆ ಪಾತ್ರರಾದ ಹೋತ, ಕೋಳಿ ಇವುಗಳನ್ನಿರಿಸಿ ಪೂಜೆ ಮಾಡಬೇಕು. ಹಾಗೆಯೇ ಪಕ್ಕದಲ್ಲಿ ಅವನ ವಾಹನವೆನಿಸಿ ಗರಿಗಳನ್ನು ಪಸರಿಸಿಕೊಂಡು ಅಲಂಕೃತವಾದ ನವಿಲನ್ನೂ, ಮತ್ತು ಸ್ಕಂದಮಾತೆಯಾದ ಪಾರ್ವತಿಯನ್ನೂ ಅರ್ಚಿಸಬೇಕು.

ಕೃತ್ತಿಕಾಃ ಷಟ್ ಕಂ ಪಾರ್ಶ್ವೇ ಸಂಪೂಜ್ಯ ಸ್ಕಂದವಲ್ಲಭಂ ।
ತೇನೈವ ನಾಮಭಿರ್ಹೋಮಃ ಕಾರ್ಯಃ ಸಾಜ್ಯೈಸ್ತಿಲೈಸ್ತಥಾ ॥ ೧೨ ॥

ಏವಂ ನಿರ್ವರ್ತ್ಯ ವಿಧಿವತ್ಫಲಮೇವಂ ಯುಧಿಷ್ಠಿರ ।
ಭಕ್ಷಯಿತ್ವಾ ಸ್ವಪೇದ್ಭೂಮೌ ಸ್ವಾಸ್ತೃತೇ ದರ್ಭಸಂಸ್ತರೇ ॥ ೧೩ ॥

ನಾಲಿಕೇರಂ ಮಾತುಲುಂಗಂ ನಾರಿಂಗಂ ಪನಸಂ ತಥಾ ।
ಜಂಬೀರಂ ದಾಡಿಮಂ ದ್ರಾಕ್ಷಾಂ ಹೃದ್ಯಾನ್ಯಾಮ್ರಫಲಾನಿ ಚ ॥ ೧೪ ॥

ಶ್ರೀಫಲಾಮಲಕಂ ತದ್ವತ್ತ್ರಪುಸಂ ಕದಲೀಫಲಂ ।
ಕ್ರಮೇಣ ಭಕ್ಷಯೇದ್ರಾಜನ್ಸಂಯತೋ ನಿಯತವ್ರತೀ ।
ಅಲಾಭೇ ಕಿಲ ಕಾಲೌಘ ಫಲಮದ್ಯಾದತಂದ್ರಿತಃ ॥ ೧೫ ॥

---

೧೨. ಮತ್ತು ಆ ಕುಮಾರಸ್ವಾಮಿಯ ಪಾರ್ಶ್ವದಲ್ಲಿ ಅವನ ಪ್ರೀತಿಗೆ ಪಾತ್ರರಾದ ಆರು ಕೃತ್ತಿಕೆಯರನ್ನು ಸ್ಥಾಪಿಸಿ ಅರ್ಚಿಸಬೇಕು. ಮತ್ತು ಹಿಂದೆ ಹೇಳಿದ ದೇವಸೇನಾಪತ್ಯಾದಿ ನಾಮಗಳಿಂದ ತುಪ್ಪ ಮತ್ತು ಎಳ್ಳು ಈ ಹೋಮ ದ್ರವ್ಯಗಳಿಂದ ಹೋಮ ಮಾಡಬೇಕು.

೧೩. ಅಯ್ಯಾ ಯುಧಿಷ್ಠಿರನೇ ! ಈರೀತಿ ವಿಧಿವತ್ತಾಗಿ ಪೂಜಾ ಹೋಮಾದಿಗಳನ್ನು ಮಾಡಿ ಆಯಾ ಮಾಸಕ್ಕೆ ನಿಯತವಾದ ಫಲಗಳನ್ನು ಭಕ್ಷಿಸಿ ನೆಲದಮೇಲೆ ದರ್ಭೆಗಳನ್ನು ಹಾಸಿಕೊಂಡು ಅದರಮೇಲೆ ಶಯನಮಾಡಬೇಕು.

೧೪-೧೫. ಈ ವ್ರತಾನುಷ್ಠಾನ ಮಾಡುವವನು ಮಾರ್ಗಶೀರ್ಷ ಮೊದಲ್ಗೊಂಡು ಹನ್ನೆರಡು ತಿಂಗಳುಗಳಲ್ಲಿ ವ್ರತಾನುಷ್ಠಾನ ದಿನಗಳಲ್ಲಿ ಕ್ರಮೇಣ ತೆಂಗಿನಕಾಯಿ, ಮಾದಲಫಲ, ಕಿತ್ತಳೆಹಣ್ಣು, ಹಲಸಿನಹಣ್ಣು, ನಿಂಬೆಹಣ್ಣು, ದಾಳಿಂಬೆ, ದ್ರಾಕ್ಷೆ, ಮತ್ತು ಮನೋಹರವಾದ ಮಾವಿನಹಣ್ಣು, ಬಿಲ್ವಫಲ, ನೆಲ್ಲಿಕಾಯಿ, ತ್ರಪುಸಫಲ, ಬಾಳೇಹಣ್ಣು ಇವುಗಳನ್ನು ಮಾಸಾನುಕ್ರಮದಿಂದ ಭಕ್ಷಣೆ ಮಾಡಿ ಜಿತೇಂದ್ರಿಯನಾಗಿರಬೇಕು. ಈ ಮೇಲೆ ಹೇಳಿದ ಹಣ್ಣುಗಳು ಆ ಪ್ರಾಂತದಲ್ಲಿ ಸಿಕ್ಕದಿರುವ ಪಕ್ಷದಲ್ಲಿ ತತ್ಕಾಲದಲ್ಲಿ ಸಿಕ್ಕುವ ಫಲಗಳನ್ನೇ ಭಕ್ಷಿಸಬಹುದು.

ಪ್ರತ್ಯಕ್ಷೋ ಹೇಮಘಟಿತಶ್ಛಾಗೋ ವಾ ಕುಕ್ಕುಟೋಽಥವಾ ।
ಪ್ರಾತರ್ದದ್ಯಾದ್ದ್ವಿಜಾಯೈತತ್ಸೇದಾನೀಃ ಪ್ರೀಯತಾಮಿತಿ ॥ ೧೬ ॥

ಸೇನಾನೀಃ ಭವಸಂಭೂತಃ ಕ್ರೌಂಚಾರಿಃ ಷಣ್ಮುಖೋ ಗುಹಃ ।
ಗಾಂಗೇಯಃ ಕಾರ್ತಿಕೇಯಶ್ಚ ಸ್ವಾಮೀ ಬಾಲಗ್ರಹಾಗ್ರಣೀಃ ॥ ೧೭ ॥

ಛಾಗಪ್ರಿಯಶ್ಶಕ್ತಿಧರೋ ದ್ವಾರೋ ದ್ವಾದಶಮಃ ಸ್ಮೃತಃ ।
ಪ್ರೀಯತಾಮಿತಿ ಸರ್ವೇಷು ಕ್ರಮಾನ್ಮಾಸೇಷು ಕೀರ್ತಯೇತ್ ॥ ೧೮ ॥

ಬ್ರಾಹ್ಮಣಾನ್ಭೋಜಯಿತ್ವಾದೌ ಪಶ್ಚಾದ್ಭುಂಜೀತ ವಾಗ್ಯತಃ ।
ಏವಂ ಸಂವತ್ಸರಸ್ಯಾಂತೇ ಕಾರ್ತಿಕೇ ಮಾಸಿ ಶೋಭನೇ ॥ ೧೯ ॥

೧೬. ಮರುದಿನ ಪ್ರಾತಃಕಾಲ ಪ್ರತ್ಯಕ್ಷವಾದ ಹೋತ ಅಥವಾ ಕೋಳಿ ಇವನ್ನಾಗಲಿ ಅಥವಾ ಭಂಗಾರದಿಂದ ಮಾಡಿಸಿದ ಹೋತ, ಕೋಳಿ ಇವುಗಳನ್ನಾಗಲಿ, "ಸೇನಾನೀಃ ಪ್ರೀಯತಾಂ'' (ಸ್ಕಂಧನು ಪ್ರೀತಿಯುತನಾಗಲಿ) ಎಂದು ಹೇಳಿ ಬ್ರಾಹ್ಮಣನಿಗೆ ದಾನ ಮಾಡಬೇಕು.

೧೭-೧೮. ಮತ್ತು ಹನ್ನೆರಡು ತಿಂಗಳುಗಳಲ್ಲಿಯೂ ಕ್ರಮವಾಗಿ ಸೇನಾನೀಃ, ಭವಸಂಭೂತಃ,ಕ್ರೌಂಚಾರಿಃ, ಷಣ್ಮುಖಃ, ಗುಹಃ, ಗಾಂಗೇಯಃ,ಕಾರ್ತಿಕೇಯಃ, ಕುಮಾರಸ್ವಾಮಿ, ಬಾಲಗ್ರಹಾಗ್ರಣೀ, ಛಾಗಪ್ರಿಯಃ, ಶಕ್ತಿಧರಃ ಮತ್ತು ಹನ್ನೆರಡನೆಯದಾದ ದ್ವಾರಃ ಎಂಬ ನಾಮಗಳ ಮುಂದೆ ಪ್ರೀಯತಾಂ ಎಂಬ ಕ್ರಿಯಾಪದವನ್ನು ಜೋಡಿಸಿ ಹೇಳಬೇಕು. ಮೊದಲನೆಯ ತಿಂಗಳಿನಲ್ಲಿ ಸೇನಾನಿಃ ಪ್ರೀಯತಾಂ ಎಂದು ಹೇಳಿ ಈ ವ್ರತವನ್ನು ಸಮರ್ಪಣ ಮಾಡಬೇಕು.

೧೯. ಪೂಜಾನಂತರದಲ್ಲಿ ಮೊದಲು ಬ್ರಾಹ್ಮಣ ಭೋಜನಮಾಡಿಸಿ ಅನಂತರ ತಾನು ಮೌನದಿಂದ ಭೋಜನ ಮಾಡಬೇಕು. ಈ ಕ್ರಮದಿಂದ ಮಾರ್ಗಶೀರ್ಷಮಾಸ ಮೊದಲ್ಗೊಂಡು ಒಂದು ವರ್ಷದವರೆಗೂ ವ್ರತಾಚರಣ ಮಾಡಬೇಕು.

ಕಾರ್ತಿಕೇಯಂ ಸಮಭ್ಯರ್ಚ್ಯ ವಾಸೋಭಿಃ ಭೂಷಣೈಸ್ಸಹ ।
ಗಾಂಗೇಯಃ ಕಾರ್ತಿಕೇಯಶ್ಚ ಸಕೃದೇವೈವಮಾಚರೇತ್ ॥ ೨೦ ॥

ಸಂವತ್ಸರವಿಧಿಂ ಕೃತ್ವಾ ಜಪಂ ಹೋಮಪುರಸ್ಕೃತಂ ।
ದದ್ಯಾದ್ವಿಪ್ರಾಯ ರಾಜೇಂದ್ರ ವಾಚಕಾಯ ವಿಶೇಷತಃ ॥ ೨೧ ॥

ಏತೇ ವಿಪ್ರಾಃ ಸ್ಮೃತಾ ದಿವ್ಯಾ ಭೌಮಾಸ್ತ್ವನ್ಯೇ ದ್ವಿಜಾತಯಃ ।
ಪಾಲಿತೇಽಸ್ಮಿನ್ವ್ರತೇ ಪಾರ್ಥ ತೀರ್ಣಃ ಸ್ಯಾದ್ಭವಸಾಗರಾತ್ ॥ ೨೨ ॥

ಏವಂ ಯಃ ಕುರುತೇ ಭಕ್ತ್ಯಾ ನರೋ ಯೋಷಿದಥಾಪಿ ವಾ ।
ಸ ಪ್ರಾಪ್ಯೇಹ ಶುಭಂ ಕಾಮಂ ಗಚ್ಛತೀಂದ್ರಸಲೋಕತಾಂ ॥ ೨೩ ॥

---

೨೦. ವರ್ಷದ ಕೊನೆಯಾದ ಕಾರ್ತಿಕಮಾಸದಲ್ಲಿ ವಸ್ತ್ರ ಭೂಷಣಾದಿಗಳ ಸಹಿತವಾಗಿ ಕಾರ್ತಿಕೇಯ, ಗಾಂಗೇಯ, ಇವೆರಡು ಮೂರ್ತಿ ನಾಮವನ್ನೂ ಸೇರಿಸಿ ಒಂದೇ ಸಲ ಅರ್ಚಿಸಿ ಸಹಾನುಷ್ಠಾನ ಮಾಡಬೇಕು.

೨೧. ಎಲೈ ರಾಜೇಂದ್ರನೇ ! ಈರೀತಿ ಒಂದುವರ್ಷವೂ ಕ್ರಮವಾಗಿ ಜಪ ಹೋಮ ಪುರಸ್ಸರವಾಗಿ ವ್ರತವನ್ನು ಆಚರಿಸಿ ವಿಶೇಷತಃ ವಾಚಕನಾದ ಬ್ರಾಹ್ಮಣನಿಗೆ ಆ ಪ್ರತಿಮಾದಿಗಳನ್ನು ದಾನವಾಗಿ ಕೊಡಬೇಕು.

೨೨. ಈ ವ್ರತಾನುಷ್ಠಾನಮಾಡಿದ ದಾತೃವಿನ ದಾನವನ್ನು ಪ್ರತಿಗ್ರಹಿಸುವುದಕ್ಕೆ ವಾಚಕಬ್ರಾಹ್ಮಣರೂ, ದಿವ್ಯಬ್ರಾಹ್ಮಣರೂ, ಭೌಮಬ್ರಾಹ್ಮಣರೂ ಅರ್ಹರೆಂದು ಹೇಳಲ್ಪಟ್ಟಿದೆ. ಪುರಾಣವಾಚಕರಾದ ಬ್ರಾಹ್ಮಣರು ಪ್ರತಿಗ್ರಹಕ್ಕೆ ಉತ್ತಮ. ಎಲೈ-ಕುಂತೀಪುತ್ರನೇ ! ಈ ವ್ರತವನ್ನಾಚರಿಸಿದವನು ಸಂಸಾರ ಸಾಗರದಿಂದ ಪಾರಾಗುವನು.

೨೩. ಈ ಹಿಂದೆ ಹೇಳಿದ ಪ್ರಕಾರ ಈ ವ್ರತವನ್ನು ಗಂಡಸಾಗಲಿ, ಹೆಂಗಸಾಗಲಿ ಭಕ್ತಿಪೂರ್ವಕವಾಗಿ ಮಾಡಿದರೆ ಅವರು ಲೋಕದಲ್ಲಿ ಬೇಕಾದ ಇಷ್ಟಾರ್ಥಗಳನ್ನು ಪಡೆದು ದೇಹಾಂತದಲ್ಲಿ ಇಂದ್ರಲೋಕವನ್ನು ಹೊಂದುವರು.

ಸದೈವ ಪೂಜನೀಯಸ್ತು ಕಾರ್ತಿಕೇಯೋ ಮಹೀಪತೇ ।
ಕಾರ್ತಿಕೇಯಾದೃತೇ ನಾನ್ಯೋ ರಾಜ್ಞಾಂ ಪೂಜ್ಯೋ ಪ್ರವಕ್ಷ್ಯತೇ ॥ ೨೪ ॥

ಸಂಗ್ರಾಮಂ ಗಚ್ಛಮಾನೋ ಯಃ ಪೂಜಯೇತ್ಕೃತ್ತಿಕಾಸುತಂ ।
ಸ ಸರ್ವಂ ಜಯತೇ ವೀರೋ ಯಥೇಂದ್ರೋ ದಾನವಾನ್ರಣೇ ॥ ೨೫ ॥

ತಸ್ಮಾತ್ಸರ್ವಪ್ರಯತ್ನೇನ ಪೂಜಯೇಚ್ಛಂಕರಾತ್ಮಜಂ ।
ಪೂಜ್ಯಮಾನಸ್ತು ಸದ್ಭಕ್ತ್ಯಾ ಸರ್ವಾನ್ಕಾಮಾನ್ಪ್ರಯಚ್ಛತಿ ॥ ೨೬ ॥

ಯಸ್ತು ಷಷ್ಠ್ಯಾಂ ನರೋ ನಕ್ತಂ ಕುರ್ಯಾದ್ಭಾರತಸತ್ತಮ ।
ಸರ್ವಪಾಪವಿನಿರ್ಮುಕ್ತೋ ಗಾಂಗೇಯಸ್ಯ ಸದೋ ವ್ರಜೇತ್ ॥ ೨೭ ॥

---

೨೪. ಎಲೈ ಭೂಪತಿಯೇ! ಕುಮಾರಸ್ವಾಮಿಯನ್ನು ನಿರಂತರವಾಗಿ ಭಕ್ತಿಯಿಂದ ಅರ್ಚಿಸಬೇಕು. ರಾಜರಿಗೆ ಕುಮಾರಸ್ವಾಮಿಯನ್ನು ಬಿಟ್ಟು ಇತರ ಪೂಜ್ಯದೇವತೆಯೇ ಇಲ್ಲವೆಂದು ಶಾಸ್ತ್ರಗಳಲ್ಲಿ ಉಕ್ತವಾಗಿದೆ.

೨೫. ಯುದ್ಧಕ್ಕೆ ಹೋಗುವ ವೀರಕ್ಷತ್ರಿಯನು ಮೊದಲು ಕೃತ್ತಿಕಾ ಪುತ್ರನಾದ ಶ್ರೀ ಷಣ್ಮುಖನನ್ನು ಪೂಜಿಸಿ, ಜೈತ್ರಯಾತ್ರೆಗೆ ಹೊರಟರೆ; ಇಂದ್ರನು ಯುದ್ಧದಲ್ಲಿ ಸಮಸ್ತ ದಾನವರನ್ನೂ ಗೆದ್ದು ಜಯಶಾಲಿಯಾದಂತೆ ಅವನೂ ಎಲ್ಲಾ ಶತ್ರುಗಳನ್ನೂ ಜಯಿಸುವನು.

೨೬. ಆದುದರಿಂದ ಸಮಸ್ತ ಪ್ರಯತ್ನಗಳಿಂದಲೂ ಶ್ರೀ ಪರಮೇಶ್ವರ ಪುತ್ರರಾದ ಸ್ಕಂದನನ್ನು ಮೊದಲು ಅರ್ಚಿಸಬೇಕು. ಭಕ್ತಿಯಿಂದ ಪೂಜಿತನಾದ ಅವನು ತನ್ನ ಭಕ್ತರ ಸರ್ವಾಭೀಷ್ಟಗಳನ್ನೂ ನೆರವೇರಿಸುತ್ತಾನೆ.

೨೭. ಅಯ್ಯಾ ಭರತವಂಶಜನೇ! ಯಾವ ಮನುಷ್ಯನು ಷಷ್ಠೀತಿಥಿಯಲ್ಲಿ ನಕ್ತಭೋಜನವನ್ನು ಮಾಡುವನೋ, ಮತ್ತು ಯಾವಾತನು ಆದಿನ ದಾನ ಧರ್ಮಾದಿಗಳನ್ನು ಮಾಡುವನೋ, ಆತನು ಸಮಸ್ತ ಪಾಪವಿನಿರ್ಮುಕ್ತನಾಗಿ ಷಣ್ಮುಖನ ಸದಸ್ಸಿಗೆ (ಸಭೆಗೆ) ಹೋಗುತ್ತಾನೆ.

ಶ್ರುತ್ವೈವಂ ದಕ್ಷಿಣಾಂ ಮಾಸಂ ಗತ್ವಾ ಶ್ರದ್ಧಾಸಮನ್ವಿತಃ ।
ಪೂಜಯೇದ್ದೇವದೇವೇಶಂ ಸ ಗಚ್ಛೇಚ್ಛಿವಮಂದಿರಂ ॥ ೨೮ ॥

ಸ್ಕಂದಂ ಗುಹಂ ಶರವಣೋದ್ಭವಮಾದಿದೇವಂ ।
ಶಂಭೋಃ ಸುತಂ ಸುದಯಿತಂ ಗಿರಿರಾಜಪುತ್ರ್ಯಾಃ ।
ಸ್ವರ್ಗೇ ನಿರರ್ಗಲಸುಖಾನ್ಯನುಭೂಯ ತೇನ ।
ಸೇನಾಪತಿರ್ಭವತಿ ರಾಜ್ಯಧುರಂಧರೋಽಸೌ ॥ ೨೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ತಾರಕವಧಕಾರ್ತಿಕೇಯ ಪೂಜಾ ಷಷ್ಠೀ ವ್ರತವರ್ಣನಂ ನಾಮ ದ್ವಿಚತ್ವಾರಿಂಶೋಧ್ಯಾಯಃ



---

೨೮. ಈ ವಿಚಾರವನ್ನರಿತು ದಕ್ಷಿಣಾಪಥದಲ್ಲಿರುವ ಕುಮಾರಸ್ವಾಮಿಯ ಕ್ಷೇತ್ರಕ್ಕೆ ಹೋಗಿ ಪ್ರತಿ ಮಾಸದಲ್ಲೂ ದೇವದೇವೋತ್ತಮನಾದ ಕುಮಾರಸ್ವಾಮಿಯನ್ನು ಶ್ರದ್ಧಾಯುಕ್ತನಾಗಿ ಅರ್ಚಿಸಿದವನು ನಿಸ್ಸಂದೇಹವಾಗಿ ಶಿವಲೋಕಕ್ಕೆ ಹೋಗುತ್ತಾನೆ.

೨೯. ಸ್ಕಂದ, ಗುಹ, ಶರವಣಭವ, ಆದಿದೇವ, ಶಂಭುಸುತ ಇತ್ಯಾದಿ ನಾಮಗಳಿಂದ ಹೊಗಳಿಸಿಕೊಳ್ಳುವವನೂ, ಪಾರ್ವತಿಯ ಪ್ರೇಮಪುತ್ರನೂ ಆಗಿರುವ ಕುಮಾರಸ್ವಾಮಿಯನ್ನು ಪೂಜಿಸಿದವನು, ಆ ಪುಣ್ಯದಿಂದ ಸ್ವರ್ಗದಲ್ಲಿ ನಿರರ್ಗಳವಾಗಿ ಸುಖವನ್ನನುಭವಿಸಿ, ಈ ಲೋಕದಲ್ಲಿ ಜನಿಸಿದ ಮೇಲೆ ರಾಜ್ಯಭಾರ ನಿರ್ವಾಹಕನಾದ ರಾಜನೋ ಮಹಾ ಸೇನಾಧಿಪತಿಯೋ ಆಗುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ತಾರಕವಧ ಕಾರ್ತಿಕೇಯ ಪೂಜಾ ಷಷ್ಠೀವ್ರತ ವರ್ಣನೆಯೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು.

ಷಷ್ಠೀಕಲ್ಪ ಸಮಾಪ್ತವಾದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಿಚತ್ವಾರಿಂಶತ್ತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ಸಪ್ತಮೀ ಚ ಯದಾ ದೇವ ಕೇನ ಕಾಲೇನ ಪೂಜ್ಯತೇ ।**
**ಕಿಂ ಫಲಾ ನಿಯಮಃ ಕಶ್ಚಿದ್ವದ ದೇವಕಿನಂದನ ॥ ೧ ॥**

॥ ಶ್ರೀ ಕೃಷ್ಣ ಉವಾಚ ॥

**ಶುಕ್ಲಪಕ್ಷೇ ತು ಸಪ್ತಮ್ಯಾಂ ಯದಾದಿತ್ಯದಿನಂ ಭವೇತ್ ।**
**ಸಪ್ತಮೀ ವಿಜಯಾ ನಾಮ ತತ್ರ ದತ್ತಂ ಮಹಾಫಲಂ ॥ ೨ ॥**

**ಸ್ನಾನಂ ದಾನಂ ಜಪೋ ಹೋಮ ಉಪವಾಸಸ್ತಥೈವ ಚ ।**
**ಸರ್ವಂ ವಿಜಯಸಪ್ತಮ್ಯಾಂ ಮಹಾಪಾತಕನಾಶನಂ ॥ ೩ ॥**

---

## ನಲವತ್ತಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—" ಎಲೈ ದೇವಕೀಪುತ್ರನೇ ! ಯಾವ ಮಾಸದಲ್ಲಿ ಯಾವ ಸಪ್ತಮೀತಿಥಿಯಲ್ಲಿ ಯಾರ ಪೂಜೆಮಾಡಿದರೆ ಏನು ಫಲ ವಾಗುತ್ತದೆ ? ಅವರ ನಿಯಮವಿಶೇಷವನ್ನು ಹೇಳು " ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಯಾವಾಗ ಶುಕ್ಲಪಕ್ಷದ ಸಪ್ತಮೀ ತಿಥಿಯಲ್ಲಿ ಭಾನುವಾರ ಸೇರಿ ಬರುವುದೋ ಅಂತಹ ಸಪ್ತಮೀ ತಿಥಿಗೆ " ವಿಜಯಾ " ಎಂದು ಹೆಸರು. ಆ ತಿಥಿಯಲ್ಲಿ ಮಾಡಿದ ದಾನವು ಮಹಾಫಲದಾಯಕವಾಗುವುದು.

೩. ವಿಜಯಸಪ್ತಮಿಯಲ್ಲಾಚರಿಸಿದ ಸ್ನಾನ, ದಾನ, ಜಪ, ಹೋಮ, ಉಪವಾಸ ಇವೆಲ್ಲವೂ ಮಹಾಪಾತಕಗಳನ್ನೂ ಸಹ ನಾಶಮಾಡುವುದು.

ಪ್ರದಕ್ಷಿಣಾಂ ಯಃ ಕುರುತೇ ಫಲೈಃ ಪುಷ್ಪೈರ್ದಿವಾಕರಂ ।
ಸ ಸರ್ವಗುಣಸಂಪನ್ನಂ ಪುತ್ರಂ ಪ್ರಾಪ್ನೋತ್ಯನುತ್ತಮಂ ॥ ೪ ॥

ಪ್ರಥಮಾ ನಾಲಿಕೇರೈಸ್ತು ದ್ವಿತೀಯಾ ರಕ್ತಸಾಗರೈಃ ।
ತೃತೀಯಾ ಮಾತುಲುಂಗೈಶ್ಚ ಚತುರ್ಥೀ ಕದಲೀಫಲೈಃ ॥ ೫ ॥

ಪಂಚಮೀ ವರಕೂಷ್ಮಾಂಡೈಃ ಷಷ್ಠೀ ಪಕ್ವೈಸ್ತು ತೈಂದುಕೈಃ ।
ವೃಂತಾಕೈಃ ಸಪ್ತಮೀ ದೇಯಾ ಅಷ್ಟೋತ್ತರಶತೇನ ಚ ॥ ೬ ॥

---

೪. ಯಾವ ಪುರುಷನು ಆ ವಿಜಯಸಪ್ತಮಿಯಲ್ಲಿ ಸೂರ್ಯನನ್ನು ರಕ್ತ ಪುಷ್ಪಾದಿಗಳಿಂದ ಅರ್ಚಿಸಿ, ಫಲಗಳನ್ನು ಸಮರ್ಪಿಸಿ ಪ್ರದಕ್ಷಿಣೆ ನಮಸ್ಕಾರ ಮಾಡು ವನೋ ಅಂತಹವನಿಗೆ ಸರ್ವಗುಣಸಂಪನ್ನನೂ ಸರ್ವೋತ್ತಮನೂ ಆದ ಸತ್ಪುತ್ರನ ಲಾಭವು ಆಗುವುದು.

೫. ಏಳು ವಿಜಯಸಪ್ತಮೀ ತಿಥಿಗಳಲ್ಲಿ ಈರೀತಿ ಸೂರ್ಯಾರಾಧನ ಮಾಡಿ ಅರ್ಚಿಸಿದ ಸೂರ್ಯಮಂಡಲಕ್ಕೆ ಪ್ರದಕ್ಷಿಣೆನಮಸ್ಕಾರ ಮಾಡಬೇಕು. ಒಂದನೆಯ ವಿಜಯಸಪ್ತಮಿಯ ಆದಿತ್ಯ ಪ್ರದಕ್ಷಿಣಕಾಲದಲ್ಲಿ ಒಂದೊಂದು ಪ್ರದಕ್ಷಿಣೆಗೆ ಒಂದೊಂದರಂತೆ ನೂರೆಂಟು ತೆಂಗಿನಕಾಯಿಗಳನ್ನು ಅರ್ಪಿಸಿ ಪ್ರದಕ್ಷಿಣಮಾಡಬೇಕು. ಎರಡನೇ ವಿಜಯಸಪ್ತಮಿಯ ಸೂರ್ಯಪ್ರದಕ್ಷಿಣೆಯ ಕಾಲದಲ್ಲಿ ಒಂದೊಂದುಸಲಕ್ಕೆ ಒಂದೊಂದರಂತೆ ನೂರೆಂಟು ರಕ್ತವರ್ಣದ ಪುಂಠಿ ಯನ್ನು ಸಮರ್ಪಿಸಬೇಕು. ಮೂರನೆಯಸಲದ ವ್ರತದಲ್ಲಿ ಪ್ರದಕ್ಷಿಣೆಗೆ ಒಂದೊಂದ ರಂತೆ ನೂರೆಂಟು ಮಾದಲ ಫಲಗಳನ್ನು ಸಮರ್ಪಣಮಾಡಬೇಕು. ನಾಲ್ಕನೆಯ ಸಲದ ವ್ರತವಲ್ಲಿ ಪೂರ್ವೋಕ್ತರೀತಿ ನೂರೆಂಟು ಬಾಳೇಹಣ್ಣುಗಳನ್ನು ಅರ್ಪಿಸಿ ಪ್ರದಕ್ಷಿಣೆಯನ್ನಾಚರಿಸಬೇಕು.

೬. ಐದನೆಯ ಆವೃತ್ತಿಯ ವ್ರತದಲ್ಲಿ ನೂರೆಂಟು ಉತ್ತಮವಾದ ಬೂದಗುಂಬಳಕಾಯಿಗಳನ್ನು ಉಪಯೋಗಿಸಬೇಕು. ಆರನೆಯ ಆವೃತ್ತಿಯಲ್ಲಿ ನೂರೆಂಟು ಪಕ್ವವಾದ ತಿಂದುಕ (ತೂಬರ) ಫಲಗಳನ್ನರ್ಪಿಸಿ ಆಚರಿಸಬೇಕು. ಕೊನೆಯದಾದ ಏಳನೆಯ ಅವೃತ್ತಿಯಲ್ಲಿ ನೂರೆಂಟು ಬದನೆಯಕಾಯಿಗಳನ್ನು ಸಮರ್ಪಿಸಬೇಕು.

ಮೌಕ್ತಿಕೈಃ ಪದ್ಮರಾಗೈಶ್ಚ ನೀಲೈಃ ಕರ್ಕೇತನೈಸ್ತಥಾ ।
ಗೋಮೇದೈರ್ವಜ್ರವೈಡೂರ್ಯೈಃ ಶತೇನಾಷ್ಟಾಧಿಕೇನ ತು ॥ ೭ ॥

ಅಕ್ಷೋಟೈರ್ಬದರೈರ್ಬಿಲ್ವೈಃ ಕರಮರ್ದೈಃ ಸಬರ್ಬರೈಃ ।
ಆಮ್ರಾಮ್ರಾತಕಜಂಬೀರೈರ್ಜಂಬೂಕರ್ಕೋಟಿಕಾಫಲೈಃ ॥ ೮ ॥

ಪುಷ್ಪೈರ್ಧೂಪೈಃ ಫಲೈಃ ಪತ್ರೈರ್ಮೋದಕೈರ್ಗುಣಕೈಃ ಶುಭೈಃ ।
ಏಭಿರ್ವಿಜಯಸಪ್ತಮ್ಯಾಂ ಭಾನೋಃ ಕುರ್ಯಾತ್ಪ್ರದಕ್ಷಿಣಾಂ ॥ ೯ ॥

ಅನ್ಯೈಃ ಫಲೈಶ್ಚ ಕಾಮ್ಯೈಶ್ಚ ಇಕ್ಷುನೈರ್ಗ್ರಂಥಿವರ್ಜಿತೈಃ ।
ರವೇಃ ಪ್ರದಕ್ಷಿಣಾ ದೇಯಾ ಫಲೇನ ಫಲಮಾದಿಶೇತ್ ॥ ೧೦ ॥

ನ ವಿಶೇನ್ನ ಚ ಸಂಜಲ್ಪೇನ್ನ ಚ ಕೈಶ್ಚಿದ್ವದೇದಪಿ ।
ಏಕಚಿತ್ತತಯಾ ಭಾನೋಶ್ಚಿಂತನಾಯ ಪ್ರಯಚ್ಛತಿ ॥ ೧೧ ॥

---

೭. ಮುತ್ತು, ಪದ್ಮರಾಗ, ನೀಲಮಣಿ, ಕರ್ಕೇತನಿ, ಗೋಮೇದಕ, ವಜ್ರ, ವೈಡೂರ್ಯ ಇವುಗಳಲ್ಲಿ ಪ್ರತಿಯೊಂದನ್ನೂ ನೂರೆಂಟರಂತೆ ಏಳು ಸಪ್ತಮಿಗಳಲ್ಲೂ ಸಮರ್ಪಿಸಬೇಕು.

೮. ಮತ್ತು ಅಕ್ರೋಟಫಲ, ಎಗಚೀಹಣ್ಣು, ಬಿಲ್ವಫಲ, ಕಮರಿಕೆಹಣ್ಣು, ರಂಗಿಹಣ್ಣು, ಮಾವಿನಹಣ್ಣು, ಅಮಟೇಹಣ್ಣು, ನಿಂಬೇಹಣ್ಣು, ನೇರಿಲೆಹಣ್ಣು, ಕರ್ಕೋಟಿಕಾಫಲ ಇವುಗಳನ್ನೂ.

೯. ಪುಷ್ಪ, ದೀಪ, ಫಲ, ಪತ್ರೆ ಮತ್ತು ಶುಭಕರವಾದ ಮೋದಕ ಈ ಎಲ್ಲಾ ಪದಾರ್ಥಗಳನ್ನೂ ವಿಜಯಸಪ್ತಮಿಯ ದಿನ ಸೂರ್ಯಪ್ರದಕ್ಷಿಣೆಯ ಕಾಲದಲ್ಲಿ ಸಮರ್ಪಿಸುತ್ತಾ ಪ್ರದಕ್ಷಿಣೆಮಾಡಬೇಕು.

೧೦. ಇನ್ನೂ ಇತರ ಮನೋಹರವಾದ ಫಲಸಮರ್ಪಣಪೂರ್ವಕ ಆದಿತ್ಯ ಪ್ರದಕ್ಷಿಣೆ ಮಾಡಬಹುದು. ಗಿಣ್ಣುಗಳನ್ನು ತೆಗೆದಿರುವ ಕಬ್ಬಿನ ಕೋಲುಗಳನ್ನು ಸಮರ್ಪಿಸಿ ಪ್ರದಕ್ಷಿಣೆಮಾಡಬಹುದು. ಪ್ರದಕ್ಷಿಣೆಯ ವೇಳೆಯಲ್ಲಿ ಫಲಸಮರ್ಪಣ ದಿಂದಲೇ ಫಲ ಪ್ರಾಪ್ತಿಯಾಗುತ್ತದೆ.

೧೧. ಏಕಾಗ್ರತೆಯಿಂದ ಶ್ರೀ ಆದಿತ್ಯನನ್ನು ಪ್ರದಕ್ಷಿಣೆಮಾಡುವ ಕಾಲ್ಯದ ಮಧ್ಯೆಯಾವ ಜನಸಮುದಾಯದಲ್ಲೂ ಪ್ರವೇಶಿಸಬಾರದು. ಮತ್ತು ನಿರರ್ಥಕವಾದ

ವಸೋರ್ಧಾರಾ ಪ್ರದಾತವ್ಯಾ ಭಾನೋರ್ಗವ್ಯೇನ ಸರ್ಪಿಷಾ ।
ಚಂದ್ರಾತಪತ್ರಂ ಬಧ್ನೀಯಾಜ್ಜಯಂ ಕಿಂಕಿಣಿಕಾಯುತಂ ॥ ೧೨ ॥

ಕುಂಕುಮೇನ ಸಮಾಲಭ್ಯ ಪುಷ್ಪಧೂಪೈಶ್ಚ ಪೂಜಯೇತ್ ।
ಶುಭಂ ನಿವೇದ್ಯ ನೈವೇದ್ಯಂ ತತಃ ಪಶ್ಚಾತ್ಕ್ಷಮಾಪಯೇತ್ ॥ ೧೩ ॥

ಭಾನೋ ಭಾಸ್ಕರ ಮಾರ್ತಣ್ಡ ಚಂಡರಶ್ಮೇ ದಿವಾಕರ ।
ಆರೋಗ್ಯಮಾಯುರ್ವಿಜಯಂ ಪುತ್ರಂ ದೇಹಿ ನಮೋಽಸ್ತುತೇ ॥ ೧೪ ॥

ಉಪವಾಸೇನ ನಕ್ತೇನ ತಥೈವಾಯಾಚಿತೇನ ಚ ।
ಕೃತಾ ನಿಯಮಯುಕ್ತೇನ ಯಾತ್ವಿಯಂ ಜಯಸಪ್ತಮೀ ॥ ೧೫ ॥

---

ಮಾತುಗಳನ್ನಾಡಬಾರದು. ಯಾರೊಡನೆಯೂ ಸಂಭಾಷಿಸಬಾರದು. ಈರೀತಿ ಸ್ಥಿರಮನಸ್ಸಿನಿಂದ ಸೂರ್ಯಾರಾಧನ ಮಾಡಿದವನಿಗೆ ಸೂರ್ಯನು ಫಲಕೊಡುತ್ತಾನೆ.

೧೨. ಬಳಿಕ ಸೂರ್ಯನಿಗೆ ಹಸುವಿನ ತುಪ್ಪದಿಂದ ವಸುಧಾರಾಭಿಷೇಕವನ್ನು ಮಾಡಬೇಕು. ಕಿರುಗೆಜ್ಜೆಗಳಿಂದ ಸಹಿತವಾದ ಚಂದ್ರಾತಪತ್ರ (ಶ್ವೇತ ಛತ್ರ) ವನ್ನು ಸಮರ್ಪಿಸಬೇಕು.

೧೩. ಮತ್ತು ಕುಂಕುಮಾರ್ಚನೆಮಾಡಿ ಪುಷ್ಪ ಧೂಪಾದಿಗಳಿಂದ ಅರ್ಚಿಸಬೇಕು. ಶುಭಕರವಾದ ನೈವೇದ್ಯವನ್ನು ಸಮರ್ಪಿಸಿದನಂತರ ಮುಂದೆ ಹೇಳುವ ಮಂತ್ರದಿಂದ ಕ್ಷಮಾ ಪ್ರಾರ್ಥನೆಯನ್ನು ಮಾಡಬೇಕು.

೧೪. ಭಾನೋ ಭಾಸ್ಕರ ಮಾರ್ತಂಡ ಚಂಡರಶ್ಮೇ ದಿವಾಕರ ।
ಆರೋಗ್ಯ ಮಾಯುರ್ವಿಜಯಂ ಪುತ್ರಂ ದೇಹಿ ನಮೋಸ್ತುತೇ ॥

(ಪ್ರಚಂಡ ರಶ್ಮಿಗಳುಳ್ಳ ಸೂರ್ಯನೇ ! ನೀನು ನನಗೆ ಆರೋಗ್ಯ, ಆಯುಸ್ಸು, ವಿಜಯ ಮತ್ತು ಸುಪುತ್ರರು ಈ ಫಲಗಳನ್ನು ದಯಪಾಲಿಸು, ಅಂಥ ನಿನಗೆ ನಮಸ್ಕಾರ ಎಂದು ಪ್ರಾರ್ಥನಾ ಮಂತ್ರದ ಅರ್ಥ).

೧೫. ಪೂರ್ವದಿನದಲ್ಲಿ ನಕ್ತಭೋಜನವನ್ನು ಮಾಡಿ, ಆ ವಿಜಯ ಸಪ್ತಮಿ ತಿಥಿಯಲ್ಲಿ ಉಪವಾಸಪೂರ್ವಕವಾಗಿ, ಅಯಾಚಿತವಾಗಿ ಒದಗಿದ ಸಂಭಾರಗಳಿಂದ ನಿಯಮಪೂರ್ವಕವಾಗಿ ಈ ವ್ರತವನ್ನು ಆಚರಿಸಬೇಕು.

**ರೋಗೀ ವಿಮುಚ್ಯತೇ ರೋಗಾದ್ದರಿದ್ರಃ ಶ್ರಿಯಮಾಪ್ನುಯಾತ್ ।**
**ಅಪುತ್ರೋ ಲಭತೇ ಪುತ್ರಂ ವಿದ್ಯಾ ವಿದ್ಯಾರ್ಥಿನೋ ಭವೇತ್ ॥ ೧೬ ॥**

**ಶುಕ್ಲಪಕ್ಷೇ ಯದಾ ಪಾರ್ಥ ಸಾದಿತ್ಯಸಪ್ತಮೀ ।**
**ತದಾ ನಕ್ತೇನ ಮುದ್ಗಾಶೀ ಕ್ಷಪಯೇತ್ಸಪ್ತ ಸಪ್ತಮೀ ಭವೇತ್ ॥ ೧೭ ॥**

**ಭೂಮೌ ಪಲಾಶಪತ್ರೇಷು ಸ್ನಾತ್ವಾ ಹುತ್ವಾ ಯಥಾವಿಧಿ ।**
**ಸಮಾಪ್ತೇ ತು ವ್ರತೇ ದದ್ಯಾತ್ಸೌವರ್ಣಂ ಮುದ್ಗಮಿಶ್ರಿತಂ ॥ ೧೮ ॥**

**ಮುದ್ಗಂ ಶ್ರೇಷ್ಠಾಯ ವಿಪ್ರಾಯ ವಾಚಕಾಯ ವಿಶೇಷತಃ ।**
**ಸಪ್ತಮ್ಯಾಂ ಸಪ್ತಿಸಂಯುಕ್ತಆದಿತ್ಯೇನ ನರೋತ್ತಮ ॥ ೧೯ ॥**

---

೧೬. ಹೀಗೆ ಮಾಡಿದರೆ ರೋಗಿಗೆ ರೋಗನಿವಾರಣೆಯಾಗುತ್ತದೆ. ಬಡವನು ಧನಿಕನಾಗುತ್ತಾನೆ. ಅಪುತ್ರವಂತನು ಪುತ್ರವಂತನಾಗುತ್ತಾನೆ. ವಿದ್ಯಾರ್ಥಿಗೆ ವಿದ್ಯಾಲಾಭವಾಗಿ ಪೋಲ್ಮೆಯುಂಟಾಗುವುದು.

೧೭. ಅಯ್ಯಾ ಧರ್ಮಜನೇ! ಯಾವಾಗ ಶುಕ್ಲಪಕ್ಷದ ಸಪ್ತಮೀ ತಿಥಿಯಲ್ಲಿ ಭಾನುವಾರವು ಕೂಡಿ ಬರುವುದೋ ಆಗ ನೆನೆಸಿದ ಹೆಸರು ಕಾಳನ್ನು (ಮುದ್ಗ) ರಾತ್ರಿಯಲ್ಲಿ ಸೇವನೆಮಾಡಿ ಅಂದು ಮೊದಲ್ಗೊಂಡು ಏಳು ಸಪ್ತಮೀ ಭಾನುವಾರಗಳಲ್ಲಿ ಈ ವ್ರತವನ್ನಾಚರಿಸಬೇಕು.

೧೮-೧೯. ಎಲೈ ರಾಜನೇ! ಆದಿನ ರಾತ್ರಿ ಭೂಮಿಯ ಮೇಲೆ ಪಲಾಶ ಪತ್ರಗಳನ್ನು ಪ್ರಸರಿಸಿ ಅದರ ಮೇಲೆ ಶಯನಮಾಡಬೇಕು. ಸ್ನಾನಮಾಡಿ ಶಾಸ್ತ್ರೋಕ್ತ ರೀತಿಯಲ್ಲಿ ಹೋಮ ಮಾಡಬೇಕು. ವ್ರತವು ಸಮಾಪ್ತಿಯಾಗುವ ಸಮಯದಲ್ಲಿ ಭಂಗಾರದ ಹೆಸರುಕಾಳುಗಳಿಂದಲೂ, ಸುವರ್ಣದ ಕುದುರೆ ಗಳಿಂದಲೂ ಸಹಿತವಾದ ಸೂರ್ಯಪ್ರತಿಮೆಯನ್ನು, ಆಚಾರಶೀಲನೂ, ಸತ್ಪಾತ್ರನೂ ಎನಿಸಿದ ಬ್ರಾಹ್ಮಣನಿಗಾಗಲಿ, ವಿಶೇಷತಃ ಪುರಾಣವಾಚಕನಾದ ಬ್ರಾಹ್ಮಣನಿ ಗಾಗಲಿ ದಾನ ಮಾಡಬೇಕು.

ಉಪ್ರೋಷ್ಯ ವಿಧಿನಾನೇನ ಮಂತ್ರಪ್ರಾಶನಪೂಜನ್ಯೈಃ ।
ಷಡಕ್ಷರೇಣ ಮಂತ್ರೇಣ ಸರ್ವಂ ಕಾರ್ಯಂ ವಿಜಾನತಾ ॥ ೨೦ ॥

ಅರ್ಚನಂ ವಹ್ನಿಕಾರ್ಯಂ ಚ ಶತಮಷ್ಟೋತ್ತರಂ ನರಃ ।
ಸಮಾಪ್ತೇ ತು ವ್ರತೇ ಪಶ್ಚಾತ್ಸುವರ್ಣೇನ ಘಟಾರ್ಪಿತಂ ॥ ೨೧ ॥

ಸೌವರ್ಣಂ ಭಾಸ್ಕರಂ ಪಾರ್ಥ ರುಕ್ಮಪಾತ್ರಗತಂ ಶುಭಂ ।
ರಕ್ತಾಂಬರಂ ಚ ಕಾಷಾಯಂ ಗಂಧಂ ದದ್ಯಾತ್ಸದಕ್ಷಿಣಂ ॥ ೨೨ ॥

ಮಂತ್ರೇಣಾನೇನ ವಿಪ್ರಾಯ ಕರ್ಮಸಿದ್ಧ್ಯೈ ದ್ವಿಜಾತಯೇ ।
ಓಂ ಭಾಸ್ಕರಾಯ ಸುದೇವಾಯ ನಮಸ್ತುಭ್ಯಂ ಯಶಸ್ಕರ ॥ ೨೩ ॥

---

೨೦. ತಿಳಿವಳಿಕೆಯುಳ್ಳ ಪಂಡಿತನು ಹಿಂದೆ ಹೇಳಿದಂತೆಯೇ ಉಪವಾಸ, ಮಂತ್ರ, ಪ್ರಾಶನ, ಪೂಜೆ ಇವುಗಳನ್ನು ಈ ಕ್ರಮದಲ್ಲಿ ಮಾಡುವುದಲ್ಲದೆ ಷಡಕ್ಷರ ಮಂತ್ರ ಜಪವನ್ನೂ ಸಹ ಮಾಡಬೇಕು.

೨೧. ಈ ವ್ರತಾನುಷ್ಠಾನಮಾಡುವ ಪುರುಷನು ಏಳನೆಯ ಸಾರಿಯಲ್ಲಿ ಅಷ್ಟೋತ್ತರಶತ (ನೂರೆಂಟು) ಸಂಖ್ಯೆಯಿಂದ ಹೋಮವನ್ನು ಮಾಡಿ ವ್ರತ ಸಮಾಪ್ತಿಮಾಡಬೇಕು. ಈ ವ್ರತಕ್ಕಾಗಿ ಸುವರ್ಣದಿಂದ ಶ್ರೀ ಭಾಸ್ಕರನ ಪ್ರತಿಮೆಯನ್ನು ಮಾಡಿಸಿರಬೇಕು.

೨೨. ಅಯ್ಯಾ ಧರ್ಮರಾಜನೇ ! ರಮ್ಯವಾದ ಭಾಸ್ಕರ ಪ್ರತಿಮೆಯನ್ನು ಭಂಗಾರದ ಪಾತ್ರೆಯಲ್ಲಿಟ್ಟು, ಕಾಷಾಯವಸ್ತ್ರ, ಕೆಂಪು ಗಂಧ ಇತ್ಯಾದಿಗಳಿಂದ ಲಂಕರಿಸಿ ಅವನ್ನು ಈ ವ್ರತ ಫಲಪ್ರಾಪ್ತಿಯಾಗುವ ಉದ್ದೇಶದಿಂದ.

೨೩. ಈ ಮುಂದೆ ಹೇಳುವ ಮಂತ್ರವನ್ನು ಹೇಳಿ ಬ್ರಾಹ್ಮಣನಿಗೆ ದಕ್ಷಿಣಾ ಸಮೇತ ದಾನವನ್ನು ಮಾಡಬೇಕು.

ಓಂ ಭಾಸ್ಕರಾಯ ಸುದೇವಾಯ ನಮಸ್ತುಭ್ಯಂ ಯಶಸ್ಕರ ।
ಮಮಾದ್ಯ ಸಮೀಹಿತಾರ್ಥಪ್ರದೋಭವ ನಮೋ ನಮಃ ॥

ಇದು ದಾನಮಂತ್ರ ಸರ್ವ ಕೀರ್ತಿಪ್ರದನೂ, ಶ್ರೇಷ್ಠದೇವನೂ, ಪ್ರಕಾಶ ಪ್ರಧಾನನೂ ಆಗಿರುವ ನಿನಗೆ ನಮಸ್ಕಾರಗಳು ಅಂಥ ನೀನು ನನಗೆ ಇಷ್ಟಾರ್ಥ ಫಲ ಪ್ರದನಾಗು. ನಿನಗೆ ಅನೇಕ ವಂದನೆಗಳು. ಇದು ಈ ಮಂತ್ರದ ಅರ್ಥ.)

ಮಾಮಾದ್ಯ ಸಮೀಹಿತಾರ್ಥಪ್ರದೋ ಭವ ನಮೋನಮಃ ।
ದಾನಾನಿ ಚ ಪ್ರದೇಯಾನಿ ಗೃಹಾಣಿ ಶಯನಾನಿ ಚ ॥ ೨೪ ॥

ಶ್ರಾದ್ಧಾನಿ ಪಿತೃದೇವಾನಾಂ ಶಾಶ್ವತೀಂ ತೃಪ್ತಿಮಿಚ್ಛತಾ ।
ಯಾತ್ರಾ ಪ್ರಶಸ್ತಾ ಯಾತ್ರ್ಯಾಣಾಂ ರಾಜ್ಞಾಂ ಚ ಜಯಮಿಚ್ಛತಾಂ ॥ ೨೫ ॥

ವಿಜಯೋ ಜಾಯತೇಽವಶ್ಯಂ ಯತೀನಾಂ ಚ ನೃಣಾಂ ತದಾ ।
ಅತೋರ್ಥಂ ವಿಶ್ರುತಾ ಲೋಕೇ ಸದಾ ವಿಜಯಸಪ್ತಮೀ ॥ ೨೬ ॥

ಏವಮೇಷಾ ತಿಥಿಃ ಪಾರ್ಥ ಇಹ ಕಾಮಪ್ರದಾ ನೃಣಾಂ ।
ಪರತ್ರ ಸುಖದಾ ಸೌಮ್ಯಾ ಸೂರ್ಯಲೋಕಪ್ರದಾಯಿನೀ ॥ ೨೭ ॥

೨೪. ಈ ದಾನವಲ್ಲದೆ ಗೃಹದಾನ, ಶಯ್ಯಾದಾನ, ಇತ್ಯಾದಿ ದಾನಗಳನ್ನೂ ಮಾಡಬೇಕು.

೨೫. ಪಿತೃಗಳಿಗೆ ಶಾಶ್ವತ ತೃಪ್ತಿಯುಂಟಾಗಬೇಕೆಂಬ ಅಭಿಲಾಷೆ ಇರುವವನು ಈ ವಿಜಯಸಪ್ತಮಿಯಲ್ಲಿ ಪಿತೃದೇವತೆಗಳನ್ನುದ್ದೇಶಿಸಿ ಶ್ರಾದ್ಧಗಳನ್ನು ಮಾಡಬೇಕು. ತೀರ್ಥಯಾತ್ರೆ ಮಾಡುವವರಿಗೆ ಈ ದಿನವು ಮಹಾಪ್ರಶಸ್ತ. ಜಯಾಭಿಲಾಷಿಗಳಾದ ರಾಜರಿಗೂ ಸಹ ಜೈತ್ರಯಾತ್ರೆಗೆ ಈ ತಿಥಿಯೇ ಸದವಕಾಶವಾಗಿದೆ.

೨೬. ಆ ದಿನ ಕಾರ್ಯ ಮಾಡುವುದರಿಂದ ರಾಜರಿಗೆ ವಿಜಯ. ಸನ್ಯಾಸಿ ಪುರುಷರಿಗೆ ತಪಸ್ಸಿದ್ಧಿ; ಇತ್ಯಾದಿ ಫಲಲಾಭವು ಅವಶ್ಯಕವಾಗಿ ಆಗುವುದು. ಆದುದರಿಂದ ಲೋಕದಲ್ಲಿ ಯಾವಾಗಲೂ ಈ ವಿಜಯ ಸಪ್ತಮಿಯು ಬಹಳ ಪ್ರಖ್ಯಾತವಾಗಿದೆ.

೨೭. ಎಲೈ ಪಾರ್ಥಸಹೋದರನೇ! ಈ ವಿಜಯಸಪ್ತಮೀ ತಿಥಿಯು ಇಹಲೋಕದಲ್ಲಿ ಮನುಷ್ಯರಿಗೆ ಈರೀತಿ ಸರ್ವಕಾಮಪ್ರದಾಯಕವಾಗಿದೆ. ಪರಲೋಕದಲ್ಲೂ ಸುಖವನ್ನುಂಟುಮಾಡುವುದಾಗಿದೆ. ಕೊನೆಗೆ ಸೂರ್ಯಲೋಕ ಪ್ರಾಪ್ತಿಯುಂಟಾಗುವುದು.

ದಾತಾ ಭೋಗೀ ಚ ಚತುರೋ ದೀರ್ಘಾಯುರ್ನೀರುಜಃ ಸುಖೀ ।
ಇಹಾಗತ್ಯ ಭವೇದ್ರಾಜಾ ಹಸ್ತ್ಯಶ್ವಧನರತ್ನವಾನ್ ॥ ೨೮ ॥

ನಾರೀ ವಾ ಕುರುತೇ ಯಾ ತು ಸಾಪಿ ತತ್ಪುಣ್ಯಭಾಗಿನೀ ।
ಭವತ್ಯತ್ರ ನ ಸಂದೇಹಃ ಕಾರ್ಯಃ ಪಾರ್ಥ ತ್ವಯಾ ಕ್ವಚಿತ್ ॥ ೨೯ ॥

ಸ್ವರ್ಗ್ಯಾ ಸಮೀಹಿತಸುಖಾರ್ಥಫಲಪ್ರದಾ ಚ ।
ಯಾ ಕಥ್ಯತೇ ಮುನಿವರೈಃ ಪ್ರವರಾ ತಿಥೀನಾಂ ।
ಸಾ ಭಾನುಪಾದಕಮಲಾರ್ಚನಚಿಂತಕಾನಾಂ ।
ಪುಂಸಾಂ ಸದೈವ ವಿಜಯಾ ವಿಜಯಂ ದದಾತಿ ॥ ೩೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವಿಜಯಸಪ್ತಮೀವ್ರತ ಕಥನಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ.

---

೨೮. ಅಲ್ಲಿ ವಾಸಮಾಡಿದ ಅನಂತರ ಈ ಲೋಕದಲ್ಲಿ ರಾಜನಾಗಿ ಜನಿಸಿ ದಾನಶೀಲನೂ, ಭೋಗಿಯೂ, ಬುದ್ಧಿವಂತನೂ, ದೀರ್ಘಾಯುಷ್ಮಂತನೂ, ನೀರೋಗಿಯೂ, ಸುಖಿಯೂ, ಆನೆ, ಕುದುರೆ, ರಥ, ರತ್ನ ಇತ್ಯಾದಿಯಾದ ಸಂಪದ್ಯುಕ್ತನೂ ಆಗುವನು.

೨೯. ಎಲೈ ಧರ್ಮಜನೇ! ಹೆಂಗಸು ಈ ವ್ರತವನ್ನಾಚರಿಸಿದರೆ ಇದೇ ರೀತಿ ಪುಣ್ಯಫಲಭಾಗಿನಿಯಾಗುವಳು. ಈ ವಿಷಯದಲ್ಲಿ ನೀನು ಕೊಂಚವೂ ಸಂದೇಹಪಡಬೇಕಾಗಿಲ್ಲ.

೩೦. ಸ್ವರ್ಗಸುಖಸಾಧನವೂ, ಅಭಿಲಷಿತವಾದ ಸುಖಪ್ರದವೂ, ಧನ ರೂಪವಾದ ಫಲದಾಯಕವೂ, ಇತರ ಎಲ್ಲಾ ತಿಥಿಗಳಿಗಿಂತ ಶ್ರೇಷ್ಠವಾದುದೆಂದು ಋಷಿಶ್ರೇಷ್ಠರಿಂದ ಹೊಗಳಲ್ಪಡುವುದೂ ಆಗಿರುವ ಈ ವಿಜಯಸಪ್ತಮೀ ತಿಥಿಯಲ್ಲಿ ಆದಿತ್ಯನ ಪಾದಪದ್ಮಾರಾಧನೆ ಮತ್ತು ಧ್ಯಾನ ಇವುಗಳನ್ನು ಮಾಡಿದ ಪುರುಷರಿಗೆ ಯಾವಾಗಲೂ ಜಯವುಂಟಾಗುತ್ತದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ವಿಜಯಸಪ್ತಮೀ ವ್ರತಕಥನವೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುಶ್ಚತ್ವಾರಿಂಶೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಅಥಾನ್ಯದಪಿ ತೇ ವಚ್ಮಿ ದಾನಂ ಶ್ರೇಯಸ್ಕರಂ ಪರಂ ।**
**ಆದಿತ್ಯಮಂಡಲಂ ನಾಮ ಸರ್ವಾಶುಭವಿನಾಶನಂ ॥ ೧ ॥**

**ಯವಚೂರ್ಣೇನ ಶುಭ್ರೇಣ ಕುರ್ಯಾದ್ಗೋಧೂಮಜೇನ ವಾ ।**
**ಸುಪಕ್ವಂ ಭಾನುಬಿಂಬಾಭಂ ಗುಡಗವ್ಯಾಜ್ಯಪೂರಿತಂ ॥ ೨ ॥**

**ಸಂಪೂಜ್ಯ ಭಾಸ್ಕರಂ ಭಕ್ತ್ಯಾ ತದಗ್ರೇ ಮಂಡಲಂ ಶುಭಂ ।**
**ರಕ್ತಚಂದನಜಂ ಕುರ್ಯಾತ್ಕುಂಕುಮಂ ವಾ ವಿಶೇಷತಃ ॥ ೩ ॥**

---

### ನಲವತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಪರಮ ಶ್ರೇಯಸ್ಸಾಧನವೂ, ಸಮಸ್ತ ಅಮಂಗಲಪರಿಹಾರಕವೂ ಆಗಿರುವ ಆದಿತ್ಯಮಂಡಲ ದಾನವೆಂಬ ಇನ್ನೊಂದು ದಾನವಿಶೇಷವನ್ನು ನಿನಗೆ ಹೇಳುತ್ತೇನೆ.

೨. ಶುಭ್ರವಾದ ಅಕ್ಕಿಹಿಟ್ಟಿಗೆ ಅಥವಾ ಗೋಧಿಹಿಟ್ಟಿಗೆ ಬೆಲ್ಲವನ್ನು ಮಿಶ್ರ ಮಾಡಿ ಅದನ್ನು ಹಸುವಿನ ತುಪ್ಪದಿಂದ ಪಾಕಮಾಡಿ ಅದರಿಂದ ಆದಿತ್ಯ ಬಿಂಬದಂತೆ ಇರುವ ಬಿಂಬವೊಂದನ್ನು ರಚಿಸಬೇಕು.

೩. ಆ ಬಿಂಬದಲ್ಲಿ ಸೂರ್ಯಪ್ರತಿಮೆಯನ್ನಿಟ್ಟು ಭಕ್ತಿಪೂರ್ವಕವಾಗಿ ಸೂರ್ಯಾರ್ಚನೆಯನ್ನು ಮಾಡಿ ಅದರ ಪುರೋಭಾಗದಲ್ಲಿ ರಕ್ತಚಂದನ ಅಥವಾ ಕುಂಕುಮದಿಂದ ವಿಶೇಷತಃ ಶುಭಕರವಾದ ಶ್ರೀ ಆದಿತ್ಯಮಂಡಲವನ್ನು ಬರೆಯಬೇಕು.

**ಮಂಡಲಂ ತತ್ರ ಸಂಸ್ಥಾಪ್ಯ ರಕ್ತವಸ್ತ್ರೈಃ ಸುಪೂಜಿತಂ ।**
**ಬ್ರಾಹ್ಮಣಾಯ ಪ್ರದಾತವ್ಯಂ ಮಂತ್ರೇಣಾನೇನ ಪಾಂಡವ ॥ ೪ ॥**

**ಆದಿತ್ಯತೇಜಸೋತ್ಪನ್ನಂ ರಾಜತಂ ವಿಧಿನಿರ್ಮಿತಂ ।**
**ಶ್ರೇಯಸೇ ಮಮ ವಿಪ್ರ ತ್ವಂ ಪ್ರತಿಗೃಹ್ಣೇದಮುತ್ತಮಂ ॥ ೫ ॥**

**(ಇತಿ ದಾನಮಂತ್ರಃ)**

**ಕಾಮದಂ ಧನದಂ ಧರ್ಮ್ಯಂ ಪುತ್ರದಂ ಸುಖದಂ ತವ ।**
**ಆದಿತ್ಯಪ್ರೀತಯೇ ದತ್ತಂ ಪ್ರತಿಗೃಹ್ಣಾಮಿ ಮಂಡಲಂ ॥ ೬ ॥**

---

೪. ಎಲೈ ಪಾಂಡುಪುತ್ರನೇ ! ರಕ್ತವಸ್ತ್ರಗಳಿಂದ ಪೂಜಿತವಾಗಿರುವ ಆ ಆದಿತ್ಯಪ್ರತಿಮೆಯನ್ನು ಆ ಮಂಡಲದಲ್ಲಿಟ್ಟು ಈ ಮುಂದೆ ಹೇಳುವ ಪ್ರಕಾರ

೫. ಆದಿತ್ಯ ತೇಜಸೋತ್ಪನ್ನಂ ರಾಜತಂ ವಿಧಿನಿರ್ಮಿತಂ ।
ಶ್ರೇಯಸೇ ಮಮ ವಿಪ್ರ ತ್ವಂ ಪ್ರತಿಗ್ರಹ್ಣೇದಮುತ್ತಮಮ್ ॥

ಈ ಮಂತ್ರವನ್ನು ಹೇಳಿ ಬ್ರಾಹ್ಮಣನಿಗೆ ದಾನ ಮಾಡಬೇಕು.

(ಎಲೈ ಬ್ರಾಹ್ಮಣನೇ ! ಸೂರ್ಯ ತೇಜಃಸ್ಸಂಭೂತವೆನಿಸಿ ಬೆಳ್ಳಿಯಲ್ಲಿ ಶಾಸ್ತ್ರೋಕ್ತ ರೀತಿಯಿಂದ ತಯಾರಿಸಿದ ಈ ಉತ್ತಮವಾದ ಸೂರ್ಯಪ್ರತಿಮೆಯಿಂದ ಕೂಡಿದ ಮಂಡಲವನ್ನು ನನಗೆ ಶ್ರೇಯಃ ಪ್ರಾಪ್ತಿಯಾಗುವುದಕ್ಕಾಗಿ ನೀನು ಪ್ರತಿಗ್ರಹಿಸು ಎಂದು ಮಂತ್ರಾರ್ಥ.)

೬. ಈ ದಾನವನ್ನು ಸ್ವೀಕರಿಸುವಾತನು

ಕಾಮದಂ ಧನದಂ ಧರ್ಮ್ಯಂ ಪುತ್ರದಂ, ಸುಖದಂ ತವ ।
ಆದಿತ್ಯಪ್ರೀತಯೇ ದತ್ತಂ ಪ್ರತಿಗೃಹ್ಣಾಮಿ ಮಂಡಲಂ ॥

(ಅಯ್ಯಾ ಯಜಮಾನನೇ ನಿನಗೆ ಇಷ್ಟಾರ್ಥವನ್ನು ಕೊಡುವುದಾಗಿಯೂ, ಧನಪ್ರದವಾಗಿಯೂ, ಧರ್ಮರೂಪವಾಗಿಯೂ, ಪುತ್ರಹೇತುವಾಗಿಯೂ, ಸುಖದಾಯಕವಾಗಿಯೂ ಇರುವುದೆನಿಸಿ ನೀನು ಮಾಡುತ್ತಿರುವ ಆದಿತ್ಯಮಂಡಲ ದಾನವನ್ನು ಆದಿತ್ಯಪ್ರೀತ್ಯರ್ಥವಾಗಿ ನಾನು ಪ್ರತಿಗ್ರಹಿಸುತ್ತೇನೆ ಎಂಬುದು ಈ ಮಂತ್ರಾರ್ಥ).

(ಇತಿ ಪ್ರತಿಗ್ರಹ ಮಂತ್ರಃ)

ಏವಂ ದತ್ವಾ ನರೋ ರಾಜನ್ಸೂರ್ಯವದ್ದಿವಿ ರಾಜತೇ ।
ಸರ್ವಕಾಮಸಮೃದ್ಧಾರ್ಥೋ ಮಂಡಲಾಧಿಪತಿರ್ಭವೇತ್ ॥ ೭ ॥

ದಾತವ್ಯಂ ಜಯಸಪ್ತಮ್ಯಾಂ ತದಾರಭ್ಯ ದಿನೇ ದಿನೇ ।
ಭಾಸ್ಕರಸ್ಯ ಮಹಾರಾಜ ಶಕ್ತ್ಯಾ ಭಾವೇನ ಭಾವಿತಃ ॥ ೮ ॥

ಗೋಧೂಮಚೂರ್ಣಜನಿತಂ ಯವಚೂರ್ಣಜಂ ವಾ ।
ಆದಿತ್ಯಮಂಡಲಮಖಂಡ-ಗುಡಾಜ್ಯಪೂರ್ಣಂ ।
ಕೃತ್ವಾ ದ್ವಿಜಾಯ ವಿಧಿವತ್ಪ್ರತಿಪಾದಯೇದ್ಯೋ ।
ಭೂಮೌ ಭವತ್ಯಮಿತಮಂಡಲಮಂಡಿತೋಽಸೌ ॥ ೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಆದಿತ್ಯಮಂಡಲವಿಧಿವರ್ಣನಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ.

---

೭. ಅಯ್ಯಾ ರಾಜನೇ ! ಈರೀತಿ ಆದಿತ್ಯಮಂಡಲವನ್ನು ದಾನ ಮಾಡಿದವನು ಈ ಲೋಕದಲ್ಲಿ ಸರ್ವೇಷ್ಟಾರ್ಥ ಸಮೃದ್ಧನಾದ ಮಂಡಲಾಧಿಪತಿಯಾಗಿ ಸುಖ ಸೌಭಾಗ್ಯಗಳಿಂದ ಮೆರೆಯುವುದಲ್ಲದೆ ಮರಣಾನಂತರ ಸತ್ಯಲೋಕದಲ್ಲಿ ಸೂರ್ಯನಂತೆಯೇ ತೇಜೋಮಯನಾಗಿ ಪ್ರಕಾಶಿಸುತ್ತಾನೆ.

೮. ಅಯ್ಯಾ ಮಹಾರಾಜನೇ ! ವಿಜಯಸಪ್ತಮಿಯ ದಿವಸ ಈ ಆದಿತ್ಯ ಮಂಡಲ ದಾನವನ್ನು ಮಾಡಬೇಕು. ಅದು ಮೊದಲ್ಗೊಂಡು ಪ್ರತಿದಿನವೂ ಸ್ವಶಕ್ತ್ಯನುಸಾರವಾಗಿ ಶುದ್ಧವಾದ ಚಿತ್ತವುಳ್ಳವನಾಗಿ ಸೂರ್ಯಪ್ರೀತ್ಯರ್ಥವಾಗಿ ನಿತ್ಯ ದಾನಮಾಡಬೇಕು.

೯. ಯಾವಾತನು ಗೋಧಿಯ ಹಿಟ್ಟು ಅಥವಾ ಅಕ್ಕಿಹಿಟ್ಟು ಇವುಗಳಿಗೆ ಬೆಲ್ಲ ಮತ್ತು ತುಪ್ಪ ಇವುಗಳನ್ನು ಸೇರಿಸಿ, ಅದರಿಂದ ಆದಿತ್ಯಮಂಡಲಾಕಾರವನ್ನು ರಚಿಸಿ ಶಾಸ್ತ್ರಪ್ರಕಾರವಾಗಿ ಸತ್ಪಾತ್ರನಾದ ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅಂತಹ ಪುಣ್ಯಾತ್ಮನು ಭೂಲೋಕದಲ್ಲಿ ಅತಿ ವಿಸ್ತಾರವಾದ ಮಂಡಲಾಧಿಪನೆಂದೆನಿಸಿ ವಿಚಕ್ಷಣೆಯಿಂದ ರಾಜ್ಯಭಾರ ಮಾಡುತ್ತ ಅನೇಕ ರಾಜರುಗಳ ಗೌರವಕ್ಕೆ ಪಾತ್ರನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಆದಿತ್ಯಮಂಡಲದಾನ ವಿವರಣೆಯೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚಚತ್ವಾರಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯಾಮುಪೋಷ್ಯ ನರಃ ಕಾಮಾನ್ಪ್ರಾಪ್ನೋತಿ ಮನಸೇಪ್ಸಿತಾನ್ ।
ತಾಮೇಕಾಂ ವದ ಮೇ ದೇವ ಸಪ್ತಮೀಂ ಧನಸೌಖ್ಯದಾಂ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಭಾನೋರ್ದಿನೇ ಸಿತೇ ಪಕ್ಷೇ ಅತೀತೇ ಚೋತ್ತರಾಯಣೇ ।
ಪುನ್ನಾಮಾಹ್ವಯನಕ್ಷತ್ರೇ ಗೃಹ್ಣೀಯಾತ್ಸಪ್ತಮೀವ್ರತಂ ॥ ೨ ॥

---

### ನಲವತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಎಲೈ ದೇವ ದೇವೇಶನೇ ! ಯಾವ ಸಪ್ತಮಿಯಲ್ಲಿ ಉಪವಾಸವನ್ನಾಚರಿಸಿದ ಪುರುಷನು ಮನೋಭಿಲಷಿತವಾದ ಇಷ್ಟಾರ್ಥಗಳನ್ನೂ, ಧನವನ್ನೂ, ಸೌಖ್ಯಗಳನ್ನೂ ಹೊಂದುವನೋ ಅಂತಹ ಅಸಾಧಾರಣವಾದ ಸಪ್ತಮೀ ವಿಧಿಯನ್ನು ನನಗೆ ತಿಳಿಸು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಉತ್ತರಾಯಣವು ಕಳೆದು ದಕ್ಷಿಣಾಯನ ಹುಟ್ಟುತ್ತಲೆ ಶುಕ್ಲಪಕ್ಷದಲ್ಲಿ ಭಾನುವಾರವು ಸೇರಿ ಪುನ್ನಾಮಧೇಯವುಳ್ಳ ನಕ್ಷತ್ರವೂ ಕೂಡಿದಾಗ ಈ ಸಪ್ತಮೀ ವ್ರತವನ್ನು ಪರಿಗ್ರಹಿಸಬೇಕು.

ಸವ್ರೀಹಿಕಾನ್ಯವತಿಲಾನ್ಸಹ ಮಾಷಮುದ್ಗೈಃ ।
ಗೋಧೂಮಮಾಂಸಮಧುಮೈಥುನಕಾಂಸ್ಯಪಾತ್ರಂ ।
ಅಭ್ಯಂಜನಾಂಜನಶಿಲಾತಲಚೂರ್ಣಿತಾನಿ ।
ಷಷ್ಠ್ಯಾಂ ಪರಂ ಪರಿಹರೇದಹನಿ ಪ್ರಸಿದ್ಧ್ಯೈ ॥ ೩ ॥

ದೇವಾನ್ಮುನೀನ್ಪಿತೃಗಣಾನ್ಸಜಲಾಂಜಲೀಭಿಃ ।
ಸಂತರ್ಪ್ಯ ಪೂಜ್ಯ ಗಗನಾಂಗಣಹಸ್ತಭುಕ್ತಾನ್ ।
ಹುತ್ವಾನಲೇ ತಿಲಯವಾನ್ಬಹುಶೋ ಘೃತಾಕ್ತಾನ್ ।
ಭೂಮೌ ಸ್ವಪೇದ್ಧೃದಿ ನಿಧಾಯ ಹಿ ತಂ ಸವಿತ್ರಂ ॥ ೪ ॥

ಯಾನಿ ತ್ರಯೋದಶ ಜನೈರಿಹ ವರ್ಜಿತಾನಿ ।
ದ್ರವ್ಯಾಣಿ ತಾನಿ ಪರಿಹೃತ್ಯ ಪರಿದ್ವಿಷಷ್ಠ್ಯಾಃ ।

---

೩. ಇಂತಹ ಸಪ್ತಮೀ ತಿಥಿಯಲ್ಲಿ ಮಾನವನು ಆಚರಿಸುವ ಈ ವ್ರತದ ಫಲವು ಸಿದ್ಧಿಸಬೇಕಾದರೆ ಆ ಸಪ್ತಮಿಯ ಹಿಂದಿನ ದಿವಸ ಷಷ್ಠಿಯಲ್ಲಿ ವ್ರೀಹಿ, ಯವ, ತಿಲ, ಉದ್ದು, ಹೆಸರು, ಗೋಧಿ, ಮಾಂಸ, ಮಧು ಇವುಗಳ ಸೇವನ, ಸ್ತ್ರೀಸಂಗ, ಮೈಥುನ, ಕಂಚಿನಪಾತ್ರೆಯ ಉಪಯೋಗ, ಅಭ್ಯಂಜನ, ಅಂಜನ ಧಾರಣ, ಮನಶ್ಶಿಲಾಚೂರ್ಣಸೇವನ ಈ ಹದಿಮೂರನ್ನೂ ವರ್ಜಿಸಬೇಕು.

೪. ಅನಂತರ ದೇವ, ಋಷಿ, ಪಿತೃಗಣಗಳನ್ನು ಜಲಾಂಜಲಿಗಳಿಂದ ತೃಪ್ತಿಪಡಿಸಿ, ಗಗನಾಂಗಣದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನನ್ನು ಪೂಜೆಮಾಡಿ, ಘೃತಮಿಶ್ರಿತವಾದ ತಿಲಯವಗಳನ್ನು ಯಥೇಷ್ಟವಾಗಿ ಅಗ್ನಿಯಲ್ಲಿ ಹೋಮಮಾಡಿ, ಆ ಚಂಡಕಿರಣನಾದ ಸೂರ್ಯನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಆ ರಾತ್ರಿಯಲ್ಲಿ ಜಿತೇಂದ್ರಿಯನಾಗಿ ನೆಲದ ಮೇಲೆಯೇ ಶಯನಮಾಡಬೇಕು.

೫. ಅಯ್ಯಾ ಭರತವಂಶಜನೇ ! ಈ ವ್ರತಾನುಷ್ಠಾತೃವಿಗೆ ವರ್ಜ್ಯವೆಂದು ಹೇಳಲ್ಪಟ್ಟ ಹದಿಮೂರನ್ನೂ ತ್ಯಾಜ್ಯನೆಮಾಡಿ, ಹುಳುಕಿಲ್ಲದೆ ಶುದ್ಧವಾದ ಆರವತ್ತೆರಡು ಕಡಲೇಕಾಳುಗಳನ್ನು ಪ್ರಾಶನೆಮಾಡಬೇಕು. ಹೀಗೆ ಒಂದು ವರ್ಷದ

**ಸಂಪ್ರಾಶ್ಯ ಶುದ್ಧಚಣಕಾನಿಹ ವರ್ಷಮೇಕಂ ।**
**ಪ್ರಾಪ್ನೋತಿ ಭಾರತ ಸುಖಂ ಮನಸೇಪ್ಸಿತಂ ಚ ॥ ೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ತ್ರಯೋದಶವರ್ಜ್ಯಸಪ್ತಮೀವ್ರತಂ ನಾಮ ಪಂಚಚತ್ವಾರಿಂಶೋಽಧ್ಯಾಯಃ.**



---

ವರೆಗೆ ವ್ರತವನ್ನು ಆಚರಿಸಿದವನು ಸೌಖ್ಯವನ್ನೂ ವಾಂಛಿತ ಮನೋಭೀಷ್ಟ ಫಲಗಳನ್ನೂ ಸಹ ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ತ್ರಯೋದಶ ವರ್ಜ್ಯ ಸಪ್ತಮಿ ವ್ರತನಿರೂಪಣವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಷಟ್ಚತ್ವಾರಿಂಶತ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಲೋಮಶೋ ನಾಮ ವಿಪ್ರರ್ಷಿರ್ಮಥುರಾಯಾಂ ಗತಃ ಪುರಾ ।**
**ಸೋಽರ್ಚಿತೋ ವಸುದೇವೇನ ದೇವಕ್ಯಾ ಚ ಯುಧಿಷ್ಠಿರ ॥ ೧ ॥**

**ಉಪವಿಷ್ಟಃ ಕಥಾಃ ಪುಣ್ಯಾಃ ಕಥಯಿತ್ವಾ ಮನೋಹರಾಃ ।**
**ತತಃ ಕಥಯಿತುಂ ಭೂಯಃ ಕಥಾಮೇತಾಂ ಪ್ರಚಕ್ರಮೇ ॥ ೨ ॥**

**ಕಂಸೇ ಹತೇ ಮೃತಾಃ ಪುತ್ರಾಃ ಪುತ್ರಾ ಜಾತಾಃ ಪುನಃ ಪುನಃ ।**
**ಮೃತವತ್ಸಾ ದೇವಕಿ ತ್ವಂ ಪುತ್ರದುಃಖೇನ ದುಃಖಿತಾ ॥ ೩ ॥**

---

### ನಲವತ್ತಾರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ! ಪೂರ್ವಕಾಲದಲ್ಲಿ ಬ್ರಹ್ಮರ್ಷಿ ಲೋಮಶನೆಂಬವನು ಮಥುರಾನಗರಿಗೆ ಹೋದನು. ಅಲ್ಲಿದ್ದ ವಸುದೇವ ದೇವಕಿಯರು ಅವನಿಗೆ ಅರ್ಘ್ಯಪಾದ್ಯಾದಿಗಳಿಂದ ಪೂಜೆ ಮಾಡಿದರು.

೨. ಬ್ರಹ್ಮರ್ಷಿಯಾದ ಆ ಲೋಮಶನು ಅವರಿಂದ ಪೂಜಿತನಾಗಿ ಆಸನದಲ್ಲಿ ಕುಳಿತು ಮನೋಹರವಾಗಿಯೂ, ಪುಣ್ಯಪ್ರದವಾಗಿಯೂ ಇರುವ ಕೆಲವು ಕಥೆಗಳನ್ನು ಹೇಳಿ ಬಳಿಕ ಈ ಕಥೆಯನ್ನು ಹೇಳಲು ಪ್ರಾರಂಭಿಸಿದನು.

೩. ಅಮ್ಮಾ ದೇವಕಿ ! ಪೂರ್ವದಲ್ಲಿ ಮೃತರಾದ ನಿನ್ನ ಪುತ್ರರೆಲ್ಲರೂ ಕಂಸನ ಸಂಹಾರವಾದ ಮೇಲೆ ಪುನಃ ಪುನಃ ನಿನ್ನಲ್ಲೇ ಜನಿಸಿದರೂ ಮೃತರಾಗುತ್ತಿರುವುದರಿಂದ ಮೃತಪುತ್ರಳಾದ ನೀನು ಪುತ್ರಶೋಕದಿಂದ ಬಹು ದುಃಖಿತೆಯಾಗಿರುವೆ.

ಯಥಾ ಚಂದ್ರಮುಖೀ ದೀಪ್ತಿರ್ಬಭೂವ ಮೃತಪುತ್ರಿಕಾ ।
ಪಶ್ಚಾಚ್ಚೀರ್ಣವ್ರತಾ ಸ್ಯೈವ ಬಭೂವಾಕ್ಷತವತ್ಸಕಾ ।
ತ್ವಮೇವ ದೇವಕಿ ತಥಾ ಭವಿಷ್ಯಸಿ ನ ಸಂಶಯಃ ॥ ೪ ॥

॥ ದೇವಕ್ಯುವಾಚ ॥

ಕಾ ಸಾ ಚಂದ್ರಮುಖೀ ಬ್ರಹ್ಮನ್ಬಭೂವ ಬಹುಪುತ್ರಿಕಾ ॥ ೫ ॥

ಚರಿತಂ ಕಿಂ ವ್ರತವರಂ ಬಹುಸಂತತಿಕಾರಕಂ ।
ಸತಾಂ ಸದರ್ಥಕರಣಂ ಸೌಭಾಗ್ಯಾರೋಗ್ಯವರ್ಧನಂ ॥ ೬ ॥

॥ ಲೋಮಶ ಉವಾಚ ॥

ಅಯೋಧ್ಯಾಯಾಂ ಪುರಾ ರಾಜಾ ನಹುಷೋ ನಾಮ ವಿಶ್ರುತಃ !
ತಸ್ಯ ರಾಜ್ಞೋ ಮಹಾದೇವೀ ನಾಮ್ನಾ ಚಂದ್ರಮುಖೀ ಪುರಾ ॥ ೭ ॥

---

೪. ಮಹಾಮಾತೃವಾದ ದೇವಕಿಯೇ ! ಚಂದ್ರಮುಖಿ ಎಂಬ ರಾಜ ಪತ್ನಿಯು ಪುತ್ರ ಮರಣದಿಂದ ದುಃಖವನ್ನನುಭವಿಸಿ ಅನಂತರ ಒಂದು ವ್ರತಾಚರಣೆ ಮಾಡಿದ್ದರಿಂದ ಆಕೆ ಜೀವತ್ಪುತ್ರಳಾಗಿ ಸುಖಿಯಾದಳು. ನೀನೂ ಕೂಡ ಹಾಗೆಯೇ ವ್ರತಮಾಡಿದರೆ ಜೀವತ್ಪುತ್ರಳಾಗುವೆ. ಈ ವಿಷಯದಲ್ಲಿ ಸಂಶಯವಿಲ್ಲ ಎಂದನು.

೫. ದೇವಕಿಯು ಹೇಳುತ್ತಾಳೆ–ಪೂಜ್ಯರಾದ ಬ್ರಹ್ಮರ್ಷಿವರ್ಯರೇ ! ವ್ರತಾಚರಣೆಯಿಂದ ಬಹು ಪುತ್ರವತಿಯಾಗಿ ಸುಖಿಯಾದ ಚಂದ್ರಮುಖಿ ಎಂಬವಳು ಯಾರು ?

೬. ಬಹು ಸಂತಾನ ಕಾರಕವಾಗಿಯೂ, ಸತ್ಫಲದಾಯಕವಾಗಿಯೂ, ಸೌಭಾಗ್ಯಾರೋಗ್ಯ ವರ್ಧಕವಾಗಿಯೂ ಇರುವ ಯಾವ ಉತ್ತಮ ವ್ರತವನ್ನು ಆಕೆ ಆಚರಿಸಿದಳು ? ಎಂಬುವನ್ನು ಹೇಳಬೇಕು ಎಂದಳು.

೭. ಲೋಮಶ ಮುನಿವರ್ಯರು ಹೇಳುತ್ತಾರೆ—ಪೂರ್ವದಲ್ಲಿ ಅಯೋಧ್ಯಾ ನಗರಿಯಲ್ಲಿ ನಹುಷನೆಂಬ ವಿಖ್ಯಾತನಾದ ಒಬ್ಬ ರಾಜನಿದ್ದನು. ಆ ರಾಜನಿಗೆ ಚಂದ್ರಮುಖಿ ಎಂಬ ಪಟ್ಟದರಸಿ ಇದ್ದಳು.

ಪುರೋಹಿತಸ್ಯ ತಸ್ಯೈವ ಪತ್ನ್ಯಾಸೀನ್ನಾಮ್ನಾನಮಾನಿಕಾ ।
ತಯೋರಾಸೀದ್ದೃಢಾ ಪ್ರೀತಿಃ ಸ್ಪೃಹಣೀಯಾ ಪರಸ್ಪರಂ ॥ ೮ ॥

ಅಥಾಪಿ ತೇಪಿ ಮಿತ್ರಿಣ್ಯೌ ಸ್ನಾನಾರ್ಥಂ ಸರಯೂಜಲೇ ।
ಪ್ರಾಪ್ತೇ ಪ್ರಾಪ್ತಾಶ್ಚ ತತ್ರೈವ ಬಹ್ವ್ಯಶ್ಚ ನಗರಾಂಗನಾಃ ॥ ೯ ॥

ಸ್ನಾತ್ವಾ ತು ಮಂಡಲಂ ಚಕ್ರುಃ ಖಪತೇರ್ವ್ಯಕ್ತರೂಪಿಣಃ ।
ಲೇಖಯಿತ್ವಾ ಶಿವಂ ಶಾಂತಮುಮಯಾ ಸಹ ಶಂಕರಂ ॥ ೧೦ ॥

ಗಂಧಪುಷ್ಪಾಕ್ಷತೈರ್ಭಕ್ತ್ಯಾ ಪೂಜಯಿತ್ವಾ ಯಥಾವಿಧಿ ।
ಪ್ರಣಮ್ಯ ಗಂತುಕಾಮಾಸ್ತಾಃ ಪೃಷ್ಟಾಸ್ತಾಭ್ಯಾಂ ನರಸ್ತ್ರಿಯಃ ॥ ೧೧ ॥

---

೮. ಮತ್ತು ಆ ರಾಜನ ಪುರೋಹಿತನಿಗೆ ಅಭಿಮಾನಶಾಲಿನಿಯಾದ ಮಾನೀ ಎಂಬ ಹೆಸರಿನ ಪತ್ನಿ ಇದ್ದಳು. ರಾಜಮಹಿಷಿಯಾದ ಚಂದ್ರಮುಖಿ ಮತ್ತು ರಾಜಪುರೋಹಿತನ ಪತ್ನಿಯಾದ ಮಾನೀ ಇವರಿಬ್ಬರಿಗೂ ಅನ್ಯೋನ್ಯ ವಾಗಿಸ್ಪೃಹಣೀಯವಾದ ದೃಢವಿಶ್ವಾಸವು ಬೆಳೆದಿದ್ದಿತು.

೯. ಕದಾಚಿತ್ ಆ ಸ್ನೇಹಿತೆಯರು ಸರಯೂ ನದಿಗೆ ಸ್ನಾನಾರ್ಥವಾಗಿ ಹೋದರು. ಆಗ ಅಲ್ಲಿಗೆ ಅನೇಕ ನಗರಾಂಗನೆಯರೂ ಬಂದಿದ್ದರು.

೧೦. ಆ ಪುರಸ್ತ್ರೀಯರು ಆ ನದೀ ಜಲದಲ್ಲಿ ಸ್ನಾನಮಾಡಿ, ಅಂತರಿಕ್ಷಾಧಿ ಪತಿಯಾಗಿ ಅಲ್ಲಿ ವ್ಯಕ್ತವಾದ ರೂಪದಿಂದ ಪ್ರಕಾಶಿಸುವ ಸೂರ್ಯಮಂಡಲವನ್ನು ಭೂಮಿಯಲ್ಲಿ ಬರೆದು, ಅದರ ಮಧ್ಯದಲ್ಲಿ ಶ್ರೀ ಉಮಾಸಹಿತನಾದ ಶಂಕರನ ಶಾಂತಮೂರ್ತಿಯನ್ನು ಚಿತ್ರಿಸಿದರು.

೧೧. ಅನಂತರ ಶಾಸ್ತ್ರಪ್ರಕಾರವಾಗಿ ಭಕ್ತಿಯಿಂದ ಆ ಉಮಾಮಹೇಶ್ವರ ರಿಗೆ ಗಂಧ ಪುಷ್ಪ ಅಕ್ಷತಾದಿಗಳಿಂದ ಅರ್ಚನೆಮಾಡಿ ವಂದಿಸಿ ಸ್ವಗೃಹಕ್ಕೆ ತೆರಳಲು ಉದ್ಯುಕ್ತರಾದರು. ಆಗ ಈ ಚಂದ್ರಮುಖಿ ಮಾನಿ ಇರು ಆ ನಗರವಾಸಿಗಳಾದ ನಾರಿಯರನ್ನು ವ್ರತವಿಚಾರವಾಗಿ ಪ್ರಶ್ನೆಮಾಡಿದರು.

ತಾ ಊಚುಃ ಶಂಕರೋಽಸ್ಮಾಭಿಃ ಪಾರ್ವತ್ಯಾ ಸಹ ಪೂಜಿತಃ ।
ಸ್ವರ್ಣಸೂತ್ರಮಯಸ್ತಂತುಃ ಶಿವಾಯಾತ್ಮಾ ನಿವೇದಿತಃ ॥ ೧೨ ॥

ಧಾರಾಮಯಮಿದಂ ತಾವದ್ಯಾವತ್ಪ್ರಾಣಾವಧಾರಣಂ ।
ತಾಸಾಂ ತು ವಚನಂ ಶ್ರುತ್ವಾ ಮಿತ್ರಿಣ್ಯಾ ತೇಽಪಿ ಭಾರತ ॥ ೧೩ ॥

ತಸ್ಯೈವ ಸಮಯಂ ತತ್ರ ಬಧ್ವಾ ದೋರ್ಭ್ಯಾಂ ತು ದೋರಕೈಃ ।
ತತಸ್ತಾಃ ಸ್ವಗೃಹಾನ್ಜಗ್ಮುಃ ಸ್ವಸಖೀಭಿಃ ಸಮಾವೃತಾಃ ॥ ೧೪ ॥

ಕಾಲೇನ ಮಹತಾ ಯಾತಂ ತಸ್ಯಾ ನೈ ತದ್ವ್ರತಂ ನೃಪ ।
ಚಂದ್ರವತ್ಯಾಃ ಪ್ರಮತ್ತಾಯಾ ವಿಸ್ಮೃತಃ ಸ ತು ದೋರಕಃ ॥ ೧೫ ॥

---

೧೨. ಆರೀತಿ ಪ್ರಶ್ನೆಮಾಡುತ್ತಲೆ ಆ "ನಾರಿಯರು ಪಾರ್ವತೀ ಸಹಿತ ನಾದ ಶ್ರೀ ಶಂಕರನಿಗೆ ನಾವು ಪೂಜೆಮಾಡಿದ್ದೇವೆ. ಸೂತ್ರಾಕಾರದಲ್ಲಿ ಮಾಡಿಸಿದ ಭಂಗಾರದ ತಂತುವಿದು ಪ್ರಾಣವಿರುವವರೆಗೂ ನಾವು ನಮ್ಮ ಮನಸ್ಸನ್ನು ಶ್ರೀ ಶಿವನಲ್ಲೇ ಅರ್ಪಿಸಿದ್ದೇವೆ".

೧೩. ಎಂದು ಸಮಯಬಂಧಪೂರ್ವಕವಾಗಿ ಈ ಸ್ವರ್ಣಸೂತ್ರವನ್ನು ಧಾರಣೆಮಾಡಿದ್ದೇವೆ" ಎಂದು ಹೇಳಿದರು. ಅಯ್ಯಾ ಭರತವಂಶಜನೇ ! ಆ ಅನ್ಯೋನ್ಯ ಮಿತ್ರೆಯರಾದ ರಾಜಪತ್ನಿ ಮತ್ತು ಪುರೋಹಿತಪತ್ನಿ ಇವರು ಆ ಸ್ತ್ರೀಯರು ಹೇಳಿದ ಈ ಮಾತನ್ನು ಕೇಳಿದರು.

೧೪. ಆ ಮೇಲೆ ತಾವೂ ಅದೇ ಪ್ರಕಾರ ಅರ್ಚನೆಮಾಡಿ ಸಮಯಬಂಧ ಪೂರ್ವಕವಾಗಿ ತೋಳುಗಳಲ್ಲಿ ವ್ರತದ ದೋರಕಗಳನ್ನು ಕಟ್ಟಿಕೊಂಡನಂತರ ಸ್ವಜನ ಸಮೇತರಾಗಿ ಸ್ವಗೃಹಕ್ಕೆ ಹೋದರು.

೧೫. ಅಯ್ಯಾ ರಾಜೇಂದ್ರನೇ ! ಬಹುಕಾಲ ಕಳೆದಮೇಲೆ ಆ ಚಂದ್ರ ಮುಖಿಯು ಮದೋನ್ಮತ್ತತೆಯಿಂದ ಆ ವ್ರತವನ್ನೂ ವ್ರತಾಂಗವಾದ ದೋರಕ ವನ್ನೂ ಮರೆತಳು.

ಮೃತಾ ಕೈಶ್ಚಿದಹೋರಾತ್ರೈಃ ಸಾ ಬಭೂವ ಪ್ಲವಂಗಮೀ ।
ಮಾನೀ ಚ ಕುಕ್ಕುಟೀ ಜಾತಾ ಪ್ರಾಯಃ ಸಂನಿಕಟಂಚರೀ ॥ ೧೬ ॥

ತಥೈವ ಜಾತೇ ಮಿತ್ರಿಣ್ಯೌ ಪರ್ವಜಾತಿಸ್ಮರೇ ತಥಾ ।
ಸಂಭೂಯ ಭೂಪ ಸಮಯಂ ಪ್ರಾಗ್ಭೂತಂ ಚಕ್ರತುಃ ಪುನಃ ॥ ೧೭ ॥

ತದ್ದಿನೇ ತತ್ರ ಸಂಪ್ರಾಪ್ತೇ ಪುನಃ ಕಾಲೇನ ತೇ ಮೃತೇ ।
ತತ್ರೈವ ಮಾತ್ರಕೇ ದೇಶೇ ಜಾತೇ ಗೋಕುಲಸಂಯುತೇ ॥ ೧೮ ॥

ರಾಜ್ಞೋ ಜಾಯಾ ಬಭೂವಾಥ ಪೃಥ್ವೀನಾಥಸ್ಯ ವಾ ಪುನಃ ।
ಈಶ್ವರೀ ನಾಮ ವಿಖ್ಯಾತಾ ರಾಜ್ಞೀರಾಜೇಂದ್ರವಲ್ಲಭಾ ॥ ೧೯ ॥

---

೧೬. ಅನಂತರ ಕೆಲವುಕಾಲ ಅತಿಕ್ರಾಂತವಾಗಲು ಆ ಚಂದ್ರಮುಖಿಯು ಮೃತಳಾಗಿ ಹೆಣ್ಣುಕೋತಿಯಾಗಿ ಜನಿಸಿದಳು. ಹಾಗೆಯೇ ಪುರೋಹಿತನ ಹೆಂಡತಿಯೂ ಮೃತಳಾದನಂತರ ಹೆಣ್ಣುಕೋಳಿಯಾಗಿ ಜನ್ಮತಾಳಿದಳು. ಪ್ರಾಯಃ ಆ ಮರ್ಕಟೀ ಕುಕ್ಕುಟೀ ಈ ಎರಡೂ ಜೊತೆಯಲ್ಲೇ ತಿರುಗಾಡುತ್ತಿದ್ದುವು.

೧೭. ಎಲೈ ಭೂಪತಿಯೇ ! ಆ ಹೆಣ್ಣು ಕೋತಿಯೂ, ಕೋಳಿಯೂ, ತಮ್ಮ ಹಿಂದಿನ ಜನ್ಮದಲ್ಲಿದ್ದಂತೆಯೇ ಅನ್ಯೋನ್ಯ ಸ್ನೇಹವುಳ್ಳವುಗಳಾಗಿಯೂ ಪೂರ್ವಜನ್ಮ ವೃತ್ತಾಂತ ಸ್ಮರಣೆಯುಳ್ಳವುಗಳಾಗಿಯೂ ಇದ್ದುವು. ಅವೆರಡೂ ಒಟ್ಟಿಗೆ ಸೇರಿ ಪೂರ್ವಜನ್ಮದಲ್ಲಿ ಮಾಡಿದ್ದಂತೆ ಶ್ರೀ ಶಿವನಲ್ಲಿ ಆತ್ಮಸಮರ್ಪಣ ನಿರೂಪವಾದ ವ್ರತನಿಯಮವನ್ನೂ ವ್ರತಾಂಗ ಸೂತ್ರವನ್ನೂ ಪುನಃ ಗ್ರಹಿಸಲು ಮನಸ್ಸುಮಾಡಿದುವು.

೧೮. ಆ ದಿವಸ ಪ್ರಾಪ್ತವಾಗುತ್ತಲಿ ಆ ನದೀತೀರಕ್ಕೆ ಬಂದು ವ್ರತಪೂರ್ವಕವಾಗಿ ಸಮಯಬಂಧವನ್ನು ಸ್ವೀಕರಿಸಿದುವು. ಅನಂತರ ಕಾಲಕ್ರಮೇಣ ಅವು ಮರಣ ಹೊಂದಿ ಗೋವೃಂದಗಳಿಂದ ಸಮೇತವಾದ ಅದೇ ಪ್ರದೇಶದಲ್ಲಿ ಜನಿಸಿದುವು.

೧೯. ಅದಕ್ಕೆ ಹಿಂದೆ ಮರ್ಕಟೀ ಜನ್ಮವನ್ನು ತಾಳಿದ್ದ ನಹುಷರಾಜನ ಪತ್ನಿ ಚಂದ್ರಮುಖಿಯು, ಆ ಪ್ರದೇಶದ ಭೂಪತಿಯ ಪತ್ನಿಯಾಗಿ ಈಶ್ವರೀ ಎಂಬ ಹೆಸರಿನಿಂದ ಪ್ರಸಿದ್ಧಳೂ ರಾಜೇಂದ್ರನಿಗೆ ಪ್ರೇಮಪಾತ್ರಳಾದ ಮಹಾರಾಣಿಯೂ ಆದಳು.

ಅಗ್ನಿಮಾಲಾ ದ್ವಿಜಸ್ಯಾಭೂದ್ಭಾರ್ಯಾ ಭೂಷಣನಾಮಿಕಾ ।
ಪುರೋಹಿತಸ್ಯ ಕಾಲೇನ ಕುಕ್ಕುಟೀ ಬಹುಪುತ್ರಿಣೀ ॥ ೨೦ ॥

ಜಾತಿಸ್ಮರಾ ಪದ್ಮಹಸ್ತಾ ಅಷ್ಟಪುತ್ರ್ಯಾವ್ಯೃತಪ್ರಜಾ ।
ಪುನರ್ನಿರಂತರಾ ಪ್ರೀತಿರ್ಬಭೂವಾಥ ತಯೋರ್ನೃಪ ॥ ೨೧ ॥

ತತ್ರೇಶ್ವರೀ ಪುತ್ರಮೇಕಂ ಪ್ರಸೂತಾ ಚೈವ ರೋಗಿಣಂ ।
ನವವರ್ಷಸ್ತು ಪಂಚತ್ವಮಗಾತ್ಸ ಚ ಯುಧಿಷ್ಠಿರ ॥ ೨೨ ॥

ತತಸ್ತಾಂ ಭೂಷಣಾಂ ದ್ರಷ್ಟುಮುತ್ಥೈಷಾ ಪುತ್ರದುಃಖಿತಾ ।
ಸಖೀಭಾವಾದತಿಸ್ನೇಹಾತ್ಸರ್ವಪುತ್ರ ಸಮನ್ವಿತಾ ।
ಆಮುಕ್ತಾಭರಣಾ ನಿತ್ಯಂ ಸ್ವಭಾವೇನೈವ ಭೂಷಿತಾ ॥ ೨೩ ॥

---

೨೦. ಈ ಮುಂಚೆ ಕುಕ್ಕುಟೀ ಜನ್ಮವನ್ನು ಪಡೆದ ಆ ಮಾನಿಯೂ ಕಾಲ ಕ್ರಮೇಣ ಆದೇ ದೇಶದ ರಾಜಪುರೋಹಿತನಾದ ಅಗ್ನಿಮಾಲನೆಂಬ ಬ್ರಾಹ್ಮಣ ನಿಗೆ ಭೂಷಣೆ ಎಂಬ ಹೆಸರಿನಿಂದ ಪತ್ನಿಯಾಗಿ ಬಹು ಪುತ್ರವತಿಯಾದಳು.

೨೧. ಅಯ್ಯಾ ರಾಜನ್ನೇ ! ಕೇಳು ಆ ಭೂಷಣೆಯು ಪೂರ್ವಜನ್ಮ ವೃತ್ತಾಂತ ಸ್ಮರಣೆಯುಳ್ಳವಳೂ, ಪದ್ಮರೇಖಾಂಕಿತ ಹಸ್ತೆಯೂ, ಎಂಟುಜನ ಜೀವತ್ಪುತ್ರರುಳ್ಳವಳೂ ಆಗಿದ್ದಳು. ಈ ಈಶ್ವರೀ ರಾಣಿ ಮತ್ತು ಭೂಷಣೆ ಇವರಲ್ಲಿ ಅನ್ಯೋನ್ಯವಾಗಿ ಪೂರ್ವದಂತೆಯೇ ನಿರಂತರ ಪ್ರೀತಿಯು ಇರುತ್ತಿತ್ತು.

೨೨. ಅಯ್ಯಾ ಯುಧಿಷ್ಠಿರನೇ ! ಈಶ್ವರೀ ರಾಣಿಗೆ ರೋಗಿಯಾದ ಒಂದು ಗಂಡು ಮಗುವು ಜನಿಸಿ ಅಲ್ಪಾಯುವಾಗಿ ಕೇವಲ ಒಂಭತ್ತು ವಯಸ್ಸಿನಲ್ಲಿಯೇ ಮೃತಿ ಹೊಂದಿತು.

೨೩. ಆಗ ಈಶ್ವರೀ ರಾಣಿಯು ಪುತ್ರ ಮರಣದಿಂದ ದುಃಖಿತೆಯಾಗಿ ರುತ್ತಾ ಪೂಜ್ಯೆಯಾದ ಭೂಷಣೆಯಲ್ಲಿ ಸಖೀ ಭಾವದಿಂದಲೂ, ಅತಿ ಸ್ನೇಹ ವಿದ್ದುದರಿಂದಲೂ, ಒಂದುದಿನ ಆಕೆಯನ್ನು ನೋಡಬೇಕೆಂದು ಅರಮನೆಗೆ ಕರೆಯಿಸಿದಳು. ಈ ಭೂಷಣೆಯಾದರೋ ಸಹಜವಾಗಿ ಯಾವಾಗಲೂ ಸರ್ವಾ ಭರಣಗಳಿಂದ ಅಲಂಕರಿಸಿಕೊಳ್ಳುವ ಸ್ವಭಾವವುಳ್ಳವಳು ಆದ್ದರಿಂದ ಸರ್ವಾಭರಣ ಗಳನ್ನು ಧರಿಸಿ ತನ್ನ ಎಂಟುಜನ ಪುತ್ರ ಸಮನ್ವಿತೆಯಾಗಿಯೂ ಅರಮನೆಗೆ ಬಂದಳು.

ತಾಂ ದೃಷ್ಟ್ವಾ ಪುತ್ರಿಣೀಂ ಭವ್ಯಾಂ ಪ್ರಜಜ್ವಾಲೇಶ್ವರೀ ರುಷಾ ।
ತತೋ ಗೃಹಂ ಪ್ರೇಷ್ಯ ಚ ತಾಂ ಸಖೀಂ ವೈ ತೀವ್ರಮತ್ಸರಾ ॥ ೨೪ ॥

ಚಿಂತಯಾಮಾಸ ಸಾ ರಾತ್ರ್ಯಾಂ ತಸ್ಯಾಃ ಪುತ್ರವಧಂ ಪ್ರತಿ ।
ಹತಾ ಹತಾಶ್ಚ ತತ್ಪುತ್ರಾ ಪ್ರನರ್ಜೀವನ್ತ್ಯನಾಮಯಾಃ ॥ ೨೫ ॥

ಕದಾಚಿದಾಹೂಯ ಸಖೀಂ ಭೂಷಣಾಂ ಪುರತಃ ಸ್ಥಿತಾಂ ।
ಈಶ್ವರೀ ಪ್ರಾಹ ಕಿಮಿದಂ ಸಖಿ ಪುಣ್ಯಂ ತ್ವಯಾ ಕೃತಂ ॥ ೨೬ ॥

ಯೇನ ತೇ ನಿಹತಾಃ ಪುತ್ರಾಃ ಪುನರ್ಜೀವನ್ತಿ ನೋ ಭಯಂ ।
ಬಹುಪುತ್ರಾ ಜೀವವತ್ಸಾ ಅಮುಕ್ತಾಭರಣಾ ಕಥಂ।
ಶೋಭಸೇಽಭ್ಯಧಿಕಂ ಭದ್ರೇ ವಿದ್ಯುತ್ಸೌದಾಮಿನೀವ ಹಿ ॥ ೨೭ ॥

---

೨೪. ಈರೀತಿ ಬಹು ಪುತ್ರವತಿಯೂ ಅಲಂಕಾರಗಳಿಂದ ಸುಂದರಿಯೂ ಆಗಿರುವ ಭೂಷಣೆಯನ್ನು ಕಂಡು ಈಶ್ವರೀ ರಾಣಿಯು ಕೋಪದಿಂದ ಕಿಡಿಕಿಡಿಯಾದಳು. ಅನಂತರ ಭೂಷಣೆಯನ್ನು ಬೇಗನೆ ಮನೆಗೆ ಕಳುಹಿಸಿಬಿಟ್ಟಳು. ಹಿಂದಿನಿಂದಲೂ ಸಖಿಯಾಗಿದ್ದ ಅವಳಲ್ಲಿ ರಾಣಿಗೆ ಈಗ ಮಾತ್ಸರ್ಯವುಂಟಾಯಿತು.

೨೫. ಈ ಮಾತ್ಸರ್ಯದಿಂದ ಆ ಭೂಷಣೆಯ ಮಕ್ಕಳನ್ನು ಆದಿನ ರಾತ್ರಿ ನಿಗೂಢವಾಗಿ ಕೊಲ್ಲಿಸಬೇಕೆಂದು ಯೋಚಿಸಿದಳು. ಆ ಯೋಚನೆಯನ್ನು ಕಾರ್ಯಗತಮಾಡಿ ಈಶ್ವರಿಯು ಅವಳ ಮಕ್ಕಳನ್ನು ಕೊಲ್ಲಿಸಿದರೂ, ಆ ಪುತ್ರರು ನೀರೋಗಿಗಳಾಗಿ ಮತ್ತೆ ಜೀವಿಸುತ್ತಿದ್ದರು.

೨೬. ಅನಂತರ ಈಶ್ವರಿಯು ತನ್ನ ಸಖಿಯಾದ ಭೂಷಣೆಯನ್ನು ಮತ್ತೆ ಕರೆಯಿಸಿದಳು. ಸಮ್ಮುಖಕ್ಕೆ ಬಂದ ಅವಳನ್ನು ಕುರಿತು "ಸಖೀ ನೀನು ಏನು ಪುಣ್ಯಮಾಡಿರುವೆ ?

೨೭. ಎಲೌ ಸೌಭಾಗ್ಯವತೀ ! ನಿನ್ನ ಪುತ್ರರು ಪದೇ ಪದೇ ಮೃತರಾದರೂ ಪುನಃ ಪುನಃ ಜೀವಿಸುತ್ತಾರೆ. ಅವರಿಗೆ ಮರಣಭಯವೇ ಇಲ್ಲವಲ್ಲ ! ಇದು ಹೇಗೆ ಲಭಿಸಿತು ? ನೀನು ಬಹು ಪುತ್ರವತಿಯೂ, ಜೀವತ್ಪುತ್ರಳೂ ಸರ್ವಭೂಷಣಸಹಿತಳೂ ಸಹಜಸಿದ್ಧಾಭರಣಗಳಿಂದ ಮಿಂಚಿನಂತೆ ಶೋಭಿಸುವವಳೂ ಹೇಗೆ ಆದೆ ? ಎಂದು ಪ್ರಶ್ನೆಮಾಡಿದಳು. ಅದಕ್ಕೆ ಪ್ರತ್ಯುತ್ತರವಾಗಿ,

॥ ಭೂಷಣೋವಾಚ ॥

ಭದ್ರೇ ಭಾದ್ರಪದೇ ಮಾಸಿ ಸಪ್ತಮ್ಯಾಂ ಸಲಿಲಾಶಯೇ ।
ಸ್ನಾತ್ವಾ ಶಿವಂ ಮಂಡಲಕೇ ಲೇಖಯಿತ್ವಾ ಸಹಾಂಬಿಕಂ ॥ ೨೮ ॥

ಭಕ್ತ್ಯಾ ಸಂಪೂಜ್ಯ ಸಮಯಂ ಕುರ್ಯಾದ್ಬಧ್ವಾ ಕರೇ ಗುಣಂ ।
ಯಾವಜ್ಜೀವಂ ಮಯಾ ತಾವಚ್ಛಿವಸ್ಯಾತ್ಮಾ ನಿವೇದಿತಃ ॥ ೨೯ ॥

ಇತ್ಯೇವಂ ಸಮಯಂ ಕೃತ್ವಾ ತತಃ ಪ್ರಭೃತಿ ದೋರಕಂ ।
ಸ್ವರ್ಣರೌಪ್ಯಮಯಂ ವಾಪಿ ಕರಶಾಖಾಸು ಧಾರಯೇತ್ ॥ ೩೦ ॥

ಮಂಟಪಂ ವೇಷ್ಟಿಕಾಂ ದದ್ಯಾಚ್ಛ್ವಶ್ರೂಪಕ್ಷೇ ದ್ವಿಜೇ ತು ವಾ ।
ಸ್ವಯಂ ಚ ತಾ ನ ಭೋಕ್ತವ್ಯಾ ವ್ರತಭಂಗಭಯಾತ್ಸಖಿ ॥ ೩೧ ॥

---

೨೮. ಭೂಷಣೆಯು ಹೇಳುತ್ತಾಳೆ—ಎಲೌ ಸುಮಂಗಲೀ ! ಭಾದ್ರಪದ ಮಾಸದ ಶುಕ್ಲಪಕ್ಷದ ಸಪ್ತಮೀ ದಿನದಲ್ಲಿ ಶ್ರೇಷ್ಠವಾದ ತೀರ್ಥಜಲದಲ್ಲಿ ಸ್ನಾನ ಮಾಡಿ, ಮಂಡಲವನ್ನು ಬರೆದು ಆ ಮಂಡಲದ ಮಧ್ಯೆ ಅಂಬಿಕಾ ಸಹಿತನಾದ ಶ್ರೀ ಶಿವನ ಮೂರ್ತಿಯನ್ನು ಬರೆಯಬೇಕು.

೨೯. ಅನಂತರ ಅದರಲ್ಲಿ ಭಕ್ತಿಪೂರ್ವಕವಾಗಿ ಶ್ರೀ ಉಮಾಮಹೇಶ್ವರರನ್ನು ಅರ್ಚಿಸಿ, "ಯಾವಜ್ಜೀವವೂ ನಾನು ಶಿವನಲ್ಲಿ ಆತ್ಮಸಮರ್ಪಣೆಯನ್ನು ಮಾಡಿರುವೆನು" ಎಂದು ಪ್ರತಿಜ್ಞೆಮಾಡಿ ಕೈಯಲ್ಲಿ ದೋರಕವನ್ನು ಧರಿಸಬೇಕು.

೩೦. ಈರೀತಿ ಸಮಯಬಂಧ ಪೂರ್ವಕವಾಗಿ ದೋರಕಧಾರಣ ಮಾಡಬೇಕು. ಅಥವಾ ಭಂಗಾರದಿಂದಲೋ ಬೆಳ್ಳಿಯಿಂದಲೋ ಉಂಗುರಗಳನ್ನು ಮಾಡಿಸಿ ಬೆರಳಿನಲ್ಲಿ ಹಾಕಿಕೊಳ್ಳಬೇಕು.

೩೧. ಎಲೌ ಸಖೀ ! ಆ ಪೂಜೆಯಲ್ಲಿ ನಿವೇದಿಸಿದ ಮಂಡಿಗೆ ಮತ್ತು ವಸ್ತ್ರ ಇವನ್ನು ತನ್ನ ಶ್ವಶ್ರೂಸಂಬಂಧಿಗಳಿಗೋ ಇತರ ಬ್ರಾಹ್ಮಣರಿಗೋ ದಾನ ಮಾಡಬೇಕು. ಪೂಜೆಯಲ್ಲಿ ಉಪಯುಕ್ತವಾದ ಆ ಪದಾರ್ಥಗಳನ್ನು ತಾನು ಉಪಭೋಗಿಸಬಾರದು. ಹಾಗೆ ಉಪಯೋಗಿಸಿದರೆ ವ್ರತಭಂಗವಾಗುವುದು ; ಎಂದು ಹೇಳಿದಳು.

ಪರಿತೋ ಮುದ್ರಿಕಾ ರೌಪ್ಯಾ ಸೌವರ್ಣೀ ಚ ಯುಧಿಷ್ಠಿರ ।
ತಾಮ್ರಪಾತ್ರೋಪರಿ ಸ್ಥಾಪ್ಯ ಬ್ರಾಹ್ಮಣಾಯ ನಿವೇದಯೇತ್ ॥ ೩೨ ॥

ಸೋಹಾಲಕಾನಿ ಕಾಂಸಾರಂ ದದ್ಯಾದ್ಭುಂಜೀತ ಚ ಸ್ವಯಂ ।
ಮಂಡಲಂ ಸದ್ಮ ವಿತ್ತಂ ಚ ಶಿವಂ ಶಕ್ತಿಸಮನ್ವಿತಂ ॥ ೩೩ ॥

ಸಂಪೂಜ್ಯ ಸಖಿ ದುಷ್ಪ್ರಾಪ್ಯಂ ತ್ರೈಲೋಕ್ಯೇಪಿ ನ ವಿದ್ಯತೇ ।
ತದೇವಂ ಸಮಯಃ ಪೂರ್ವಂ ತ್ವಯಾ ಸಹ ಮಯಾ ಕೃತಃ ॥ ೩೪ ॥

ಸಮಯಾ ಪಾಲಿತೋ ಭಕ್ತ್ಯಾ ತತೋಹಂ ಸುಸ್ಥಿತಾ ಸಖಿ ।
ತ್ವಯಾ ಸ ಭಗ್ನಃ ಸಮಯೋ ದರ್ಪಾತ್ತ್ಯಕ್ತಃ ಶರೀರಯೋಃ ॥ ೩೫ ॥

---

೩೨. ಎಲೈ ಯುಧಿಷ್ಠಿರನೇ ! ಬೆಳ್ಳಿಯ ಅಥವಾ ಭಂಗಾರದ ಅಂಗುಲೀಯಕಗಳನ್ನು ತಾಮ್ರ ಪಾತ್ರೆಯಲ್ಲಿರಿಸಿ ಅದನ್ನೂ,

೩೩. ಅದರ ಜತೆ ಸೋಹಾಲಕ ಮತ್ತು ಕಾಂಸಾರ ಎಂಬ ಭಕ್ಷ್ಯ ಪದಾರ್ಥಗಳನ್ನೂ ಮತ್ತು ಮಂಡಲ, ಗೃಹ, ಧನ, ಇತ್ಯಾದಿಗಳನ್ನೂ ಬ್ರಾಹ್ಮಣನಿಗೆ ದಾನ ಮಾಡಬೇಕು. ಅನಂತರ ತಾನು ಭೋಜನ ಮಾಡಬೇಕು ಎಂದಳು.

೩೪. ಎಲೌ ಮಿತ್ರೇ ! ಶಕ್ತಿ ಸಹಿತನಾದ ಶ್ರೀ ಶಿವನನ್ನು ಪೂಜಿಸಿದವನಿಗೆ ತ್ರಿಲೋಕಗಳಲ್ಲೂ ದುಷ್ಪ್ರಾಪ್ಯ ವಸ್ತುವೇ ಇಲ್ಲ. ಶಿವನಲ್ಲಿ ಆತ್ಮಸಮರ್ಪಣ ಪ್ರತಿಜ್ಞಾ ಪೂರ್ವಕವಾದ ಈ ವ್ರತವನ್ನು ಮಾಡುತ್ತೇವೆಂದು ನಾನೂ ನೀನೂ ಸಹ ಪೂರ್ವದಲ್ಲಿ ಪ್ರತಿಜ್ಞೆಮಾಡಿದ್ದೆವು.

೩೫. ಆದರೆ ಎಲೌ ಸಖೀ ! ಯಾವಜ್ಜೀವವೂ ಶಿವಾತ್ಮಸಮರ್ಪಣಾ ಪ್ರತಿಜ್ಞೆಯನ್ನು ನಾನು ಭಕ್ತಿಯಿಂದ ಪರಿಪಾಲಿಸಿವೆನು. ಆದುದರಿಂದಲೇ ನಾನು ಸುಖಿಯಾಗಿದ್ದೇನೆ. ನೀನಾದರೋ ಆ ಚಂದ್ರಮುಖೀ ಜನ್ಮದಲ್ಲಿ ಮೊದಲು ಪರಿಗ್ರಹಿಸಿ ಆ ಮೇಲೆ ಮದೋನ್ಮತ್ತತೆಯಿಂದ ತ್ಯಾಜ್ಯಮಾಡಿರುವೆ. ಎರಡನೆಯದಾದ ಮರ್ಕಟೀ ಜನ್ಮದಲ್ಲೂ ಸಹ ವ್ರತವನ್ನು ಪರಿಗ್ರಹಿಸಿ ಅನಂತರ ಬಿಟ್ಟಿರುತ್ತೀಯೆ

ತೇನ ಸಂತತಿವಿಚ್ಛಿನ್ನಾ ರಾಜ್ಯೇಽಪಿ ಸತಿ ದುಃಖಿತಾ ।
ಏಷ ಪ್ರಭಾವಃ ಕಥಿತೋಽ ವ್ರತಸ್ಯಾಸ್ಯ ಮಯಾ ತವ ॥ ೩೬ ॥

ಅರ್ಧಂ ತವ ಪ್ರದಾಸ್ಯಾಮಿ ತಸ್ಯ ಧರ್ಮಸ್ಯ ಸುವ್ರತೇ ।
ಸಖೀಭಾವಾತ್ಪ್ರತೀಚ್ಛ ತ್ವಂ ನಾತ್ರ ಕಾರ್ಯಾ ವಿಚಾರಣಾ ॥ ೩೭ ॥

ಇತ್ಯುಕ್ತ್ವಾ ಪ್ರತಿಜಗ್ರಾಹ ವ್ರತದಾನಫಲಂ ತತಃ ।
ಬಭೂವ ಸುಪ್ರಜಾಃ ಸಾಧ್ವೀ ಮೋಕ್ಷಂ ಪ್ರಾಪ ಸುರೇಶ್ವರೀ ॥ ೩೮ ॥

ವ್ರತಸ್ಯಾಸ್ಯ ಪ್ರಭಾವೇಣ ಸಪುತ್ರಾ ತ್ವಂ ಚ ದೇವಕಿ ।
ಭವಿಷ್ಯಸಿ ತ್ರಿಲೋಕೇಶಂ ಪುತ್ರಂ ಚ ಜನಯಿಷ್ಯಸಿ ॥ ೩೯ ॥

---

೩೬. ಆದುದರಿಂದ ಸಂತತಿ ವಿಚ್ಛೇದವು ನಿನಗೆ ಪ್ರಾಪ್ತಿಯಾಗಿದೆ. ಮತ್ತು ರಾಜ್ಯಕೋಶಾದಿಗಳಿದ್ದರೂ ನೀನು ದುಃಖಿಯಾಗಿರುವೆ. ಈ ವ್ರತವು ಇಂಥ ಪ್ರಭಾವವುಳ್ಳದ್ದೆಂದು ನಿನಗೆ ಮೊದಲೇ ನಾನು ಹೇಳಿದ್ದೆನು.

೩೭. ಎಲೌ ಆಚಾರ ಸಂಪನ್ನಳೇ ! ನಮನಮಗೆ ಮೈತ್ರಿ ಇರುವುದ ರಿಂದ ನಾನು ಮಾಡಿದ ಈ ವ್ರತದ ಅರ್ಧಪುಣ್ಯವನ್ನು ನಿನಗೆ ಕೊಡುತ್ತೇನೆ. ನೀನು ಅದನ್ನು ಸ್ವೀಕರಿಸು. ಈ ವಿಷಯದಲ್ಲಿ ಯಾವ ವಿಚಾರವನ್ನೂ ಮಾಡ ಬೇಕಾದುದೇ ಇಲ್ಲ ಎಂದಳು.

೩೮. ಮಿತ್ರಳಾದ ಭೂಷಣೆಯು ಈರೀತಿ ಹೇಳಿ ತನ್ನ ವಾಗ್ದಾನದಂತೆ ಯೇ ಧಾರೆ ಎರೆದುಕೊಟ್ಟ ವ್ರತ ಮತ್ತು ದಾನದ ಅರ್ಧಭಾಗ ಪುಣ್ಯವನ್ನು ಈಶ್ವರೀ ರಾಣಿಯು ಕೃತಜ್ಞತೆಯಿಂದ ಪ್ರತಿಗ್ರಹಿಸಿದಳು. ಅನಂತರ ಆಕೆಯೂ ಸಹ ಆ ಪುಣ್ಯ ಫಲದಿಂದ ಈ ಲೋಕದಲ್ಲಿ ಸತ್ಸಂತಾನವುಳ್ಳವಳೂ, ಸುಮಂಗ ಲಿಯೂ ಆಗಿ ಇದ್ದು ಕೊನೆಗೆ ಮೋಕ್ಷವನ್ನು ಪಡೆದಳು.

೩೯. ಎಲೌ ದೇವಕೀ ! ನೀನೂ ಸಹ ಈ ವ್ರತಪ್ರಭಾವದಿಂದ ಸುಪುತ್ರ ವತಿಯಾಗುವೆ. ಮತ್ತು ತ್ರಿಭುವನಾಧಿಪತಿಯಾದ ಮಗನನ್ನು ಪ್ರಸುವಿಸು ತ್ತೀಯೆ ಎಂದನು.

ಇತ್ಯೇವಂ ಕಥಯಿತ್ವಾಸೌ ಲೋಮಶೋ ಮುನಿಪುಂಗವಃ ।
ಜಗಾಮ ನಭಸಾ ಪಾರ್ಥ ಮಯಾಪ್ಯೇತತ್ತವೋದಿತಂ ॥ ೪೦ ॥

ಯೇ ಚರಿಷ್ಯಂತಿ ಮನುಜಾ ವ್ರತಮೇತದ್ಯುಧಿಷ್ಠಿರ ।
ಕೃಕವಾಕುಪ್ರಸಂಗಾಖ್ಯಂ ದೇವಕ್ಯಾ ಚರಿತಂ ಶುಭಂ ॥ ೪೧ ॥

ತೇಷಾಂ ಸಂತತಿವಿಚ್ಛೇದೋ ನ ಕದಾಚಿದ್ಭವಿಷ್ಯತಿ ।
ಸ್ತ್ರಿಯಶ್ಚ ಯಾಶ್ಚರಿಷ್ಯಂತಿ ವ್ರತಮೇತತ್ಸುತಪ್ರದಂ ।
ಮರ್ತ್ಯಲೋಕೇ ಸುಖಂ ಸ್ಥಿತ್ವಾ ಯಾಸ್ಯಂತಿ ಶಿವಮಂದಿರಂ ॥ ೪೨ ॥

ಯಃ ಕುಕ್ಕುಟೀವ್ರತವರಂ ಪ್ಲವಗೀಸಮೇತಂ ।
ಚಕ್ರೇ ಚರಾಚರಗುರುಂ ಹೃದಯೇ ನಿಧಾಯ ।

೪೦. ಎಲೈ ಕುಂತೀಪುತ್ರನೇ ! ಋಷಿ ಶ್ರೇಷ್ಠನಾದ ಲೋಮಶನು ದೇವಕಿಗೆ ಈರೀತಿ ಉಪದೇಶಿಸಿ ಆಕಾಶ ಮಾರ್ಗದಿಂದ ಹೊರಟುಹೋದನು. ಅವನು ದೇವಕಿಗೆ ಉಪದೇಶಿಸಿದ ಆ ವ್ರತವನ್ನು ನಾನೂ ನಿನಗೆ ಹೇಳಿದೆನು.

೪೧. ಅಯ್ಯಾ ಯುಧಿಷ್ಠಿರನೇ ! ಕೃಕವಾಕು ಪ್ರಸಂಗವೆಂಬ ಹೆಸರುಳ್ಳದ್ದೂ, ದೇವಕಿಯಿಂದ ಪೂರ್ವದಲ್ಲಿ ಆಚರಿಸಲ್ಪಟ್ಟುದೂ ಆಗಿರುವ ಈ ವ್ರತವನ್ನು,

೪೨. ಯಾವ ಪುರುಷರು ಮಾಡುವರೋ ಅಂತಹವರಿಗೆ ಯಾವ ಕಾಲದಲ್ಲೂ ಸಂತತಿ ವಿಚ್ಛೇದನವು ಆಗುವುದಿಲ್ಲ. ಮತ್ತು ಪುತ್ರಪ್ರದವಾದ ಈ ವ್ರತವನ್ನು ಹೆಂಗಸರು ಆಚರಿಸಿದರೆ ಅವರೂ ಸಹ ಮನುಷ್ಯಲೋಕದಲ್ಲಿ ಸುಖವಾಗಿದ್ದು ದೇಹತ್ಯಾಗಾನಂತರ ಶ್ರೇಷ್ಠವಾದ ಶಿವಲೋಕಕ್ಕೆ ತೆರಳುವರು.

೪೩. ಚರಾಚರ ಗುರುವಾದ ಶ್ರೀ ಪರಮೇಶ್ವರನನ್ನು ಹೃದಯದಲ್ಲಿ ಧ್ಯಾನಿಸುತ್ತಾ ಶ್ರೇಷ್ಠವಾದ ಈ ಪ್ಲವಗೀ ಕುಕ್ಕುಟೀ ವ್ರತವನ್ನು ಯಾವ ಪುರುಷನು ಆಚರಿಸುವನೋ ಅಂತಹ ಪುಣ್ಯಾತ್ಮನಿಗೆ ಈ ವ್ರತವು ಅವನ ಸರ್ವಪಾಪವನ್ನು ನಾಶಮಾಡುವುದಕ್ಕೂ ಮತ್ತು ಪರಲೋಕ ಸಾಧನೆಗೂ ಸಹಕಾರಿಯಾಗುವುದು.

ತದ್ವ್ರಾಕರೋತಿ ಕಲುಷೌಘವಿಘಾತರಕ್ತಾಂ ।
ಸಾ ಸ್ತ್ರೀ ಯುವಾಂ ಭವತಿ ಶೋಭನಗೀತವತ್ಸಾ ॥ ೪೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಕುಕ್ಕುಟೀಮರ್ಕಟೀವ್ರತವರ್ಣನಂ
ನಾಮ ಷಟ್ಚತ್ವಾರಿಂಶೋಽಧ್ಯಾಯಃ.



ಈ ವ್ರತವನ್ನು ಆಚರಿಸಿದ ಸ್ತ್ರೀಯಾದರೋ ಸ್ತುತ್ಯವಾದ ಸತ್ಸಂತಾನವುಳ್ಳವಳಾಗುತ್ತಾಳೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಕುಕ್ಕುಟೀ
ಮರ್ಕಟೀ ವ್ರತವರ್ಣನವೆಂಬ ನಲವತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಚತ್ವಾರಿಂಶೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಊರ್ಧ್ವಂ ಪ್ರವಕ್ಷ್ಯಾಮಿ ಸಪ್ತಮೀಕಲ್ಪಮುತ್ತಮಂ ।
ಮಾಘಮಾಸಾತ್ಸಮಾರಭ್ಯ ಶುಕ್ಲಪಕ್ಷೇ ಯುಧಿಷ್ಠಿರ ॥ ೧ ॥

ಸಪ್ತಮ್ಯಾಂ ಕುರು ಸಂಕಲ್ಪಮಹೋರಾತ್ರೇ ವ್ರತೇ ನೃಪ ।
ವರುಣೇತ್ಯರ್ಚಯಿತ್ವಾ ತು ಬ್ರಹ್ಮಕೂರ್ಚಂ ತು ಕಾರಯೇತ್ ॥ ೨ ॥

ಅಷ್ಟಮ್ಯಾಂ ಭೋಜಯೇದ್ವಿಪ್ರಾಂಸ್ತಿಲಪಿಷ್ಟಂ ಗುಡೌದನಂ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೩ ॥

---

## ನಲವತ್ತೇಳನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಈಗ ಇನ್ನೊಂದು ಉತ್ತಮವಾದ ಸಪ್ತಮೀ ವ್ರತಕಲ್ಪವನ್ನು ಹೇಳುತ್ತೇನೆ ಕೇಳು.

೨. ಮಾಘ ಶುದ್ಧ ಸಪ್ತಮಿಯಿಂದ ಈ ವ್ರತವನ್ನು ಪ್ರಾರಂಭಿಸಬೇಕು. ಈ ಸಪ್ತಮಿಾದಿನ ವ್ರತಾಚರಣೆಗೆ ಸಂಕಲ್ಪಮಾಡಿ "ವರುಣ" ಎಂಬ ನಾಮವನ್ನು ಉಚ್ಚರಿಸಿ ಅಹೋರಾತ್ರಿಗಳಲ್ಲಿ ಸೂರ್ಯಾರ್ಚನೆಯನ್ನು ಮಾಡಿ ಬ್ರಹ್ಮಕೂರ್ಚ ಹೋಮವನ್ನು ಮಾಡಿಸಬೇಕು.

೩. ಅಷ್ಟಮಿಯದಿನ ಎಳ್ಳುಂಡೆ- ಗುಡೌದನ ಇವುಗಳಿಂದ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಈರೀತಿಯಲ್ಲಿ ಆಚರಿಸಿದ ಪುರುಷನು ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುತ್ತಾನೆ.

**ಸಪ್ತಮ್ಯಾಂ ಫಾಲ್ಗುನೇ ಮಾಸಿ ಸೂರ್ಯಮಿತ್ಯಭಿಪೂಜಯೇತ್ ।**
**ವಾಜಪೇಯಸ್ಯ ಯಜ್ಞಸ್ಯ ಯಥೋಕ್ತಂ ಲಭತೇ ಫಲಂ ॥ ೪ ॥**

**ಸಪ್ತಮ್ಯಾಂ ಚೈತ್ರಮಾಸೇ ತು ವೇದಾಂಶುಮಭಿಪೂಜಯೇತ್ ।**
**ಉಕ್ಥ್ಯಾಧ್ವರಸಮಂ ಪುಣ್ಯಂ ನರಃ ಪ್ರಾಪ್ನೋತಿ ಭಕ್ತಿಮಾನ್ ॥ ೫ ॥**

**ವೈಶಾಖಸ್ಯ ತು ಸಪ್ತಮ್ಯಾಂ ಧಾತಾರಮಭಿಪೂಜಯೇತ್ ।**
**ಪಶುಬಂಧ್ವಧ್ವರೇ ಪುಣ್ಯಂ ಸಮ್ಯಕ್ಪ್ರಾಪ್ನೋತಿ ಮಾನವಃ ॥ ೬ ॥**

**ಸಪ್ತಮ್ಯಾಂ ಜ್ಯೇಷ್ಠಮಾಸಸ್ಯ ಇಂದ್ರ ಇತ್ಯಭಿಪೂಜಯೇತ್ ।**
**ವಾಜಪೇಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ದುರ್ಲಭಂ ॥ ೭ ॥**

**ಆಷಾಢಮಾಸೇ ಸಪ್ತಮ್ಯಾಂ ಪೂಜಯಿತ್ವಾ ದಿವಾಕರಂ ।**
**ಬಹುವರ್ಣಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಪುಷ್ಕಲಂ ॥ ೮ ॥**

---

೪. ಫಾಲ್ಗುಣ ಮಾಸದ ಶುಕ್ಲಪಕ್ಷ ಸಪ್ತಮಿಯಲ್ಲಿ "ಸೂರ್ಯ" ಎಂಬ ನಾಮವನ್ನು ಹೇಳಿ ಅರ್ಚನೆಮಾಡಿದರೆ ವಾಜಪೇಯ ಯಾಗಮಾಡಿದ್ದರಿಂದ ಬರುವಷ್ಟು ಫಲವು ಲಭಿಸುವುದು.

೫. ಚೈತ್ರಮಾಸದ ಸಪ್ತಮಿಯಲ್ಲಿ ಭಕ್ತಿಯುಳ್ಳವನಾಗಿ "ವೇದಾಂಶು" ಎಂಬ ನಾಮೋಚ್ಚಾರಣ ಪೂರ್ವಕವಾಗಿ ಈ ವ್ರತವನ್ನು ಆಚರಿಸಿದ ಪುರುಷನು ಉಕ್ಥ್ಯ ಎಂಬ ಯಾಗದಿಂದ ಲಭಿಸುವಷ್ಟು ಪುಣ್ಯವನ್ನು ಪಡೆಯುವನು.

೬. ವೈಶಾಖಮಾಸದ ಸಪ್ತಮಿಯಲ್ಲಿ "ಧಾತೃ" ಎಂಬ ನಾಮವನ್ನು ಹೇಳಿ ಅರ್ಚಿಸಬೇಕು. ಈ ವ್ರತಮಾಡಿದವನು ನಿರೂಢಪಶುಬಂಧ ಎಂಬ ಯಜ್ಞಮಾಡಿದ್ದರಿಂದ ಬರುವ ಪುಣ್ಯಫಲವನ್ನು ಪಡೆಯುವನು.

೭. ಜ್ಯೇಷ್ಠಮಾಸದ ಸಪ್ತಮೀ ತಿಥಿಯಲ್ಲಿ "ಇಂದ್ರ" ನಾಮೋಚ್ಚಾರಣೆ ಮಾಡಿ ಅರ್ಚಿಸಬೇಕು. ಅದರಿಂದ ಅತಿದುಸ್ತರವಾದ ವಾಜಪೇಯ ಯಜ್ಞ ಮಾಡಿದಷ್ಟು ಪುಣ್ಯ ಫಲವು ಬರುತ್ತದೆ.

೮. ಆಷಾಢಮಾಸದ ಶುಕ್ಲ ಸಪ್ತಮಿಯಲ್ಲಿ "ದಿವಾಕರ"ನೆಂಬ ನಾಮೋಚ್ಚಾರಣೆಮಾಡಿ ಅರ್ಚಿಸಿದಾತನು ಬಹು ಸುವರ್ಣಯಾಗದ ಸಂಪೂರ್ಣ ಫಲವನ್ನು ಪಡೆಯುತ್ತಾನೆ.

**ಸಪ್ತಮ್ಯಾಂ ಶ್ರಾವಣೇ ಮಾಸಿ ಮಾತಾಪಿಂ ನಾಮ ಪೂಜಯೇತ್ ।**
**ಸೌತ್ರಾಮಣಿಫಲಂ ಸಮ್ಯಕ್ಪ್ರಾಪ್ನೋತಿ ಪುರುಷಃ ಶುಭಂ ॥ ೯ ॥**

**ರವಿಂ ಪ್ರೌಷ್ಠಪದೇ ಮಾಸೇ ಸಪ್ತಮ್ಯಾಮರ್ಚಯೇಚ್ಛುಚಿಃ ।**
**ತುಲಾಪುರುಷದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೦ ॥**

**ಆಶ್ವಯುಕ್ಛುಕ್ಲಸಪ್ತಮ್ಯಾಂ ಸವಿತಾರಂ ಪ್ರಪೂಜ್ಯ ಚ ।**
**ಗೋಸಹಸ್ರಪ್ರದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೧ ॥**

**ಕಾರ್ತಿಕೇ ಶುಕ್ಲಸಪ್ತಮ್ಯಾಂ ದಿನೇಶಂ ಸಪ್ತವಾಹನಂ ।**
**ಯೋಭ್ಯರ್ಚಯತಿ ಪುಣ್ಯಾತ್ಮಾ ಪೌಂಡರೀಕಂ ಸ ವಿಂದತಿ ॥ ೧೨ ॥**

**ಭಾನುಂ ಮಾರ್ಗಸಿತೇ ಪಕ್ಷೇ ಪೂಜಯಿತ್ವಾ ವಿಧಾನತಃ ।**
**ರಾಜಸೂಯಸ್ಯ ಯಜ್ಞಸ್ಯ ಫಲಂ ದಶಗುಣಂ ಭಜೇತ್ ॥ ೧೩ ॥**

---

೯. ಶ್ರಾವಣಮಾಸದ ಶುಕ್ಲಸಪ್ತಮಿಯಲ್ಲಿ "ಮಾತಾಪಿ" ಎಂಬ ನಾಮವನ್ನು ಹೇಳಿ ಪೂಜಿಸಬೇಕು. ಆ ಪುರುಷನು ಇದರಿಂದ ಸೌತ್ರಾಮಣಿ ಯಾಗದ ಶುಭ ಫಲ ವಿಶೇಷವನ್ನು ಸಂಪೂರ್ಣವಾಗಿ ಹೊಂದುವನು.

೧೧. ಭಾದ್ರಪದ ಮಾಸದ ಶುಕ್ಲ ಸಪ್ತಮಿಯಲ್ಲಿ ಪುರುಷನು ಸ್ನಾನಾದಿಗಳಿಂದ ಶುಚಿಯಾಗಿ "ರವಿ" ನಾಮದಿಂದ ಅರ್ಚಿಸಬೇಕು. ಅದರಿಂದ ಅವನಿಗೆ ತುಲಾಪುರುಷದಾನದ ಫಲವು ಬರುವುದು.

೧೧. ಆಶ್ವಯುಜ ಶುದ್ಧ ಸಪ್ತಮಿಯಲ್ಲಿ "ಸವಿತಾ" ಎಂಬ ನಾಮವನ್ನು ಹೇಳಿ ಸೂರ್ಯಾರ್ಚನೆಯನ್ನು ಮಾಡಿದವನು ಸಹಸ್ರಗೋದಾನಮಾಡಿದ ಫಲವನ್ನು ಹೊಂದುತ್ತಾನೆ.

೧೨. ಕಾರ್ತೀಕ ಶುಕ್ಲ ಸಪ್ತಮಿಯಲ್ಲಿ ಸಪ್ತಾಶ್ವವಾಹನನಾದ ಸೂರ್ಯನನ್ನು "ದಿನೇಶ" ಎಂಬ ನಾಮೋಚ್ಚಾರಣೆಮಾಡಿ ಅರ್ಚಿಸಿದ ಪುಣ್ಯಾತ್ಮನು ಪೌಂಡರೀಕ ಯಾಗದ ಫಲವನ್ನು ಹೊಂದುತ್ತಾನೆ.

೧೩. ಮಾರ್ಗಶೀರ್ಷ ಮಾಸದ ಶುಕ್ಲ ಸಪ್ತಮಿಯಲ್ಲಿ "ಭಾನು" ಎಂಬ ನಾಮೋಚ್ಚಾರಣದಿಂದ ಶಾಸ್ತ್ರಪ್ರಕಾರವಾಗಿ ಸೂರ್ಯಾರಾಧನೆಯನ್ನು ಮಾಡಿದವನು ರಾಜಸೂಯ ಯಾಗದ ದಶಗುಣಿತ ಫಲವನ್ನು ಹೊಂದುವನು.

ಭಾಸ್ಕರಂ ಪೌಷಮಾಸೇ ತು ಪೂಜಯಿತ್ವಾ ಯಥಾವಿಧಿ ।
ನರಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಪುಷ್ಕಲಂ ॥ ೧೪ ॥

ತದೇವ ಕೃಷ್ಣಸಪ್ತಮ್ಯಾಂ ನಾಮ ಸಂಪೂಜಯೇದ್ಬುಧಃ ।
ಸೋಪವಾಸಃ ಪ್ರಯತ್ನೇನ ವರ್ಷಮೇಕಂ ಯುಧಿಷ್ಠಿರ ।
ಪಶ್ಚಾತ್ಸಮಾಪ್ತೇ ನಿಯಮೇ ಸೂರ್ಯಯಾಗಂ ಸಮಾಚರೇತ್ ॥ ೧೫ ॥

ಶುಚಿರ್ಭೂಮೌ ಸಮೇ ದೇಶೇ ಲೇಪಯೇದ್ರಕ್ತಚಂದನೈಃ ।
ಏಕಹಸ್ತಂ ದ್ವಿಹಸ್ತಂ ವಾ ಚತುರ್ಹಸ್ತಮಥಾಪಿ ವಾ ॥ ೧೬ ॥

ಸಿಂಧೂರಗೈರಿಕಾಭ್ಯಾಂ ಚ ಸೂರ್ಯಮಂಡಲಮಾಲಿಖೇತ್ ।
ರಕ್ತೈಪುಷ್ಪೈಃ ಸಪದ್ಮೈಶ್ಚ ಧೂಪೈಃ ಕುಂದುರಕಾದಿಭಿಃ ।
ಸಂಪೂಜ್ಯ ದದ್ಯಾನ್ನೈವೇದ್ಯಂ ವಿಚಿತ್ರಂ ಘೃತಪಾಚಿತಂ ॥ ೧೭ ॥

---

೧೪. ಪುಷ್ಯಮಾಸದ ಶುಕ್ಲ ಸಪ್ತಮಿಯಲ್ಲಿ "ಭಾಸ್ಕರ" ಎಂಬ ನಾಮವನ್ನು ಹೇಳಿ ಯಥಾವಿಧಿ ಸೂರ್ಯಾರ್ಚನೆಯನ್ನು ಮಾಡಿದವನು ನರಮೇಧಯಾಗದ ಸಂಪೂರ್ಣ ಫಲವನ್ನು ಪಡೆಯುತ್ತಾನೆ.

೧೫. ಅಯ್ಯಾ ಯುಧಿಷ್ಠಿರನೇ! ಪ್ರತಿಮಾಸದ ಕೃಷ್ಣಪಕ್ಷದ ಸಪ್ತಮಿಗಳಲ್ಲೂ ಆಯಾಯಾ ಮಾಸದ ಶುಕ್ಲಪಕ್ಷದಲ್ಲಿ ಹೇಳಬೇಕೆಂದು ವಿಧಿಸಿದ ನಾಮಗಳನ್ನೇ ಹೇಳಿ ಅರ್ಚಿಸಬೇಕು. ಈರೀತಿ ಪ್ರತಿಮಾಸಗಳ ಉಭಯ ಪಕ್ಷಗಳಲ್ಲೂ ಉಪವಾಸವನ್ನಾಚರಿಸಿ, ಪ್ರಯತ್ನಪೂರ್ವಕವಾಗಿ ಒಂದು ವರ್ಷದವರೆಗೆ ಅರ್ಚನಾದಿಗಳನ್ನು ಮಾಡಿ, ಈ ವ್ರತನಿಯಮವು ಸಮಾಪ್ತವಾದ ಮೇಲೆ ಸೂರ್ಯಯಾಗವನ್ನು ಮಾಡಬೇಕು.

೧೬. ಏರು, ತಗ್ಗು ಇಲ್ಲದೆ ಸಮವಾಗಿಯೂ, ಸ್ವಭಾವವಾಗಿಯೋ ಇಲ್ಲವೇ ಸಂಸ್ಕಾರವಶದಿಂದಲೋ ಶುಚಿಯಾಗಿಯೂ ಇರುವ ಭೂಮಿಯಲ್ಲಿ ಒಂದು ಹಸ್ತ ಪರಿಮಾಣ ಅಥವಾ ಎರಡು ಹಸ್ತ ಪರಿಮಾಣ, ಸಾಧ್ಯವಾದರೆ ನಾಲ್ಕು ಹಸ್ತ ಪರಿಮಾಣವುಳ್ಳ ಪ್ರದೇಶದಲ್ಲಿ ರಕ್ತಚಂದನವನ್ನು ಲೇಪನಮಾಡಬೇಕು.

೧೭. ಹಾಗೆ ಲಿಪ್ತವಾದ ಆ ಸ್ಥಳದಲ್ಲಿ ಚಂದ್ರದಪುಡಿ ಮತ್ತು ಗೈರಿಕಾದಿ ಧಾತು ಇವುಗಳಿಂದ ಸೂರ್ಯಮಂಡಲವನ್ನು ಬರೆದು, ಕೆಂಪುಕಣಿಗಿಲೆಪುಷ್ಪ ಕಮಲ, ದಾಸವಾಳ ಪುಷ್ಪ, ಗಂಧ, ಧೂಪ ಇತ್ಯಾದಿಗಳಿಂದ ಸೂರ್ಯನನ್ನು ಅರ್ಚಿಸಿ ಘೃತಪಕ್ವವಾದ ವಿವಿಧ ನೈವೇದ್ಯಗಳನ್ನು ಸಮರ್ಪಿಸಬೇಕು.

ಪುರತಃ ಸ್ಥಾಪಯೇತ್ಕುಂಭಾನ್ಸಹಿರಣ್ಯಾನ್ನಸಂಯುತಾನ್ ।
ಅಗ್ನಿಕಾರ್ಯಂ ತತಃ ಕುರ್ಯಾತ್ಸಮಭ್ಯುಕ್ಷ್ಯ ಹುತಾಶನಂ ॥ ೧೮ ॥

ಆಕೃಷ್ಣೇನೇತಿ ಮಂತ್ರೇಣ ಸಮಿದ್ಭಿಶ್ಚಾರ್ಕಸಂಭವೈಃ ।
ತಿಲೈರಾಜ್ಯಗುಡೋಪೇತೈರ್ದದ್ಯಾದ್ದಶಶತಾಹುತೀಃ ॥ ೧೯ ॥

ತತಸ್ತು ದಕ್ಷಿಣಾ ದೇಯಾ ಬ್ರಾಹ್ಮಣಾನಾಂ ಯುಧಿಷ್ಠಿರ ।
ಭೋಜಯಿತ್ವಾ ರಕ್ತವಸ್ತ್ರೈಃ ಶುಕ್ಲಾನ್ಯಪಿ ಪಿಧಾಪಯೇತ್ ॥ ೨೦ ॥

ದ್ವಾದಶಾತ್ರ ಪ್ರಶಂಸಂತಿ ಗಾವೋ ವಸ್ತ್ರಾನ್ವಿತಾಃ ಶುಭಾಃ ।
ಛತ್ರೋಪಾನಹಯುಗ್ಮಂ ಚ ಏಕೈಕಾಯ ಪ್ರದಾಪಯೇತ್ ।
ಏವಂ ವಿಸೃಜ್ಯ ತಾನ್ವಿಪ್ರಾನ್ಸ್ವಯಂ ಭುಂಜೀತ ವಾಗ್ಯತಃ ॥ ೨೧ ॥

---

೧೮. ಸೂರ್ಯಮಂಡಲದ ಸಮ್ಮುಖದಲ್ಲಿ ಹಿರಣ್ಯ, ಅನ್ನ ಇವುಗಳಿಂದ ಪೂರ್ಣವಾದ ಕಲಶಗಳನ್ನು ಸ್ಥಾಪನೆಮಾಡಬೇಕು. ಅನಂತರ ಅಗ್ನಿಗೆ ಮಂತ್ರ ಪೂರ್ವಕವಾಗಿ ಅಭ್ಯುಕ್ಷಣೆಮಾಡಿ ಹೋಮವನ್ನು ಮಾಡಬೇಕು.

೧೯. ಆ ಸಂಸ್ಕೃತವಾದ ಅಗ್ನಿಯಲ್ಲಿ

ಆ ಕೃಷ್ಣೇನ ರಜಸಾವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ ।
ಹಿರಣ್ಯಯೇನ ಸವಿತಾರಥೇನಾದೇವೋಯಾತಿ ಭುವನಾನಿ ಪಶ್ಯನ್ ॥

ಎಂಬ ಮಂತ್ರವನ್ನು ಹೇಳಿ ಎಕ್ಕದ ಸಮಿತ್ತುಗಳಿಂದಲೂ, ತುಪ್ಪ ಮತ್ತು ಬೆಲ್ಲ ಇವುಗಳಿಂದ ಮಿಶ್ರಿತವಾದ ಎಳ್ಳಿನಿಂದಲೂ, ಸಹಸ್ರಾಹುತಿಯನ್ನು ಹೋಮ ಮಾಡಬೇಕು.

೨೦. ಅಯ್ಯಾ ಯುಧಿಷ್ಠಿರನೇ! ಅನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಭೋಜನಮಾಡಿಸಿ, ಕೆಂಪು ಮತ್ತು ಬಿಳಿಯ ವಸ್ತ್ರಗಳನ್ನು ಹೊದ್ದಿಸಬೇಕು.

೨೧. ಈವ್ರತದಲ್ಲಿ ದ್ವಾದಶಾದಿತ್ಯ ಪ್ರೀತ್ಯರ್ಥವಾಗಿ ಹನ್ನೆರಡು ಮಂದಿ ಬ್ರಾಹ್ಮಣರನ್ನು ಭೋಜನಾದಿಗಳಿಂದ ಸತ್ಕಾರಮಾಡುವುದು ಪ್ರಶಸ್ತವೆಂದು ಪ್ರಾಜ್ಞರು ಹೇಳುತ್ತಾರೆ. ಆ ಹನ್ನೆರಡು ಬ್ರಾಹ್ಮಣರಲ್ಲಿ ಒಬ್ಬೊಬ್ಬನಿಗೂ ವಸ್ತ್ರ

ಯ ಏವಂ ಕುರುತೇ ಪಾರ್ಥ ಸಪ್ತಮೀವ್ರತಮುತ್ತಮಂ ।
ನೀರುಜೋ ರೂಪವಾನ್ವಾಗ್ಮೀ ದೀರ್ಘಾಯುಶ್ಚೈವ ಜಾಯತೇ ॥ ೨೨ ॥

ಸಪ್ತಮ್ಯಾಂ ಸೋಪವಾಸಸ್ತು ಭಾನೋಃ ಪಶ್ಯಂತಿ ಯೇ ಮುಖಂ ।
ಸರ್ವಪಾಪವಿನಿರ್ಮುಕ್ತಾಃ ಸೂರ್ಯಲೋಕಮವಾಪ್ನುಯುಃ ॥ ೨೩ ॥

ವ್ರತಮೇತನ್ಮಹಾರಾಜ ಸರ್ವಾಶುಭವಿನಾಶನಂ ।
ಸರ್ವದುಷ್ಟಪ್ರಶಮನಂ ಶರೀರಾರೋಗ್ಯಕಾರಕಂ ।
ಸೂರ್ಯಲೋಕಪ್ರದಂ ಚಾಂತೇ ಪ್ರಾಹೈವಂ ನಾರದೋ ಮುನಿಃ ॥ ೨೪ ॥

---

ಯುಕ್ತಗಳಾದ ಶುಭಲಕ್ಷಣದ ಗೋವುಗಳನ್ನೂ ಛತ್ರಿ, ಪಾದುಕೆಗಳು ಇವು ಗಳನ್ನೂ ಪ್ರತ್ಯೇಕವಾಗಿ ದಾನಮಾಡಬೇಕು. ಹೀಗೆ ಅವರಿಗೆ ಪೂಜೆಮಾಡಿ ಭೋಜನಮಾಡಿಸಿ ದಾನಕೊಟ್ಟು ಕಳುಹಿಸಿದ ಮೇಲೆ ತಾನು ಮೌನವಾಗಿ ಭುಂಜಿಸಬೇಕು.

೨೨. ಅಯ್ಯಾ ಕುಂತೀ ಪುತ್ರನೇ ! ಯಾವನು ಈ ಕ್ರಮದಿಂದ ಮೇಲೆ ಹೇಳಿದ ಶ್ರೇಷ್ಠತಮವಾದ ಸಪ್ತಮೀ ವ್ರತವನ್ನು ಅನುಷ್ಠಾನಮಾಡುವನೋ ಅಂಥವನು ನೀರೋಗಿಯೂ, ಸುಂದರನೂ, ವಾಗ್ಮಿಯೂ, ದೀರ್ಘಾಯುಷ್ಮಂತನೂ ಆಗುತ್ತಾನೆ.

೨೩. ಸಪ್ತಮೀ ದಿನದಲ್ಲಿ ಉಪವಾಸವನ್ನಾಚರಿಸಿ ಸೂರ್ಯನ ದರ್ಶನದಿಂದ ಯಾರು ಪಾವನರಾಗುತ್ತಾರೋ ಅಂಥವರು ಸರ್ವಪಾಪ ವಿನಿರ್ಮುಕ್ತರಾಗಿ ನಿಸ್ಸಂದೇಹವಾಗಿ ಸೂರ್ಯಲೋಕವನ್ನು ಹೊಂದುತ್ತಾರೆ.

೨೪. ಅಯ್ಯಾ ಮಹಾರಾಜನೇ ! ಇದು ಸರ್ವ ಅಮಂಗಳ ನಿವಾರಕವೂ ಸರ್ವದೋಷ ಪ್ರಶಾಮಕವೂ, ದೇಹಾರೋಗ್ಯಕಾರಕವೂ, ಸಮಸ್ತ ಕಾಮ ಪ್ರದವೂ ಮರಣಾನಂತರದಲ್ಲೂ ಸೂರ್ಯಲೋಕ ಸಾಧನವೂ ಆದ ಮಹಾವ್ರತ ವೆಂದು ಶ್ರೀ ನಾರದಮಹರ್ಷಿಗಳೇ ಹೇಳಿರುತ್ತಾರೆ.

ಯೇ ಸಪ್ತಮೀಮುಪವಸಂತಿ ಸಿತಾಸಿತಾಂ ಚ ।
ನಾಮಾಕ್ಷರೈರಹಿಮದೀಧಿತಿಮರ್ಚಯಂತಿ ।
ತೇ ಸರ್ವರೋಗರಹಿತಾಃ ಸುಖಿನಃ ಸದೈವ ।
ಭೂತ್ವಾ ರವೇರನುಚರಾಃ ಸುಚಿರಂ ಭವಂತಿ ॥ ೨೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಉಭಯಸಪ್ತಮೀ ವ್ರತವರ್ಣನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ.



---

೨೫. ಶುಕ್ಲಪಕ್ಷ, ಕೃಷ್ಣಪಕ್ಷ ಎಂಬ ಈ ಉಭಯಪಕ್ಷಗಳ ಸಪ್ತಮಿಗಳಲ್ಲೂ ನಿಯಮಪೂರ್ವಕವಾಗಿ ಉಪವಾಸಮಾಡಿ, ಶ್ರೀ ಸೂರ್ಯನನ್ನು ಈ ಹಿಂದೆ ಹೇಳಿದ ನಾಮಗಳಿಂದ ಅರ್ಚಿಸುವ ಪುಣ್ಯಾತ್ಮರು, ಈ ಲೋಕದಲ್ಲಿ ಸರ್ವರೋಗ ರಹಿತರಾಗಿ, ಯಾವಾಗಲೂ ಸುಖಸೌಭಾಗ್ಯಗಳಿಂದ ಸಂತೋಷವಾಗಿದ್ದು, ದೇಹಾಂತದಲ್ಲಿ ಸೂರ್ಯಲೋಕವನ್ನು ಪಡೆದು, ಅಲ್ಲಿ ಭಗವಾನ್ ಸೂರ್ಯನಿಗೆ ಅನುಚರರು ಆಗಿರುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಉಭಯ ಸಪ್ತಮೀ ವ್ರತವರ್ಣನೆ ಎಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟಚತ್ವಾರಿಂಶತ್ತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಭಗವನ್ದುರ್ಗಸಂಸಾರಸಾಗರೋತ್ತಾರಕಾರಕಂ ।
ಕಿಂಚಿದ್ವ್ರತಂ ಸಮಾಚಕ್ಷ್ವ ಸ್ವರ್ಗಾರೋಗ್ಯಸುಖಪ್ರದಂ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಯದಾ ತು ಶುಕ್ಲಸಪ್ತಮ್ಯಾಮಾದಿತ್ಯಸ್ಯ ದಿನಂ ಭವೇತ್ ।
ತದಾ ಸಾ ತು ಮಹಾಪುಣ್ಯಾ ವಿಜಯಾ ತು ನಿಗದ್ಯತೇ ॥ ೨ ॥

---

## ನಲವತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಸ್ವಾಮಿ ಜಗನ್ನಿಯಾಮಕನೇ ! ದುರ್ಗಮವಾದ ಈ ಸಂಸಾರ ಸಾಗರದಿಂದ ದಾಟಿಸುವುದಾಗಿಯೂ; ಸ್ವರ್ಗ, ಆರೋಗ್ಯ ಮತ್ತು ಸುಖ ಈ ಫಲಗಳನ್ನು ಕೊಡುವುದಾಗಿಯೂ ಇರುವ ಒಂದು ವ್ರತವನ್ನು ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಶುಕ್ಲ ಪಕ್ಷದ ಸಪ್ತಮಿಯಲ್ಲಿ ಆದಿತ್ಯವಾರವು ಯಾವಾಗ ಕೂಡಿಬರುವುದೋ ಆಗ ಆಗ ಆ ತಿಥಿಯು ಮಹಾಪುಣ್ಯಪ್ರದವೆಂದೂ ವಿಜಯಾ ಎಂಬ ನಾಮಧೇಯ ವುಳ್ಳದ್ದೆಂದೂ ಉಕ್ತವಾಗಿದೆ.

ಪ್ರಾತರ್ಗವ್ಯೇನ ಪಯಸಾ ಸ್ನಾನಮಸ್ಯಾಂ ಸಮಾಚರೇತ್ ।
ಶುಕ್ಲಾಂಬರಧರಃ ಪದ್ಮಮಕ್ಷತೈಃ ಪರಿಕಲ್ಪಯೇತ್ ॥ ೩ ॥

ಪ್ರಾಙ್ಮುಖೋಷ್ಟದಲಂ ಮಧ್ಯೇ ತದ್ವಿಚಿತ್ರಾಂ ಚ ಕರ್ಣಿಕಾಂ ।
ಸರ್ವೇಷ್ವಪಿ ದಲೇಷ್ವೇವ ವಿನ್ಯಸೇತ್ಪೂರ್ವತಃ ಕ್ರಮಾತ್ ॥ ೪ ॥

ಪೂರ್ವೇಣ ತಪನಾಯೇತಿ ಮಾರ್ತಂಡಾಯೇತಿ ಪಾವಕೇ ।
ಯಾಮ್ಯೇ ದಿವಾಕರಾಯೇತಿ ವಿಧಾತ್ರೇ ನೈಋತೇನ ಚ ॥ ೫ ॥

ಪಶ್ಚಿಮೇ ವರುಣಾಯೇತಿ ಭಾಸ್ಕರಾಯೇತಿ ವಾನಿಲೇ ।
ಸೌಮ್ಯೇ ಚ ವರುಣಾಯೇತಿ ರವಯೇತ್ಯಷ್ಟಮೇ ದಲೇ ॥ ೬ ॥

---

೩. ಭಾನುವಾರ ಯುಕ್ತವಾದ ಶುಕ್ಲಪಕ್ಷದ ಸಪ್ತಮಿಯ ಪ್ರಾತಃಕಾಲದಲ್ಲಿ ಹಸುವಿನ ಹಾಲನ್ನು ಸವರಿಕೊಂಡು ಸ್ನಾನಾದಿಗಳನ್ನು ಮಾಡಿ ಬಿಳಿಯ ಬಟ್ಟೆಯನ್ನುಟ್ಟು ಮಂತ್ರಾಕ್ಷತೆಗಳಿಂದ ಕಮಲಾಕಾರವನ್ನು ರಚಿಸಲು ಉದ್ದೇಶಿಸಿ,

೪. ಪೂರ್ವಾಭಿಮುಖವಾಗಿ ಕುಳಿತು ಅಷ್ಟದಳ ಪದ್ಮವನ್ನು ಬರೆದು ಆ ಪದ್ಮದ ಮಧ್ಯದಲ್ಲಿ ವಿಚಿತ್ರವಾದ ಬಣ್ಣವುಳ್ಳ ಕರ್ಣಿಕೆಯನ್ನು ರಚಿಸಬೇಕು. ಪೂರ್ವದಿಕ್ಕಿನ ದಳದಿಂದ ಆರಂಭಿಸಿ ಆ ಕಮಲದ ಎಲ್ಲಾ ದಳಗಳಲ್ಲೂ ಮುಂದೆ ಹೇಳುವಂತೆ ಸೂರ್ಯನಾಮಗಳನ್ನು ವಿನ್ಯಾಸಮಾಡಿ ಅರ್ಚನೆಮಾಡಬೇಕು.

೫. ಪೂರ್ವದಳದಲ್ಲಿ ತಪನಾಯ ಎಂದೂ ಆಗ್ನೇಯದಳದಲ್ಲಿ ಮಾರ್ತಂಡಾಯ ಎಂದೂ, ದಕ್ಷಿಣದಳದಲ್ಲಿ ದಿವಾಕರಾಯ ಎಂದೂ, ನೈರುತ್ಯದಳದಲ್ಲಿ ವಿಧಾತ್ರೇ ಎಂದೂ ವಿನ್ಯಾಸಮಾಡಬೇಕು.

೬. ಪಶ್ಚಿಮದಳದಲ್ಲಿ ವರುಣಾಯ ಎಂದೂ, ವಾಯುವ್ಯದಳದಲ್ಲಿ ಭಾಸ್ಕರಾಯ ಎಂದೂ, ಉತ್ತರದಳದಲ್ಲಿ ವರುಣಾಯ ಎಂದೂ, ಎಂಟನೆಯದಾದ ಈಶಾನ್ಯದಳದಲ್ಲಿ ರವಯೇ ಎಂದೂ ಹೇಳಿ ಅರ್ಚಿಸಬೇಕು.

ಆದಾವಂತೇ ಚ ತನ್ಮಧ್ಯೇ ನಮೋಽಸ್ತು ಪರಮಾತ್ಮನೇ ।
ಮಂತ್ರೈರೇವಂ ಸಮಭ್ಯರ್ಚ್ಯ ನಮಸ್ಕಾರಾಂತದೀಪಿತೈಃ ॥ ೭ ॥

ಶುಕ್ಲವಸ್ತ್ರಫಲೈರ್ಭಕ್ಷ್ಯೈರ್ಧೂಪಮಾಲ್ಯಾನುಲೇಪನೈಃ ।
ಸ್ಥಂಡಿಲೇ ಪೂಜಯೇದ್ಭಕ್ತ್ಯಾ ಗುಡೇನ ಲವಣೇನ ಚ ॥ ೮ ॥

ತತೋ ವ್ಯಾಹೃತಿಹೋಮೇನ ವಿಭಜ್ಯ ದ್ವಿಜಪುಂಗವಾನ್ ।
ಶಕ್ತಿತಸ್ತರ್ಪಯೇದ್ಭಕ್ತ್ಯಾ ಗುಡಕ್ಷೀರಘೃತಾದಿಭಿಃ ॥ ೯ ॥

ತಿಲಪಾತ್ರಂ ಹಿರಣ್ಯಂ ಚ ಗುರವೇ ಚ ನಿವೇದಯೇತ್ ।
ಏವಂ ನಿಯಮಕೃತ್ಸ್ನಾತ್ವಾ ಪ್ರಾತರುತ್ಥಾಯ ಮಾನವಃ ॥ ೧೦ ॥

---

೭. ಈ ಹಿಂದೆ ಹೇಳಿದ ಎಂಟು ಸೂರ್ಯನಾಮಗಳ ಆದಿಯಲ್ಲಿ ಓಂ ಕಾರವನ್ನೂ ಮತ್ತು ಅಂತ್ಯದಲ್ಲಿ ನಮಃ ಎಂಬ ಪದವನ್ನೂ ಸೇರಿಸಿ ಅರ್ಚಿಸಬೇಕು. ಆ ಪದ್ಮದ ಮಧ್ಯಭಾಗದ ಕರ್ಣಿಕೆಯಲ್ಲಿ ಪರಮಾತ್ಮನೇ ನಮಃ ಎಂದು ಹೇಳಿ ಅರ್ಚಿಸತಕ್ಕುದು. ಈರೀತಿ ನಮಃ ಎಂಬುದು ಅಂತವಾಗಿರುವಂತೆ ಮಂತ್ರೋಚ್ಚಾರಣೆಮಾಡಿ ಅರ್ಚಿಸಬೇಕು.

೮. ಸ್ಥಂಡಿಲಸ್ಥವಾದ ಪದ್ಮದಲ್ಲಿ ಬಿಳೀಬಟ್ಟೆ, ಹಣ್ಣು ಭಕ್ಷ್ಯ, ಧೂಪ, ಮಾಲ್ಯ, ಅನುಲೇಪನಾರ್ಥದ, ಗಂಧ, ಬೆಲ್ಲ, ಉಪ್ಪು ಇತ್ಯಾದಿಗಳಿಂದ ಭಕ್ತಿ ಪೂರ್ವಕವಾಗಿ ಪೂಜೆ ಮಾಡಬೇಕು.

೯. ಅನಂತರ ಓಂ, ಭೂಃ ಮೊದಲಾದ ವ್ಯಾಹೃತಿ ಮಂತ್ರಗಳಿಂದ ಪ್ರತ್ಯೇಕವಾಗಿ ಹೋಮಮಾಡಿ, ಸ್ವಶಕ್ತ್ಯಾನುಸಾರವಾಗಿ ಬೆಲ್ಲ, ಹಾಲು, ತುಪ್ಪ ಮೊದಲಾದುವುಗಳಿಂದ ಭಕ್ತಿಪೂರ್ವಕವಾಗಿ ಬ್ರಾಹ್ಮಣೋತ್ತಮರಿಗೆ ಭೋಜನ ಮಾಡಿಸಿ ಸತ್ಕರಿಸಿ ತೃಪ್ತಿಪಡಿಸಬೇಕು.

೧೦. ಮತ್ತು ತಿಲಪೂರ್ಣವಾದ ಪಾತ್ರೆ, ಹಿರಣ್ಯ ಮುಂತಾದುವುಗಳನ್ನು ತನ್ನ ಗುರುವಿಗೆ ಅರ್ಪಿಸಬೇಕು. ಈರೀತಿ ವ್ರತಾನುಷ್ಠಾನ ಮಾಡಿದಮೇಲೆ ಆ ಪುರುಷನು ಪುನಃ ಸ್ನಾನ ಮಾಡಬೇಕು.

ಕೃತಸ್ನಾನಜಪೋ ವಿಪ್ರೈಃ ಸಹೈವ ಘೃತಪಾಯಸಂ ।
ಭುಕ್ತ್ವಾ ಚ ವೇದವಿದ್ವದ್ಭಿರ್ಬೈಡಾಲವ್ರತವರ್ಜಿತೈಃ ॥ ೧೧ ॥

ಏವಂ ಸಂವತ್ಸರಸ್ಯಾಂತೇ ಕೃತ್ವೈತದಖಿಲಂ ನೃಪ ।
ಉದ್ಯಾಪಯೇದ್ಯಥಾಶಕ್ತಿ ಭಾಸ್ಕರಂ ಸಂಸ್ಮರನ್ಹೃದಿ ॥ ೧೨ ॥

ಘೃತಪಾತ್ರಂ ಸಕರಕಂ ಸೋದಕುಂಭಂ ನಿವೇದಯೇತ್ ।
ವಸ್ತ್ರಾಲಂಕಾರಸಂಯುಕ್ತಾಂ ಸುವರ್ಣಾಸ್ಯಾಂ ಪಯಸ್ವಿನೀಂ ॥ ೧೩ ॥

ಏಕಾಮಪಿ ಪ್ರದದ್ಯಾದ್ಗಾಂ ವಿತ್ತಹೀನೋ ವಿಮತ್ಸರಃ ।
ವಿತ್ತಶಾಠ್ಯಂ ನ ಕುರ್ವೀತ ತತೋ ಮೋಹಾತ್ಪತತ್ಯಧಃ ॥ ೧೪ ॥

---

೧೧. ಮರುದಿನ ಪ್ರಾತಃಕಾಲದಲ್ಲಿ ಎದ್ದು ಸ್ನಾನ ಜಪಾದಿ ನಿತ್ಯಕರ್ಮಗಳನ್ನು ಮಾಡಿದಮೇಲೆ, ವೇದ ವೇದಾರ್ಥಗಳನ್ನು ತಿಳಿದಿರುವವರಾಗಿಯೂ, ಬಿಡಾಲವ್ರತ ಎಂದರೆ ದ್ರೋಹಚಿಂತನಾದಿದೋಷ ವರ್ಜಿತರಾಗಿಯೂ ಇರುವ ಬ್ರಾಹ್ಮಣರನ್ನು ಆಹ್ವಾನಿಸಿ, ಘೃತಮಿಶ್ರಿತ ಪಾಯಸಾದಿಗಳನ್ನು ಭೋಜನ ಮಾಡಿಸಬೇಕು.

೧೨. ಎಲೈ ರಾಜನೇ ! ಈರೀತಿ ಈ ವ್ರತವನ್ನು ಆ ವರ್ಷ ಆಚರಿಸಿ ವರ್ಷದ ಕೊನೆಯಲ್ಲಿ ಇದೇ ರೀತಿ ಎಲ್ಲವನ್ನೂ ಆಚರಿಸುವುದಲ್ಲದೆ ಶ್ರೀ ಭಾಸ್ಕರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಯಥಾಶಕ್ತಿ ಈ ವ್ರತದ ಉದ್ಯಾಪನ ಮಹೋತ್ಸವವನ್ನು ನೆರವೇರಿಸಬೇಕು.

೧೩. ಆಗ ಘೃತಪೂರ್ಣ ಪಾತ್ರೆ, ಕಮಂಡಲು, ಉದಕುಂಭ ಇವುಗಳನ್ನು ದಾನ ಮಾಡಬೇಕು. ಹಾಲನ್ನು ಕೊಡುತ್ತಿರುವ ಹಸುವನ್ನು ಸುವರ್ಣದ ಮುಖವಾಡದಿಂದ ಅಲಂಕರಿಸಿ ವಸ್ತ್ರಾದ್ಯಲಂಕಾರ ಯುಕ್ತವಾಗಿ ದಾನ ಮಾಡಬೇಕು.

೧೪. ಬಡವನು ಕೊನೆಗೆ ಒಂದು ಗೋದಾನವನ್ನಾದರೂ ಮಾಡಬೇಕು. ಈ ವ್ರತವನ್ನಾಚರಿಸುವಾಗ ಕಾರ್ಪಣ್ಯಮಾಡಬಾರದು. ಧನಲೋಭಯುತನಾಗಿ ವಿಧ್ಯುಕ್ತ ಕ್ರಮವಿಲ್ಲದೆ ಈ ವ್ರತವನ್ನಾಚರಿಸುವವನು ಅಧಃ ಪತನವನ್ನು ಹೊಂದುತ್ತಾನೆ.

ಅನೇನ ವಿಧಿನಾ ಯಸ್ತು ಕುರ್ಯಾತ್ಕಲ್ಯಾಣಸಪ್ತಮೀಂ ।
ಶೃಣುಯಾದ್ವಾ ಪಠೇದ್ವಾಪಿ ಸೋಽಪಿ ಪಾಪೈಃ ಪ್ರಮುಚ್ಯತೇ ॥ ೧೫ ॥

ಯಶ್ಚಾಷ್ಟಪತ್ರ ಕಮಲೋದರಕರ್ಣಿಕಾಯಾಂ ।
ಸಂಪೂಜಯೇತ್ಕುಸುಮಧೂಪ ವಿಲೇಪನಾದ್ಯೈಃ ।
ಷಷ್ಠ್ಯಾಃ ಪರೇಽಹನಿ ನರಾರ್ತಿಹರಂ ದಿನೇಶಂ ।
ಕಲ್ಯಾಣಭಾಜನಮಸೌ ಭವತೇ ಹಿ ಜಂತುಃ ॥ ೧೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಕಲ್ಯಾಣಸಪ್ತಮೀ ವ್ರತವರ್ಣನಂ
ನಾಮಾಷ್ಟಚತ್ವಾರಿಂಶೋಽಧ್ಯಾಯಃ.



---

೧೫. ಈ ಕ್ರಮದಿಂದ ಯಾವನು ಈ ಕಲ್ಯಾಣ ಸಪ್ತಮೀ ವ್ರತವನ್ನು ಆಚರಿಸುವನೋ, ಯಾವನು ಈ ವ್ರತವಿಧಾನವನ್ನು ವಿವರಿಸುವ ಗ್ರಂಥವನ್ನು ಶ್ರವಣಮಾಡುವನೋ, ಅಥವಾ ಇದನ್ನು ಪಠನಮಾಡುವನೋ, ಅವನು ಸರ್ವ ಪಾಪ ವಿನಿರ್ಮುಕ್ತನಾಗುವನು.

೧೬. ಯಾವಾತನು ಷಷ್ಠಿಯ ಮರುದಿನವಾದ ಸಪ್ತಮೀ ತಿಥಿಯಲ್ಲಿ ಅಷ್ಟದಳ ಪದ್ಮವನ್ನು ಬರೆದು, ಆ ಕಮಲ ಮಧ್ಯಭಾಗವಾದ ಕರ್ಣಿಕೆಯಲ್ಲಿ ಸರ್ವ ಪೀಡಾನಿವಾರಕನಾದ ಶ್ರೀ ಭಗವಾನ್ ಸೂರ್ಯನನ್ನು ಪುಷ್ಪ, ಗಂಧ, ಚಂದನ, ಧೂಪ, ವಿಲೇಪನಾದಿಗಳಿಂದ ಅರ್ಚಿಸುವನೋ, ಅಂತಹವನು ಸಮಸ್ತ ಕಲ್ಯಾಣ ಗಳಿಗೂ ಪಾತ್ರನಾಗಿ ಮರಣಾನಂತರ ಸೂರ್ಯಲೋಕದಲ್ಲಿ ವೈಭವದಿಂದ ಮೆರೆ ಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಕಲ್ಯಾಣ
ಸಪ್ತಮೀ ವ್ರತವರ್ಣನವೆಂಬ ನಲವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನಪಂಚಾಶತ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಶರ್ಕರಾಸಪ್ತಮೀಂ ವಕ್ಷ್ಯೇ ಸರ್ವಕಲ್ಮಷನಾಶಿನೀಂ ।
ಆಯುರಾರೋಗ್ಯಮೈಶ್ವರ್ಯಂ ಯಯಾಽನಂತಂ ಪ್ರಜಾಯತೇ ॥ ೧ ॥

ಮಾಧವಸ್ಯ ಸಿತೇ ಪಕ್ಷೇ ಸಪ್ತಮ್ಯಾಂ ಶ್ರದ್ಧಯಾನ್ವಿತಃ ।
ಪ್ರಾತಃ ಸ್ನಾತ್ವಾ ತಿಲೈಃ ಶುದ್ಧೈಃ ಶುಕ್ಲಮಾಲ್ಯಾನುಲೇಪನೈಃ ॥ ೨ ॥

ಸ್ಥಂಡಿಲೇ ಪದ್ಮಮಾಲಿಖ್ಯ ಕುಂಕುಮೇನ ಸಕರ್ಣಿಕಂ ।
ತಸ್ಮಿನ್ನಮಃ ಸವಿತ್ರೇತಿ ಗಂಧಪುಷ್ಪಂ ನಿವೇದಯೇತ್ ॥ ೩ ॥

---

### ನಲವತ್ತೊಂಭತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಸರ್ವ ಪಾಪ ನಿವಾರಕವಾದ ಶರ್ಕರಾ ಸಪ್ತಮಿ ಎಂಬ ಮತ್ತೊಂದು ವ್ರತನಿಯಮವನ್ನು ಹೇಳುತ್ತೇನೆ. ಈ ವ್ರತಾಚರಣೆಯಿಂದ ಆಯುರಾರೋಗ್ಯ ಐಶ್ವರ್ಯ ಸಂಪತ್ತು ಗಳು ಅನಂತವಾಗಿ ಪ್ರಾಪ್ತವಾಗುವುವು.

೨. ವೈಶಾಖಮಾಸದ ಶುಕ್ಲಪಕ್ಷದ ಸಪ್ತಮಿಯ ದಿನವಲ್ಲಿ ಪ್ರಾತಃಕಾಲ ಸ್ನಾನಾದಿಗಳನ್ನು ನೆರವೇರಿಸಿ ಸ್ಥಂಡಿಲವಲ್ಲಿ ಕುಂಕುಮದಿಂದ ಕರ್ಣಿಕಾ ಸಹಿತ ವಾದ ಕಮಲವನ್ನು ಬರೆಯಬೇಕು.

೩. ಅದರಲ್ಲಿ "ಸವಿತ್ರೇ ನಮಃ" ಎಂದು ಹೇಳಿ ಶುದ್ಧ ತಿಲ, (ಶುಕ್ಲ ಮಾಲ್ಯ, ಅನುಲೇಪನ), ಗಂಧಪುಷ್ಪಾದಿಗಳಿಂದ ಸೂರ್ಯನನ್ನು ಪೂಜಿಸಬೇಕು.

ಸ್ಥಾಪಯೇದುದಕುಂಭಂ ಚ ಶರ್ಕರಾಪಾತ್ರಸಂಯುತಂ ।
ರಕ್ತವಸ್ತ್ರೈಃ ಸ್ವಲಂಕೃತ್ಯ ಶುಕ್ಲಮಾಲ್ಯಾನುಲೇಪನೈಃ ॥ ೪ ॥

ಸುವರ್ಣಾಶ್ವಸಮಾಯುಕ್ತಂ ಮಂತ್ರೇಣಾನೇನ ಪೂಜಯೇತ್ ।
ವಿಶ್ವೇದೇವಮಯೋ ಯಸ್ಮಾದ್ವೇದವಾದೀತಿ ಪಠ್ಯತೇ ॥ ೫ ॥

ತ್ವಮೇವಾಮೃತಸರ್ವಸ್ವಮತಃ ಪಾಹಿ ಸನಾತನ ।
ಸೌರಸೂಕ್ತಂ ಜಪಂಸ್ತಿಷ್ಠೇತ್ಪುರಾಣಶ್ರವಣೇನ ವಾ ॥ ೬ ॥

ಅಹೋರಾತ್ರೇ ಗತೇ ಪಶ್ಚಾದಷ್ಟಮ್ಯಾಂ ಕೃತನಿತ್ಯಕಃ ।
ಸರ್ವಂ ಚ ವೇದವಿದುಷೇ ಬ್ರಾಹ್ಮಣಾಯೋಪಪಾದಯೇತ್ ॥ ೭ ॥

---

೪. ಶರ್ಕರೆಯಿಂದ ಪೂರ್ಣವಾದ ಒಂದು ಪಾತ್ರೆಯ ಜತೆಯಲ್ಲಿ ಉದಕುಂಭವನ್ನು ಸ್ಥಾಪಿಸಿ, ಅದನ್ನು ರಕ್ತವಸ್ತ್ರ, ಶುಕ್ಲಮಾಲ್ಯ, ಅನುಲೇಪನಾದಿಗಳಿಂದ ಅಲಂಕರಿಸಬೇಕು.

೫-೬. ಭಂಗಾರದ ಕುದುರೆಯನ್ನು ಮಾಡಿಸಿ ಆವಾಹಿತನಾದ ಸೂರ್ಯನ ಜೊತೆಯಲ್ಲಿಟ್ಟು ಈ ಮುಂದೆ ಹೇಳುವ,

ವಿಶ್ವೇದೇವ ಮಯೋ ಯಸ್ಮಾತ್ ವೇದವಾದೀತಿ ಪಠ್ಯತೇ ।
ತ್ವಮೇವಾಮೃತ ಸರ್ವಸ್ವಮತಃ ಪಾಹಿ ಸನಾತನ ॥

ಎಂಬ ಮಂತ್ರದಿಂದ ಸೂರ್ಯನನ್ನು ಪೂಜಿಸಬೇಕು.

(ಎಲೈ ಸನಾತನನಾದ ಆದಿತ್ಯನೇ ! ನೀನು ಸರ್ವದೇವತಾ ಸ್ವರೂಪಿಯಾಗಿರುವೆ. ಮತ್ತು ವೇದವಾದಿ ಎಂದು ಶಾಸ್ತ್ರದಲ್ಲಿ ಉಕ್ತನಾಗಿದ್ದೀ. ನೀನೇ ದೇವತೆಗಳ ಸರ್ವಸ್ವವಾದ ಅಮೃತಸ್ವರೂಪನು. ಆದುದರಿಂದ ನನ್ನನ್ನು ರಕ್ಷಿಸು. ಎಂಬುದೇ ಇದರ ಅರ್ಥ). ಆದಿನ ಪೂಜಾನಂತರದಲ್ಲಿ ಸೌರಸೂಕ್ತವನ್ನು ಜಪಿಸುತ್ತಿರಬೇಕು. ಅಥವಾ ಪುರಾಣಶ್ರವಣದಿಂದ ಕಾಲವನ್ನು ಕಳೆಯಬೇಕು.

೭. ಈರೀತಿಯಾಗಿ ಆ ಸಪ್ತಮಿಯ ಅಹೋರಾತ್ರಿಗಳನ್ನು ಕಳೆದು ಮರುದಿನ ಅಷ್ಟಮಿಯಲ್ಲಿ ಸ್ನಾನ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಿದ ಮೇಲೆ ಪುನಃ ಪೂಜೆಮಾಡಿ ಆ ವಸ್ತ್ರ, ಸುವರ್ಣಾಶ್ವಾದಿ ಯುಕ್ತವಾದ ಕಲಶ ಶರ್ಕರಾಪಾತ್ರಾದಿಗಳನ್ನು ವೇದಜ್ಞನಾದ ಬ್ರಾಹ್ಮಣನಿಗೆ ದಾನ ಮಾಡಬೇಕು.

ಭೋಜಯೇಚ್ಛಕ್ತಿತೋ ವಿಪ್ರಾನ್ಶರ್ಕರಾಘೃತಪಾಯಸೈಃ ।
ಭುಂಜೀತಾತ್ತೈಲಲವಣಂ ಸ್ವಯಮಪ್ಯಥ ವಾಗ್ಯತಃ ॥ ೮ ॥

ಅನೇನ ವಿಧಿನಾ ಸರ್ವಂ ಮಾಸಿಮಾಸಿ ಸಮಾಚರೇತ್ ।
ವತ್ಸರಾಂತೇ ಪುನರ್ದದ್ಯಾದ್ಬ್ರಾಹ್ಮಣಾಯ ಸಮಾಹಿತಃ ॥ ೯ ॥

ಶಯನಂ ವಸ್ತ್ರಸಂವೀತಂ ಶರ್ಕರಾಕಲಶಾನ್ವಿತಂ ।
ಸರ್ವೋಪಸ್ಕರಸಂಯುಕ್ತಂ ತಥೈಕಾಂ ಗಾಂ ಪಯಸ್ವಿನೀಂ ॥ ೧೦ ॥

ಗೃಹಂ ಚ ಶಕ್ತಿತೋ ದದ್ಯಾತ್ಸಮಸ್ತೋಪಸ್ಕರಾನ್ವಿತಂ ।
ಸಹಸ್ರೇಣಾಪಿ ನಿಷ್ಕಾಣಾಂ ಕೃತ್ವಾ ದದ್ಯಾಚ್ಛತೇನ ವಾ ॥ ೧೧ ॥

೮. ಅನಂತರ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಸಕ್ಕರೆ, ತುಪ್ಪ, ಪಾಯಸ ಇತ್ಯಾದಿಗಳಿಂದ ಭೋಜನ ಮಾಡಿಸಬೇಕು. ಅನಂತರ ತಾನು ತೈಲ, ಲವಣ ಇವೆರಡನ್ನೂ ವರ್ಜ್ಯಮಾಡಿ ಮೌನದಿಂದ ಭೋಜನ ಮಾಡಬೇಕು.

೯. ಈ ಕ್ರಮದಿಂದ ಎಲ್ಲವನ್ನೂ ಪ್ರತಿ ತಿಂಗಳಿನಲ್ಲೂ ಆಚರಿಸಬೇಕು. ಒಂದು ವರ್ಷವಾದಮೇಲೆ ಸಮಾಹಿತಮನಸ್ಕನಾಗಿ ಬ್ರಾಹ್ಮಣನಿಗೆ ಈ ಮುಂದೆ ಹೇಳುವ ದಾನವನ್ನು ಕೊಡಬೇಕು.

೧೦. ವಸ್ತ್ರಸಮೇತವಾದ ಸಕ್ಕರೆಯ ಕಲಶವನ್ನೂ, ಶಯ್ಯಾದಿ ಸರ್ವೋಪಕರಣ ವಸ್ತುಗಳಿಂದ ಸಮೇತವಾದ ಮಂಚವನ್ನೂ, ಮತ್ತು ಹಾಲು ಕೊಡುವ ಸಾಧು ಹಸುವನ್ನೂ ದಾನ ಮಾಡಬೇಕು.

೧೧–೧೨. ಸಾಧ್ಯವಾದರೆ ಶಕ್ತ್ಯನುಸಾರ ಸಮಸ್ತ ಗೃಹ ಸಂಭಾರಗಳಿಂದ ಕೂಡಿದ ಗೃಹವನ್ನು ದಾನ ಮಾಡಬೇಕು. ಅಲ್ಲದೆ ಒಂದುಸಹಸ್ರ ನಿಷ್ಕತೂಕವುಳ್ಳದ್ದೋ ಅಥವಾ ನೂರುನಿಷ್ಕತೂಕವುಳ್ಳದ್ದೋ, ಇಲ್ಲವಾದರೆ ಹತ್ತು ನಿಷ್ಕವೋ ಇಲ್ಲದಿದ್ದರೆ ಮೂರೋ, ಎರಡೋ, ಕೊನೆಗೆ ಒಂದು ನಿಷ್ಕತೂಕವುಳ್ಳ ಭಂಗಾರ

ದಶಭಿರ್ದ್ವಿತ್ರಿಭಿರ್ನಿಷ್ಕೈಸ್ತದರ್ಧೇನಾಪಿ ಭಕ್ತಿತಃ ।
ಸುವರ್ಣಾಶ್ವಃ ಪ್ರದಾತವ್ಯಃ ಪೂರ್ವವನ್ಮಂತ್ರವಾಚನಂ ॥ ೧೨ ॥

ವಿತ್ತಶಾಠ್ಯಂ ನ ಕುರ್ವೀತ ಕುರ್ವನ್ದೋಷಾನ್ಸಮಶ್ನುತೇ ।
ಅಮೃತಂ ಪಿಬತೋ ವಕ್ತ್ರಾತ್ಸೂರ್ಯಸ್ಯಾಮೃತಬಿಂದವಃ ॥ ೧೩ ॥

ನಿಪೇತುರೇತ ಉತ್ಥಾಯ ಶಾಲಿಮುದ್ಗೇಕ್ಷವಃ ಸ್ಮೃತಾಃ ।
ಶರ್ಕರಾ ಚ ಪರಂ ತಸ್ಮಾದಿಕ್ಷುಸಾರೋದ್ಭವಾ ಮತಾ ॥ ೧೪ ॥

ಇಷ್ಟಾ ರವೇರತಃ ಪ್ರಣ್ಯಾ ಶರ್ಕರಾ ಹವ್ಯಕವ್ಯಯೋಃ ।
ಶರ್ಕರಾಸಪ್ತಮೀ ಚೈಷಾ ವಾಜಿಮೇಧಫಲಪ್ರದಾ ॥ ೧೫ ॥

ಸರ್ವೇ ಹ್ಯುಪಶಮಂ ಯಾಂತಿ ಪುನಃ ಸಂತತಿವರ್ಧಿನೀ ।
ಯಃ ಕುರ್ಯಾತ್ಪರಯಾ ಭಕ್ತ್ಯಾ ಸ ಪರಂ ಬ್ರಹ್ಮ ಗಚ್ಛತಿ ॥ ೧೬ ॥

---

ದಿಂದ ಕುದುರೆಯನ್ನು ಮಾಡಿಸಿ ಆ ಸುವರ್ಣಾಶ್ವವನ್ನು ಹಿಂದೆ ಹೇಳಿದ " ವಿಶ್ವೇದೇವ ಮಯೋ ಯಸ್ಮಾತ್ '' ಇತ್ಯಾದಿ ಮಂತ್ರವನ್ನುಚ್ಚರಿಸಿ ಭಕ್ತಿಯಿಂದ ಬ್ರಾಹ್ಮಣನಿಗೆ ದಾನ ಮಾಡಬೇಕು.

೧೩-೧೪. ಈ ವಿಷಯದಲ್ಲಿ ವಿತ್ತಶಾಠ್ಯ (ಹಣಲೋಭ) ವನ್ನು ಮಾಡಬಾರದು. ಈರೀತಿ ಧನಲೋಭವನ್ನು ತೋರಿಸಿದವನು ದೋಷ ಭಾಗಿಯಾಗುವನು. ಸೂರ್ಯನು ಅಮೃತಪಾನಮಾಡುವಾಗ ಅವನ ಬಾಯಿಯಿಂದ ಅಮೃತ ಬಿಂದುಗಳು ಜಾರಿ ಭೂಮಿಯಲ್ಲಿ ಬಿದ್ದುವು. ಪತಿತವಾದ ಈ ಅಮೃತ ಬಿಂದುಗಳೇ ಭತ್ತ, ಹೆಸರು, ಕಬ್ಬು ಇವಾಗಿ ಪರಿಣಮಿಸಿದವು ಎಂದು ಉಕ್ತವಾಗಿವೆ. ಮಾನವರು ಆ ಕಬ್ಬಿನಿಂದ ರಸ ತೆಗೆದರು. ಆ ರಸದಿಂದ ಸಕ್ಕರೆಯಾಯಿತು.

೧೫. ಆದುದರಿಂದ ಸಕ್ಕರೆಯು ಸೂರ್ಯನಿಗೆ ಇಷ್ಟವಾಗಿದೆ. ಮತ್ತು ಅದು ಹವ್ಯಕರ್ಮಗಳಿಗೆ (ದೇವಪಿತೃ ಕಾರ್ಯಗಳಿಗೆ) ಪ್ರಶಸ್ತವಾದದ್ದು. ಈ ಶರ್ಕರಾ ಸಪ್ತಮೀ ವ್ರತವು ಅಶ್ವಮೇಧಯಾಗದಷ್ಟು ಫಲದಾಯಕವಾಗಿದೆ.

೧೬. ಮತ್ತು ಈ ವ್ರತಾಚರಣೆಯಿಂದ ಸರ್ವೋಪದ್ರವಗಳೂ ಶಾಂತಿಯಾಗಿ ಸಂತಾನ ವೃದ್ಧಿಯಾಗುವುದು. ಯಾವಾತನು ಪರಮಭಕ್ತಿಯಿಂದ ಈ ವ್ರತವನ್ನು ಆಚರಿಸುವನೋ ಅವನು ಪರಬ್ರಹ್ಮವನ್ನು ಹೊಂದುತ್ತಾನೆ.

ಕಲ್ಪಮೇಕಂ ವಸೇತ್ಸ್ವರ್ಗೇ ತತೋ ಯಾತಿ ಪರಂ ಪದಂ　　॥ ೧೭ ॥

ಇದಮನಘ ಶೃಣೋತಿ ಯಃ ಸ್ಮರೇದ್ವಾ ।
ಪರಿಪಠತೀಹ ಸುರೇಶ್ವರಸ್ಯ ಲೋಕೇ ।
ಮತಿಮಪಿ ಚ ದದಾತಿ ಯೋ ಜನಾನಾಂ ।
ಅಮರವಧೂಜನಕಿನ್ನರೈಃ ಸ ಪೂಜ್ಯಃ　　॥ ೧೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಶರ್ಕರಾಸಪ್ತಮೀವ್ರತ ವರ್ಣನಂ
ನಾಮ್ನೈಕೋನಪಂಚಾಶತ್ತಮೋಧ್ಯಾಯಃ.



---

೧೭. ಈ ವ್ರತಾನುಷ್ಠಾತೃವು ಒಂದು ಕಲ್ಪದವರೆಗೂ ಸ್ವರ್ಗವಾಸಿಯಾಗಿದ್ದು ಅನಂತರ ಪರಮಪದವನ್ನು ಹೊಂದುವನು.

೧೮. ಅಯ್ಯಾ ನಿಷ್ಕಲ್ಮಷನಾದ ಯುಧಿಷ್ಠಿರನೇ ! ಯಾವನು ಈ ವ್ರತವನ್ನು ಶ್ರವಣಮಾಡುವನೋ ಅಥವಾ ಸ್ಮರಿಸುವನೋ, ಯಾವಾತನು ಪಠನ ಮಾಡುವನೋ ಅಥವಾ ಇತರ ಜನರಿಗೆ ಈ ವ್ರತೋಪದೇಶ ಮಾಡುವನೋ (ಇದರ ಜ್ಞಾನವನ್ನು ಹೆಚ್ಚಿಸುವನೋ) ಅಂತಹವನು ಸ್ವರ್ಗಲೋಕವನ್ನು ಸೇರಿ ಅಲ್ಲಿ ದೇವತಾಸ್ತ್ರೀಯರಿಂದಲೂ, ಕಿನ್ನರ ಸ್ತ್ರೀಯರಿಂದಲೂ ಪೂಜಿತನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶರ್ಕರಾ
ಸಪ್ತಮೀ ವ್ರತವರ್ಣನವೆಂಬ ನಲವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಾಶತ್ತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅತಃಪರಂ ಪ್ರವಕ್ಷ್ಯಾಮಿ ತದ್ವತ್ಕಮಲಸಪ್ತಮೀಂ ।
ಯಸ್ಯಾಃ ಸಂಕೀರ್ತನಾದೇವ ತುಷ್ಯತೀಹ ದಿವಾಕರಃ ॥ ೧ ॥

ವಸಂತೇಽಮಲಸಪ್ತಮ್ಯಾಂ ಸ್ನಾತಃಸನ್ಗೌರಸರ್ಷಪೈಃ ।
ತಿಲಪಾತ್ರೇ ಚ ಸೌವರ್ಣಂ ನಿಧಾಯ ಕಮಲಂ ಶುಭಂ ॥ ೨ ॥

---

## ಐವತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಈಗ ಹೇಳಿದಂತೆಯೇ ಇನ್ನು ಮುಂದೆ ಕಮಲಸಪ್ತಮೀ ವ್ರತವನ್ನು ಹೇಳುತ್ತೇನೆ ಕೇಳು. ಆ ಕಮಲಸಪ್ತಮೀ ವ್ರತದ ನಾಮಸಂಕೀರ್ತನದಿಂದಲೇ ಸೂರ್ಯನು ಸುಪ್ರೀತನಾಗುತ್ತಾನೆ.

೨. ವಸಂತ ಋತುವಿನಲ್ಲಿ ಶುಕ್ಲಪಕ್ಷದ ಸಪ್ತಮಿಯದಿನ ಬಿಳೀ ಸಾಸುವೆಯ ಎಣ್ಣೆಯನ್ನು ಲೇಪಮಾಡಿಕೊಂಡು ಸ್ನಾನಮಾಡಿ, ನಿತ್ಯಕರ್ಮಾನುಷ್ಠಾನಾನಂತರ ತಿಲಪೂರ್ಣವಾದ ಪಾತ್ರೆಯಲ್ಲಿ ಭಂಗಾರದ ಕಮಲವನ್ನು ಸ್ಥಾಪಿಸಬೇಕು.

ವಸ್ತ್ರಯುಗ್ಮಾವೃತಂ ಕೃತ್ವಾ ಗಂಧಪುಷ್ಪೈರಥಾಽರ್ಚಯೇತ್ ।
ನಮಸ್ತೇ ಪದ್ಮಹಸ್ತಾಯ ನಮಸ್ತೇ ವಿಶ್ವಧಾರಿಣೇ ॥ ೩ ॥

ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತು ತೇ ।
ತತೋ ದ್ವಿಕಾಲವೇಲಾಯಾಮುದಕುಂಭಸಮನ್ವಿತಂ ॥ ೪ ॥

ವಿಪ್ರಾಯ ದದ್ಯಾತ್ಸಂಪೂಜ್ಯ ವಸ್ತ್ರಮಾಲ್ಯವಿಭೂಷಣೈಃ ।
ಅಹೋರಾತ್ರೇ ಗತೇ ಪಶ್ಚಾದಷ್ಟಮ್ಯಾಂ ಭೋಜಯೇದ್ದ್ವಿಜಾನ್ ॥ ೫ ॥

ಯಥಾಶಕ್ತ್ಯಾಥ ಭುಂಜೀತ ವಿಮಾಂಸಂ ತೈಲವರ್ಜಿತಂ ।
ಅನೇನ ವಿಧಿನಾ ಶುಕ್ಲಸಪ್ತಮ್ಯಾಂ ಮಾಸಿಮಾಸಿ ಚ ॥ ೬ ॥

---

೩–೫. ಆ ಕಮಲಕ್ಕೆ ವಸ್ತ್ರಯುಗಳವನ್ನು ಹೊದ್ದಿಸಿ ಅನಂತರ ಗಂಧ, ಪುಷ್ಪಾದಿಗಳಿಂದರ್ಚಿಸಿ ಅನಂತರ,

ನಮಸ್ತೇ ಪದ್ಮಹಸ್ತಾಯ ನಮಸ್ತೇ ವಿಶ್ವಧಾರಿಣೇ ।
ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಸ್ತುತೇ ॥

ಎಂದು ಪ್ರಾರ್ಥನೆ ಮಾಡಬೇಕು. (ಎಲೈ ಸೂರ್ಯನೇ ! ಪದ್ಮಹಸ್ತನಾದ ನಿನಗೆ ನಮಸ್ಕಾರ. ಪ್ರಪಂಚಧಾರಕನಾದ ನಿನಗೆ ವಂದಿಸುವೆನು. ಮತ್ತುಹಗಲನ್ನುಂಟು ಮಾಡುವವನೂ ಪ್ರಕಾಶವನ್ನು ಕೊಡತಕ್ಕವನೂ ಆದ ನಿನಗೆ ನಮಸ್ಕಾರಗಳು ಎಂದು ಇದರ ಅರ್ಥ). ಅನಂತರ ಎರಡು ಕಾಲವು ಸಂಗಮವಾಗುವ ಸಾಯಂ ಸಂಧ್ಯಾ ಸಮಯದಲ್ಲಿ ಬ್ರಾಹ್ಮಣನನ್ನು ವಸ್ತ್ರ, ಮಾಲ್ಯ, ಭೂಷಣಾದಿ ಗಳಿಂದ ಪೂಜೆಮಾಡಿ ಉದಕುಂಭ ಸಮೇತವಾಗಿ ಆ ಸುವರ್ಣ ಕಮಲವನ್ನು ದಾನ ಮಾಡಬೇಕು. ಈರೀತಿ ಆ ಸಪ್ತಮಿಯ ಹಗಲು ಮತ್ತು ರಾತ್ರಿ ಸಹ ಕಳೆದಮೇಲೆ ಅಷ್ಟಮಿಯದಿನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

೬-೭. ಸ್ವಶಕ್ತ್ಯಾನುಸಾರವಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಿದ ಮೇಲೆ ಮಾಂಸ, ತೈಲ ಇವೆರಡನ್ನೂ ವರ್ಜ್ಯಮಾಡಿ ತಾನು ಭೋಜನ ಮಾಡ ಬೇಕು. ಪ್ರತಿ ತಿಂಗಳಿನ ಶುಕ್ಲಪಕ್ಷ ಸಪ್ತಮಿಯಲ್ಲಿ ಧನಲೋಭವನ್ನು ತ್ಯಜಿಸಿ

ಸರ್ವಂ ಸಮಾಚರೇದ್ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।
ವ್ರತಾಂತೇ ಶಯನಂ ದದ್ಯಾತ್ಸುವರ್ಣಕಮಲಾನ್ವಿತಂ ॥ ೭ ॥

ಗಾವಂ ಸ ದದ್ಯಾಚ್ಛಕ್ತ್ಯಾತು ಸುವರ್ಣಾಢ್ಯಾಂ ಪಯಸ್ವಿನೀಂ ।
ಭಾಜನಾಸನ ದೀಪಾದೀನ್ದದ್ಯಾದಿಷ್ಟಾನುಪಸ್ಕರಾನ್ ॥ ೮ ॥

ಅನೇನ ವಿಧಿನಾ ಯಸ್ತು ಕುರ್ಯಾತ್ಕಮಲಸಪ್ತಮೀಂ ।
ಲಕ್ಷ್ಮೀಮನಂತಾಮಭ್ಯೇತ್ಯ ಸರ್ವಲೋಕೇ ಚ ಮೋದತೇ ॥ ೯ ॥

ಕಲ್ಪೇಕಲ್ಪೇ ತಥಾ ಲೋಕಾನ್ಸಪ್ತ ಗತ್ವಾ ಪೃಥಕ್ಪೃಥಕ್ ।
ಅಪ್ಸರೋಭಿಃ ಪರಿವೃತೋ ತತೋ ಯಾತಿ ಪರಾಂ ಗತಿಂ ॥ ೧೦ ॥

---

ಭಕ್ತಿಪೂರ್ವಕವಾಗಿ ಈ ವ್ರತವನ್ನು ಈ ಕ್ರಮದಲ್ಲಿ ಆಚರಿಸಬೇಕು. ಈ ವ್ರತಾಂತ್ಯದಲ್ಲಿ ಭಂಗಾರದ ಕಮಲಸಹಿತವಾಗಿ ಶಯ್ಯಾದಾನವನ್ನು ಮಾಡಬೇಕು.

೮. ಈ ವ್ರತಾನುಷ್ಠಾತೃವು ಸ್ವಶಕ್ತ್ಯನುಸಾರವಾಗಿ ಅಂಗಾಂಗಗಳಲ್ಲಿ ಸುವರ್ಣಾಭರಣದಿಂದ ಅಲಂಕೃತವೂ, ಹಾಲು ಕೊಡುವುದೂ, ಆಗಿರುವ ಗೋವನ್ನು ದಾನ ಮಾಡಬೇಕು. ಮತ್ತು ಇಷ್ಟವಾದ ಗ್ರಾಸ, ಹಾಲುಕರೆಯುವ ಪಾತ್ರೆ, ಪೀಠ ದೀಪ ಇವೇ ಮೊದಲಾದ ಉಪಕರಣ ಸಾಮಗ್ರಿಗಳನ್ನೂ ದಾನ ಮಾಡಬೇಕು.

೯. ಈ ಪ್ರಕಾರವಾಗಿ ಯಾವ ಪುರುಷನು ಕಮಲಸಪ್ತಮೀ ವ್ರತವನ್ನು ಆಚರಿಸುವನೋ ಅವನು ಈ ಲೋಕದಲ್ಲಿ ಅಪರಿಮಿತ ಸಂಪತ್ತನ್ನು ಪಡೆದು ದೇಹಾಂತದಲ್ಲಿ ಸೂರ್ಯ ಲೋಕಕ್ಕೆ ಹೋಗಿ ಸಂತೋಷವಾಗಿರುವನು.

೧೦. ಹಾಗೆಯೇ ಪ್ರತಿಕಲ್ಪದಲ್ಲೂ ಬೇರೆಯಾಗಿ ಸಪ್ತ ಊರ್ಧ್ವಲೋಕಗಳಿಗೂ ಹೋಗಿ ಅಲ್ಲಿ ಅಪ್ಸರ ಸ್ತ್ರೀ ಪರಿವೃತನಾಗಿ ವಾಸಮಾಡಿ ಅನಂತರ ಕೊನೆಗೆ ಪರಮಗತಿಯಾದ ಪರಬ್ರಹ್ಮವನ್ನು ಪಡೆಯುತ್ತಾನೆ.

**ಯಃ ಪಶ್ಯತೀದಂ ಶೃಣುಯಾನ್ಮುಹೂರ್ತಂ ।**
**ಪಠೇಚ್ಚ ಭಕ್ತ್ಯಾ ಸುಮತಿಂ ದದಾತಿ ।**
**ಸೋಽಪ್ಯತ್ರ ಲಕ್ಷ್ಮೀಮಚಲಾಮವಾಪ್ಯ ।**
**ಗಂಧರ್ವವಿದ್ಯಾಧರಲೋಕಮೇತಿ　　　　॥ ೧೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಕಮಲಾಸಪ್ತಮೀ ವ್ರತವರ್ಣನಂ ನಾಮ ಪಂಚಾಶತ್ತಮೋಽಧ್ಯಾಯಃ.**



---

೧೧. ಈ ವ್ರತವನ್ನಾಚರಿಸುತ್ತಿರುವುದನ್ನು ಯಾವನು ದರ್ಶನ ಮಾಡುವನೋ, ವ್ರತವಿಚಾರ ಹೇಳುವುದನ್ನು ಮುಹೂರ್ತವವರಿಗೆ ಏಕಾಗ್ರಚಿತ್ತತೆಯಿಂದ ಯಾವನು ಶ್ರವಣ ಮಾಡುವನೋ, ಭಕ್ತಿಪೂರ್ವಕವಾಗಿ ಯಾವನು ಈ ಗ್ರಂಥವನ್ನು ಪಠಿಸುವನೋ, ಯಾವನು ಈ ವ್ರತ ಮಹಾತ್ಮೆಯನ್ನು ಇತರರಿಗೆ ತಿಳಿಯ ಹೇಳಿ ಅವರ ಜ್ಞಾನವನ್ನು ಹೆಚ್ಚು ಮಾಡುವನೋ, ಅಂತಹ ಮಹಾತ್ಮರೆಲ್ಲರೂ ಈ ನಶ್ವರವಾದ ಲೋಕದಲ್ಲಿ ಸಮಸ್ತ ಸೌಭಾಗ್ಯ ಸಂಪತ್ತುಗಳನ್ನೂ ಹೊಂದಿ ಅನಂತರ ದೇಹಾಂತದಲ್ಲಿ ಗಂಧರ್ವರ ಮತ್ತು ವಿದ್ಯಾಧರರ ಲೋಕವನ್ನು ಸೇರಿ ಅಲ್ಲಿ ಉತ್ತಮ ಸ್ಥಾನವನ್ನು ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕಮಲ ಸಪ್ತಮೀ ವ್ರತವರ್ಣನವೆಂಬ ಐವತ್ತನೆಯ ಅಧ್ಯಾಯವು ಮುಗಿದುದು.

